# ಉತ್ತರ ಕರ್ನಾಟಕದ ವೀರಗಲ್ಲುಗಳ ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

ಸಿದ್ಧರಾಮ ನಾಯಕ ಜಿ.

ಮಾರ್ಗದರ್ಶಕರು

ಡಾ. ಕಲವೀರ ಮನ್ವಾಚಾರ

ಪ್ರಾಧ್ಯಾಪಕರು






ಶಾಸನಶಾಸ್ತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬



೨೦೧೬

# ಉತ್ತರ ಕರ್ನಾಟಕದ ವೀರಗಲ್ಲುಗಳ ಸಾಂಸ್ಕೃತಿಕ ಅಧ್ಯಯನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

**ಸಿದ್ಧರಾಮ ನಾಯಕ ಜಿ.**



ಮಾರ್ಗದರ್ಶಕರು

**ಡಾ. ಕಲವೀರ ಮನ್ವಾಚಾರ**

ಪ್ರಾಧ್ಯಾಪಕರು




ಶಾಸನಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೭




# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಸಿದ್ಧರಾಮ ನಾಯಕ ಜಿ. ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಉತ್ತರ ಕರ್ನಾಟಕದ ವೀರಗಲ್ಲುಗಳ ಸಾಂಸ್ಕೃತಿಕ ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಶಾಸನಶಾಸ್ತ್ರ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ಕಲವೀರ ಮನ್ವಾಚಾರ**
ಪ್ರಾಧ್ಯಾಪಕರು
**ಶಾಸನಶಾಸ್ತ್ರ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಸ್ಥಳ : ವಿದ್ಯಾರಣ್ಯ**
**ದಿನಾಂಕ:** 11.08.2017

## ಸಂಶೋಧಕರ ಘೋಷಣಾ ಪತ್ರ

**ಉತ್ತರ ಕರ್ನಾಟಕದ ವೀರಗಲ್ಲುಗಳ ಸಾಂಸ್ಕೃತಿಕ ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಶಾಸನಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ **ಡಾ. ಕಲವೀರ ಮನ್ವಾಚಾರ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

Siddharama G.

**ಶ್ರೀ ಸಿದ್ಧರಾಮ ನಾಯಕ ಜಿ.**
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ : 11·08·2017

# ಉತ್ತರ ಕರ್ನಾಟಕದ ವೀರಗಲ್ಲುಗಳ ಸಾಂಸ್ಕೃತಿಕ ಅಧ್ಯಯನ

## ಪರಿವಿಡಿ

## ಸಂಕ್ಷೇಪಗಳು

* ಇ.ಸಿ. : ಎಪಿಗ್ರಾಫಿಯಾ ಕರ್ನಾಟಕ
* ಎ.ಐ : ಎಪಿಗ್ರಾಫಿಯಾ ಇಂಡಿಕಾ
* ಎಸ್.ಐ.ಐ. : ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಷನ್ಸ್
* ಐ.ಎ. : ಇಂಡಿಯನ್ ಆ್ಯಟಿಕ್ವೆರಿ
* ಕ.ವಿ.ಶಾ.ಸಂ. : ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು
* ಕ.ಶಾ.ಸಾ.ಅ. : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ
* ಕೆ.ಐ. : ಕರ್ನಾಟಕ ಇನ್ಸ್‌ಕ್ರಿಪ್ಷನ್ಸ್
* ಶಾ.ಅ. : ಶಾಸನ ಅಧ್ಯಯನ

* A.R. : Annual Reports
* A.R.I.E. : Annual Reports on Indian Epigraphy
* A.R.S.I.E. : Annual Reports on South Indian Epigraphy
* A.S.I. : Archaeological Survey of India
* B.K.I. : Bombay Karnataka Inscriptions
* J.B.B.R.A.S.: Journal of Bombay Branch of the Royal Asiatic Socity
* J.E.S.I. : Journal of the Epigraphical Soceity of India Mysore
* M.A.R. : Mysore Archaeological Reports

## ಅಧ್ಯಾಯ : ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

## ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

**ಪೀಠಿಕೆ :**

ಮಾನವನ ಚರಿತ್ರೆಯು ತುಂಬ ಪ್ರಾಚೀನವಾದುದು. ಪ್ರಾಚೀನ ಕಾಲದಿಂದ ಅರ್ವಾಚೀನ ಕಾಲದವರೆಗೆ ನೋಡಿದಾಗ ಮಾನವ ಸಾಗಿಬಂದ ಹಂತಗಳು ಅಗಾಧವಾದುದು. ಕಾಲದುದ್ದಕ್ಕೂ ಮನುಷ್ಯ ತನ್ನದೇ ಆದ ಸಂಸ್ಕೃತಿಯ ವಿಕಾಸವನ್ನು ಕಂಡುಕೊಳ್ಳುತ್ತಾ ಬಂದಿದ್ದಾನೆ. ಅವನ ಚರಿತ್ರೆಯ ಪಳಿಯುಳಿಕೆಗಳು ನಾನಾ ಮುಖಗಳಲ್ಲಿ ಕಂಡುಬಂದಿವೆ. ಹೀಗೆ ಹರಿದು ಬಂದ ಕುರುಹುಗಳನ್ನು ಒಂದೆಡೆ ಸೇರಿಸಿದರೆ ಆಯಾ ಕಾಲದ ಸಾಂಸ್ಕೃತಿಕ ಚರಿತ್ರೆ ಕಾಣಸಿಗುತ್ತದೆ. ಮೌಖಿಕ ಸಂಪ್ರದಾಯ ಮತ್ತು ಲಿಖಿತ, ದಾಖಲಿತ ಚರಿತ್ರೆಗಳ ಮೂಲಕ ಮಾನವನ ಬದುಕಿನ ಸಾಂಸ್ಕೃತಿಕ ಇತಿಹಾಸ ಉಳಿದುಕೊಂಡು ಬಂದಿದೆ. ಇದು ನಾಡಿನ ಜೀವಂತ ಸಂಸ್ಕೃತಿಯೂ ಹೌದು.

ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯನ್ನು ತಿಳಿಯಬೇಕಾದರೆ ಅದಕ್ಕೆ ಸಂಬಂಧಪಟ್ಟ ಆಕರಗಳು ಮುಖ್ಯವಾಗುತ್ತವೆ. ಅದರಲ್ಲೂ ನಮ್ಮ ಪೂರ್ವಕಾಲದ ಸಂಸ್ಕೃತಿಯನ್ನು ತಿಳಿಯಬೇಕಾದರೆ ಶಾಸನ ಆಕರಗಳು ಬಹಳ ಮುಖ್ಯವಾಗುತ್ತವೆ. ಕರ್ನಾಟಕ ಸಾಂಸ್ಕೃತಿಕ ಪರಂಪರೆಗೆ ಸಹಸ್ರಾರು ವರ್ಷಗಳ ಇತಿಹಾಸವಿದೆ. ಈಗ ರಚನೆಗೊಂಡಿರುವ ಇತಿಹಾಸವು ಇದುವರೆಗೆ ದೊರೆತ ಮೂಲ ಆಕರಗಳಾದ ಶಾಸನಗಳು, ಐತಿಹಾಸಿಕ ಸ್ಮಾರಕಗಳು, ವಿದೇಶಿ ಪ್ರವಾಸಿಗರ ದಿನಚರಿಗಳು, ಹಸ್ತಪ್ರತಿಗಳು ಹಾಗೂ ಪ್ರಕಟಿತ ಸಾಹಿತ್ಯ ಕೃತಿಗಳನ್ನು ಅವಲಂಬಿಸಿವೆ. ಇಷ್ಟಾದರೂ ಸಹ ನಾವು ಹಲವಾರು ವಿಷಯಗಳನ್ನು ಸಂಪೂರ್ಣವಾಗಿ ತಿಳಿಯುವಲ್ಲಿ ವಿಫಲರಾಗಿದ್ದೇವೆ. ಪ್ರಾದೇಶಿಕ

ಇತಿಹಾಸವನ್ನು ಒಳಗೊಂಡಂತೆ ಕರ್ನಾಟಕದ ಸಮಗ್ರವಾದ ಇತಿಹಾಸ ರಚನೆ ಈವರೆಗೆ ನಡೆದಿಲ್ಲ. ಇತಿಹಾಸ ರಚನೆಗೆ ದಾಖಲೆಗಳಾದ ಹಸ್ತಪ್ರತಿ, ಶಾಸನಗಳು ಮುಂತಾದವು ಇನ್ನೂ ಹಲವಾರು ಮೂಲಗಳಿಂದ ಸಂಪೂರ್ಣ ಶೋಧನೆಗೊಂಡು ಪ್ರಕಟವಾಗಬೇಕಿದೆ. ಹಾಗೆಯೇ ಪ್ರಕಟವಾದ ಆಕರಗಳನ್ನು ವಿಶ್ಲೇಷಿಸುವ ಕೆಲಸ ಆಗಬೇಕಿದೆ. ಇತ್ತೀಚೆಗೆ ಈ ರೀತಿಯ ವಿಶ್ಲೇಷಣಾತ್ಮಕ ಕಾರ್ಯ ನಡೆಯುತ್ತಿದ್ದು, ಈ ರೀತಿಯ ಕಾರ್ಯ ಇನ್ನು ವ್ಯಾಪಕವಾಗಬೇಕಿದೆ.

ಒಂದು ನಾಡಿನ ಚರಿತ್ರೆಯನ್ನು ರಚಿಸುವಲ್ಲಿ ಶಾಸನಗಳಷ್ಟು ಅತಿ ವಿಶ್ವಾಸದ ದಾಖಲೆಗಳು ಮತ್ತಾವುವೂ ಇಲ್ಲ. ಆದರೆ ನಮ್ಮ ಹಿರಿಯ ಇತಿಹಾಸಕಾರರು ಶಾಸನಗಳಲ್ಲಿ ವಿಕ್ತವಾಗಿರುವ ಐತಿಹಾಸಿಕ ಘಟನೆಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡರೇ ವಿನಃ ಅದರಲ್ಲಿ ನಮ್ಮ ಜನರ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಅಂಶಗಳನ್ನು ಅಷ್ಟಾಗಿ ಪರಿಗಣಿಸಿಲ್ಲ. ಉದಾಹರಣೆಗೆ ಕನ್ನಡದ ಮೊಟ್ಟಮೊದಲ ಶಾಸನ ಹಲ್ಮಿಡಿ ಶಾಸನ. ಅದರಲ್ಲಿ ನಮ್ಮ ಇತಿಹಾಸಕಾರರು ಕಾಕಸ್ಥುವರ್ಮನ ಕಾಲ, ಆಡಳಿತ ಮುಂತಾದ ವಿಚಾರಗಳ ಬಗ್ಗೆ ತಿಳಿಸಿದರೇ ಹೊರತು ಅಲ್ಲಿ ಒಬ್ಬ ವೀರಭಟನಿಗೆ ಸಿಕ್ಕಂತಹ ಗೌರವಗಳ ಬಗ್ಗೆ ಹೆಚ್ಚು ಅಧ್ಯಯನ ನಡೆಸಲಿಲ್ಲ. ಅಂದರೆ ಬಾಳ್ಗೆಜೂವಾಗಿ ಒಬ್ಬ ಉನ್ನತ ಅಧಿಕಾರಿ ತನ್ನ ಕೈಕೆಳಗಿನ ವೀರನೊಬ್ಬನ ಹೋರಾಟವನ್ನು ಮೆಚ್ಚಿ ರಕ್ತಸಿಕ್ತವಾದ ಅವನ ಕತ್ತಿಯನ್ನು ಅಭಾಸದರ ಎದುರಿನಲ್ಲಿ ತೊಳೆದು ಅವನಿಗೆ ದಾನ ಕೊಡುತ್ತಾನೆ. ಇಲ್ಲಿ ನಮ್ಮ ದೇಶಕ್ಕಾಗಿ ಪ್ರಾಣವನ್ನು ಮುಡಪಿಟ್ಟವರಿಗೆ ನಮ್ಮ ಜನರು ಯಾವ ರೀತಿ ಗೌರವಿಸುತ್ತಿದ್ದರು ಎಂಬುದನ್ನು ನಾವು ನೋಡುತ್ತೇವೆ. ಇಂತಹ ಅನೇಕ ವಿಷಯಗಳು ಶಾಸನ ಆಕರಗಳಲ್ಲಿ ಅಡಗಿವೆ. ನಮ್ಮ ಇತಿಹಾಸ ಕೇವಲ ರಾಜ ಮಹಾರಾಜರಲ್ಲಿ ಒಂದು ನಾಡಿನ ಬೆಳವಣಿಗೆಗೆ ರಕ್ತ ಹರಿಸಿದ ಸಾಮಾನ್ಯ ಜನರ ಬದುಕಿನ ಅಂಶಗಳೂ ನಮ್ಮ ಇತಿಹಾಸದಲ್ಲಿ ಸೇರಬೇಕಾಗುತ್ತದೆ. ಆಗ ಅದು ನಿಜವಾದ ಇತಿಹಾಸವಾಗುತ್ತದೆ.

ಕನ್ನಡ ನಾಡಿನ ಇತಿಹಾಸವನ್ನು ಗಮನಿಸಿದಾಗ ಮೊದಲಿಗೆ ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು ಮತ್ತು ವಿಜಯನಗರ ಅರಸರು ಅನೇಕ ರೀತಿಯ ಕೊಡುಗೆಗಳನ್ನು ನೀಡುತ್ತಾ ಹೋಗಿದ್ದಾರೆ. ಈ ನಿಟ್ಟಿನಲ್ಲಿ ಇಂದಿಗೂ ಅಳಿದುಳಿದ ಆಕರ, ಆಧಾರಗಳನ್ನಿಟ್ಟುಕೊಂಡು ಇತಿಹಾಸ ಕಟ್ಟುವ ಪ್ರಯತ್ನಗಳು ಇಂದಿಗೂ ಮುಂದುವರೆದಿವೆ. ಈ ಹಿನ್ನೆಲೆಯಲ್ಲಿ ಉತ್ತರ ಕರ್ನಾಟಕದ ಪ್ರದೇಶಕ್ಕೆ ಸೀಮಿತವಾಗಿ ಆಡಳಿತ ವಂಶಗಳ ಕಾಲದಲ್ಲಿ ಸಂಗ್ರಹಿಸಿದ ಘಟನೆಗಳ ಆಧಾರದಿಂದ ಮತ್ತು ಪೂರಕ ಅಂಶಗಳಾದ ಶಾಸನಗಳ ಪಾಠಗಳಿಂದ ವೀರಗಲ್ಲುಗಳ ಬಗ್ಗೆ ಅಧ್ಯಯನ ಮಾಡಲಾಗಿದೆ.

**ಪೂರ್ವಾಧ್ಯಯನಗಳ ಸಮೀಕ್ಷೆ :**

ಒಂದು ಪ್ರದೇಶದ ಇತಿಹಾಸವನ್ನು ಮತ್ತು ಸಂಸ್ಕೃತಿಯನ್ನು ತಿಳಿಯಬೇಕಾದರೆ ಆ ಕ್ಷೇತ್ರದಲ್ಲಿ ನಡೆದಿರುವ ಪೂರ್ವ ಅಧ್ಯಯನಗಳ ಸಮೀಕ್ಷೆ ಅಗತ್ಯ. ಪೂರ್ವಾಧ್ಯಯನಗಳನ್ನು

ಪೂರಕವಾಗಿಟ್ಟುಕೊಂಡೇ ಅವುಗಳ ಆಧಾರದಲ್ಲಿ ಇತಿಹಾಸ ಪುನರ್‌ರಚಿಸಲು ಸಾಧ್ಯ. ಈ ಹಿನ್ನೆಲೆಯಲ್ಲಿ "ಉತ್ತರ ಕರ್ನಾಟಕದ ವೀರಗಲ್ಲುಗಳ ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯಕ್ಕೆ ಸಂಬಂಧಪಟ್ಟಂತೆ ಈಗಾಗಲೇ ಪ್ರಕಟವಾಗಿರುವ ಸಂಶೋಧನಾ ಕೃತಿಗಳು, ಸಾಹಿತ್ಯ ಕೃತಿಗಳು ಮತ್ತು ಸಂಶೋಧನಾ ಲೇಖನಗಳ ಸಾರಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ.

ವೀರಗಲ್ಲುಗಳ ಪಾಠ ಮತ್ತು ಶಿಲ್ಪಗಳ ಮಹತ್ವವನ್ನು ಗುರುತಿಸಿ ಆ ಬಗ್ಗೆ ಕೆಲವಾರು ಮಹತ್ವದ ಅಂಶಗಳನ್ನು ಹೊರಗೆಳೆದ ಮೊದಲ ಪ್ರಯತ್ನ ಡಾ. ಎಂ. ಚಿದಾನಂದಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' ಎಂಬ ಮಹಾಪ್ರಬಂಧದ್ದು. "ಯುದ್ಧಕಲೆ" ಎಂಬ ಅಧ್ಯಾಯದಲ್ಲಿ ವೀರಗಲ್ಲುಗಳ ಬಗ್ಗೆ ಸಾಕಷ್ಟು ವಿಸ್ತಾರವಾಗಿ ಚರ್ಚೆ ಮಾಡಿದ್ದಾರೆ. ಇದಕ್ಕಿಂತಲೂ ಹೆಚ್ಚಿನ ಕೊಡುಗೆ ಎಂದರೆ ವೀರಗಲ್ಲುಗಳ ಪಾಠ ಮತ್ತು ಶಿಲ್ಪವನ್ನು ಹೇಗೆ ಗುರುತಿಸಬೇಕೆಂಬ ದಾರಿಯನ್ನು ತೋರಿಸುತ್ತದೆ. ಅವರು ಬರೆದಿರುವ 'ವೀರಗಲ್ಲು ಮತ್ತು ಮಾಸ್ತಿಗಲ್ಲುಗಳು' ಎಂಬ ಕೃತಿ ವೀರಗಲ್ಲುಗಳ ವಿಂಗಡಣೆ ಮತ್ತು ವೀರಗಲ್ಲುಗಳ ಶಿಲ್ಪದ ಬಗ್ಗೆ ಪ್ರಸ್ತಾಪವಾಗಿದೆ. ಹಲವಾರು ಅಪ್ರಕಟಿತ ವೀರಗಲ್ಲುಗಳ ಛಾಯಾಚಿತ್ರಗಳನ್ನು ನೀಡಿ ಅವುಗಳಿಗೆ ವಿವರಣೆಗಳನ್ನು ನೀಡಲಾಗಿದೆ.

ಆರ್. ನರಸಿಂಹಾಚಾರ್ ಅವರು ಬರೆದಿರುವ ಮೈಸೂರು ಸರಕಾರದ ಪ್ರಾಕ್ತನ ಇಲಾಖೆಯ ವಾರ್ಷಿಕ ವರದಿಗಳಲ್ಲಿ ಶಾಸನ ಪಾಠವಿರುವ ಮತ್ತು ಶಾಸನ ಪಾಠವಿಲ್ಲದ ವೀರಗಲ್ಲುಗಳ ಬಗ್ಗೆ ಉಪಯುಕ್ತವಾದ ಮಾಹಿತಿ ದೊರೆಯುತ್ತದೆ.

ಎಚ್. ಕಜಿನ್ಸ್ ತಮ್ಮ `Chalukyan Architecture' ಎಂಬ ಗ್ರಂಥದಲ್ಲಿ ಶಾಸನಗಳ ಶಿಲ್ಪ ಮತ್ತು ವೀರಗಲ್ಲುಗಳ ಶಿಲ್ಪದ ಬಗ್ಗೆ ಮೂಲ ಅಂಶಗಳನ್ನು ಗಮನಿಸುವುದನ್ನು ತಿಳಿಯಬಹುದು.

ಬಿ.ಆರ್. ಹಿರೇಮಠ ಅವರ 'ವೀರಗಲ್ಲುಗಳು', ಡಾ. ಚೆನ್ನಕ್ಕ ಎಲಿಗಾರರ 'ಮಾಸ್ತಿ ಕಲ್ಲುಗಳು' ಎಂಬ ಕಿರು ಪುಸ್ತಕಗಳು ಆಯಾ ಶಾಸನ ಪ್ರಕಾರವನ್ನು ವಿವರಿಸುವಾಗ ಶಿಲ್ಪವನ್ನು ಸಂಕ್ಷಿಪ್ತವಾಗಿ ವಿವರಿಸಿವೆ. ಡಾ. ಎಂ.ಎಂ. ಕಲಬುರ್ಗಿಯವರ 'ಸಮಾದಿ ಬಲಿದಾನ–ವೀರ ಮರಣ ಸ್ಮಾರಕಗಳು' ಎಂಬ ಕೃತಿಯಲ್ಲಿ ವೀರಗಲ್ಲುಗಳ ಬಗ್ಗೆ ಉಪಯುಕ್ತವಾದ ಮಾಹಿತಿ ದೊರೆಯುತ್ತವೆ. ಇದರಲ್ಲಿ ಶಾಸನ ಶಿಲ್ಪದ ಬೆಳವಣಿಗೆಗೆ ಕಾರಣಗಳನ್ನು, ಆತ್ಮಬಲಿ ಪ್ರಕಾರದ ಹೊಸ ಶಿಲ್ಪಗಳನ್ನು ಚರ್ಚಿಸಿರುವುದಲ್ಲದೆ ನಿಸಿಧಿ ಶಾಸನಗಳ ಬಗೆಗೆ ಹೊಸ ನೋಟವನ್ನು ಒದಗಿಸಿದ್ದಾರೆ.

ಕರ್ನಾಟಕ ವೀರಗಲ್ಲುಗಳು ಎಂಬ ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸಿದವರು ಡಾ. ಆರ್. ಶೇಷಶಾಸ್ತ್ರಿ. ಅವರ ಈ ಗ್ರಂಥದ ಅಧ್ಯಯನದ ವಿಷಯದ ವ್ಯಾಪ್ತಿ ಬಹಳ ವಿಸ್ತಾರವಾದುದು. ಮತ್ತು ಅಷ್ಟೇ ಮೌಲಿಕವಾದುದು. ಸಿಗುವ ಆಕರ ಸಾಮಗ್ರಿಯನ್ನು ಎಷ್ಟೆಷ್ಟು ರೀತಿಗಳಲ್ಲಿ, ಸ್ತರಗಳಲ್ಲಿ ಪರಿಶೀಲಿಸಬಹುದೋ ಅಷ್ಟನ್ನು ಲೇಖಕರು ಮಾಡಿದ್ದಾರೆ. ಶಾಸನೋಕ್ತ ಸಾಮಗ್ರಿಗೆ ಪುಷ್ಟಿಯನ್ನು ಅಲ್ಲಲ್ಲಿ ಕನ್ನಡ ಕಾವ್ಯಗಳಿಂದಲೂ ಪಡೆದಿದ್ದಾರೆ. ಇದರಿಂದ ಕಾವ್ಯಭ್ಯಾಸಿಗಳು ಶಾಸನ ಸಾಮಗ್ರಿಯನ್ನು

ಬಳಸಿಕೊಳ್ಳುವುದರಿಂದ ಒದಗಬಹುದಾದ ಅನುಕೂಲದ ಕಡೆಗೆ ನಮ್ಮನ್ನು ಸೆಳೆದಿದ್ದಾರೆ. ಈ ಕೃತಿಯಲ್ಲಿ ವೀರಗಲ್ಲುಗಳ ಶಿಲ್ಪವನ್ನು ಕ್ಷೇತ್ರಕಾರ್ಯದ ಹಿನ್ನೆಲೆಯೊಂದಿಗೆ ಚರ್ಚಿಸಲಾಗಿದೆ.

ಡಾ. ಬಸವರಾಜ ಕಲ್ಗುಡಿಯವರ 'ಮಹಾಸತಿ ಆಚರಣೆ : ಒಂದು ಅಧ್ಯಯನ' ಎಂಬ ಕೃತಿಯಲ್ಲಿ ಮಹಾಸತಿ ಶಿಲ್ಪಗಳ ಬಗೆಗೆ ವಿವರವಾಗಿ ಚರ್ಚಿಸಲಾಗಿದೆ. ಮಹಾಸತಿ ಆಚರಣೆಗೆ ಸಂಬಂಧಿಸಿದ ಜಾನಪದ ಗೀತೆಗಳು ಮತ್ತು ಸ್ಥಳೀಯರ ನಂಬಿಕೆಗಳನ್ನು ಆಧರಿಸಿ ಮಹಾಸತಿ ಸಂಪ್ರದಾಯದ ತಾತ್ವಿಕ ನೆಲೆಗಟ್ಟನ್ನು ಕುರಿತು ಚರ್ಚಿಸಲಾಗಿದೆ.

ಡಾ. ಬಿ.ಎಸ್. ಶೇಠೆ ಅವರ 'ಕರ್ನಾಟಕದಲ್ಲಿ ಸತಿ ಪದ್ಧತಿ' ಎಂಬ ಕೃತಿಯಲ್ಲಿ ಮಹಾಸತಿ ಶಾಸನ ಶಿಲ್ಪವನ್ನು ಹೆಚ್ಚು ವಿಮರ್ಶಿಸಲಾಗಿದೆ.

ಎಂ.ಜಿ. ನಾಗರಾಜ ಅವರು 'ಶಾಸನ ಶಿಲ್ಪಗಳು' ಎಂಬ ಕೃತಿಯಲ್ಲಿ ಶಾಸನಗಳನ್ನು ಆಯ್ದುಕೊಂಡು ಅವುಗಳ ಶಿಲ್ಪವನ್ನು ಹೊಸ ರೀತಿಯಲ್ಲಿ ಅರ್ಥೈಸಲು ಪ್ರಯತ್ನಿಸಿದ್ದಾರೆ.

ಡಾ. ಡಿ.ವಿ. ಪರಮಶಿವಮೂರ್ತಿ ಅವರು 'ಕನ್ನಡ ಶಾಸನ ಶಿಲ್ಪ' ಕೃತಿಯಲ್ಲಿ ಶಾಸನ ಶಿಲ್ಪದ ಸ್ವರೂಪ, ಇತಿಹಾಸ, ಶಾಸನ ಶಿಲ್ಪದ ವರ್ಗೀಕರಣ, ದಾನಶಾಸನ ಶಿಲ್ಪ, ವೀರಶಾಸನ ಶಿಲ್ಪ ಹಾಗೂ ಬಲಿದಾನ ಶಾಸನ ಶಿಲ್ಪದ ಬಗ್ಗೆ ಸಾಂಸ್ಕೃತಿಕ ಅಧ್ಯಯನವನ್ನು ಕ್ಷೇತ್ರಕಾರ್ಯದ ಮೂಲಕ ಪರಿಚಯವನ್ನು ಮಾಡಿಕೊಟ್ಟಿದ್ದಾರೆ.

ಡಾ. ಡಿ.ವಿ. ಪರಮಶಿವಮೂರ್ತಿ ಅವರು ತುಱುಗೋಳ್ ಸಂಕಥನ' ಮತ್ತು 'ಪೆಣ್ಬುಯ್ಯಲ್' ಎಂಬ ಕಿರು ಪುಸ್ತಕಗಳು ಆಯಾ ಶಾಸನ ಪ್ರಕಾರವನ್ನು ವಿವರಿಸುವಾಗ ಶಿಲ್ಪವನ್ನೂ ಸಂಕ್ಷಿಪ್ತವಾಗಿ ವಿವರಿಸಿವೆ. ಹೀಗೆ ಅನೇಕ ರೀತಿಯಲ್ಲಿ ಅಧ್ಯಯನಗಳು ನಡೆದಿರುವುದನ್ನು ಗಮನಿಸಬಹುದಾಗಿದೆ.

**ಅಧ್ಯಯನದ ಉದ್ದೇಶ :**

ಉತ್ತರ ಕರ್ನಾಟಕದ ವೀರಗಲ್ಲುಗಳನ್ನೇ ಮೂಲ ಸಾಮಗ್ರಿಗಳನ್ನಾಗಿ ಆಯ್ದುಕೊಂಡು ವೀರಗಲ್ಲುಗಳ ಸಾಂಸ್ಕೃತಿಕ ಅಧ್ಯಯನ ಇದುವರೆಗೆ ನಡೆದಿಲ್ಲ. ವೀರಗಲ್ಲುಗಳ ಯಾವ ವಿಷಯವನ್ನು ವಾಚ್ಯವಾಗಿ ಹೇಳುತ್ತವೆಯೋ ಅದಕ್ಕೂ ಮಿಗಿಲಾಗಿ ಧ್ವನಿಪೂರ್ಣವಾಗಿ ಅವು ಹೇಳುವ ಅಥವಾ ಅವುಗಳಿಂದ ಧ್ವನಿತವಾಗುವ ಜೀವನ ಮೌಲ್ಯಗಳು ಮಹತ್ವದ್ದಾಗಿವೆ. "ಇತಿಹಾಸ ಎನ್ನುವುದು ಕೇವಲ ರಾಜ ಮಹಾರಾಜರ ಚೇಷ್ಟೆ, ಕುಚೇಷ್ಟೆ, ಅವರಿಗೂ ಇವರಿಗೂ ನಡುವೆ ನಡೆದು ಹೋದ ಹೋರಾಟ, ಅವುಗಳಿಂದ ಪರಿಣಮಿಸಿದ ಜಯಾಪಜಯ ಕ್ರಮಪಟ್ಟಿ ಮಾತ್ರವಲ್ಲ; ಅದು ನಮ್ಮ ಪೂರ್ವಜರ ಅಂದರೆ ನಮ್ಮಂತಹ, ಆದರೆ ನಮಗೂ ಹಿಂದೆ ಬಾಳಿ ಬದುಕಿದ ಜನಸಾಮಾನ್ಯರ ಒಪ್ಪು-ತಪ್ಪುಗಳ ಪಟ್ಟಿ, ಒಂದು ಅಮೂಲ್ಯ ಪಠ್ಯಪುಸ್ತಕ. ಶತಮಾನಗಳ ಅವಧಿಯಲ್ಲಿ ನಮ್ಮ ಪೂರ್ವಜರು ಕಟ್ಟಿ ಬೆಳೆಸಿದ ಸಂಪ್ರದಾಯಗಳೂ, ಕಟ್ಟು ಕಟ್ಟಳೆಗಳೂ ನಮ್ಮ ಇಂದಿನ ಜನಾಂಗದ ಹುಟ್ಟು ಗುಣಗಳ ಬುನಾದಿಗಳು; ನಮ್ಮ ಆಸೆ ಆಕಾಂಕ್ಷೆಗಳ, ಶಕ್ತಿ ಸಾಮರ್ಥ್ಯಗಳ, ಉದ್ಭವ ಸ್ಥಾನಗಳು.

ಹೀಗಾಗಿ ಯಾವುದೇ ಒಂದು ರಾಷ್ಟ್ರದ ಇತಿಹಾಸವು ಆ ನಾಡಿನ ಪರಂಪರಾನುಗತ ಸಾಂಪ್ರದಾಯಿಕತೆಯನ್ನು, ಅದರ ಒಳಿತು-ಕೆಡಕುಗಳನ್ನು ಜನಸಾಮಾನ್ಯರಿಗೆ ತಿಳಿಯಗೊಡುವ ಅಮೂಲ್ಯವಾದೊಂದು ಸಾಧನವೆಂದು ತಿಳಿಯಬೇಕು. (ಕರ್ನಾಟಕ ಶಾಸನ ಸಮೀಕ್ಷೆ ರಮೇಶ ಕೆ.ವಿ.-೧, ಪುಟ-೭೩-೭೪) ಈ ಒಂದು ವಿಚಾರದ ಹಿನ್ನೆಲೆಯಲ್ಲಿ ವೀರಗಲ್ಲುಗಳಿಂದ ತಿಳಿದು ಬರುವ ಮಾಹಿತಿಯನ್ನು ವಿಶ್ಲೇಷಿಸಿದಾಗ ನಮ್ಮ ನಾಡಿನ ಜನರ ಕೆಲವಾರು ಮನೋಧರ್ಮಗಳ ಪರಿಚಯ ನಮಗಾಗುತ್ತದೆ. ವೀರಗಲ್ಲು ಪ್ರತಿನಿಧಿಸುವ ವೀರನ ಸಾವಿಗೆ ಕಾರಣವಾದ ಹೋರಾಟವನ್ನು ಪರಿಚಯಿಸಿಕೊಡುತ್ತದೆ. ಮಡಿದವನ ಜೀವನ ಮೌಲ್ಯವನ್ನು ತಿಳಿಯುವಲ್ಲಿ ನೆರವಾಗುತ್ತದೆ.

ವೀರಗಲ್ಲುಗಳ ವೀರರು ತಮ್ಮ ಅರಸರ ಪರವಾಗಿ ಹೋರಾಡಿ ಮಡಿದವರು ಮತ್ತು ಸಂಘ ಜೀವಿಯಾದ ಮಾನವನ ಕರ್ತವ್ಯಗಳನ್ನು ಸಹಜವೆಂಬಂತೆ ಭಾವಿಸಿ ಪಾಲಿಸಿದ ಮಾನವ ಶ್ರೇಷ್ಠರಾಗಿದ್ದಾರೆ. ಅವರು ಮಾಡಿದ ಹೋರಾಟ ಇಂದಿನ ನಮ್ಮ ದೃಷ್ಟಿಯಲ್ಲಿ ಏನಾದರೂ ಆಗಿರಲಿ ಸಮಾಜದ ಜೀವನ ಮೌಲ್ಯಗಳನ್ನು ಎತ್ತಿ ಹಿಡಿಯುವುದರಲ್ಲಿ ಸ್ವಾರ್ಥವನ್ನು ಬಗೆಯದೆ, ಜೀವನದ ಹಂಗನ್ನು ತೊರೆದ ಅವರ ಧೀಮಂತಿಕೆ ಮೆಚ್ಚತಕ್ಕದ್ದಾಗಿದೆ. ಅವರ ಪರಾಕ್ರಮ ಕೇವಲ ಪಶುಬಲವಾಗಿರದೆ ಸಾಮಾಜಿಕ ನಿಷ್ಠೆ, ಸ್ವಾಮಿಭಕ್ತಿ, ಸ್ವಾಭಿಮಾನಗಳಿಂದ ಕೂಡಿದುದಾಗಿದೆ. ಇಲ್ಲಿ ಸಮಾಜದ ಮತ್ತೊಂದು ಮುಖವನ್ನು ಗಮನಿಸಿಬೇಕಾದುದು ಅನಿವಾರ್ಯ. ಸಣ್ಣಪುಟ್ಟ ಕಾರಣಗಳಾದರೂ ಹೊಡೆದಾಡುವ ಜನರ ಪ್ರವೃತ್ತಿ, ಅಧಿಕಾರದ ಮದದಿಂದ ಕಿರುಕುಳ ಕೊಡುವ ಅಧಿಕಾರಶಾಹಿ ಮನೋಧರ್ಮ, ಅವಕಾಶ ದೊರೆಯಿತೆಂದು ಅಬಲೆಯರ ಮೇಲೆರಗುವ ಕಾಮುಕರ ಕಾಮುಕತೆ ಮುಂತಾದ ಸಮಾಜ ವಿರೋಧಿ ಚಟುವಟಿಕೆಗಳ ಪರಿಚಯವೂ ಈ ವೀರಗಲ್ಲುಗಳಿಂದ ತಿಳಿದುಬರುತ್ತದೆ. ಇಂಥವರನ್ನು ಎದುರಿಸಿ ಮಡಿದವರೇ ವೀರರು.

ವೀರಗಲ್ಲನ್ನು ನಿಲ್ಲಿಸಿದವರಾರು? ಯಾವ ಉದ್ದೇಶಕ್ಕಾಗಿ ನಿಲ್ಲಿಸಿದರು ಎಂಬುದು ಬಹು ಮುಖ್ಯವಾಗುತ್ತದೆ. ವೀರಗಲ್ಲುಗಳ ಪಾಠದಲ್ಲಿ ತಾವು ಯಾವ ಉದ್ದೇಶಕ್ಕಾಗಿ ವೀರಗಲ್ಲನ್ನು ನಿಲ್ಲಿಸಿದ್ದೇವೆ ಎಂಬ ಅಂಶವನ್ನು ಅದನ್ನು ನಿಲ್ಲಿಸಿದವರಲ್ಲಿ ಕೆಲವರಾದರೂ ಹೇಳಿಕೊಂಡಿದ್ದಾರೆ. ಈ ಮಾಹಿತಿಯ ಹಿನ್ನೆಲೆಯಲ್ಲಿ ವೀರಗಲ್ಲನ್ನು ನಿಲ್ಲಿಸುವಾಗ ಅಂದಿನ ಜನಕ್ಕೆ ಸಾಮಾನ್ಯವಾಗಿ ಯಾವ ಉದ್ದೇಶವಿತ್ತು ಎಂಬುದನ್ನು ತಿಳಿಯಬಹುದಾಗಿದೆ.

ವೀರಗಲ್ಲನ್ನು ನಿಲ್ಲಿಸುವಲ್ಲಿ ಲೌಕಿಕ ಮತ್ತು ಪಾರಮಾರ್ಥಿಕ ದೃಷ್ಟಿಗಳೆರಡೂ ಇತ್ತೆಂದು ತೋರುತ್ತದೆ. ವೀರನ ಪರಾಕ್ರಮವನ್ನು ಮೆಚ್ಚಿ ವೀರಗಲ್ಲನ್ನು ನೆಡುವುದು. ಅವನ ಪರಾಕ್ರಮ ಲೋಕಕ್ಕೂ ತಿಳಿಯಲೆಂದು ನೆಡುವುದು ಇವು ಲೌಕಿಕ ಉದ್ದೇಶಗಳು. ಮಡಿದ ವೀರನಿಗೆ ವೀರಗಲ್ಲನ್ನು ನಿಲ್ಲಿಸುವುದು ತಮ್ಮ ಕರ್ತವ್ಯ ಎಂದು ಭಾವಿಸಿ ಹಾಗೆ ವೀರಗಲ್ಲು ನಿಲ್ಲಿಸುವುದರ ಮೂಲಕ ಅವನಿಗೆ ಸ್ವರ್ಗವೋ, ಕೈಲಾಸವೋ, ವೈಕುಂಠವೋ ಪ್ರಾಪ್ತವಾಗುತ್ತದೆಯೆಂದು ನಂಬಿ ವೀರಗಲ್ಲುಗಳನ್ನು ನೆಡುವುದು ಇವು ಪಾರಮಾರ್ಥಿಕ ಉದ್ದೇಶ.

ವೀರಗಲ್ಲುಗಳನ್ನು ಎಲ್ಲಿ ನಿಲ್ಲಿಸುತ್ತಿದ್ದರು ಎಂಬುದನ್ನು ತಿಳಿಯಬೇಕಾದರೆ ಅವು ಸಾಮಾನ್ಯವಾಗಿ ಇಂದಿಗೂ ಇರುವ ಪ್ರದೇಶಗಳನ್ನು ಮತ್ತು ವೀರಗಲ್ಲುಗಳ ಪಾಠದಿಂದಲೇ ತಿಳಿದುಬರುವ ಮಾಹಿತಿಗಳನ್ನು ಗಮನಿಸಬೇಕು. ಈ ರೀತಿಯ ಮಾಹಿತಿ ದೊರೆಯುವ ವೀರಗಲ್ಲುಗಳ ಪಾಠ ಬಹಳ ಕಡಿಮೆ ಎಂದೇ ಹೇಳಬೇಕಾಗುತ್ತದೆ. ಉತ್ತರ ಕರ್ನಾಟಕದ ಬಹುಪಾಲು ವೀರಗಲ್ಲುಗಳು ಇಂದು ದೊರೆಯುವುದು ದೇವಾಲಯಗಳ ಬಳಿಯಲ್ಲಿ. ಶಿವ ದೇವಾಲಯಗಳ ಬಳಿಯಂತೂ ವೀರಗಲ್ಲುಗಳು ಸಾಮಾನ್ಯವಾಗಿ ಇದ್ದೇ ಇರುತ್ತವೆ ಎಂದರೆ ತಪ್ಪಾಗಲಾರದು. ಹಾಗೆಯೇ ಆಂಜನೇಯ, ಗಣಪತಿ, ವೀರಭದ್ರ ದೇವಾಲಯಗಳ ಮುಂದೆಯೂ ವಿರಳವಾಗಿರುವುದನ್ನು ಗಮನಿಸಬಹುದು. ಶಿವ ದೇವಾಲಯಗಳ ಬಳಿ ದೊರೆಯುವ ವೀರಗಲ್ಲುಗಳ ಸಂಖ್ಯೆಯೊಡನೆ ಹೋಲಿಸಿ ನೋಡಿದಾಗ ವೈಷ್ಣವ ದೇವಾಲಯಗಳ ಬಳಿ ದೊರೆಯುವ ವೀರಗಲ್ಲುಗಳ ಸಂಖ್ಯೆ ತೀರಾ ಕಡಿಮೆ. ಜೈನ ಬಸದಿಗಳ ಬಳಿಯಲ್ಲಿಯೂ ವೀರಗಲ್ಲುಗಳು ದೊರೆಯುತ್ತವೆ. ಯಾವ ದೇವಾಲಯದ ಮುಂದೆ ವೀರಗಲ್ಲು ಇರುತ್ತದೆಯೋ ಅದು ಸಾಮಾನ್ಯವಾಗಿ ಆ ಮತದ, ಧರ್ಮದ ಶಿಲ್ಪದ ವಿವರವನ್ನು ಹೊಂದಿರುತ್ತದೆ. ಕೆಲವೊಮ್ಮೆ ಹಾಗೆ ಇಲ್ಲದಿರುವ ಸಾಧ್ಯತೆಯೂ ಇದೆ.

ದೇವಾಲಯಗಳ ಮುಂದೆ ಇರುವ ಎಲ್ಲಾ ವೀರಗಲ್ಲುಗಳನ್ನು ಅದೇ ದೇವಾಲಯಗಳ ಮುಂದೆ ಮೊದಲಿಗೇ ನೆಟ್ಟಿದ್ದರು ಎಂಬುದಾಗಿ ಹೇಳಲು ಬರುವುದಿಲ್ಲ. ಏಕೆಂದರೆ ಕಾಲಾಂತರದಲ್ಲಿ ಎಲ್ಲಿಯೋ ಬಿದ್ದಿರುವ ವೀರಗಲ್ಲುಗಳನ್ನು ದೇವರುಗಳೆಂದೂ, ಅವುಗಳನ್ನು ಸಂರಕ್ಷಿಸಬೇಕು ಎಂಬ ದೃಷ್ಟಿಯಿಂದಲೋ ಜನ ದೇವಾಲಯಗಳ ಬಳಿ ತಂದು ನಿಲ್ಲಿಸಿರಬಹುದಾದ ಸಾಧ್ಯತೆಗಳೂ ಇವೆ. ವೀರಗಲ್ಲುಗಳನ್ನು ದೇವಾಲಯಗಳ ಮುಂದೆ ಏಕೆ ನೆಡುತ್ತಿದ್ದರು ಎಂಬುದು ವಿಚಾರ ಮಾಡಬೇಕಾದ ಸಂಗತಿ. ವೀರಗಲ್ಲುಗಳನ್ನು ದೇವಾಲಯಗಳ ಮುಂದೆ ನಿಲ್ಲಿಸುವಲ್ಲಿ ಅವರ ಮುಖ್ಯ ಉದ್ದೇಶ ವೀರನು ದೇವರ ಸನ್ನಿಧಿಯಲ್ಲಿರುತ್ತಾನೆ ಎಂಬ ನಂಬಿಕೆ. ವೀರಗಲ್ಲಿನ ಆರಾಧನೆ ಒಂದು ನಿಯತಕಾಲದಲ್ಲಿ ನಡೆಯಬೇಕಾದ ಆಚರಣೆಯೆಂದು ಭಾವಿಸಿದ್ದ ಕಾಲದಲ್ಲಿ ದೇವಾಲಯ ಮತ್ತು ವೀರನ ಸ್ಮಾರಕ ಒಂದೆಡೆ ಇರುವುದರ ಅನುಕೂಲತೆಯೂ ಅವರಿಗೆ ಕಂಡಿರಬೇಕು. ದೇವಾಲಯಗಳಿಗೆ ಸಹಜವಾಗಿ ಜನರು ಹೋಗುತ್ತಿದ್ದ ಕಾರಣದಿಂದಾಗಿ ಅವರಿಗೆ ಅನಾಯಾಸವಾಗಿ ವೀರನ ಪರಾಕ್ರಮದ ಪರಿಚಯವೂ ಆಗುತ್ತದೆ ಎಂಬುದಾಗಿ ಅವರು ಭಾವಿಸಿದ್ದಿರಬೇಕು. ಆದರೆ ವೀರಗಲ್ಲುಗಳನ್ನು ದೇವಾಲಯಗಳ ಮುಂದೆ ನಿಲ್ಲಿಸುವಲ್ಲಿ ಮುಖ್ಯವಾಗಿ ಧಾರ್ಮಿಕತೆಯೇ ಪ್ರಧಾನ ಅಂಶವಾಗಿತ್ತೆಂದು ತೋರುತ್ತದೆ.

ದೇವಾಲಯಗಳ ಬಳಿಯಲ್ಲಿ ಮಾತ್ರವಲ್ಲದೆ ವೀರಗಲ್ಲುಗಳು ಇತರ ಕಡೆಗಳಲ್ಲಿಯೂ ಸಾಮಾನ್ಯವಾಗಿ ಇರುವುದನ್ನು ಗಮನಿಸಬಹುದು. ಊರ ಬಾಗಿಲ ಮುಂದೆ, ಚಾವಡಿಗಳಲ್ಲಿ, ಹೊಂಡಗಳ ಬಳಿ, ಹೊಲ, ಗದ್ದೆ, ತೋಪು, ಮೈದಾನಗಳಲ್ಲಿ ವೀರಗಲ್ಲುಗಳನ್ನು ನೆಟ್ಟಿರುವುದನ್ನು ಗಮನಿಸಬಹುದು.

ಇಂಥ ಕಡೆಗಳಲ್ಲಿ ನೆಡುವುದರ ಉದ್ದೇಶ ಅವು ನಿರಾಯಾಸವಾಗಿ ಜನರ ಕಣ್ಣಿಗೆ ಬೀಳಬೇಕೆನ್ನುವುದು.

ಒಟ್ಟಾರೆ ವೀರಗಲ್ಲುಗಳನ್ನು ನಿಲ್ಲಿಸುವುದರ ಮೂಲಕ ವೀರನ ಆತ್ಮಕ್ಕೊಂದು ಸ್ಥಳಾವಕಾಶ ಮಾಡಿಕೊಡುತ್ತೇವೆ. ಈ ಶಿಲೆಯಲ್ಲಿ ವೀರನ ಆತ್ಮ ನೆಲೆಸಿರುತ್ತದೆ. ಅದರಲ್ಲಿ ಪ್ರತಿಷ್ಠಾಪಿತವಾಗಿರುವ ವೀರ ತಮಗೆ ಕಷ್ಟದಲ್ಲಿ ನೆರವಾಗುತ್ತಾನೆ ಎಂಬ ಮನೋಧರ್ಮ ಅತಿ ಪ್ರಾಚೀನವಾದುದು. ವೀರನಾದವನು ಬದುಕಿದ್ದಾಗ ಹೇಗೆ ತನ್ನ ನೆರವನ್ನು ಕೇಳಿ ಬಂದವರಿಗೆ ಶರಣಾಗತರಾದವರಿಗೆ ಆಶ್ರಯವನ್ನೂ, ರಕ್ಷಣೆಯನ್ನೂ ನೀಡತ್ತಿದ್ದನೋ ಅದೇ ರೀತಿಯಲ್ಲಿ ಸತ್ತ ಮೇಲೆಯೂ ವೀರಗಲ್ಲಿನಲ್ಲಿ ನೆಲೆಸಿದ್ದು ತನ್ನನ್ನು ಆಶ್ರಯಿಸಿ ಬಂದವರಿಗೆ ನೆರವನ್ನು ನೀಡುತ್ತಾನೆ ಎಂಬುದಾಗಿ ಜನ ಭಾವಿಸಿದ್ದರು.

ಈ ಎಲ್ಲ ದೃಷ್ಟಿಗಳಿಂದ ನಮ್ಮ ಜನರನ್ನು ಅರಿತುಕೊಳ್ಳುವಲ್ಲಿ ವೀರಗಲ್ಲುಗಳ ಪಾಠ ಮತ್ತು ಶಿಲ್ಪ ಇವೆರಡೂ ನೆರವಾಗುತ್ತದೆ. ಈ ರೀತಿ ನಮ್ಮ ಜನರನ್ನು ಅರಿಯುವ ಪ್ರಯತ್ನ ಈವರೆಗೆ ಉತ್ತರ ಕರ್ನಾಟಕದ ವೀರಗಲ್ಲುಗಳನ್ನು ಆಧರಿಸಿ ಯಾರು ಮಾಡಿಲ್ಲದ ಕಾರಣ ಈ ರೀತಿಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನದ ಅವಶ್ಯಕತೆ ಇದೆ ಎಂಬುದು ನನ್ನ ಅಭಿಮತ.

**ಅಧ್ಯಯನದ ವ್ಯಾಪ್ತಿ :**

ಯಾವುದೇ ಒಂದು ವಿಷಯದ ಕುರಿತ ಅಧ್ಯಯನವು ಒಂದು ನಿರ್ದಿಷ್ಟವಾದ ಚೌಕಟ್ಟನ್ನು ಹೊಂದಿರಬೇಕು. ನಿರ್ದಿಷ್ಟವಾದ ವ್ಯಾಪ್ತಿಯು ವಿಷಯದ ಅಧ್ಯಯನಕ್ಕೆ ಅನುಕೂಲತೆಯನ್ನು ಮಾಡಿಕೊಡುತ್ತದೆ. ಅದರಂತೆ "ಉತ್ತರ ಕರ್ನಾಟಕದ ವೀರಗಲ್ಲುಗಳ ಸಾಂಸ್ಕೃತಿಕ ಅಧ್ಯಯನ" ಎಂಬ ವಿಷಯಕ್ಕೆ ನಿರ್ದಿಷ್ಟವಾದ ಚೌಕಟ್ಟನ್ನು ಹಾಕಿಕೊಳ್ಳಲಾಗಿದೆ. ಉತ್ತರ ಕರ್ನಾಟಕದ ಭಾಗದಲ್ಲಿರುವ ಬೀದರ್, ಕಲಬುರಗಿ, ಯಾದಗಿರಿ, ರಾಯಚೂರು, ಬಳ್ಳಾರಿ, ಕೊಪ್ಪಳ, ಗದಗ, ಬಾಗಲಕೋಟೆ, ಬಿಜಾಪುರ, ಧಾರವಾಡ, ಬೆಳಗಾವಿ ಜಿಲ್ಲೆಯ ತಾಲೂಕು, ಗ್ರಾಮಗಳನ್ನು ಒಳಗೊಂಡಂತೆ ವೀರಗಲ್ಲುಗಳ ಸಾಂಸ್ಕೃತಿಕ ಅಧ್ಯಯನ ಇಲ್ಲಿ ಪ್ರಧಾನವಾಗಿವೆ. ಪ್ರಸ್ತುತ ಅಧ್ಯಯನಕ್ಕೆ ಕಾಲಘಟ್ಟದ ಮಿತಿಯನ್ನು ಹೊಂದಲಾಗಿದೆ. ಕ್ರಿ.ಶ. ೮ನೆಯ ಶತಮಾನದಿಂದ ಕ್ರಿ.ಶ. ೧೭-೧೮ನೆಯ ಶತಮಾನದ ಕಾಲ ಮಿತಿಯಲ್ಲಿ ಈ ಅಧ್ಯಯನವನ್ನು ನಡೆಸಲಾಗಿದೆ.

**ಆಕರಗಳು :**

ಯಾವುದೇ ದೇಶದ ಇತಿಹಾಸವನ್ನು ಅರಿಯಲು ಸಹಾಯವಾಗುವ ಪ್ರಮುಖ ಆಕರಗಳೆಂದರೆ ಶಾಸನಗಳು, ಸ್ಮಾರಕಗಳು, ಸಾಹಿತ್ಯ ಕೃತಿಗಳು ಮತ್ತು ಜನಪದ ಸಾಹಿತ್ಯ ಮುಂತಾದವುಗಳು. ಈ ಆಕರಗಳಲ್ಲಿ ಮೊದಲ ಸ್ಥಾನ ಶಾಸನಗಳಿಗೆ ಸಲ್ಲುತ್ತದೆ. ಆದ್ದರಿಂದ ಈ ಅಧ್ಯಯನಕ್ಕೆ ಪ್ರಮುಖವಾಗಿ ಉತ್ತರ ಕರ್ನಾಟಕದಲ್ಲಿ ದೊರೆಯುವ ಶಾಸನಗಳನ್ನು ಆಧಾರವಾಗಿ ಬಳಸಿಕೊಂಡಿದ್ದೇನೆ. ಅವುಗಳಲ್ಲಿ ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ-೧.೨.೩.೬.೭.೮.೯.೧೦ ಮತ್ತು ಸೌತ್

ಇಂಡಿಯನ್ ಇನ್‌ಸ್ಕ್ರಿಪ್ಸನ್ಸ್-೧೧-೧,೧೧-೨,೧೫,೨೦,೧೭ ಹಾಗೂ ಎಫಿಗ್ರಾಫಿಯಾ ಇಂಡಿಕಾದ ಸಂಪುಟಗಳು, ಇಂಡಿಯನ್ ಅಂಟಿಕ್ವೈರಿ, ಕಲಬುರ್ಗಿ ಜಿಲ್ಲೆಯ ಶಾಸನಗಳು, ಧಾರವಾಡ ತಾಲೂಕಿನ ಶಾಸನಗಳು, ಸುರಪುರ ತಾಲೂಕಿನ ಶಾಸನಗಳು, ಹುಬ್ಬಳ್ಳಿ ತಾಲೂಕಿನ ಶಾಸನಗಳು ಇವುಗಳಲ್ಲಿ ಪ್ರಕಟವಾದ ಶಾಸನೋಕ್ತ ವೀರಗಲ್ಲುಗಳು ಮತ್ತು ಅಪ್ರಕಟಿತ ಶಾಸನ ರಹಿತ ವೀರಗಲ್ಲುಗಳನ್ನು ನನ್ನ ಅಧ್ಯಯನದ ಮೂಲ ಆಕರಗಳಂತೆ ಬಳಸಿಕೊಳ್ಳಲಾಗಿದೆ. ಉತ್ತರ ಕನಾಟಕದ ವೀರಗಲ್ಲುಗಳ ಸಾಂಸ್ಕೃತಿಕ ಅಧ್ಯಯನಕ್ಕೆ ಸಂಬಂಧಿಸಿದ ಕ್ಷೇತ್ರಕಾರ್ಯದ ಫಲಶ್ರುತಿಯಾಗಿ ಬೆಳಕಿಗೆ ಬಂದ ಸ್ಮಾರಕ ಶಿಲೆಗಳಾದ ವೀರಗಲ್ಲುಗಳು, ಮಹಾಸತಿಕಲ್ಲು, ತುರುಗೋಳ್‌ಗಳು ಪೆಣ್ಬುಯ್ಯಲ್, ನಿಸಿಧಿಗಲ್ಲುಗಳು, ಆತ್ಮಬಲಿ ಕಲ್ಲುಗಳು ಮತ್ತು ಪ್ರಾಣಿಬೇಟೆಯ ವೀರಗಲ್ಲುಗಳನ್ನು ಆಕರಗಳಂತೆ ಬಳಸಿಕೊಂಡಿದ್ದೇನೆ.

ಉತ್ತರ ಕರ್ನಾಟಕದ ಪ್ರದೇಶದ ಜಿಲ್ಲಾ ಗ್ಯಾಜೆಟಿಯರ್‌ಗಳು, ಇತಿಹಾಸ ದರ್ಶನ ಸಂಪುಟಗಳು, ವಿಜಯನಗರ ಅಧ್ಯಯನ ಸಂಪುಟಗಳು, ಕರ್ನಾಟಕ ಭಾರತಿ, ಪ್ರಬುದ್ಧ ಕರ್ನಾಟಕ, ಶಾಸನ ಅಧ್ಯಯನ, ದಿನ ಪತ್ರಿಕೆ ಮತ್ತು ವಿವಿಧ ಪತ್ರಿಕೆಗಳಲ್ಲಿ ಪ್ರಕಟಗೊಂಡಿರುವ ಲೇಖನಗಳನ್ನು ನನ್ನ ಅಧ್ಯಯನದ ಪೂರಕ ಆಕರಗಳನ್ನಾಗಿ ಬಳಸಿಕೊಂಡಿದ್ದೇನೆ.

**ಅಧ್ಯಯನದ ವಿಧಾನ :**

ಈ ಅಧ್ಯಯನದ ವಿಧಾನವನ್ನು ಶಾಸನ ಸಂಪುಟಗಳಿಂದ ಶಾಸನದ ಪಾಠವನ್ನು ಸಂಗ್ರಹಿಸುವುದಕ್ಕಾಗಿ ನಿರ್ದಿಷ್ಟವಾದ ಅಳತೆಯ ರಟ್ಟಿನ ಪಟ್ಟಿಗಳನ್ನು ಆಯ್ಕೆ ಮಾಡಿಕೊಂಡು ಅವುಗಳನ್ನು ಈ ರೀತಿ ಮಾಹಿತಿ ಸಂಗ್ರಹ ಮಾಡುವುದು ಗ್ರಾಮ; ತಾಲೂಕು; ಜಿಲ್ಲೆ; ರಾಜ; ರಾಜಮನೆತನ; ಕಾಲ ಮತ್ತು ಶಾಸನ ದೊರೆತ ಸ್ಥಳ ಮುಂತಾದ ವಿವರ ಮಾಹಿತಿ ಸಂಗ್ರಹಿಸುವಲ್ಲಿ ನಾನು ಅನುಸರಿಸಿದ ಕ್ರಮ ಹೀಗಿದೆ. ಕಾಲ, ಭಾಷೆ, ಅರಸು ಮನೆತನ, ಪ್ರದೇಶ ಮತ್ತು ವಿಷಯದ ದೃಷ್ಟಿಯಿಂದ ಮಹತ್ವದ್ದು ಎಂದೆನಿಸುವ ಉತ್ತರ ಕರ್ನಾಟಕದ ಶಾಸನ ಸಹಿತ ವೀರಗಲ್ಲುಗಳು ಮತ್ತು ಶಾಸನ ರಹಿತ ವೀರಗಲ್ಲುಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಲಾಗಿದೆ.

ಪ್ರಸ್ತುತ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಕೆಲವೊಂದು ವಿಧಾನಗಳನ್ನು ಅನುಸರಿಸಲಾಗಿದೆ.

* ಈ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಪ್ರಕಟವಾದ ಎಲ್ಲಾ ಶಾಸನ ಸಂಪ್ರಬಂಧಗಳಿಂದ ಮಾಹಿತಿಗಳನ್ನು ಸಂಗ್ರಹಿಸಿ ಕೂಲಂಕಷವಾಗಿ ಅಧ್ಯಯನ ಮಾಡಲಾಗಿದೆ.
* ಉತ್ತರ ಕರ್ನಾಟಕದ ಭವ್ಯ ಪರಂಪರೆಗೆ ಆಧಾರ ಸ್ತಂಭಗಳಂತಿರುವ ವೀರಗಲ್ಲುಗಳು ಮತ್ತು ವೀರರ ಬಗ್ಗೆ ಮಾಹಿತಿಗಳನ್ನು ಮೂಲ ಆಕರವಾಗಿ ಶಾಸನ ಪಾಠಗಳಿಂದ ಸಂಗ್ರಹಿಸುವುದು.
* ವೀರಗಲ್ಲುಗಳ ಛಾಯಾಚಿತ್ರಗಳನ್ನು ಕ್ಷೇತ್ರಕಾರ್ಯದ ಮೂಲಕ ವೀರಗಲ್ಲುಗಳು ಇರುವ ಸ್ಥಳಗಳಿಗೆ ಹೋಗಿ ತೆಗೆದು ಮತ್ತು ಅಲ್ಲಿಯೇ ವಿವರಗಳನ್ನು ಟಿಪ್ಪಣಿ ಮಾಡಿಕೊಳ್ಳುವುದು.

* ಕ್ಷೇತ್ರಕಾರ್ಯದ ಮೂಲಕ ಗಮನಿಸಿದ ಶಾಸನ ಪಾಠವಿಲ್ಲದ ವೀರಗಲ್ಲುಗಳ ಛಾಯಾಚಿತ್ರಗಳನ್ನು ತೆಗೆದುಕೊಂಡು ಅವುಗಳನ್ನು ಉಪಯೋಗಿಸಿಕೊಂಡಿದ್ದೇನೆ. ಈ ದೃಷ್ಟಿಯಿಂದ ನೋಡಿದಾಗ ಕೇವಲ ಶಿಲ್ಪದ ವಿವರಗಳನ್ನು ಹೊಂದಿರುವ ವೀರಗಲ್ಲುಗಳು ತುಂಬಾ ಮಹತ್ವದ ವಿಷಯಗಳನ್ನು ತಿಳಿಸುವಂಥದ್ದಾಗಿದೆ. ಅಂಥ ಹಲವಾರು ವೀರಗಲ್ಲುಗಳ ವಿಶ್ಲೇಷಣೆ ಮೊದಲಬಾರಿಗೆ ಇಲ್ಲಿ ನಡೆದಿದೆ ಎಂಬುದು ನನ್ನಯ ಭಾವನೆ. ವೀರಗಲ್ಲುಗಳ ಬಗ್ಗೆ ಜನಸಾಮಾನ್ಯರು ಹೊಂದಿರುವ ನಂಬಿಕೆ, ನಡೆಸುವ ಆಚರಣೆಗಳು ಮತ್ತು ಅವುಗಳ ವಿವರಗಳನ್ನು ಸ್ವಲ್ಪಮಟ್ಟಿಗೆ ಸಂಗ್ರಹಿಸಿದ್ದೇನೆ. ಸಂಗ್ರಹಿಸಿದ ಮಾಹಿತಿಗಳನ್ನು ತುಲನಾತ್ಮಕವಾಗಿ ಅಧ್ಯಯನ ನಡೆಸಿದ ನಂತರ ಮಹಾಪ್ರಬಂಧ ರಚನೆಯಲ್ಲಿ ಬಳಸಲಾಗಿದೆ.

**ಅಧ್ಯಯನದ ಸ್ವರೂಪ :**

ಅಧ್ಯಯನದ ಅನುಕೂಲಕ್ಕಾಗಿ ಪ್ರಸ್ತುತ ವಿಷಯವನ್ನು ಒಂಬತ್ತು ಅಧ್ಯಾಯಗಳನ್ನಾಗಿ ವಿಭಾಗಿಸಿಕೊಳ್ಳಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಪೂರ್ವಾಧ್ಯಯನ ಸಮೀಕ್ಷೆ ಹಾಗೂ ಅಧ್ಯಯನದ ಸ್ವರೂಪ ಕುರಿತಂತೆ ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಸ್ಮಾರಕ ಶಾಸನಗಳ ನಿರ್ಮಾಣ, ವೀರ, ವೀರಗಲ್ಲು ಮತ್ತು ವೀರತ್ವದ ಮೌಲ್ಯವನ್ನು ಕುರಿತು ಗಮನಿಸುವುದರ ಜೊತೆಗೆ ವೀರಪರಂಪರೆಯ ಇತಿಹಾಸ ಮತ್ತು ಅದರ ಮಹತ್ವವನ್ನು ತಿಳಿಸಲಾಗಿದೆ. ಆ ಮೂಲಕ ಶಾಸನಶಿಲ್ಪದ ಬೆಳವಣಿಗೆಯನ್ನು ಅಧ್ಯಯನ ಮಾಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಅಭ್ಯಾಸದ ದೃಷ್ಟಿಯಿಂದ ವೀರಗಲ್ಲುಗಳ ವಿಂಗಡನೆ ಮಾಡಿಕೊಂಡು ಕ್ರಿ.ಶ. ೮ನೆಯ ಶತಮಾನದಿಂದ ೯ನೆಯ ಶತಮಾನದವರೆಗೆ ರಾಷ್ಟ್ರಕೂಟರ ಕಾಲದ ಶಾಸನಸಹಿತ ಮತ್ತು ಶಾಸನರಹಿತ ವೀರಗಲ್ಲುಗಳನ್ನು ವಿಭಾಗಿಸಿಕೊಂಡು ಅವುಗಳ ವೈಶಿಷ್ಟ್ಯತೆ ಕುರಿತು ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಕ್ರಿ.ಶ. ೧೧ನೆಯ ಶತಮಾನದಿಂದ ೧೨ನೆಯ ಶತಮಾನದವರೆಗೆ ಕಲ್ಯಾಣ ಚಾಲುಕ್ಯರ ಕಾಲದ ಶಾಸನಸಹಿತ ವೀರಗಲ್ಲುಗಳು ಮತ್ತು ಶಾಸನರಹಿತ ವೀರಗಲ್ಲುಗಳ ಬೆಳವಣಿಗೆಯನ್ನು ಕಾಲಾನುಕ್ರಮದಲ್ಲಿ ಸವಿಸ್ತಾರವಾಗಿ ಅಧ್ಯಯನ ಮಾಡಲಾಗಿದೆ.

ಐದನೆಯ ಅಧ್ಯಾಯದಲ್ಲಿ ಕ್ರಿ.ಶ. ೧೩ನೆಯ ಶತಮಾನದಿಂದ ೧೪ನೆಯ ಶತಮಾನದವರೆಗೆ ಹೊಯ್ಸಳರ ಕಾಲದ ವೀರಗಲ್ಲುಗಳ ಮಹತ್ವವನ್ನು ವಿವರಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಕ್ರಿ.ಶ. ೧೫ನೆಯ ಶತಮಾನದಿಂದ ೧೬, ೧೭ನೆಯ ಶತಮಾನದವರೆಗೆ ವಿಜಯನಗರ ವಿಜಯನಗರೋತ್ತರ ಕಾಲದ ವೀರಗಲ್ಲುಗಳ ಬಗ್ಗೆ ವಿಶ್ಲೇಷಿಸಲಾಗಿದೆ. ವೀರಗಲ್ಲಿಗೆ

ಬಳಸಿದ ಕಲ್ಲು, ವೀರರು ಯುದ್ಧಕ್ಕೆ ಬಳಸಿದ ಆಯುಧಗಳು, ವೀರರು ಹಾಕಿಕೊಂಡ ವಸ್ತ್ರಾಭರಣಗಳು, ವೀರರು ಹೋರಾಡಿದ ಸ್ಥಳ, ವೀರರು ಯುದ್ಧಕ್ಕೆ ವಾಹನವಾಗಿ ಬಳಸಿದ ಕುದುರೆ, ಸಹಾಯಕವಾಗಿ ನಾಯಿ ಮುಂತಾದವುಗಳನ್ನು ಕುರಿತು ಮಾಹಿತಿ ಮತ್ತು ವಿವರಣೆ ನೀಡಲಾಗಿದೆ.

ಅಧ್ಯಾಯ ಏಳರಲ್ಲಿ ಮಹಾಸತಿಕಲ್ಲು ಶಾಸನಸಹಿತ ಮತ್ತು ಶಾಸನರಹಿತ ಮಹಾಸತಿಕಲ್ಲು ವಿಭಾಗಿಸಿ, ಮಹಾಸತಿಯ ಹಿನ್ನೆಲೆ 'ಮಾಸ್ತಿ'ಯ ಸಂಕ್ಷಿಪ್ತ ರೂಪ, ಸತಿಯ ಸಹಗಮನ ಮತ್ತು ಅನುಗಮನ, ಒಕ್ಕೈ ಮಾಸ್ತಿಗಲ್ಲು, ವೀರ–ಮಾಸ್ತಿಗಲ್ಲು, ಮಹಾಸತಿಯ ವಸ್ತ್ರಾಭರಣಗಳು, ಉಡುಗೆ–ತೊಡುಗೆಗಳನ್ನು ಮತ್ತು ಮಹಾಸತಿಯ ವಿಶಿಷ್ಟತೆಯನ್ನು ಕುರಿತು ಚರ್ಚಿಸಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ತುರುಗೋಳ್ ವೀರಗಲ್ಲು ಶಾಸನಸಹಿತ ಮತ್ತು ಶಾಸನರಹಿತ, ಕನ್ನಡ ಪ್ರಾಚೀನ ಕಾವ್ಯಗಳಲ್ಲಿ ತುರುಗೋಳ್ ಸ್ವರೂಪವನ್ನು ಕುರಿತು, ತುರುಗೋಳ್ ವೀರಗಲ್ಲಿನ ಬಗ್ಗೆ ಜನಸಾಮಾನ್ಯರಿಗೆ ಇರುವ ನಂಬಿಕೆ ಮತ್ತು ಆಚರಣೆ, ಪೆಣ್ಬುಯ್ಯಲ್ ಶಿಲ್ಪದ ಅರ್ಥ ಮತ್ತು ಕನ್ನಡ ಕಾವ್ಯಗಳಲ್ಲಿ ಪೆಣ್ಬುಯ್ಯಲ್‌ನ ಪ್ರಸಂಗಗಳನ್ನು ಕುರಿತು ಚರ್ಚಿಸಲಾಗಿದೆ. ಗೋಸಾಸಗಲ್ಲು, ಆತ್ಮಬಲಿಕಲ್ಲು, ನಿಸಿಧಿಗಲ್ಲು ಮತ್ತು ಪ್ರಾಣಿಬೇಟೆಯ ವೀರಗಲ್ಲು ಹೀಗೆ ವಿಭಾಗಿಸಿ ಟಿಪ್ಪಣಿ ಮಾಡಿ ಅವುಗಳಿಗೆ ಸಂಬಂಧಿಸಿದ ವಿಷಯದ ಮಾಹಿತಿಗಳನ್ನು ಚರ್ಚಿಸಲಾಗಿದೆ.

ಒಂಬತ್ತನೆಯ ಅಧ್ಯಾಯ ಸಮಾರೋಪವಾಗಿದ್ದು, ಒಟ್ಟು ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ನೀಡಲಾಗಿದೆ. ಮಹಾಪ್ರಬಂಧದ ಕೊನೆಯಲ್ಲಿ ಅನುಬಂಧವಿದ್ದು, ಪರಾಮರ್ಶನ, ಗ್ರಂಥಗಳು, ಅಪ್ರಕಟಿತ ಶಾಸನಗಳು ಮತ್ತು ಛಾಯಾಚಿತ್ರಗಳನ್ನು ನೀಡಲಾಗಿದೆ.

# ಅಧ್ಯಾಯ : ೨

# ಸ್ಮಾರಕ ಶಾಸನಗಳು

೨.೧. ವೀರ

೨.೨. ವೀರಗಲ್ಲು

೨.೩. ವೀರತ್ವದ ಮೌಲ್ಯ

೨.೪. ವೀರ ಪರಂಪರೆ

೨.೫. ಶಾಸನಶಿಲ್ಪ ಬೆಳವಣಿಗೆ

೨.೬. ವೀರಗಲ್ಲು ಹಾಕಿಸುತ್ತಿದ್ದವರು

## ಅಧ್ಯಾಯ – ಎರಡು

## ಸ್ಮಾರಕ ಶಾಸನಗಳು

**ಪೀಠಿಕೆ :**

ಪ್ರಾಚೀನ ಕಾಲದಲ್ಲಿ ಸಾಮ್ರಾಜ್ಯದ ವಿಸ್ತರಣೆಗಾಗಿ ಯುದ್ಧಗಳು ಸಾಮಾನ್ಯವಾಗಿದ್ದವು. ಅಶಕ್ತ ದೊರೆಗಳ ಮೇಲೆ ಬಲಿಷ್ಠ ದೊರೆಗಳು ದಾಳಿ ನಡೆಸುತ್ತಿದ್ದರು. ಇದನ್ನು ಹೊರತುಪಡಿಸಿ ಸಾಮ್ರಾಜ್ಯ–ಸಾಮ್ರಾಜ್ಯಗಳ ಮಧ್ಯದಲ್ಲಿನ ದ್ವೇಷ, ಉತ್ತರಾಧಿಕಾರತ್ವಕ್ಕಾಗಿ ತಂದೆ–ಮಕ್ಕಳ ಮಧ್ಯದ ವೈರತ್ವ, ಸಹೋದರ–ಸಹೋದರರ ಮಧ್ಯದಲ್ಲಿನ ವೈರತ್ವ, ಅರಸ ಮತ್ತು ಸಾಮಂತರ ನಡುವಿನ ದ್ವೇಷ ಹಾಗೂ ಸಾರ್ವಜನಿಕರು ಅರಸ ಹಾಗೂ ಆತನ ಆಡಳಿತಾಧಿಕಾರಿಗಳ ವಿರುದ್ಧ ಸಿಡಿದೆದ್ದ ಪ್ರತಿಭಟನೆ ಇವೆಲ್ಲವೂ ಯುದ್ಧಕ್ಕೆ ಕಾರಣಗಳಾಗಿದ್ದವು. ಇಂತಹ ಯುದ್ಧಗಳಲ್ಲಿ ಕಲಿತನದಿಂದ ಹೋರಾಡಿ ವೀರಮರಣ ಹೊಂದಿದ ಅಥವಾ ಯಾವುದೇ ವ್ಯಕ್ತಿಯ ಸ್ಮರಣೆಗಾಗಿ ನಿರ್ಮಿಸಿದ ನಿರ್ಮಾಣಗಳನ್ನು ಸ್ಮಾರಕಗಳು ಎನ್ನುವರು.

**ಸ್ಮಾರಕಗಳು :** ಸ್ಮಾರಕಗಳು ಮಾನವನು ನಡೆದುಬಂದ ದಾರಿಯನ್ನು ತಿಳಿಸುವುದರ ಜೊತೆಗೆ ಅವನ ಜೀವನ ಶೈಲಿ ಹಾಗೂ ಸಂಸ್ಕೃತಿಯನ್ನು ತಿಳಿಸುತ್ತದೆ. ಇಂತಹ ಸ್ಮಾರಕಗಳು ಬಹುತೇಕವಾಗಿ ಶಿಲೆಗಳಿಂದ ನಿರ್ಮಾಣಗೊಂಡವುಗಳಾಗಿವೆ. ವೇದಗಳ ಕಾಲದಿಂದ ಇವುಗಳ ಇರುವಿಕೆ ತಿಳಿದುಬರುತ್ತದೆ. ಮರಣ ನಂತರ ನಿರ್ಮಿಸುವ ಸ್ಮಾರಕದ ವ್ಯವಸ್ಥೆಯು ಕಾಲಕ್ರಮದಲ್ಲಿ ಸಾಮಾಜಿಕ, ಧಾರ್ಮಿಕ ವ್ಯವಸ್ಥೆಗೂ ಪಸರಿಸಿ ವಿಶಾಲ ವ್ಯಾಪ್ತಿಯನ್ನು ಪಡೆದುಕೊಂಡಿತ್ತು. ಸ್ಮಾರಕಗಳು ಕೇವಲ ಮನುಷ್ಯ ಮಾತ್ರರಿಗಷ್ಟೇ ಮೀಸಲಾಗದೆ ಪ್ರಾಣಿ, ಗಿಡ, ಮರ ಮುಂತಾದವುಗಳಿಗೂ ಸಂಬಂಧಿಸಿದವುಗಳಾಗಿವೆ. ಅಂದರೆ ಮಾನವನು ಯಾವ ಪ್ರಾಣಿಗಳ ಮೇಲೆ ಹೆಚ್ಚು ಅವಲಂಬಿತನಾಗಿ ಅದರೊಂದಿಗೆ

ತಾದಾತ್ಮತೆಯನ್ನು ಪಡೆದಿದ್ದನೋ ಆ ಪ್ರಾಣಿ ತೀರಿದ ಮೇಲೆ ಅದರ ನೆನಪಿಗಾಗಿಯೂ ಸ್ಮಾರಕಗಳನ್ನು ನಿರ್ಮಿಸಲು ಮುಂದಾದನು. ನಮ್ಮ ಹಳ್ಳಿಗಳಲ್ಲಿ ಎತ್ತು ರೈತನಿಗೆ ಹೆಗಲಿಗೆ ಹೆಗಲು ಕೊಟ್ಟು ದುಡಿಯುತ್ತಿರುವ ಪ್ರಾಣಿ. ರೈತನ ಬಾಳಿನಲ್ಲಿ ಬಸವನನ್ನು ಕುಟುಂಬದ ಸದಸ್ಯನಂತೆ ಪರಿಗಣಿಸುತ್ತಿದ್ದರು. ಇಂತಹ ಬಸವ ತೀರಿದ ಮೇಲೆ ರೈತ ತಾನು ದುಡಿದ ಹೊಲದಲ್ಲಿ ಅದನ್ನು ಹೂಳಿ ಅದರ ಮೇಲೆ ಗುರುತಿಗಾಗಿ ಒಂದು ಕಲ್ಲನ್ನು ನೆಟ್ಟು ಪೂಜಿಸುವ ಪದ್ಧತಿ ನಮ್ಮ ಪೂರ್ವಜರಲ್ಲಿ ಇತ್ತಲ್ಲದೆ ಇಂದಿಗೂ ಆ ಪದ್ಧತಿ ಮುಂದುವರಿದಿದೆ. ಅನೇಕ ಹಳ್ಳಿಗಳಲ್ಲಿ ದೇವರಿಗಾಗಿ ಬಸವನನ್ನು ಬಿಡುವ ಪದ್ಧತಿ ರೂಢಿಯಲ್ಲಿದೆ. ಅದನ್ನು 'ದೇವರ ಗೂಳಿ' ಎಂದು ಕರೆಯಲಾಗುತ್ತದೆ. ಇಂತಹ ಗೂಳಿಯನ್ನು ಹಳ್ಳಿಗರು ದೇವರೆಂಬ ಭಾವನೆಯಿಂದ ಪೂಜಿಸುತ್ತಿದ್ದು, ಅದು ಸತ್ತ ಮೇಲೆ ದೇವಾಲಯದ ಎದುರಿಗೆ ಅದನ್ನು ಹೂಳಿ ಅದಕ್ಕೊಂದು ಕಟ್ಟೆಯನ್ನು ಅಥವಾ ಜಗಲಿಯನ್ನು ನಿರ್ಮಿಸಿ ಸ್ಮಾರಕವನ್ನಾಗಿ ಮಾಡುವ ಪದ್ಧತಿ ಇಂದಿಗೂ ರೂಢಿಯಲ್ಲಿದೆ. ಇಂತಹ ಶಿಲೆಗಳನ್ನೇ ನಾವು ಸ್ಮಾರಕ ಶಿಲೆಯೆಂದು ಕರೆಯುತ್ತೇವೆ. ಕೇವಲ ವ್ಯಕ್ತಿಯ ಸಾವಿನ ನಂತರ ನಿಲ್ಲಿಸಿದ ಶಿಲೆಯೊಂದು ಸ್ಮಾರಕವಾಗದೆ ಅವನು ವಾಸಿಸುವ ಮನೆ, ಉಪಯೋಗಿಸುವ ವಸ್ತುಗಳು ಕೂಡ ಸ್ಮಾರಕಗಳಾಗಬಲ್ಲವು. ಹೀಗೆ 'ಸ್ಮಾರಕ' ಎಂಬ ಪದಕ್ಕೆ ವಿಶಾಲವಾದ ಅರ್ಥವನ್ನು ಕಲ್ಪಿಸಲಾಗುತ್ತದೆ. ಇಂದಿನ ವೈಜ್ಞಾನಿಕ ಯುಗದಲ್ಲಿಯೂ ಇಂತಹ ಸ್ಮಾರಕ ಶಿಲೆಗಳನ್ನು ಮತ್ತು ಮೂರ್ತಿಗಳನ್ನು ಕಾಣಬಹುದಾಗಿದೆ. ಉದಾ: ಕಾರ್ಗಿಲ್ ಯುದ್ಧದಲ್ಲಿ ಮಡಿದ ಸೈನಿಕರ ನೆನಪಿಗಾಗಿ ಸ್ಮಾರಕಗಳನ್ನು ಕಟ್ಟಿಸಿ ಪೂಜಿಸುವ ಪದ್ಧತಿ ರೂಢಿಯಲ್ಲಿದೆ.

ಕನ್ನಡ ನಾಡಿನ ಜನರು ಸಾಮಾನ್ಯವಾಗಿ ಮೊದಲಿನಿಂದಲೂ ಶೂರರಾಗಿದ್ದರೆಂಬುದಕ್ಕೆ ಸ್ಮಾರಕ ಶಾಸನಗಳು ಪ್ರತ್ಯಕ್ಷ ಸಾಕ್ಷಿಯಂತಿವೆ. ಯಾವುದಾದರೂ ಸಾಮಾಜಿಕ ಒಳತಿಗಾಗಿ ಅಥವಾ ಉದಾತ್ತ ತ್ಯಾಗದ ಕಾರಣಕ್ಕಾಗಿ ಜೀವನವನ್ನು ಬಲಿ ಕೊಟ್ಟು ಜನರ ನೆನಪಿಗೆ ನಿಲ್ಲಿಸಿದ ಶಾಸನಗಳನ್ನು ಸ್ಮಾರಕ ಶಾಸನಗಳೆಂದು ಕರೆಯುತ್ತಿದ್ದರು. ಇವು ಸಾಮಾನ್ಯವಾಗಿ ಆಯಾ ಧರ್ಮ, ನಂಬಿಕೆ, ಸಾಮಾಜಿಕ ಪ್ರತಿಷ್ಠೆಗಳಿಗುಣವಾಗಿ ಬೆಳೆದು ಬಂದಿವೆ. ಬೃಹದಾಕಾರದ ಪಿರಮಿಡ್‌ಗಳಿಂದ ಹಿಡಿದು ಸಣ್ಣಪುಟ್ಟ ವೀರಗಲ್ಲುಗಳವರೆಗೂ ಇವುಗಳ ವ್ಯಾಪ್ತಿಯನ್ನು ಗುರುತಿಸಬಹುದು. ಹಾಗೆಯೇ ಪ್ರಾಗೈತಿಹಾಸಿಕ ಕಾಲದ ಕಲ್ಲಿನ ಮನೆಗಳಿಂದ ಹಿಡಿದು ಅಮೃತ ಶಿಲೆಗಳಿಂದ ನಿರ್ಮಿಸಿದ ಉನ್ನತ ನಾಗರಿಕತೆಯ ಶ್ರೇಷ್ಠ ವಸ್ತುವಿನವರೆಗೂ ಇವುಗಳ ವೈವಿಧ್ಯತೆಯನ್ನು ಗುರುತಿಸಬಹುದು. ಈ ಕಾರಣಗಳಿಂದ ಸ್ಮಾರಕಗಳು ಮಾನವನ ಜೀವನ ವಿಧಾನವನ್ನು, ಜೀವನದ ಬಗ್ಗೆ ಅವನಿಗಿರುವ ಧೋರಣೆಯನ್ನು, ಅಂದಿನ ಅವನ ನಾಗರಿಕತೆ ಮತ್ತು ಸಂಸ್ಕೃತಿಯನ್ನು ತಿಳಿಸಿಕೊಡುವ ಪುರಾವೆಗಳಾಗಿವೆ.

ಎಲ್ಲ ಸ್ಮಾರಕಗಳು ಮಡಿದ ವ್ಯಕ್ತಿಯ ನೆನಪಿಗಾಗಿ ಇರುವ ಸಂಕೇತಗಳು, ಮಡಿದ ವ್ಯಕ್ತಿಯ ನೆನಪನ್ನು ಘನೀಭವಿಸಿ ಅಭಿವ್ಯಕ್ತಿಗೊಳಿಸುವ ಸಾಧನಗಳು. ಸ್ಮಾರಕಗಳ ಬಗ್ಗೆ ವೇದದಲ್ಲಿ ಹೇಳಿರುವ ಪಿತೃಮೇಧ ಎಂಬ ವಿಧಿಯಲ್ಲಿ ಸತ್ತವನನ್ನು ಸಂಸ್ಕರಿಸಿದ ಸ್ಥಳದಲ್ಲಿ ಸ್ಮಾರಕವನ್ನು ಎತ್ತಿಸುವ ಬಗ್ಗೆ

ನಮಗೆ ಮಾಹಿತಿ ದೊರೆಯುತ್ತದೆ. ಇಲ್ಲಿ ಅಂತ್ಯಸಂಸ್ಕಾರವಾದ ಹಲವಾರು ತಿಂಗಳು ಅಥವಾ ಕೆಲವಾರು ವರ್ಷಗಳ ನಂತರ ಈ ಸ್ಮಾರಕವನ್ನು ಮಾಡಬೇಕೆಂದು ಉಲ್ಲೇಖಿತವಾಗಿದೆ.

ಈ ರೀತಿಯ ಸ್ಮಾರಕಗಳನ್ನು ಹಾಕುವ ಪದ್ಧತಿ ಮತ್ತು ಶವಸಂಸ್ಕಾರದ ರೀತಿಗಳು ಕಾಲಾನುಕ್ರಮದಲ್ಲಿ ಹಲವಾರು ಬದಲಾವಣೆಗಳನ್ನು ಕಂಡುಕೊಂಡಿದೆ. ಹಾಗೆಯೇ ಪ್ರಾಗೈತಿಹಾಸಿಕ ಕಾಲದಿಂದ ಇಲ್ಲಿಯವರೆಗೆ ಆ ಸಮುದಾಯದವರ ನಂಬಿಕೆ, ಧರ್ಮ ಮತ್ತು ಸನ್ನಿವೇಶಗಳೊಂದಿಗೆ ಬೆಳೆದು ಬಂದಿದೆ. ಆದರೆ ಮೂಲಭೂತವಾದ ಪದ್ಧತಿಗಳು ತಮ್ಮ ಆಶಯಗಳನ್ನು, ವಿಶಿಷ್ಟತೆಗಳನ್ನು ಉಳಿಸಿಕೊಂಡು ಹೆಚ್ಚಿನ ಅರ್ಥ ವ್ಯಾಪ್ತಿಯನ್ನು ಪಡೆದವು ಎಂಬುದನ್ನು ಗಮನಿಸಬೇಕಾದ ಅಂಶವಾಗಿದೆ.

**ವೀರತ್ವದ ಮೌಲ್ಯ :**

"ಜೀತೇನ ಲಭ್ಯತೇ ಲಕ್ಷ್ಮೀ ಮೃತೇನಾಪಿ ಸುರಾಂಗನಾ
ಕ್ಷಣ ವಿಧ್ವಂಸಿನೀ ಕಾಯೇ ಕಾ ಚಿಂತಾ ಮರಣೇರಣೇ"

(ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಚಿದಾನಂದಮೂರ್ತಿ ಎಂ., ೧೯೬೬, ಪುಟ-೨೭೭)

ಮೇಲಿನ ಈ ಶ್ಲೋಕವು ವೀರತ್ವವನ್ನು ಪ್ರತಿಪಾದಿಸುತ್ತದೆ. ಯುದ್ಧದಲ್ಲಿ ಗೆದ್ದರೆ ಸಂಪತ್ತು ಲಭಿಸುತ್ತದೆ. ಮೃತಪಟ್ಟರೆ ದೇವಲೋಕದ ಸುರಾಂಗನೆಯರು ಲಭಿಸುತ್ತಾರೆ. ಕ್ಷಣಮಾತ್ರದಲ್ಲಿ ನಾಶವಾಗುವ ಈ ದೇಹಕ್ಕಾಗಿ ಚಿಂತೆಯೇಕೆ? ಹೋರಾಡು ಇಲ್ಲ ಮರಣ ಹೊಂದು ಎಂಬ ಶ್ಲೋಕವು ವೀರ ಧರ್ಮ ಹಾಗೂ ವೀರ ಮೌಲ್ಯಗಳನ್ನು ವಿವರಿಸುತ್ತದೆ. ಪ್ರಾಚೀನ ಕಾಲದ ಕರ್ನಾಟಕದ ಪ್ರಥಮ ಸಾಮ್ರಾಜ್ಯವಾದ ಕದಂಬರ ಕಾಲದಿಂದಲೂ ವೀರತ್ವವು ಒಂದು ಯುಗದ ಚೈತನ್ಯವಾಗಿ ಸಹಸ್ರಾರು ವರ್ಷಗಳಿಂದಲೂ ಕನ್ನಡಿಗರ ಜೀವನ ವಿಧಾನವಾಗಿ ಬೆಳೆದುಬಂದಿದೆ. ಇದು ಜೀವನದ ಮಹತ್ವದ ಮೌಲ್ಯವಾದುದರಿಂದ ಪೂರ್ವ ಹಳೆಗನ್ನಡ ಮತ್ತು ಹಳೆಗನ್ನಡದ ಅನೇಕ ಕವಿಗಳು ವೀರ ಧರ್ಮವನ್ನು ಜೀವನ ಶ್ರದ್ಧೆಯೆಂದು, ಯುಗದ ಧರ್ಮವೆಂದು, ಮನುಷ್ಯನ ಮೂಲ ಚೈತನ್ಯವೆಂದು ತಿಳಿಸಿದ್ದರು. ಇದಕ್ಕೆ ಸಾಕ್ಷಿಯಾಗಿ ಸಹಸ್ರಾರು ಶಾಸನಗಳು ಮತ್ತು ಕಾವ್ಯಗಳು ವೀರಯುಗವನ್ನು ಚಿತ್ರಿಸಿವೆ. ಆದಿಕವಿ ಪಂಪನು ತನ್ನ ಕಾವ್ಯವನ್ನು ವೀರಕಾವ್ಯವನ್ನಾಗಿ ಬರೆದುದಲ್ಲದೆ ಪಾತ್ರಗಳನ್ನು ವೀರೋಚಿತ ಪಾತ್ರಗಳನ್ನಾಗಿ ಸಂಭಾಷಣೆಗಳನ್ನು ವೀರ ಉತ್ಸಾಹದ ನುಡಿಗಳಾಗಿ ಹೀಗೆ ಒಟ್ಟು ಕಾವ್ಯ ಕೃತಿಯನ್ನು ವೀರ ವಸ್ತುವಿನಿಂದಲೇ ನಿರ್ಮಿಸಿರುವುದು ಅತ್ಯಂತ ಮಹತ್ವದ ಸಂಗತಿಯಾಗಿದೆ. ಪಂಪನ ಮಾರ್ಗದಲ್ಲಿ ರನ್ನನು ಸಾಗಿದ್ದಾನೆ. ಅವನ ಗದಾಯುದ್ಧ ಹಾಗೂ ಪಂಪನ 'ವಿಕ್ರಮಾರ್ಜುನ ವಿಜಯ'ಗಳೆರಡೂ ವೀರ ಕಾವ್ಯಗಳಾಗಿವೆ. ಪಂಪನಂತೂ ವೀರ ಸಿದ್ಧಾಂತವನ್ನೇ ನಿರೂಪಿಸಿದ್ದಾನೆ.

"ಒತ್ತಿ ತಱುಂಬಿನಿಂದ ರಿಪುಬೂಜ ಸಮಾಜದ ಬೇರ್ಗಳಂ ನಭ
ಕ್ಕೆತ್ತದೆ ಬಂದು ತನ್ನ ಮೊಜೆವೊಕ್ಕಡೆ ಕಾಯದೆ ಚಾಗದೊಳ್ಪನ
ಚ್ಚೊತ್ತದೆ ಪೊಣ್ದು ಬಾ ಪುಱುವಾನಸನೆಂಬನ್ ಅಜಾಂಡ ಮೆಂಬುದೊಂ
ದತ್ತಿಯ ಪಣ್ಣಿಳಿರ್ಪ ಪುಱುವಲ್ಲದೆ ಮಾನಸನೇ ಮುರಾಂತಕಾ॥"

(ಆಶ್ವಾಸ ೫, ೭೫ನೇ ಪದ್ಯ, ಪಂಪ ಕವಿಯು ರಚಿಸಿದ ವಿಕ್ರಮಾರ್ಜುನ ವಿಜಯ) ಬಲವಾಗಿ ನಿಂತ ವೈರಿಗಳ ಬೇರುಗಳನ್ನು ಕಿತ್ತು ಆಕಾಶಕ್ಕೆ ಒಗೆಯದೆ, ವೈರಿ ಬಂದು ಮೊರೆಹೋದಾಗ ಕಾಯದೆ ತ್ಯಾಗದ ಒಳ್ಳೆಯತನದ ಅಚ್ಚು ಒತ್ತದೆ ಬಾಳುವ ಮನುಷ್ಯನು ಅತ್ತಿಯ ಹಣ್ಣಿನಲ್ಲಿದ್ದ ಹುಳವಿನಂತೆ ಬ್ರಹ್ಮಾಂಡದಲ್ಲಿದ್ದಾನೆ.

ಹೀಗೆ ವೈರಿಯನ್ನು ಕೊಲ್ಲುವ, ಕಾಯುವ ಹಾಗೂ ಒಳ್ಳೆತನದ ಮತ್ತು ತ್ಯಾಗದ ಮೌಲ್ಯಗಳನ್ನು ಹೊಂದಿರಬೇಕೆಂದು ಪಂಪ ಮಹಾಕವಿ ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ವೀರ ಸಿದ್ಧಾಂತದ ಬಗ್ಗೆ ಹೇಳಿದ್ದಾನೆ.

"ಬೀರಮೆ ಕುಲಮಲ್ಲದೆ ಕುಲವೆಂಬುದಂತೆ" ಮನುಷ್ಯನಿಗೆ ವೀರತನದ ಕುಲ. ಅವನು ಕಟ್ಟಿಕೊಂಡ ಜಾತಿ, ಕುಲಗಳು, ಮನುಷ್ಯತ್ವದ ಗೋಡೆಗಳು, ಸಾಹಸ, ಶಕ್ತಿ, ಅಭಿಮಾನ ಇವೆಲ್ಲವೂ ವೀರತ್ವದ ಮುಖಗಳು. ಪಂಪನು ಯುದ್ಧ ವೀರವನ್ನು ಒಟ್ಟು ವೀರತನವನ್ನು ಎತ್ತಿ ಹೇಳಿದರೆ ರನ್ನನು ಸಾಮಾಜಿಕ ವೀರತನದ ಹೋರಾಟದ ಐದು ಮುಖ್ಯ ನೆಲೆಗಳನ್ನು ಗುರುತಿಸಿದ್ದಾನೆ.

ತುರುಗೋಳೊಳ್ ಪಣ್ಬುಯ್ಯಲೊ
ಳೆರೆವೆಸದೊಳ್ ನೆಂಟನೆಡರೊಳೂರಳವಿನೊಳಂ
ತರಿಸಂದು ಗಂಡುತನ ಮನೆ
ನೆರಪದವಂ ಗಂಡನಲ್ಲ ನೆಂತು ಪಂಡಂ

ಹೀಗೆ ವೀರನ ಸ್ವಯಂ ಪ್ರೇರಣೆಗೆ ಯಾವ ಮನೋಧರ್ಮ ಕಾರಣ ಎಂಬುದನ್ನು ರನ್ನ ಮಹಾಕವಿ ತನ್ನ ಗದಾಯುದ್ಧದಲ್ಲಿ ಮೇಲಿನಂತೆ ಹೇಳಿದ್ದಾನೆ. ರನ್ನ ಕವಿಯ ಈ ಮಾತುಗಳು ಅಂದಿನ ವೀರತ್ವದ ಮೌಲ್ಯಗಳನ್ನು ಎತ್ತಿ ಹಿಡಿದಿವೆ. ಇಂತಹ ವೀರತ್ವದ ಕಲ್ಪನೆ ಪುರುಷ ಮತ್ತು ಸ್ತ್ರೀ ಎರಡು ವರ್ಗಗಳಲ್ಲಿ ಇತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ.

**ವೀರ :**

ಮೂಲತಃ ಸಂಸ್ಕೃತ ಭಾಷೆಯ ಪದವಾದ ಈ ವೀರ ಎಂಬುದು ಅನೇಕ ಇಂಡೋ-ಆರ್ಯನ್ ಭಾಷೆಗಳಲ್ಲಿ ಬಳಕೆಯಾಗಿರುವುದಾಗಿ ತಿಳಿದುಬರುತ್ತದೆ. ಈ ಪದವು ವ್ಯಕ್ತಿಯ ಪರಾಕ್ರಮ, ಶಕ್ತಿ ಮುಂತಾದ ಅವನ ದೈಹಿಕ ಗುಣಗಳನ್ನು ಸೂಚಿಸುವ ಗುಣವಾಚಕವಾಗಿ ಬಳಕೆಯಾಗಿದೆ. ಎಲ್ಲೋ ಕೆಲವು ಕಡೆ ಪೀರ ಎಂಬ ಪದಕ್ಕೆ ಕೆಲವು ಭಾಷೆಗಳಲ್ಲಿ ಆದು.

ಟಗರು, ಒಂಟಿ, ಸೋದರ ಮುಂತಾದ ಅರ್ಥಗಳು ಬಳಕೆಯಾಗಿವೆ. ಇದೇ ಪದ ಸಂಸ್ಕೃತದಿಂದ ನೇರವಾಗಿ ದ್ರಾವಿಡ ಭಾಷೆಗಳಿಗೆ ತನ್ನ ಮೂಲಾರ್ಥವನ್ನು ಉಳಿಸಿಕೊಂಡು ಬಂದಿದೆ. (ಕರ್ನಾಟಕದ ವೀರಗಲ್ಲುಗಳು, ಶೇಷಶಾಸ್ತ್ರೀ ಆರ್., ೧೯೮೨, ಪುಟ-೨೦) ಕೆಲವು ಕಡೆ ಇದೇ ಪದ 'ಬೀರ' ಎಂಬುದಾಗಿ ತದ್ಭವ ರೂಪವನ್ನು ಪಡೆದು ಬಳಕೆಯಲ್ಲಿರುವುದು ಇದೆ. ಅಂದರೆ ದ್ರಾವಿಡ ಭಾಷೆಗಳಲ್ಲಿ ಈ ಪದ ಸೇರಿ ಹೋಗಿದ್ದರೂ ಅದು ತನ್ನ ಮೂಲಾರ್ಥವನ್ನು ಕಳೆದುಕೊಂಡಿಲ್ಲ ಎಂಬುದು ಮುಖ್ಯ.

**ವೀರಗಲ್ಲು :**

ಆಂಗ್ಲ ಭಾಷೆಯ 'Hero stone' ಎಂಬುದಕ್ಕೆ ಕನ್ನಡದಲ್ಲಿ ಸಮಾನಾರ್ಥಕವಾಗಿ 'ವೀರಗಲ್ಲು' ಎಂಬ ಪದವನ್ನು ಬಳಸುವುದು ರೂಢಿಯಲ್ಲಿದೆ. ಇಲ್ಲಿ 'ವೀರ' ಮತ್ತು 'ಕಲ್ಲು' ಎಂಬ ಎರಡು ಪದಗಳು ಬಳಕೆಯಲ್ಲಿವೆ. 'ವೀರ' ಗುಣವಾಚಕವಾಗಿದ್ದು, ವ್ಯಕ್ತಿಯ ವಿಶಿಷ್ಟ ಸಾಧನೆ, ಶೌರ್ಯ, ಸಾಹಸ ಮುಂತಾದ ಗುಣಗಳನ್ನು ಸೂಚಿಸುತ್ತದೆ. 'ಕಲ್ಲು' ವಸ್ತುಸೂಚಕದಂತೆ ಬಳಕೆಯಾಗಿದೆ. ಅರಸನಿಗಾಗಿ, ಸಾಮ್ರಾಜ್ಯದ ರಕ್ಷಣೆಗಾಗಿ ಇಲ್ಲವೆ ಊರಿನ ಹಿತಕ್ಕಾಗಿ, ವೈರಿಗಳ ವಿರುದ್ಧ ಹೋರಾಡಿ ಮರಣ ಹೊಂದಿದ ವೀರನ ಸ್ಮರಣೆಗಾಗಿ ನೆಟ್ಟ ಶಿಲ್ಪ ಶಿಲಾಫಲಕಗಳು ಇಲ್ಲಿವೆ. ಲಿಪಿ ಸಹಿತ ಶಿಲ್ಪಶಿಲಾಫಲಕಗಳನ್ನು 'ವೀರಗಲ್ಲು'ಗಳೆಂದು ಕರೆಯಲಾಗುತ್ತದೆ. ಹೀಗೆ ವೀರನೊಬ್ಬನು ಸತ್ತನೆಂದರೆ ಊರಿನವರೆಲ್ಲಾ ಸೇರಿ ಅವನ ಸ್ಮರಣೆಗಾಗಿ ಒಂದು ಕಲ್ಲನ್ನು ನಿಲ್ಲಿಸುತ್ತಿದ್ದರು.

ವೀರಗಲ್ಲುಗಳನ್ನು ನಿಲ್ಲಿಸುವುದರಿಂದ ಅವನ ಶೌರ್ಯ, ಸಾಹಸ ಲೋಕಕ್ಕೆ ತಿಳಿಯುತ್ತಿತ್ತು. ಹಾಗೂ ಮೃತಪಟ್ಟ ವೀರನಿಗೆ ಸ್ವರ್ಗಪ್ರಾಪ್ತಿ ಎಂಬ ನಂಬಿಕೆ ಸಾಮಾನ್ಯವಾಗಿತ್ತು. ವೀರಗಲ್ಲುಗಳನ್ನು ಮೃತಪಟ್ಟ ವ್ಯಕ್ತಿಯ ಹತ್ತಿರ ಸಂಬಂಧಿಗಳು, ಊರಿನ ಸಾರ್ವಜನಿಕರು ಇಲ್ಲವೆ ಇನ್ನು ಕೆಲವು ಸಂದರ್ಭಗಳಲ್ಲಿ ಸತ್ತ ವೀರನ ಹೆಂಡತಿ, ಮಕ್ಕಳಿಗಾಗಿ ಬದುಕಿ ಸಹಗಮನ ಮಾಡದೆ ಗಂಡನಿಗಾಗಿ ವೀರಗಲ್ಲನ್ನು ನಿರ್ಮಿಸುತ್ತಿದ್ದಳು. ಇಂತಹ ವೀರಗಲ್ಲಗಳನ್ನು ಪೂಜಿಸುವ ಪದ್ಧತಿ ರೂಢಿಯಲ್ಲಿದ್ದು ಧೂಪ, ದೀಪ, ಕುಂಕುಮ, ಹೂ ಮುಂತಾದವುಗಳನ್ನು ಅರ್ಪಿಸಿ ಗೌರವ ಸಲ್ಲಿಸುತ್ತಿದ್ದರು.

ಈ ವೀರಗಲ್ಲುಗಳು ಉದಾತ್ತ ಉದ್ದೇಶದಿಂದ ಮಾತೃಭೂಮಿಯ ರಕ್ಷಣೆಗಾಗಿ ಹೋರಾಡಿ ಮರಣ ಹೊಂದಿದ ವೀರರ ನೆನಪಿಗಾಗಿ ನಿಲ್ಲಿಸಿದ ಸ್ಮಾರಕ ಶಿಲೆಗಳಾಗಿವೆ. ಇದಲ್ಲದೆ ಅಂದಿನ ಸಾಮಾಜಿಕ ಮೌಲ್ಯಗಳ ರಕ್ಷಣೆಗಾಗಿ ಹೋರಾಡಿ ಮಡಿದ ವೀರರ ನೆನಪಿಗಾಗಿ ನಿಲ್ಲಿಸಿದ ಕಲ್ಲುಗಳಾಗಿವೆ. ಉತ್ತರ ಕರ್ನಾಟಕ ಪ್ರದೇಶಗಳಲ್ಲಿ ದೊರೆತ ಶಾಸನಗಳಲ್ಲಿ ದಾನ ಶಾಸನಗಳನ್ನು ಹೊರತುಪಡಿಸಿ ಉಳಿದೆಲ್ಲಾ ಶಾಸನಗಳು ವೀರಗಲ್ಲುಗಳು. ಈ ವೀರಗಲ್ಲುಗಳಲ್ಲಿನ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ವೀರ ಪರಂಪರೆ, ಮಹಾಸತಿ ಕಲ್ಲು, ತುರುಗೋಳ್ ವೀರಗಲ್ಲುಗಳು, ಪೆಣ್ಬುಯ್ಯಲ್ ವೀರಗಲ್ಲುಗಳು, ನಿಸಿಧಿ ಕಲ್ಲು, ಆತ್ಮಬಲಿ ಕಲ್ಲು ಮತ್ತು ಪ್ರಾಣಿ ಬೇಟೆಯ ವೀರಗಲ್ಲುಗಳು ಎಂದು ಅಧ್ಯಯನ ಮಾಡಲಾಗಿದೆ.

ವೀರ ಪರಂಪರೆ :

ಕರ್ನಾಟಕ ದೀರ್ಘವಾದ ವೀರ ಪರಂಪರೆಯ ಇತಿಹಾಸವನ್ನು ಹೊಂದಿದೆ. ಕರ್ನಾಟಕದಲ್ಲಿ ದೊರೆಯುವಷ್ಟು ವೈವಿಧ್ಯಮಯ ವೈಶಿಷ್ಟ್ಯಪೂರ್ಣ ವೀರಗಲ್ಲುಗಳು ನಮ್ಮ ರಾಷ್ಟ್ರದ ಬೇರೆ ಯಾವ ರಾಜ್ಯದಲ್ಲೂ ದೊರೆತಿಲ್ಲವೆಂಬುದು ತಿಳಿದ ವಿಷಯವೇ ಆಗಿದೆ. ವೀರ ಮೌಲ್ಯದ ಪ್ರತೀಕವಾದ ಈ ವೀರಗಲ್ಲು ಶಾಸನಗಳು ಕರ್ನಾಟಕ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ಕರ್ನಾಟಕದಲ್ಲಿ ಅವು ವಿಶೇಷವಾಗಿ ಕಂಡುಬಂದಿದೆ. ಯುದ್ಧದ ವೀರಗಲ್ಲು, ಮಹಾಸತಿಕಲ್ಲು, ತುರುಗಾಳಗ, ಪೆಣ್ಬುಯ್ಯಲ್, ಕಳ್ಳರೊಡನೆ ಹೋರಾಟ, ಪ್ರಾಣಿ ಬೇಟೆ ಮುಂತಾದ ಪ್ರಕಾರಗಳಿಗೆ ಸೇರಿದವಾಗಿವೆ.

ಕರ್ನಾಟಕದಲ್ಲಿ ದೊರೆತಿರುವ ಅತ್ಯಂತ ಪ್ರಾಚೀನ ವೀರಗಲ್ಲು ಚಿತ್ರದುರ್ಗ ಜಿಲ್ಲೆಯ ತಮಟಕಲ್ಲು ಎಂಬ ಗ್ರಾಮದಲ್ಲಿದೆ. ಕ್ರಿ.ಶ. ೫೦೦ರ ತಮಟಕಲ್ಲು ವೀರಗಲ್ಲು ಶಾಸನದಲ್ಲಿ.

ಫಣಿಮಣಿ ಅನ್ತು ಭೋಗಿ ಫಣದುಳ್ಮಣಿವಿಲ್ಮನದೋನ್
ರಣಮುಖದುಳ್ಳೆ ಕೋಲ ನೆರಿಯರ್ಕ್ಕುಮನಿನ್ದ್ಯಗಾಣನ್
ಪ್ರಣೆಯಿಜನಕ್ಕೆ ಕಾಮನ ಸಿತೋತ್ಪಲವರ್ಣ್ಣನವನ್
ಗುಣಮದುರಾಂಕ ದಿವ್ಯ ಪುರುಷನ್ ಪುರುಷ ಪ್ರವರನ್
(ಕನ್ನಡ ಶಾಸನ ಸಂಪದ, (ಸಂ) ಹಿರೇಮಠ ಆರ್.ಸಿ. ಕಲಬುರ್ಗಿ
ಎಂ.ಎಂ.೧೯೭೮, ಪು.೨)

ಈ ವೀರಗಲ್ಲಿನ ಮೇಲೆ ಮಡಿದ ವೀರನ ಬಗ್ಗೆ, ಸಂಸ್ಕೃತ ಭಾಷೆಯಲ್ಲಿ ಕನ್ನಡ ಲಿಪಿಯ ಶಾಸನವಿದೆ. ಶೌರ್ಯ ಹಾಗೂ ಸೌಂದರ್ಯಗಳ ಸಾಕಾರಮೂರ್ತಿಯಾದ ಗುಣಮಧುರನ ಸುಂದರ ವ್ಯಕ್ತಿಚಿತ್ರಣ ಈ ಶಾಸನದಲ್ಲಿದೆ. ಇದು ಕನ್ನಡ ಸಾಹಿತ್ಯದ ಮೊದಲ ಪದ್ಯವೆಂದು ವಿದ್ವಾಂಸರ ಅಭಿಪ್ರಾಯ.

ಕ್ರಿ.ಶ. ೮೦೦ರ ಮಾವಳಿ ವೀರಗಲ್ಲು ಶಾಸನ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಮಾವಳಿ ಗ್ರಾಮದ ಹೊರವಲಯದಲ್ಲಿ ಶಿಥಿಲ ಬಸದಿಯೊಂದರ ಅವಶೇಷಗಳ ಬಳಿ ನಿಂತಿರುವ ವೀರಗಲ್ಲು. ಈ ವೀರಗಲ್ಲಿನ ಸತ್ಯಲೋಕದ ಮೇಲಿನ ಭಾಗವನ್ನು ದೇವಾಲಯದ ಶಿಖರದಂತೆ ಕೆತ್ತಲಾಗಿದೆ. ಇದು ರಾಷ್ಟ್ರಕೂಟರ ಕಾಲದ ವೀರಗಲ್ಲುಗಳ ವಿಶೇಷ. ರಾಷ್ಟ್ರಕೂಟ ಚಕ್ರವರ್ತಿ ೩ನೆಯ ಗೋವಿಂದನ ಆಳಿಕೆಯಲ್ಲಿ ಬನವಾಸಿ ಮಂಡಲವನ್ನು ರಾಜಾದಿತ್ಯ, ಅಳುವಖೇಡ ೬೦೦ನ್ನು ಚಿತ್ರವಾಹನ ಆಳುತ್ತಿದ್ದರು. ರಾಜಾದಿತ್ಯನು ಕಾಕರಸನೊಂದಿಗೆ ಚಿತ್ರವಾಹನನ ಪೆರ್ಗುಂಜಿ ಕೋಟೆಯ ಮೇಲೆ ದಾಳಿಯಿಟ್ಟನು. ಆ ಸಮಯದಲ್ಲಿ ಭೀಕರವಾದ ಕಾಳಗ ನಡೆದು ಚಿತ್ರವಾಹನನ ಕೈ ಮೇಲಾಗುವಂತಾಯಿತು. ಇದನ್ನು ಸಹಿಸದ ರಾಜಾದಿತ್ಯ ತನ್ನ ನೆಚ್ಚಿನ ಬಂಟನಾದ ಕುಲಮುದ್ದನಿಗೆ ಹೋರಾಡಲು ಆಜ್ಞೆಯಿತ್ತನು. ಸ್ವಾಮಿನಿಷ್ಠೆಯ ಈ ಬಂಟ ಚಿತ್ರವಾಹನನ

ಸೈನ್ಯವನ್ನು ಚೆನ್ನಾಗಿ ಸದೆಬಡಿದು ಹೋರಾಡುತ್ತಲೇ ರಣಾಂಗಣದಲ್ಲಿ ವೀರ ಮರಣವನ್ನಪ್ಪಿದ. ಎಂಟು ಜನಗಾಮುಂಡರ ಪ್ರತ್ಯಕ್ಷದಲ್ಲಿ ಅರಸನು ಕುಲಮುದ್ದನ ಹೆಸರಿನಲ್ಲಿ ಗದ್ದೆಯನ್ನು ಉಂಬಳಿಯಾಗಿ ಬಿಟ್ಟನು. (ಕನ್ನಡ ಶಾಸನ ಸಂಪದ, ಹಿರೇಮಠ ಆರ್.ಸಿ., ಕಲಬುರ್ಗಿ ಎಂ.ಎಂ., ೧೯೬೮. ಪು.೧೦) ಈ ವೀರಗಲ್ಲು ಯುದ್ಧದ ಸನ್ನಿವೇಶವನ್ನು ಕಣ್ಣು ತುಂಬುವಂತೆ ಕಂಡರಿಸಿದೆ. ಚಿಕ್ಕದಾದರೂ ಅಪೂರ್ಣ ಶಾಸನವಿದು. ಬಾಣಗಳಿಂದ ಆವೃತನಾಗಿ ವೀರಮರಣವನ್ನಪ್ಪಿದ ಕುಲಮುದ್ದ ಶರಪಂಜರದ ಮೇಲೆ ಪವಡಿಸಿದ ಭೀಷ್ಮನಂತಿದ್ದನೆಂಬ ಹೇಳಿಕೆ ಪಂಪ ಭಾರತದ "ಮಱಲ್ದಂ... ಬಿದಿರಿ ಸಿಡಿಂಬಿನೊಳ್ ಪುದಿದದೊಂದು ಕುಳಾಚಳಿದಂತೆ ಸಿಂಧುಜಂ" (೧೧–೪೫) ಎಂಬ ಮಾತನ್ನು ನೆನಪಿಗೆ ತರುತ್ತದೆ. ಪಂಪ ಪೂರ್ವಯುಗದ ಕನ್ನಡ ಗದ್ಯ ಸಾಹಿತ್ಯದ ಸ್ವರೂಪವನ್ನರಿಯಲು ಇಂತಹ ಶಾಸನಗಳು ನೆರವಾಗಿ ನಿಲ್ಲುತ್ತವೆ.

ಕ್ರಿ.ಶ. ೯೫೦ ಆತಕೂರಿನ ನಾಯಿಯ ಸ್ಮಾರಕ ಶಾಸನ. ಈ ಶಾಸನದಲ್ಲಿ ರಾಷ್ಟ್ರಕೂಟ ೩ನೆಯ ಹಾಗೂ ಚೋಳ ರಾಜಾದಿತ್ಯರ ಮಧ್ಯೆ ಏರ್ಪಟ್ಟ ತಕ್ಕೋಲ ಕಾಳಗದಲ್ಲಿ ಬೂತುಗ ಮತ್ತು ಆತನ ಸೇವಕ ಮಣಲರ ಚೋಳ ರಾಜಾದಿತ್ಯನ ಮೇಲೆ ಯುದ್ಧ ಮಾಡಿದ ಮತ್ತು ರಾಜಾದಿತ್ಯವನ್ನು ಕೊಂದ ವಿಷಯವಿದೆ. ಇದನ್ನು ಮೆಚ್ಚಿದ ೩ನೆಯ ಕೃಷ್ಣನು ಬೂತುಗನಿಗೆ ಬನವಾಸೆ–೨೦೦೦, ಬೆಳ್ವೊಲ–೩೦೦, ಪುಲಿಗೆರೆ–೩೦೦, ಕಿಸುಕಾಡು–೭೦, ಬಾಗೆನಾಡು–೭೦ ಪ್ರದೇಶಗಳನ್ನು ನೀಡಿದನು. ಬೂತುಗನು ಮಣಲರ–೭೦, ಆತಕೂರ–೧೨, ಬೆಳ್ವೊಲದ ಕೋಟೆಯೂರುಗಳನ್ನು "ಬಾಳ್ಗಚ್ಚು" ಕೊಟ್ಟು ಗೌರವಿಸಿದನು. (ಶಾಸನ ಮತ್ತು ಗದ್ಯ, ಜಯದೇವ್ ಹು.ಕಾ. ೧೯೭೫, ಪು–೫೫) ಮಣಲರನು ಯುದ್ಧದಲ್ಲಿ ಪರಾಕ್ರಮದಿಂದ ಹೋರಾಡಿದ್ದಕ್ಕೆ ಪ್ರತಿಫಲವಾಗಿ ಒಡೆಯ ಬೂತುಗನಿಂದ ಕಾಳಿಯೆಂಬ ನಾಯಿಯನ್ನು ಬೇಡಿ ಪಡೆದನು. ಒಂದು ದಿನ ಕೆಳತಿನಾಡ ಬೆಳತೂರ ಹಳ್ಳಿಯ ಪಶ್ಚಿಮದ ಬೆಟ್ಟದಲ್ಲಿ ಆ ನಾಯಿ ದೊಡ್ಡ ಹಂದಿಯೊಡನೆ ಕಾದಾಡಿ ಅದನ್ನು ಕೊಂದು ತಾನೂ ಸತ್ತಿತ್ತು. ಮಣಲರ ನಾಯಿಯ ಸ್ಮಾರಕವಾಗಿ ಆತಕೂರಿನಲ್ಲಿ ವೀರಗಲ್ಲು ನಿಲ್ಲಿಸಿದನು. ಕರ್ನಾಟಕದಲ್ಲಿ ಇಂದೊಂದು ಅಪೂರ್ವ ವೀರಗಲ್ಲು. ಪ್ರಸ್ತುತ ಬೆಂಗಳೂರಿನ ಸರ್ಕಾರಿ ವಸ್ತುಸಂಗ್ರಹಾಲಯದಲ್ಲಿ ಈ ವೀರಗಲ್ಲನ್ನು ರಕ್ಷಿಸಲಾಗಿದೆ.

ಕ್ರಿ.ಶ. ೧೦ನೆಯ ಶತಮಾನದ ಬೇಗೂರು ವೀರಗಲ್ಲು ಶಾಸನದಲ್ಲಿ ಗಂಗರ ದೊರೆ ಎಱೆಯಪ್ಪರಸನು ತನ್ನ ಶತ್ರುಗಳೆಲ್ಲರನ್ನೂ ಸೋಲಿಸಿ ಗಂಗವಾಡಿ ೯೬೦೦೦ ಅನ್ನು ಏಕಚ್ಛತ್ರ ಛಾಯೆಯಲ್ಲಿ ಆಳುತ್ತಿದ್ದನು. ವೀರಮಹೇಂದ್ರನಿಗೆ ಎದುರಾಗಿ ಯುದ್ಧ ಮಾಡಲೆಂದು ಅಯ್ಯಪ್ಪದೇವನ ಸಹಾಯಕ್ಕಾಗಿ ಸಾವುಂತ ಸಹಿತವಾಗಿ ನಾಗತ್ತರ ಎಂಬುವವನನ್ನು ಸೈನ್ಯ ತೆಗೆದುಕೊಂಡು ಹೋಗಲು ಹೇಳಿದನು. ತುಂಬೆಪಾಡಿ ಎಂಬಲ್ಲಿ ಯುದ್ಧ ನಡೆದು ತನಗೆ ಯುದ್ಧದಲ್ಲಿ ಹಿಂಜರಿಕೆ/ ಒಮ್ಮೆಟ್ಟುವಂತಾದಾಗ ಅವನು ಆನೆಯ ಮೇಲೆ ಮುನ್ನುಗ್ಗಿ ಯುದ್ಧ ಮಾಡಿ ಸಾವನ್ನಪ್ಪಿದನು. ಅದನ್ನು ಕೇಳಿ ಮೆಚ್ಚಿದ ಎಱೆಯಪ್ಪನು ಇರುಗನಿಗೆ ನಾಗತ್ತರ ಪಟ್ಟವನ್ನು ಕಟ್ಟಿ ಬೆಂಪೂರು

೧೨ ಅನ್ನು ದತ್ತಿಯಾಗಿ ನೀಡಿದನು. ಬೆಂಪೂರು ೧೨ರಲ್ಲಿದ್ದ ಗ್ರಾಮಗಳ ಹೆಸರುಗಳನ್ನು ಶಾಸನದ ಕೊನೆಯಲ್ಲಿ ಕೊಟ್ಟಿದೆ. " ಇನಿತುಮಂ ಪೊಲ ಮೇರೆ ಸಹಿತಂ ಇತ್ತನ್ ಎಱೆಯಪ್ಪಂ ಶವುಚರನ್ ನಾಗರಂಗೆ" ಎಂದು ಹೇಳಿದೆ. (ಶಾಸನ ಸರಸ್ವತಿ. (ಸಂ) ಕೈದಾಳ ರಾಮಸ್ವಾಮಿ ಗಣೇಶ, ೨೦೦೨. ಪು.೨೧.)

ಕರ್ನಾಟಕದಲ್ಲಿ ಪ್ರಚಲಿತವಿದ್ದ ಮಹಾಸತಿ ಆಚರಣೆಯ ಬಗೆಗೆ ಮಾಹಿತಿಯನ್ನೊದಗಿಸುವ ಮುಖ್ಯ ಆಕರಗಳಲ್ಲಿ ದೇಕಬ್ಬೆ ಶಾಸನವು ಒಂದಾಗಿದೆ. ಹೆಗ್ಗಡೆದೇವನಕೋಟೆ ತಾಲೂಕಿನ ಬೆಳತೂರು ಎಂಬ ಗ್ರಾಮದ ಬಿನಕಲಮ್ಮನ ದೇವಾಲಯ ಬಳಿ ಈ ಶಾಸನವಿದೆ. ಈ ಶಾಸನದ ಹೆಗ್ಗಳಿಕೆಯೆಂದರೆ ಯಾವುದೇ ಶಿಲ್ಪವಿಲ್ಲದೆ ಕೇವಲ ಬರವಣಿಗೆಯನ್ನು ಮಾತ್ರ ಇದು ಹೊಂದಿದೆ. ಕರ್ನಾಟಕದ ಬಹುತೇಕ ಮಾಸ್ತಿಕಲ್ಲುಗಳ ಬರಹವಿಲ್ಲದೆ ಕೇವಲ ಶಿಲ್ಪವನ್ನು ಮಾತ್ರ ಹೊಂದಿರುತ್ತವೆ. ಕ್ರಿ.ಶ.೧೦೫೭ರ ಕಾಲದ ದೇಕಬ್ಬೆಯ ಶಾಸನದಲ್ಲಿ.

ನುಗುನಾಡ ಅಧಿಪತಿ ರವಿಗನ
ಮಗಳಾಗಿಯುವಂತೆ ನವಿಲೆನಾಡಧಿಪತಿಗಾಂ
ನೆಗಳೆ ಸತಿಯಾಗಿ ಬಾಳ್ವುದು
ಬಗೆದರ್ಪನೆ ಕೊಟ್ಟಕೊಂಡ ಮನೆ ಯಶಮಳಿಯಲ್॥

(ಶಾಸನ ಪರಿಚಯ, ಶೇಷಶಾಸ್ತ್ರಿ ಆರ್.೨೦೦೫. ಪು.೩೧)

ದೇಕಬ್ಬೆ ನುಗುನಾಡಿನ ಅಧಿಪತಿ ರವಿಗನ ಮಗಳು, ಅವಳನ್ನು ನವಿಲೆನಾಡಿನ ಅಧಿಪತಿ ಏಚ ಎಂಬಾತನಿಗೆ ಕೊಟ್ಟು ಮದುವೆ ಮಾಡಲಾಗಿತ್ತು. ಇವರಿಬ್ಬರ ಬಾಳು ಸುಖಮಯವಾಗಿದ್ದಿತು. ಹೀಗಿರುವಾಗ ಅವಳ ಗಂಡ ಏಚ ತನ್ನ ದಾಯಾದಿಗಳೊಡನೆ ಯುದ್ಧ ಮಾಡಿದಾಗ ಸೆರೆಸಿಕ್ಕು ಅವನನ್ನು ತಲಕಾಡಿಗೆ ಒಯ್ದು ಕೊಂದರು. ಆ ವಿಷಯವನ್ನು ಕೇಳಿದ ಕ್ಷಣವೇ ದೇಕಬ್ಬೆ ಸಹಗಮನ ಮಾಡಲು ನಿರ್ಧರಿಸಿದಳು. ತಾಯಿ, ತಂದೆ, ಬಂಧುವರ್ಗ ಎಲ್ಲರೂ ಬಂದು 'ಬೇಡ ಬೇಡ' ಎಂದು ಕಾಲಿಗೆ ಬಿದ್ದು ಬೇಡಿಕೊಂಡರೂ ತಾನು ಸಹಗಮನ ಮಾಡದಿದ್ದರೆ ತನ್ನನ್ನು ಹೆತ್ತು ಹೊತ್ತ ಎರಡು ಮನೆಗಳಿಗೂ ಅಪಯಶಸ್ಸು ಬರುತ್ತದೆ ಎಂದು ಹೇಳಿ ಅಗ್ನಿ ಪ್ರವೇಶ ಮಾಡುತ್ತಾಳೆ. ದೇಕಬ್ಬೆಯ ತಂದೆ ರವಿಗನು ಈ ಶಾಸನವನ್ನು ಬರೆಯಿಸಿ ನಿಲ್ಲಿಸಿದ ವಿಷಯ ಈ ಶಾಸನದಲ್ಲಿದೆ. ಅಂದರೆ ತಂದೆ ತನ್ನ ಮಗಳ ನೆನಪಿಗೆ ನಿಲ್ಲಿಸಿದ ಸ್ಮಾರಕವಾಗಿದೆ.

**ತಮ್ಮಡಿ ಕಲ್ಲಾಳ ಶಾಸನ :** ಇದು ವೀರಗಲ್ಲು ಶಾಸನವಾಗಿದ್ದು ವಿಷಯ ಮಹತ್ವಪೂರ್ಣವಾಗಿದೆ. ತ್ರೈಲೋಕ್ಯಮಲ್ಲ ದೇವನ ಹಿರಿಯ ಮಗನಾದ ಭುವನೈಕಮಲ್ಲ ಸೋಮೇಶ್ವರ ಹಾಗೂ ಎರಡನೆಯ ಮಗನಾದ ತ್ರಿಭುವನಮಲ್ಲ ಪೆರ್ಮಾಡಿದೇವ (ಮುಂದೆ ಆರನೆಯ ವಿಕ್ರಮಾದಿತ್ಯನೆಂದು ಸಾಮ್ರಾಜ್ಯವನ್ನಾಳುವನು) ಇವರ ನಡುವೆ ಚಾಲುಕ್ಯ ಸಿಂಹಾಸನದ ಸಲುವಾಗಿ ನಡೆದ ದೀರ್ಘಕಾಲದ ಒಳಜಗಳವನ್ನು ನಾವು ಈ ಶಾಸನದಲ್ಲಿ ಕಾಣುತ್ತೇವೆ. ವೀರಗಲ್ಲಿನ ಕಾಲ ಕ್ರಿ.ಶ. ೧೦೭೧ ಜೂನ್

೫ ಗುರುವಾರ. ಸೋಮೇಶ್ವರನು ಪಟ್ಟಕ್ಕೆ ಬಂದ ಮೂರನೆಯ ವರ್ಷದ ಒಳಗಾಗಿಯೇ ಅಣ್ಣತಮ್ಮರ ಬಡಿದಾಟ ಪ್ರಾರಂಭವಾಗಿತ್ತೆಂದು ಮತ್ತು ಮಾಂಡಲೀಕರು ಬೇರೆ ಬೇರೆ ಪಕ್ಷಗಳನ್ನು ಹಿಡಿದಿದ್ದರೆಂದು ಈ ಶಾಸನದಿಂದ ತಿಳಿದುಬರುತ್ತದೆ. ಬನವಾಸಿಯ ಕದಂಬ ಮಹಾಮಂಡಳೇಶ್ವರ ಕೀರ್ತಿವರ್ಮದೇವನು ಪೆರ್ಮಾಡಿದೇವನ ಪಕ್ಷವನ್ನು ಹಿಡಿದ ಕಾರಣ ಚಕ್ರವರ್ತಿ ಸೋಮೇಶ್ವರನು ಆತನ ಮೇಲೆ ಬಲವಾದ ಆಕ್ಷೇಪವನ್ನು ಹೊರಿಸಿ, ಅವನನ್ನು ಶಿಕ್ಷಿಸುವುದಕ್ಕೆ ದೊಡ್ಡದಾದ ಸೈನ್ಯವನ್ನು ಕಳುಹಿಸಿ ಆತನ ರಾಜಧಾನಿ ಬನವಾಸಿಕೋಟೆಗೆ ಮುತ್ತಿಗೆಯನ್ನು ಹಾಕಿಸಿದನು. ಈ ಪ್ರಸಂಗದಲ್ಲಿ ನಡೆದ ಕಾಳಗದಲ್ಲಿ ಸೆಲೆಯ ಹಳ್ಳಿಯ ಸಾಂತಯ್ಯ ಗೌಡನು ಯುದ್ಧರಂಗದಲ್ಲಿ ಧುಮುಕಿ ತನ್ನ ಶೌರ್ಯವನ್ನು ಮೆರೆದು ವೀರಮರಣವನ್ನು ಹೊಂದಿ ದೇವಲೋಕಕ್ಕೆ ಹೋದನೆಂದು ಈ ಶಾಸನದಲ್ಲಿ ಹೇಳಲಾಗಿದೆ. (ಕಾರವಾರ ಜಿಲ್ಲೆಯ ಶಾಸನಗಳು, ಗುರುವ ಆರ್.ಎನ್.೧೯೭೫. ಪು೩೬)

**ತಮ್ಮಡಿ ಕಲ್ಲಾಳದ ಎರಡನೆಯ ವೀರಗಲ್ಲು ಶಾಸನ :** ಈ ಶಾಸನದಲ್ಲಿ ಚಕ್ರವರ್ತಿ ಭುವನೈಕಮಲ್ಲನು ರಾಜ್ಯವಾಳುತ್ತಿರುವಾಗ ಮಹಾಮಂಡಳೇಶ್ವರ ತೈಲಪದೇವನು, ಅಣ್ಣನಾದ ಮಹಾಮಂಡಳೇಶ್ವರ ಚಟ್ಟಯ್ಯದೇವನ ಮೇಲೆ ಏರಿಹೋಗಿ ಸಿರಸಿಯ ಬಯಲಲ್ಲಿ ಎರಡೂ ಸೈನ್ಯಗಳ ನಡುವೆ ಕಾಳಗ ನಡೆದಾಗ, ಚಟ್ಟಯ್ಯದೇವನ ಪರಮ ವಿಶ್ವಾಸಿಯಾದ ಸಿರವೊರದ ಬೀರಣ್ಣನು ರಣಾಂಗಣದಲ್ಲಿ ಹೋರಾಡಿ ಸುರಲೋಕ ಪ್ರಾಪ್ತನಾದನೆಂದು ಹೇಳಲಾಗಿದೆ. ಶಾಸನದ ತಿಥಿ ಕ್ರಿ.ಶ.೧೦೭೨ ಡಿಸೆಂಬರ್೨೬, ಬೃಹಸ್ಪತಿವಾರ, (ಕಾರವಾರ ಜಿಲ್ಲೆಯ ಶಾಸನಗಳು, ಗುರುವ ಆರ್.ಎನ್.೧೯೭೫. ಪು.೩೮.)

**ಕ್ರಿ.ಶ. ೧೧೯೫ರ ಕುರುಕೋಡಿನ ವೀರಗಲ್ಲು ಶಾಸನ :** ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಕುರುಕೋಡು ಗ್ರಾಮದ ಕಲ್ಲೇಶ್ವರ ದೇವಾಲಯದ ಸಮೀಪದಲ್ಲಿರುವ ವೀರಗಲ್ಲು ಇದು. ಈ ಶಾಸನದ ಕಾಲದಲ್ಲಿ ಚಕ್ರವರ್ತಿಯಾಗಿದ್ದವನು ಕಲ್ಯಾಣದ ಚಾಲುಕ್ಯರ ದೊರೆ ತ್ರೈಲೋಕ್ಯಮಲ್ಲ ಸೋಮೇಶ್ವರ. ಶಾಸನದಲ್ಲಿ ಹೇಳಿರುವ ಶಕ ವರ್ಷ ೧೦೧೭ನೆಯ ಯುವ ಸಂವತ್ಸರವು ಕ್ರಿ.ಶ.೧೧೯೫ಕ್ಕೆ ಸರಿ ಹೊಂದುತ್ತದೆ. ಕುರುಕೋಡಿನಲ್ಲಿ ನಡೆದ ಗೋಗ್ರಹಣವೊಂದನ್ನು ಈ ಶಾಸನ ದಾಖಲಿಸುತ್ತದೆ. (ಶಾಸನ ಸರಸ್ವತಿ, (ಸಂ) ಕೈದಾಳ ರಾಮಸ್ವಾಮಿ ಗಣೇಶ, ೨೦೦೭.ಪು.೭೧) ಮಹಾಮಂಡಲೇಶ್ವರ ಜಗದೇವರಸನ ಆಜ್ಞೆಯಂತೆ ಮದಸಾಲೆಯ ಕಾಳರಸ ಎಂಬುವವನು ಸಮಸ್ತ ಸೈನ್ಯದೊಡನೆ ಕುಪ್ಪಗಡ್ಡೆ ಅಗ್ರಹಾರಕ್ಕೆ ಸೇರಿದ ಕುರಕೋಡು ಗ್ರಾಮದ ಮೇಲೆ ಯುದ್ಧಕ್ಕೆ ಬರುತ್ತಾನೆ. ಹಳ್ಳಿಗಳ ಮೇಲೆ ರಾಜನ ಸೈನಿಕರು ಆಕ್ರಮಣ ಮಾಡಿದರೆ ಹಸುಗಳನ್ನು ಸೆರೆಹಿಡಿಯುತ್ತಿದ್ದರು. ಹೆಣ್ಣುಗಳನ್ನು ಅಪಹರಿಸುತ್ತಿದ್ದರು. ಇದನ್ನು ಶಾಸನಗಳು 'ತುರುಗೋಳ್' ಎಂದೂ 'ಪೆಣ್ಬುಯಲ್' ಎಂದೂ ಕರೆಯುತ್ತವೆ. ಪ್ರಸ್ತುತ ಶಾಸನದಲ್ಲಿ ಕಾಳರಸನ ಕುರುಕೋಡಿನ ಮೇಲೆ ಆಕ್ರಮಣ ಮಾಡಿದಾಗ 'ತುಱುವಂ ಕೊಂಡು ಉಡೆಯುಚ್ಚಿ ಹೋದನೆಂದು' ಹೇಳಿದೆ. ಎಂದರೆ ಹಸುಗಳನ್ನು

ಕಳವು ಮಾಡಿದ ಜೊತೆಯಲ್ಲಿ ಹೆಣ್ಣುಗಳ ವಸ್ತುಗಳನ್ನು ಬಿಚ್ಚಿ ಅವಮಾನ ಮಾಡಿದ ಅರ್ಥ ಈ ವೀರಗಲ್ಲು ಶಾಸನದಿಂದ ತಿಳಿದುಬರುತ್ತದೆ. (ಕನ್ನಡ ಶಾಸನ ಸಂಪದ (ಸಂ) ಹಿರೇಮಠ ಆರ್.ಸಿ. ಕಲಬುರ್ಗಿ ಎಂ.ಎಂ.೧೯೬೮. ಪು.೬೮)

**ಜನಗಾ ವೀರಗಲ್ಲು** : ಜನಗಾ ಗ್ರಾಮವು ಹಲ್ಯಾಳ ತಾಲೂಕಿನಲ್ಲಿ ಹಲ್ಯಾಳದ ಆಗ್ನೇಯಕ್ಕೆ ಸುಮಾರು ಹತ್ತು ಮೈಲು ಅಂತರದಲ್ಲಿದೆ. ಸಿಪ್ಪಸುಳಿಯ ಅರಸಿಯು (ಹೆಸರು ಅಸ್ಪಷ್ಟವಿದೆ) ಕ್ರಿ.ಶ. ೧೧೦೮ರಲ್ಲಿ ಊರ ಮೇಲೆ ದಂಡೆತ್ತಿ ಬಂದಾಗ ನಡೆದ ಕಾಳಗದಲ್ಲಿ ಬರ್ಮದೇವನ ಬಂಟ ಕನ್ನಚಿಯ ನಾಯಕನು ಸ್ವರ್ಗಲೋಕಕ್ಕೆ ಹೋದನೆಂದು ಈ ವೀರಗಲ್ಲಿನಲ್ಲಿ ಹೇಳಲಾಗಿದೆ. (ಈ ವೀರಗಲ್ಲು ಶಾಸನದ ವಿಷಯದ ಕುರಿತು ಚಿದಾನಂದಮೂರ್ತಿಯವರು ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು ಎಂಬ ಪುಸ್ತಕದಲ್ಲಿ ವಿವರಣೆ ನೀಡಿದ್ದಾರೆ)

**ಬೈಲಂದೂರು ವೀರಗಲ್ಲು** : ಬೈಲಂದೂರು ಯಲ್ಲಾಪೂರ ತಾಲೂಕಿನಲ್ಲಿ ಕಿರುವತ್ತಿಯಿಂದ ಈಶಾನ್ಯಕ್ಕೆ ಸುಮಾರು ನಾಲ್ಕು ಮೈಲು ಅಂತರದಲ್ಲಿದೆ. ಗ್ರಾಮದ ಶಾಸನ ಕಾಲದ ಹೆಸರು ಹಂದಿನೀರು. ಈ ಗ್ರಾಮದಲ್ಲಿ ೮-೧೦ ವೀರಗಲ್ಲುಗಳು ಇವೆ. ಇವುಗಳಲ್ಲಿ ಕ್ರಿ.ಶ. ೧೧೧೫ರಲ್ಲಿ ನಿರ್ಮಿತವಾದ ಈ ಶಾಸನವು. ಹಂದಿನೀರ ಹೊನ್ನಾಜಿಯ ಮಗ ನಾಗಗಾವುಂಡ ಹಾಗೂ ಮತ್ತೆ ಕೆಲವರು ಗ್ರಾಮದ ದನಗಳನ್ನು ಕಳ್ಳರು ಒಯ್ಯುವಾಗ ಅವರೊಡನೆ ಕಾದು ದನಗಳನ್ನು ಹಿಂದಿರುಗಿಸಿ ಮಡಿದ ವಿಷಯ ತಿಳಿದುಬರುತ್ತದೆ. (ಈ ವಿಷಯವನ್ನು ಶೇಷಶಾಸ್ತ್ರೀ ಆರ್. ಕರ್ನಾಟಕದ ವೀರಗಲ್ಲುಗಳು ಎಂಬ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ)

**ಕಿರುವತ್ತಿ ವೀರಗಲ್ಲು** : ಕ್ರಿ.ಶ. ೧೧೨೬ ಜನವರಿ ೩ ರವಿವಾರದಂದು ನಡೆದ ಘಳಿಯೂರ ಅಳಿವಿನಲ್ಲಿ ಕಿರುವತ್ತಿಯ ವೀರನೊಬ್ಬನು ತುರುಗಳನ್ನು ರಕ್ಷಿಸಿ ಮಹಿಳೆಯರ ಮಾನವನ್ನು ಉಳಿಸಿ ಶತ್ರುಗಳನ್ನು ಕೊಂದು ಗತ ಪ್ರಾಣನಾಗಲು, ಆತನನ್ನು ಸುರಾಂಗನೆಯರು ವಿಮಾನದಲ್ಲಿ ಸುರಲೋಕಕ್ಕೆ ಒಯ್ದುರೆಂದು ಈ ವೀರಗಲ್ಲು ಶಾಸನದಲ್ಲಿ ಹೇಳಲಾಗಿದೆ. (ಈ ವೀರಗಲ್ಲು ಶಾಸನವನ್ನು ಪರಮಶಿವಮೂರ್ತಿ ಡಿ.ವಿ. ಅವರು ತುಳುಗೋಳ್ ಸಂಕಥನ ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ)

**ಕಾವಲವಾಡ ವೀರಗಲ್ಲು** : ಕಾವಲವಾಡ ಗ್ರಾಮವು ಹಲ್ಯಾಳ-ಕಲಘಟಗಿ ರಸ್ತೆಯ ಮೇಲೆ ಹಲ್ಯಾಳ ತಾಲೂಕಿನಲ್ಲಿ ಕಡೆಯ ಹಳ್ಳಿಯಾಗಿದೆ. ಕ್ರಿ.ಶ.೧೧೨೭ ಮೇ ೫, ಗುರುವಾರ ದಿನ, ಮಹಾಸಾಮಂತ ಲಸಮಯ್ಯನು ಹಂಬೆವೊಳಲದ ದಂಡನಾಯಕ ಚಟ್ಟಯಣ್ಣನ ಮೇಲೆ ದಂಡೆತ್ತಿ ಹೋಗಿ ಊರನ್ನು ಮುತ್ತಿದಲ್ಲಿ, ಲಸಮಯ್ಯನ ವೀರನಾದ ಕಾಳಿಯಣ್ಣನು ಕೋಟೆಗಾಳಗದಲ್ಲಿ, ಕಾಲಾಳುಗಳನ್ನು ಕುದುರೆಗಳನ್ನು ಇರಿದು ಶಿವಲೋಕ ಪ್ರಾಪ್ತನಾದನೆಂದು ಈ ವೀರಗಲ್ಲು ಹೇಳುತ್ತದೆ. (ಶಾಸನ ಸಂಗ್ರಹ, ಅಣ್ಣಿಗೇರಿ ಎ.ಎಂ., ಶೇಷಶಾಸ್ತ್ರೀ ಆರ್., ೧೯೭೫. ಪುಟ-೫೪)

**ಬೈಲಂದೂರ ಎರಡನೆಯ ವೀರಗಲ್ಲು :** ಕ್ರಿ.ಶ. ೧೧೨೯ ಎಪ್ರಿಲ್ ೨೮ ರವಿವಾರ ದಿನ. ಇದು ಗುಂದಣಿಯ ನಾಗವರ್ಮನು ಬೈಲಂದೂರ ಮೇಲೆ ದಂಡೆತ್ತಿ ಬಂದಾಗ ನಡೆದ ಕಾಳಗದಲ್ಲಿ ಮಾಳಯ್ಯನೆಂಬ ವೀರನು ಕಾದಿ ಸತ್ತು ಸುರಲೋಕ ಪ್ರಾಪ್ತನಾದನೆಂಬುದು ಈ ವೀರಗಲ್ಲಿನ ವಿಷಯವಾಗಿದೆ. (ಕಾರವಾರ ಜಿಲ್ಲೆಯ ಶಾಸನಗಳು, ಗುರುವ ಆರ್.ಎನ್ ೧೯೭೫.ಪು. ೫೯)

**ಬೈಲಂದೂರ ಮೂರನೆಯ ವೀರಗಲ್ಲು :** ಕ್ರಿ.ಶ. ೧೧೩೧, ಮಾರ್ಚ್ ೩೦, ಸೋಮವಾರ ದಿವಸ, ಕೇಸಿಮಯ್ಯನ ಮಗನಾದ ಅಜ್ಜಗಾವೆಯ ತೈಲಯ ಸಾಮಂತನು ಹಂದಿನೀರ ಮೇಲೆ ದಂಡೆತ್ತಿ ಬಂದಾಗ, ಬಳಜಿಕಬ್ಬೆಯ ಮಗ ಕಗ್ಗನು ಶತ್ರುಗಳ ಕುದುರೆಗಳನ್ನು ತಡೆದು, ಹೋರಾಡಿ ಸುರಲೋಕ ಪ್ರಾಪ್ತನಾದನೆಂದು ಈ ಶಾಸನದಲ್ಲಿ ಹೇಳಿದೆ. (ಕಾರವಾರ ಜಿಲ್ಲೆಯ ಶಾಸನಗಳು, ಗುರುವ ಆರ್.ಎನ್.೧೯೭೫.ಪು. ೫೯)

**ನಂದಿಗಟ್ಟಾ ವೀರಗಲ್ಲು :** ಕ್ರಿ.ಶ. ೧೧೩೮.ಮಾರ್ಚ್ ೧೩, ಆದಿತ್ಯವಾರ ದಿನ. ಪರಮಂಡಳ ಸೂರೆಕಾರ, ಭರಣಿಯ ಮಲ್ಲಯ್ಯ ಸಾವಂತನ ನಚ್ಚಿನಾಳು, ಮಚ್ಚರಿಪರ ಗಂಡ, ತೊಡರ್ದ್ದರಂಕುಶ, ನಂಟರತೊತ್ತು, ಎಕ್ಕಟಿಗ, ನರಿತ ಬೇಪ್ಪನು, ಗುತ್ತಿಯ ಕೋಟೆಯನ್ನು ಮುತ್ತಿದ ಸಮಯದಲ್ಲಿ ಬೀಡಿಂ ಮುನ್ನಿರಿದು, ಕಾದಿ, ಪಲ್ಲರಂ ಕೊಂದು, ಗೆಲ್ದು, ತನ್ನಾಳ್ದನ ಜೋಳವಾಳಿಯಂಗಿ ನೀಗಿ, ಸುರಲೋಕಮಂ ಸೂರಗೊಂಡು, ದೇವಲೋಕಕ್ಕೆ ಪೋದ. ಆತನ ತಂಗಿ ಮಾಯಕ್ಕ ಎರಡು ಹೊನ್ನಗಳನ್ನು ಕೊಟ್ಟು ವೀರಗಲ್ಲನ್ನು ಮಾಡಿಸಿದಳು. ಸರಸ್ವತಿಯ ವರಪುತ್ರ ಕಲುಕುಟಿಗ ಹಾಲೋಜ ಬೆಸಗೆಯ್ದ ಈ ವೀರಗಲ್ಲಿನ ಕೆತ್ತನೆಯು ಅಂದವಾಗಿದೆ. ಒಂದು ಉತ್ತಮವಾದ ವೀರಗಲ್ಲನ್ನು ತಯಾರಿಸಲು ಎರಡು ಹೊನ್ನಗಳು ವೆಚ್ಚವಾಗುತ್ತವೆಂಬುದು ಈ ಶಾಸನದಿಂದ ತಿಳಿದುಬರುತ್ತದೆ. (ಈ ವೀರಗಲ್ಲು ಶಾಸನದ ವಿಷಯವನ್ನು ಚೆನ್ನಕ್ಕ ಎಲಿಗಾರ ಅವರು ಮಾಸ್ತಿಗಲ್ಲು ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ)

**ಗುಂಡಬಾಳೆಯ ವೀರಗಲ್ಲು :** ಶಾಸನದಲ್ಲಿ ಮಲ್ಲ ಹಾಗೂ ತ್ರಿಭುವನಮಲ್ಲ ಮಲ್ಲಿದೇವನೆಂದು ಹೆಸರುಗಳು ಇವೆ. ಈತನು ಸಿರಿಯೂರು ರಾಜಧಾನಿಯಿಂದ ಹೈವೆ ಐನೂರು, ಕೊಂಕಣವೊಂಭಯ್ನೂರು, ಬನವಾಸಿ ಪನ್ನಿರ್ಚ್ಛಾಸಿರ ಹಾಗೂ ಸಾಂತಳಿಗೆ ಸಾಸಿರವನ್ನು ಆಳುತ್ತಿದ್ದನೆಂದು ಹೇಳಲಾಗಿದೆ. ತಿಥಿ ಕ್ರಿ.ಶ. ೧೧೪೩ ಡಿಸೆಂಬರ್ ೧೨, ಭಾನುವಾರ. ಈತನು ಎರಡನೆಯ ಕಾಮದೇವನ ಮಗನು. ಸಿರಸಿ ತಾಲೂಕಿನ ದೇವತೆ ಮನೆ ಗ್ರಾಮದ ವೀರಗಲ್ಲಿನಲ್ಲಿ ಈತನು ದಂಡೆತ್ತಿ ಹೋಗಿ ಬಲ್ಲಾಳ ಸಿರಸಿಯ ಹತ್ತಿರ ಬೀಡನ್ನು ಬಿಟ್ಟಾಗ ಕಲುಗಾಲ ಗ್ರಾಮದ ಬಳಿ ಕಾಳಗ ನಡೆದ ಪ್ರಸಂಗದಲ್ಲಿ ಕೊಮ್ಮಗಾವುಂಡನೆಂಬ ವೀರನೊಬ್ಬನು ಮೃತನಾದನೆಂದು ಹೇಳಲಾಗಿದೆ. (ಕನ್ನಡ ಶಾಸನ ಶಿಲ್ಪ, ಪರಮಶಿವಮೂರ್ತಿ ಡಿ.ವಿ., ೧೯೯೯, ಪು-೧೭೫)

**ಬೈಲಂದೂರ ಗ್ರಾಮದ ನಾಲ್ಕನೆಯ ವೀರಗಲ್ಲು :** ಕಾದಂಬ ಶಿವಚಿತ್ತ ವೀರ ಪೆರ್ಮಾಡಿ ದೇವನು ೨೧ನೆಯ ವರ್ಷದಲ್ಲಿ ತಂಬೂರ ಮಲ್ಲಯ್ಯ ಸಾವಂತನು ಹಂದಿನೀರ ಗ್ರಾಮದ ಮೇಲೆ ಏರಿ ಹೋಗಿ ಹೆಂಗಳೆಯರನ್ನು ಮತ್ತು ದನಗಳನ್ನು ಒಯ್ಯುವಾಗ ರಾಜನ ಹಳ್ಳಿಯ ಗಾವುಂಡನು ವೈರಿಗಳ ಕುದುರೆಗಳನ್ನು ತಡೆದು ಹೆಂಗಳೆಯರನ್ನು ಮತ್ತು ದನಗಳನ್ನು ಬಿಡಿಸಿದ. ಹಾಗೆ ಮಾಡುವುದರಲ್ಲಿ ಆತನು ತೀರಿಕೊಂಡು ಸ್ವರ್ಗಕ್ಕೆ ಹೋದ, ತಿಥಿ ಕ್ರಿ.ಶ ೧೧೬೭, ನವೆಂಬರ್ ೧೨, ರವಿವಾರ (ಶಾಸನ ಪರಿಚಯ, ಶೇಷಶಾಸ್ತ್ರೀ ಆರ್., ೨೦೦೫, ಪು-೫೨))

**ಹೊಸೂರು ವೀರಗಲ್ಲುಗಳು :** ಹೊಸೂರು ಗ್ರಾಮವು ಸಿದ್ದಾಪುರ ತಾಲೂಕಿನಲ್ಲಿ ಸಿದ್ದಾಪುರದಿಂದ ನೈಋತ್ಯಕ್ಕೆ ಆರು ಮೈಲು ಅಂತರದಲ್ಲಿದೆ. ಈ ಗ್ರಾಮದ ಬೊಮ್ಮಯ್ಯನ ಗುಡಿಯ ಬಳಿ ಇದ್ದ ವೀರಗಲ್ಲೊಂದರಿಂದ ಮಹಾ ಮಂಡಳೇಶ್ವರ ಕಾಮದೇವರಸನು ಹಾನುಂಗಲ್ಲ ಮುಂತಾದ ನಾಡುಗಳನ್ನಾಳುತ್ತಿದ್ದನೆಂಬೂ, ವೀರನೊಬ್ಬನು ಕೋಟೆಗಾಳಗದಲ್ಲಿ ಮೃತನಾದನೆಂದೂ ತಿಳಿದು ಬರುತ್ತದೆ. ಈ ವೀರಗಲ್ಲು ಶಾಸನ ಕ್ರಿ.ಶ. ೧೧೮೪-೮೫, ಇನ್ನೊಂದು ವೀರಗಲ್ಲು ಅದೇ ಸ್ಥಳದಲ್ಲಿದ್ದು ಕಾಮದೇವರಸನ ಆಳ್ವಿಕೆಯನ್ನು ಹೇಳುತ್ತದೆ. ತಿಥಿ ನಾಶವಾಗಿದೆ. (ಕನ್ನಡ ಶಾಸನ ಶಿಲ್ಪ, ಪರಮಶಿವಮೂರ್ತಿ ಡಿ.ವಿ., ೧೯೯೯, ಪು-೭೬)

**ಬೇಡಕಣಿಯ ವೀರಗಲ್ಲುಗಳು :** ಬೇಡಕಣಿ ಗ್ರಾಮವು ಸಿದ್ದಾಪುರ ತಾಲೂಕಿನಲ್ಲಿ ಸಿದ್ದಾಪುರದ ಪಶ್ಚಿಮಕ್ಕೆ ಐದು ಮೈಲು ಅಂತರದಲ್ಲಿದೆ. ಈ ಗ್ರಾಮದ ಬಸದಿಯ ಮುಂದೆ ಇದ್ದ ಎರಡು ವೀರಗಲ್ಲುಗಳಲ್ಲಿ ಕಾಮದೇವನ ಆಳ್ವಿಕೆಯ ಉಲ್ಲೇಖ ಬರುತ್ತದೆ. ಶತವರ್ಷಗಳ ಹೇಳದಿರುವುದರಿಂದ ಇವುಗಳ ನಿಶ್ಚಿತವಾದ ತಿಥಿಗಳ ಗೊತ್ತಾಗುವುದಿಲ್ಲ. (ವೀರಗಲ್ಲುಗಳು ಮತ್ತು ಮಾಸ್ತಿಗಲ್ಲುಗಳು, ಚಿದಾನಂದಮೂರ್ತಿ ಎಂ., ೧೯೪೮, ಪು-೨೧)

ಹಳೇಬಿಡಿನ ಹೊಯ್ಸಳೇಶ್ವರ ದೇವಸ್ಥಾನದ ಪ್ರಾಕಾರದಲ್ಲಿ ಪಶ್ಚಿಮದ ಕಡೆ ಇರುವ ಕುಂಭದಲ್ಲಿ ಕ್ರಿ.ಶ. ೧೨೨೦ರ ಶಾಸನವಿದೆ. ಈ ಶಾಸನದಲ್ಲಿ ಇಮ್ಮಡಿ ವೀರಬಲ್ಲಾಳನು ಸತ್ತದ್ದು ಹೇಗೆ ಎಂಬುದು ಕ್ರಿ.ಶ. ೧೨೨೦ರ ಇಲ್ಲ. ಅವನ ನೆಚ್ಚಿನ ಸೇನಾಧಿಪತಿ ಕುವರಲಕ್ಷ್ಮ ಚಮೂಪನು ತನ್ನ ಒಂದು ಸಾವಿರ ಅನುಯಾಯಿಗಳೊಡನೆ ಪ್ರಾಣತ್ಯಾಗವನ್ನು ಮಾಡುತ್ತಾನೆ. ಅವನ ಸತಿ ಸುಗ್ಗಲದೇವಿಯೂ ಅವನೊಡನೆ ಪ್ರಾಣತ್ಯಾಗವನ್ನು ಮಾಡುತ್ತಾಳೆ. ರಾಜ ಸತ್ತಾಗ ಅವನೊಡನೆ ಸಾಯುವೆನೆಂದು ಭಾಷೆಯನ್ನು ಕೊಟ್ಟು ಅದರಂತೆ ನಡೆಯುತ್ತಿದ್ದವರನ್ನು ವೇಳವಾಳಿ/ಲೆಂಕವಾಳಿ ಎಂದು ಕರೆಯುತ್ತಿದ್ದರು. ಮತ್ತೊಂದು ಹೆಸರೇ ಗರುಡರು. ಈ ಗರುಡ ಪದ್ಧತಿ ಹೊಯ್ಸಳರ ಕಾಲದಲ್ಲಿ ಹೆಚ್ಚಾಗಿದ್ದಿತು. ಈ ಶಾಸನ ಗರುಡ ಪದ್ಧತಿಯನ್ನು ತಿಳಿದುಕೊಳ್ಳಲು ಹೆಚ್ಚಿನ ಸಹಾಯ ಮಾಡುತ್ತದೆ. ಪ್ರಸ್ತುತ ಶಾಸನ ಒಂದು ವೀರಗಲ್ಲಾಗಿದೆ. ವೇಳವಾಳಿ/ಲೆಂಕವಾಳಿಯ ಸ್ಮಾರಕ ಶಿಲೆಯಾಗುತ್ತದೆ. (ಶಾಸನ ಮತ್ತು ಗದ್ಯ ಜಯದೇವ್ ಹು.ಕಾ. ೧೯೭೫. ಪು. ೬೦)

**ಸದಾಶಿವಗಡ ವೀರಗಲ್ಲು :** ಮಾಜಾಳಿ ರಸ್ತೆಯ ಬದಿಗೆ ಇದ್ದ ತ್ರುಟಿತವಾದ ಈ ವೀರಗಲ್ಲಿನಲ್ಲಿ ಕಾದಂಬ ಶಿವಚಿತ್ತ ವೀರ ಪೆರ್ಮ್ಮಾಡಿ ಎಂದು ಅರಸನ ಹೆಸರನ್ನು ಶೇಷಶಾಸ್ತ್ರೀ ಅವರು ಕರ್ನಾಟಕದ ವೀರಗಲ್ಲುಗಳು ಎಂಬ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ

**ಬೈಲಂದೂರ ಗ್ರಾಮದ ಐದನೆಯ ವೀರಗಲ್ಲು :** ಶ್ರೀ ಕಾದಂಬ ಶಿವಚಿತ್ತ ವೀರ ತ್ರಿಭುವನ ಮಲ್ಲದೇವವರುಷದ ಎಂಟನೆಯ ವಿಜಯ ಸಂವತ್ಸರದಲ್ಲಿ ಮಾರ್ಗಶಿರ ಶುದ್ಧ ಚತುರ್ದಶಿ, ಗುರುವಾರ ದಿವಸ, ಬೈಲಂದೂರ ಊರಳವಿನಲ್ಲಿ ಕಲನಾಯಕನು ಹೋರಾಡಿ ಸತ್ತು ಸುರಲೋಕ ಪ್ರಾಪ್ತನಾದನೆಂದು ಈ ಶಾಸನವು ಹೇಳುತ್ತದೆ. ಇದರ ಕಾಲ ಕ್ರಿ.ಶ. ೧೨೩೩ರ ನವೆಂಬರ್ ೧೭. ಬೃಹಸ್ಪತಿವಾರ, (ಶಾಸನ ಪರಿಚಯ, ಶೇಷಶಾಸ್ತ್ರೀ ಆರ್., ೨೦೦೫, ಪು-೯೧))

**ಮೊಗಟಾ ವೀರಗಲ್ಲು :** ಮೊಗಟಾ ಗ್ರಾಮವು ಅಂಕೋಲಾದಿಂದ ಆಗ್ನೇಯಕ್ಕೆ ಎಂಟು ಮೈಲು ಅಂತರದಲ್ಲಿದೆ. ಶಿವಚಿತ್ತವೀರ ಕಾಮದೇವರಸನ ಮೂರನೆಯ ವರ್ಷದಲ್ಲಿ ನಾಗದೇವನೆಂಬ ವೀರನೊಬ್ಬನು ಯುದ್ಧದಲ್ಲಿ ಮಡಿದು ಸುರಲೋಕ ಪ್ರಾಪ್ತನಾದನೆಂದು ಈ ವೀರಗಲ್ಲಿನಲ್ಲಿ ಹೇಳಲಾಗಿದೆ.

**ಶಾಸನ ಶಿಲ್ಪದ ಬೆಳವಣಿಗೆ :**

ಭಾರತೀಯ ಶಿಲ್ಪವು ಧಾರ್ಮಿಕ ಪ್ರೇರಣೆ ಮತ್ತು ಪ್ರಭಾವಗಳಿಂದ ಮೂಡಿಬಂದದ್ದಾಗಿದೆ. 'ಯಾವುದೇ ಒಂದು ವಾಸ್ತವಿಕ ಇಲ್ಲವೇ, ಕಾಲ್ಪನಿಕ ಆಕೃತಿಯನ್ನು ಒಂದು ಮಾಧ್ಯಮದ ಮೂಲಕ ರೂಪಿಸುವ ಕಲೆಯನ್ನು ಶಿಲ್ಪ' ಎಂದು ಕರೆಯಲಾಗುತ್ತದೆ. (ಭಾರತೀಯ ಶಿಲ್ಪ, ಶಿವರಾಮ ಕಾರಂತ, ೧೯೭೫, ಪುಟ-೧) ಶಿಲ್ಪ ಎಂಬುದು ಕೇವಲ ದೇವರ ವಿಗ್ರಹಗಳನ್ನು ಕೆತ್ತುವ ಕಲೆಯಾಗಿದೆ. ಜಡ ವಸ್ತುಗಳ ಬಾಹ್ಯ ರೂಪವನ್ನು ಕೆತ್ತುವ ಕಲೆಯಾಗಿದೆ. ಪ್ರಾಚೀನ ಕಾಲದಲ್ಲಿ ಶಿಲ್ಪವು ಸಾಮಾಜಿಕ, ಧಾರ್ಮಿಕ ಜೀವನವನ್ನು ಬಿಂಬಿಸುವ ಮತ್ತು ಸಾಮಾನ್ಯ ಜನರಿಗೆ ತಿಳಿಸುವ ಒಂದು ಮಾಧ್ಯಮವಾಗಿತ್ತು. ಶಿಲ್ಪ ಮತ್ತು ಶಾಸನ ಶಿಲ್ಪಗಳು ಒಂದೆಯಾದರೂ ಆಶಯದಲ್ಲಿ ಎರಡೂ ಬೇರೆ ಬೇರೆಯಾಗಿ ಕಂಡುಬರುತ್ತವೆ. ಶಿಲ್ಪ ವಿಶಾಲವಾದ ಸ್ವರೂಪವನ್ನು ಪಡೆದಿದ್ದು, ಶಾಸನ ಶಿಲ್ಪವು ಕೇವಲ ಶಾಸನಗಳಿಗೆ ಮಾತ್ರ ಸೀಮಿತವಾಗಿದೆ. 'ಶಾಸನ ಶಿಲ್ಪದ ಅಧ್ಯಯನವೆಂದರೆ ಶಾಸನಗಳ ಮೇಲಿರುವ ಉಬ್ಬು ಶಿಲ್ಪಗಳು ಅಧ್ಯಯನವೆಂದೇ ಅರ್ಥ' (ಕನ್ನಡ ಶಾಸನ ಶಿಲ್ಪ, ಪರಮಶಿವಮೂರ್ತಿ ಡಿ.ವಿ., ೧೯೯೯, ಪುಟ-೭)

ಚಪ್ಪಟೆಯಾದ ಹಿನ್ನೆಲೆಯಿಂದ ಮುಂದಕ್ಕೆ ಉಬ್ಬಿದಂತೆ ಕಾಣುವ ಶಿಲ್ಪಗಳನ್ನು ಉಬ್ಬುಶಿಲ್ಪಗಳು ಎಂದು ಅರ್ಥೈಸಬಹುದಾಗಿದೆ. ವಸ್ತುವಿನಿಂದ ಮುಂದಕ್ಕೆ ಉಬ್ಬಿದಂತೆ ಕಾಣುವ ಎಲ್ಲ ಶಿಲ್ಪಗಳು ಉಬ್ಬುಶಿಲ್ಪಗಳೇ ಎಂದು ಹೇಳಬಹುದು. ಶಾಸನ ಶಿಲ್ಪವು ಉಬ್ಬುಶಿಲ್ಪದ ಒಂದು ಪ್ರಕಾರವಾಗಿದೆ. ಶಾಸನಗಳು ಸಂಪೂರ್ಣವಾಗಿ ಉಬ್ಬುಶಿಲ್ಪದ ಮಾದರಿಗಳೇ ಆಗಿವೆ. ನಮ್ಮ ಪ್ರಾಚೀನ ಶಿಲ್ಪಶಾಸ್ತ್ರ

ಗ್ರಂಥಗಳಾದ ಮಾಯಮತ, ಮಾನಸಾರ, ಶಿಲ್ಪ ಸಂಗ್ರಹ ಮೊದಲಾದವುಗಳಲ್ಲಿ ಉಬ್ಬುಶಿಲ್ಪದ ಬಗ್ಗೆ ಏನನ್ನು ಹೇಳಿಲ್ಲ. ಏಕೆಂದರೆ ಆ ಕಾಲದಲ್ಲಿ ಶಿಲ್ಪ-ಉಬ್ಬುಶಿಲ್ಪಗಳ ಮಧ್ಯೆ ಯಾವುದೇ ವ್ಯತ್ಯಾಸಗಳಿಲ್ಲದೆ ಒಂದೇ ಆಗಿದ್ದವು.

ಶಾಸನ ಶಿಲ್ಪವು ಶಿಲ್ಪಶಾಸ್ತ್ರದ ಬೆಳವಣಿಗೆಗೆ ತನ್ನದೇ ಆದ ಕೊಡುಗೆಯನ್ನು ನೀಡಿದೆ. ಭಾರತೀಯ ಶಿಲ್ಪ ಇತಿಹಾಸ ಅಧ್ಯಯನದ ಮೊದಲ ಕೃತಿಗಳು 'ಉಬ್ಬುಶಿಲ್ಪಗಳೇ' ಎಂಬುದು ಗಮನಾರ್ಹ. ಕ್ರಿ.ಪೂ. ೩೦೦೦ದಷ್ಟು ಹಳೆಯದಾದ ಸಿಂಧೂ ಚಿಹ್ನೆಗಳೆಂದೂ ಹಲವು ವಿದ್ವಾಂಸರ ಅಭಿಮತ. ಇವು ಉಬ್ಬು ತಂತ್ರದಿಂದಲೇ ರಚನೆಯಾದವುಗಳು. (ಕನ್ನಡ ಶಾಸನ ಶಿಲ್ಪ, ಪರಮಶಿವಮೂರ್ತಿ ಡಿ.ವಿ., ೧೯೯೯, ಪುಟ-೧೭)

ಶಿವರಾಮ ಕಾರಂತರು ಕನ್ನಡದಲ್ಲಿ ಉಬ್ಬುಶಿಲ್ಪದ ಬಗ್ಗೆ ಬರೆದ ಮೊದಲ ವಿದ್ವಾಂಸರು. ಇವರ 'ಚಿತ್ರಶಿಲ್ಪ ವಾಸ್ತುಕಲೆಗಳು', 'ಭಾರತೀಯ ಶಿಲ್ಪ' ಮತ್ತು ಕಲಾ ಪ್ರಪಂಚ ಇತ್ಯಾದಿ ಕೃತಿಗಳಲ್ಲಿ ಉಬ್ಬುಶಿಲ್ಪದ ಬಗ್ಗೆ ಪ್ರಸ್ತಾಪಿಸಲಾಗಿದೆ. 'ಜ್ಞಾನ ಗಂಗೋತ್ರಿ' ಸಂಪುಟದ 'ಕಲಾಕೋಶ' ಗ್ರಂಥದಲ್ಲಿ ಉಬ್ಬುಶಿಲ್ಪದ ಬಗ್ಗೆ ಉಲ್ಲೇಖಗಳಿವೆ. ಸಾಮಾನ್ಯವಾಗಿ ಮುಂದಕ್ಕೆ ಉಬ್ಬಿದಂತೆ ಕಾಣುವ ಎಲ್ಲ ಶಿಲ್ಪಗಳೂ ಉಬ್ಬುಶಿಲ್ಪಗಳೇ. ಉಬ್ಬುಶಿಲ್ಪಗಳಿಗೆ ಸ್ವತಂತ್ರವಾದ ಮೈ ಇರುವುದಿಲ್ಲ. ಇವುಗಳು ಹಿಂದಿನಿಂದ ಅಂಟಿಕೊಂಡಿರಲೇಬೇಕು. ಇದನ್ನು ಎದುರಿನಲ್ಲಿ ನಿಂತು ನೋಡಬೇಕಾಗುತ್ತದೆ. ಉಬ್ಬುಶಿಲ್ಪವನ್ನು ಕೆತ್ತುವ ಶಿಲ್ಪಿಯು 'ದಪ್ಪ' ಎಂಬ ಮಾನದಂಡವನ್ನು ಇಟ್ಟುಕೊಂಡು ತನ್ನ ಭಾವನೆಯನ್ನು ವ್ಯಕ್ತಪಡಿಸುತ್ತಾನೆ. ನಮ್ಮ ನಾಡಿನಲ್ಲಿ ಉಬ್ಬುಶಿಲ್ಪದ ರಚನೆಗೆ ಪ್ರಮುಖವಾಗಿ ಶಿಲೆ ಮತ್ತು ಮರವನ್ನು ಬಳಸಲಾಗಿದೆ. ಇಲ್ಲಿ ಶಿಲ್ಪಿಯ ಮನೋಧರ್ಮವೇ ಪ್ರಧಾನ ಭೂಮಿಕೆ ಎಂದು ಹೇಳಬಹುದು. ಉಬ್ಬುಶಿಲ್ಪ ಕೆತ್ತುವಾಗ ಶಿಲ್ಪಿಯು ಬೇಡವಾದುದನ್ನು ಕೆತ್ತಿ ತೆಗೆಯುತ್ತಾನೆ. ಯಾವ ಪ್ರಧಾನ ವಿಷಯವನ್ನು ಕೆತ್ತಬೇಕು ಎಂದು ಶಿಲ್ಪಿಯು ನಿರ್ಧರಿಸುತ್ತಾನೋ ಅದಕ್ಕೆ ಬೇಕಾಗುವಷ್ಟು ಸ್ಥಳದಲ್ಲಿ ಶಿಲೆಯನ್ನು ಹಾಗೆಯೇ ಇರಿಸಿಕೊಂಡು ಇನ್ನುಳಿದ ಶಿಲೆಯನ್ನು ಕೆತ್ತಿ ತೆಗೆಯುತ್ತಾನೆ. ಈ ಕೆಲಸದಲ್ಲಿ ಹಾಗೆ ಕೆತ್ತಿ ತೆಗೆಯುವ ಕೆಲಸ ಶ್ರಮದ್ದು ಮಾತ್ರವಲ್ಲ, ಕೆತ್ತಿ ಹೋದ ಭಾಗವನ್ನು ತಿರುಗಿ ಸೇರಿಸುವಂತಿಲ್ಲ. ಹೀಗಾಗಿ ಆತನ ಈ ಕೆಲಸ ಎಷ್ಟು ದಿವಸಗಳು ಹಿಡಿದರೂ ಸರಿ ಮುಂದೆ ಕಾಣಿಸಿಕೊಳ್ಳಬೇಕಾದ ಆಕೃತಿಯ ಆಯ, ಅಳತೆ, ರೂಪಗಳು ಹೇಗೆ ಇರಬೇಕು ಎಂಬ ವಿಚಾರದಲ್ಲಿ ಆತ ದೀರ್ಘಕಾಲ ನೆನಪನ್ನು ಉಳಿಸಿಕೊಂಡಿರಬೇಕು. (ಶಿವರಾಮ ಕಾರಂತ, ಚಿತ್ರಶಿಲ್ಪ ವಾಸ್ತುಕಲೆಗಳು, ೧೯೭೫, ಪುಟ-೧೫)

ಲೋಹ ಮಾಧ್ಯಮವಾಗಲಿ ಅಥವಾ ಮರದ ಮಾಧ್ಯಮವಾಗಲಿ ಉಬ್ಬುಶಿಲ್ಪವನ್ನು ನಿರ್ಮಿಸಲು ಕಲ್ಪನೆ, ಕಲ್ಪನೆ ಗುಣವಾಗಿ ಚಿತ್ರಗಾರಿಕೆ ಅವಶ್ಯ. ಹಾಗಾಗಿ ಶಿಲ್ಪಿಗೆ ತಾನು ಕೆತ್ತುತ್ತಿರುವ ಶಿಲ್ಪದ ಸ್ಪಷ್ಟವಾದ ಕಲ್ಪನೆ-ಜ್ಞಾನವಿರಬೇಕು. ಶಿಲ್ಪ ಕೆತ್ತನೆಗಾಗಿ ಹೆಚ್ಚಾಗಿ ತಾಮ್ರ, ಹಿತ್ತಾಳೆಯನ್ನು ಸಾಧಾರಣವಾಗಿ ಬೆಳ್ಳಿ, ಬಂಗಾರವನ್ನು ಅಪರೂಪವಾಗಿ ಬಳಸುತ್ತಾರೆ. ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ದೊರೆತಿರುವ

ಶಿಲ್ಪಗಳನ್ನು ಗಮನಿಸಿದಾಗ ಶಿಲ್ಪ ನಿರ್ಮಾಣದಲ್ಲಿ ಶಿಲೆಯನ್ನು ಪ್ರಧಾನವಾದ ಮಾಧ್ಯಮವನ್ನಾಗಿ ಬಳಸಿರುವುದು ಕಂಡುಬರುತ್ತದೆ.

ಪುರಾತನ ಕಾಲದಿಂದ ಶಿಲ್ಪಕಲೆಗೆ ಪ್ರಧಾನವಾದದ್ದು ಶಿಲೆ. ಈ ಶಿಲೆಯಲ್ಲಿ ಹಲವಾರು ಶಿಲೆಗಳಿದ್ದು, ಅವುಗಳನ್ನು ಸಾಮಾನ್ಯ ಶಿಲೆ, ಮರಳು ಶಿಲೆ, ಬಳಪದ ಶಿಲೆ, ಅಮೃತ ಶಿಲೆ ಮತ್ತು ಕಪ್ಪು ಶಿಲೆ ಎಂದು ವಿಂಗಡನೆಗಳನ್ನು ಮಾಡಿಕೊಳ್ಳಬಹುದು. ಬಾದಾಮಿ ಚಾಲುಕ್ಯರ ಕಾಲದಲ್ಲಿ ಹೆಚ್ಚಾಗಿ ಮರಳುಗಲ್ಲುಗಳನ್ನು ಬೆಣಚು ಶಿಲೆಗಳನ್ನು ವಾಸ್ತುಶಿಲ್ಪ ನಿರ್ಮಾಣ ಕಾರ್ಯದಲ್ಲಿ ಬಳಸಲಾಯಿತು. ಈ ಶಿಲೆಗಳ ನೈಸರ್ಗಿಕ ಗುಣಗಳಿಂದಾಗಿ ಸೂಕ್ಷ್ಮ ಕುಸುರಿ ಕೆಲಸ ಮಾಡಲು ಅಂದಿನ ಶಿಲ್ಪಿಗಳಿಗೆ ಸಾಧ್ಯವಾಗಲಿಲ್ಲ. ಆದ್ದರಿಂದ ದೊಡ್ಡ ದೊಡ್ಡ ಆಕಾರದ ಗುಡಿಗಳನ್ನು, ಗುಹೆಗಳನ್ನು ಮತ್ತು ಶಿಲ್ಪಗಳನ್ನು ನಿರ್ಮಿಸಿದರು. ಈ ಇತಿಮಿತಿ ಆ ಕಾಲದ ವೀರಗಲ್ಲುಗಳ ಮೇಲ್ಲೆ ಪ್ರಭಾವ ಬೀರಿದೆ. ಹಾಗೆಯೇ ರಾಷ್ಟ್ರಕೂಟರ ಕಾಲದಲ್ಲಿ ಮತ್ತು ಗಂಗರ ಕಾಲದಲ್ಲಿ ಬಳಸಲಾದ ಬೆಸಾಲ್ಟ್ ಸುಣ್ಣದ ಕಲ್ಲು, ಮರಳುಗಲ್ಲುಗಳು ಮತ್ತು ಕಣ್ವ ಶಿಲೆಗಳು ವಾಸ್ತುಶಿಲ್ಪಗಳ ಮತ್ತು ವೀರಗಲ್ಲುಗಳ ಕುಸುರಿ ಕೆಲಸ ಮತ್ತು ಆಕಾರದ ಅಳತೆಯನ್ನು ನಿರ್ಧರಿಸಿರುವುದು ಅಂದರೆ ಈ ಬಗೆಯ ಶಿಲೆಗಳಲ್ಲಿ ಗುಡಿಗಳನ್ನು ನಿರ್ಮಿಸಬಹುದೇ ವಿನಃ ಸೂಕ್ಷ್ಮ ಕುಸುರಿ ಕೆಲಸದ ಕಲೆಗೆ ಈ ಶಿಲೆಗಳು ಒಗ್ಗುವುದಿಲ್ಲ.

ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳರ ಕಾಲದಲ್ಲಿ ಬಳಪದ ಕಲ್ಲನ್ನು ವ್ಯಾಪಕವಾಗಿ ಬಳಕೆಗೆ ತಂದಿದ್ದರಿಂದ ಆ ಕಾಲದ ಶಿಲ್ಪಕಲೆಗಳಿಗೆ ಅತ್ಯಂತ ಮನೋಹರವಾದ ಮತ್ತು ಸೂಕ್ಷ್ಮ ಕುಸುರಿ ಕೆಲಸವುಳ್ಳ ಮತ್ತು ಸುಂದರವಾದ ಹೂಬಳ್ಳಿಗಳಿಂದ ಕೂಡಿದ ಗುಡಿಗಳನ್ನು ಮತ್ತು ಶಿಲ್ಪಗಳನ್ನು ನಿರ್ಮಿಸಲು ಸಾಧ್ಯವಾಯಿತು. ಅಪವಾದವಾಗಿ ಕಲ್ಯಾಣ ಚಾಲುಕ್ಯರ ಕಾಲದ ಸ್ಥಳೀಯವಾಗಿ ಲಭ್ಯವಿರುವ ಬೆಸಾಲ್ಟ್ ಶಿಲೆಯನ್ನು ತುಂಬಾ ಎಚ್ಚರಿಕೆಯಿಂದ ಆಯ್ದು ಸುಂದರ ವಾಸ್ತುಶಿಲ್ಪಗಳನ್ನು ಆ ಕಾಲದ ಶಿಲ್ಪಿಗಳು ನಿರ್ಮಿಸಿದ್ದಾರೆ. ಈ ಸುಂದರ ಶೈಲಿಯ ಮತ್ತು ಮೃದುವಾದ ಬಳಪದಕಲ್ಲು ಸುಂದರ ಹಾಗೂ ಸಾಮಾನ್ಯವಾಗಿ ಮೂರು ಹಂತಗಳುಳ್ಳ ವೀರಗಲ್ಲುಗಳ ನಿರ್ಮಾಣಕ್ಕೆ ಕಾರಣವಾದವು.

ವಿಜಯನಗರ ಕಾಲಕ್ಕೆ ಶಿಲ್ಪಿಗಳು ಮತ್ತು ಕುಶಲಕರ್ಮಿಗಳು ತಮಿಳುನಾಡಿನಿಂದ ವಲಸೆ ಬಂದರು. ತಮ್ಮ ಜೊತೆಗೆ ಅಲ್ಲಿಯ ಶೈಲಿಯನ್ನು ತಂದರು. ಹಂಪಿಯ ಸುತ್ತಮುತ್ತಲಿರುವ ಕಂದು ಬಣ್ಣದ ಕಣ ಶಿಲೆಯನ್ನು ಹಾಗೂ ತತ್ಸಂಬಧಿತ ಶಿಲೆಗಳನ್ನು ಗುಡಿ, ಗೋಪುರ, ವಿಮಾನಗಳು ಮತ್ತಿತರ ಶಿಲ್ಪಕಲಾ ವಸ್ತುಗಳ ನಿರ್ಮಾಣದಲ್ಲಿ ಆ ಕಾಲದ ಸ್ಥಪತಿಗಳು ಮತ್ತು ಶಿಲ್ಪಿಗಳು ಬಳಸಿದರು. ಈ ಬಗೆಯ ಕಲ್ಲಿನಲ್ಲಿ ದಪ್ಪ ಹರಳುಗಳ ಖನಿಜಗಳಿರುವುದರಿಂದ ಅತಿ ಸೂಕ್ಷ್ಮಗಳಿಗಾಗಿ ಹೇಳಿ ಮಾಡಿಸಿದಂತಹ ದೊಡ್ಡ ದೊಡ್ಡ ಗಾತ್ರ ಗುಂಡುಗಲ್ಲುಗಳನ್ನು, ಸೈಜುಗಲ್ಲುಗಳನ್ನು ಉಪಯೋಗಿಸಿ ಬೃಹತ್ ಕಲಾಕೃತಿಗಳನ್ನು ಈ ಕುಶಲಕರ್ಮಿಗಳು ನಿರ್ಮಿಸಿದರು. ಈ ಇತಿಮಿತಿಗಳ ಕಾರಣದಿಂದಾಗಿಯೇ ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳರ ಕಾಲದ ಮೂರು ಹಂತಗಳುಳ್ಳ

ಸುಂದರ ವೀರಗಲ್ಲುಗಳ ಬದಲಾಗಿ ಒಂದೇ ಹಂತವಿರುವ ವೀರಗಲ್ಲುಗಳನ್ನು ಈ ಕಾಲದ ಶಿಲ್ಪಿಗಳು ನಿರ್ಮಿಸಿದರು. ಆದರೆ ವೀರಗಲ್ಲುಗಳ ಸೌಂದರ್ಯ, ಶೈಲಿ, ಶಿಲೆ ಇತ್ಯಾದಿ ಅಂಶಗಳು ಸ್ವತಂತ್ರವಾಗಿಲ್ಲ. ಬದಲಾಗಿ ಆಯಾ ಕಾಲದ ವಾಸ್ತುಶಿಲ್ಪ ಮತ್ತು ಕಲೆಯ ಜೊತೆ ಜೊತೆಯಾಗಿ ಸೂಕ್ಷ್ಮವಾಗಿ ರೂಪುಗೊಂಡವು ಎಂಬುದನ್ನು ನಾವು ಗಮನಿಸಬೇಕು. ಶಿಲ್ಪ ಮತ್ತು ಶಾಸನ ಶಿಲ್ಪಗಳನ್ನು ನಿರ್ಮಿಸುವ ತಂತ್ರ ಒಂದೇ ರೀತಿಯಾಗಿಲ್ಲ. ಶಿಲ್ಪವನ್ನು ಅಥವಾ ಮೂರ್ತಿಯನ್ನು ನಾಲ್ಕು ಕಡೆಗಳಲ್ಲಿ ಕೆತ್ತಬೇಕು. ಆದರೆ ಶಾಸನ ಶಿಲ್ಪವನ್ನು ಅದರ ಮುಂದೆ ನಿಂತು ನೋಡುವಂತೆ ನಿರ್ಮಿಸಬೇಕು. ಶಿಲ್ಪ ಮೂಲತಃ ಒಂದು ಆಕೃತಿ. ಆದರೆ ಶಾಸನಶಿಲ್ಪ ಒಂದು ಮೂಲಾರ್ಥವನ್ನು ಒಳಗೊಂಡ ಘಟನೆಗೆ ಭಾವನೆಗಳನ್ನು ನಿರೂಪಿಸಲು ಪ್ರಯತ್ನಿಸುತ್ತದೆ.

ಶಿಲ್ಪಗಳಲ್ಲಿ ಒಂದು ಘಟನೆಯ ಒಂದು ಭಂಗಿಯನ್ನು ಕೆತ್ತಿದರೆ ಶಾಸನಶಿಲ್ಪದಲ್ಲಿ ಏಕ ಕಾಲದಲ್ಲಿ ಹಲವು ಘಟನೆಗಳನ್ನು ಚಿತ್ರಿಸಬಹುದು. ವೀರಗಲ್ಲು ಮತ್ತು ಮಾಸ್ತಿಗಲ್ಲುಗಳ ಶಿಲ್ಪಗಳಲ್ಲಿ ಈ ತಂತ್ರವನ್ನೇ ನಾವು ಪ್ರಧಾನವಾಗಿ ಕಾಣುವುದು. (ಕನ್ನಡ ಶಾಸನ ಶಿಲ್ಪ, ಪರಮಶಿವಮೂರ್ತಿ ಡಿ.ವಿ., ೧೯೯೯, ಪುಟ-೧೮)

ಕಲೆಯ ಮನಸ್ಸಿನಿಂದ ಹುಟ್ಟಿ ಧಾರ್ಮಿಕ ಚೌಕಟ್ಟಿನಲ್ಲಿ ಬೆಳೆದು ಭಕ್ತಿಯನ್ನು ಉದ್ದೀಪನಗೊಳಿಸುವ ಕಲೆಗಾರಿಕೆ ಶಿಲ್ಪದ್ದಾಗಿದೆ. ಶಾಸನಶಿಲ್ಪವು ಸಾಮಾಜಿಕ ಜೀವನ ರಂಗದ ಕಳಕಳಿಯಿಂದ ಹುಟ್ಟಿದಂತಹುದು. ಆದುದರಿಂದ ಇದು ಮೊದಲ ಸಾಂಸ್ಕೃತಿಕ ಆಕರವಾಗಿದ್ದು ನಂತರ ಕಲಾ ಮಾಧ್ಯಮವಾಗಿದೆ.

ಶಾಸನ ಶಿಲ್ಪಗಳು ಜನ್ಮತಾಳಿದ್ದು ಯಾವುದಾದರೂ ಒಂದು ಘಟನೆ, ಜನರ ರೀತಿ-ನೀತಿಗಳನ್ನು ತಿಳಿಸಲು ನೆರವಾಗುತ್ತದೆ. ಇವು ನಮ್ಮ ನಾಡಿನ ಅನೇಕ ಕಡೆ ಪೂಜಾ ಮೂರ್ತಿಗಳಾಗಿಯೂ ಕಂಡುಬರುತ್ತವೆ. ಅಲ್ಲಿನ ಜನಪದೀಯ ನಂಬಿಕೆಗಳು, ಆಚರಣೆಗಳು, ಸಂಕೇತಗಳಂತೆ ತೋರಿ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡಿವೆ. ಮಹಾಸತಿ ಕಲ್ಲುಗಳಲ್ಲಿ ಸತಿಯು ತನ್ನ ಬಲಗೈಯನ್ನು ಮೇಲಕ್ಕೆ ಎತ್ತಿ ಹರಸುತ್ತಿರುವುದು ವೀರಗಲ್ಲುಗಳಲ್ಲಿ ವೀರ ಆಯುಧಗಳನ್ನು ಹಿಡಿದು ವೀರಾವೇಶದಿಂದ ಹೋರಾಡುತ್ತಿರುವುದು, ನಿಷಿಧಿ ಕಲ್ಲುಗಳಲ್ಲಿ ಸಾಧಕರು ಪುಸ್ತಕದ ಮುಂದೆ ಕುಳಿತಿರುವುದು ಇವುಗಳ ಸಂಕೇತಗಳಾಗಿವೆ.

ಪ್ರಸ್ತುತ ಅಧ್ಯಯನವು ಸ್ಮಾರಕ ಶಾಸನ ಶಿಲ್ಪಗಳಾದ ವೀರಗಲ್ಲುಗಳು, ಮಾಸ್ತಿಗಲ್ಲುಗಳು, ತುಋಗೋಳ್ ವೀರಗಲ್ಲುಗಳು, ಪೆಣ್ಬುಯ್ಯಲ್ ವೀರಗಲ್ಲುಗಳ ಶಿಲ್ಪಗಳನ್ನು ಕುರಿತು ವಿವೇಚಿಸಲಾಗಿದೆ.

**ವೀರಗಲ್ಲುಗಳನ್ನು ಹಾಕಿಸುತ್ತಿದ್ದವರು :**

ಸತ್ತ ವೀರನಿಗೆ ಅಥವಾ ವ್ಯಕ್ತಿಗೆ ಅಂತ್ಯಸಂಸ್ಕಾರಗಳನ್ನು ಮಾಡುತ್ತಿದ್ದವರು ಆ ವ್ಯಕ್ತಿಯ ಮಕ್ಕಳು. ಗತಿಸಿದವನಿಗೆ ಮಕ್ಕಳು ಇಲ್ಲದಾಗ ಅಥವಾ ಅವರು ಅಪ್ರಾಪ್ತ ವಯಸ್ಕರಾಗಿದ್ದಾಗ ಮಕ್ಕಳ ಬದಲು

ಸತ್ತ ವ್ಯಕ್ತಿಯ ಸಂಬಂಧಿಗಳು ಅಂತ್ಯಸಂಸ್ಕಾರಗಳನ್ನು ಮಾಡುತ್ತಿದ್ದರು. ಬದುಕಿರುವ ವ್ಯಕ್ತಿಗಳಿಗೂ, ಸತ್ತ ವ್ಯಕ್ತಿಗೂ ಇರುವ ಸಂಬಂಧ ಇಂಥ ಸಂಸ್ಕಾರಗಳಲ್ಲಿ ಮುಖ್ಯವಾಗುತ್ತದೆ. ಸತ್ತ ವ್ಯಕ್ತಿಯ ಬಗ್ಗೆ ತಮಗಿರುವ ಪ್ರೀತಿ, ವಿಶ್ವಾಸ, ಕೃತಜ್ಞತೆಗಳನ್ನು ವ್ಯಕ್ತಪಡಿಸುವ, ಸಲ್ಲಿಸುವ ಸಂದರ್ಭವೂ ಹೌದು ವೀರಗಲ್ಲುಗಳ ಪಾಠದಲ್ಲಿ ವೀರನಿಗೆ ಯಾರು ವೀರಗಲ್ಲನ್ನು ನೆಡುತ್ತಿದ್ದರು ಎಂಬ ಅಂಶವೂ ಮತ್ತು ಸತ್ತ ವ್ಯಕ್ತಿಗೂ, ವೀರಗಲ್ಲನ್ನು ಹಾಕಿಸುವ ವ್ಯಕ್ತಿಗಳಿಗೂ ಇದ್ದ ಸಂಬಂಧವೂ ತಿಳಿದುಬರುತ್ತದೆ. ಈ ವಿವರಣೆಗಳನ್ನು ಪರಿಶೀಲಿಸಿದಾಗ ವೀರಗಲ್ಲುಗಳನ್ನು ಹಾಕಿಸುತ್ತಿದ್ದವರಲ್ಲಿ ಎರಡು ರೀತಿಯ ಗುಂಪುಗಳನ್ನು ಗುರುತಿಸಬಹುದು.

೧. ಸತ್ತ ವೀರನ ವ್ಯಕ್ತಿಯ ನೇರ ಸಂಬಂಧಿಕರು

೨. ಸಂಬಂಧಗಳೊಡನೆ ಕೆಲವೊಮ್ಮೆ ಕೂಡಿಕೊಂಡು ಅಥವಾ ತಾವಾಗಿಯೇ ಸ್ವಇಚ್ಛೆಯಿಂದ ವೀರನ ಬಗ್ಗೆ ಇರುವ ವಿಶ್ವಾಸಕ್ಕೆ, ಕೃತಜ್ಞತೆಗೆ ವೀರಗಲ್ಲನ್ನು ಹಾಕಿಸುತ್ತಿದ್ದ ಸಾರ್ವಜನಿಕರು.

ಸತ್ತ ವ್ಯಕ್ತಿಯ ನೇರ ಸಂಬಂಧಿಗಳು ಎಂದರೆ ವೀರನ ಅಣ್ಣಂದಿರು, ಮಕ್ಕಳು, ವೀರನ ತಂದೆ, ತಾಯಿ, ತಂಗಿ, ಮಗಳು, ತಮ್ಮಂದಿರು, ಹೆಂಡತಿ, ಅತ್ತಿಗೆ, ಚಿಕ್ಕಪ್ಪ, ಮಾವ, ಅಳಿಯ ಇವರುಗಳು ವೀರಗಲ್ಲು ಸಾಮಾನ್ಯವಾಗಿ ನೆಡುತ್ತಿದ್ದ ಅಂಶ ತಿಳಿದುಬರುತ್ತದೆ.

ಯುದ್ಧದಲ್ಲಿ ಸತ್ತ ತಮ್ಮ ತಂದೆಗೆ ವೀರಗಲ್ಲನ್ನು ಆತನ ಮಕ್ಕಳು ಹಾಕಿರುವ ಅನೇಕ ನಿದರ್ಶನಗಳು ದೊರೆಯುತ್ತವೆ. ಹಿಂದೂ ಧರ್ಮದ ಅಂತ್ಯಸಂಸ್ಕಾರ ವಿಧಿಗಳನ್ನು ಪರಿಶೀಲನೆ ಮಾಡಿದಾಗ ಸತ್ತ ವ್ಯಕ್ತಿಯ ತುಂಬಾ ಹತ್ತಿರದ ಸಂಬಂಧಿಯಾದ ಆತನ ಮಗನು ಕರ್ಮಗಳನ್ನು ಮಾಡುವ ಅಧಿಕೃತ ಎಂಬ ಅಂಶ ವ್ಯಕ್ತವಾಗುತ್ತದೆ. ತನ್ನ ತಂದೆಯ ಅಂತ್ಯಕ್ರಿಯೆಗಳನ್ನು ನಿಯಮಬದ್ಧವಾಗಿ ಮಾಡುವುದು ಮಗನ ಕರ್ತವ್ಯವೆಂಬ ನಂಬಿಕೆ ಇಂದಿಗೂ ಉಳಿದುಕೊಂಡು ಬಂದಿದೆ. ಈ ಭಾವನೆಯನ್ನು ನಾವು ವೀರಗಲ್ಲುಗಳ ಪಾಠದಿಂದಲೂ ಗಮನಿಸಬಹುದಾಗಿದೆ.

**ಶಾಸನ ಹಾಕಿಸಿದವರು :**

ಕ್ರಿ.ಶ. ೮೬೪ನೆಯ ವರ್ಷದ ಒಂದನೆಯ ಅಮೋಘವರ್ಷನ ಕಾಲದ ಬೆಂತೂರಿನ ಶಾಸನವೊಂದು "ಸ್ವಸ್ತಿ ಶಕನೃಪ ಕಾಲತೀತ ಸಂವತ್ಸರ ಶತಂಗಳ್ ಎಟ್ನೂಱೆಣ್ಭತ್ತಯ್ದನೆಯ ತಾರಣ ಸಂವತ್ಸರ ಪ್ರವರ್ತ್ತಿಸುತ್ತಿರೆ ಸ್ವಸ್ತ್ಯಮೋಘ ವರ್ಷ ಆರೀಪ್ರಿಥು ವೀವಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕರ ಪ್ರಿಥವೀರಾಜ್ಯಂಗೆಯ್ಯೆ ಶ್ರೀಮ...ಪ್ಪಯ್ಯಂಕುರರು...ಮೂವತ್ತಱುವರುಮರಸುಂ ಚಿಕ್ಕ(ಂ) ಣ್ಣಜ್ಗೆ ಪದಿ...ಗೊಟ್ಟರಲ್ಲಿಯ ಱು ಮತ್ತರ್ಕ್ಕೆಯ್ಯಂ ಒಂಬತ್ತುಗಯ್ಯ (ತ) (ಜೆ)ವರಿಂದ ಪಿದನಜೆ...ಕವಿಲೆಯನಜೆ" ಶಕವರ್ಷ ೭೮೫ನೆಯ ತಾರಣ ಸಂವತ್ಸರದಲ್ಲಿ ಅಮೋಘವರ್ಷ ರಾಜ್ಯನಾಳುತ್ತಿದ್ದಾಗ ಯಾವುದೋ ಹೋರಾಟದಲ್ಲಿ ಚಿಕಂಣ್ಣ ಮಡಿದುದ್ದಕ್ಕೆ ಅವನ ನೆನಪಿಗೆ ಪೋದಿಯಮ್ಮ ಈ ಶಾಸನವನ್ನು ಮಾಡಿಸಿರುವುದು ತಿಳಿದುಬರುತ್ತದೆ. (ಎಸ್.ಐ.ಐ. ೧೧

ಬೆಂತೂರು, ಶಾ.ಸಂ-೧೦)

ಕ್ರಿ.ಶ. ೮೯೭ರ ೨ನೆಯ ಕೃಷ್ಣನ ಕಾಲದ ಚಿಂಚಲಿ ಶಾಸನವು "ಸಕನೃಪಕಾಲಾತೀತ ಸಂವತ್ಸರ ಶತಂಗಳಣ್ಬನೂ ಐಪತ್ತೊಂಭತ್ತನೆಯ ಪಿಂಗಳನೆಂಬ ವರ್ಷಂ ಪ್ರವರ್ತಿಸೆ ಸದ್ವರಿಪಾ ಭ್ಯಾನ್ತರದೊಳ್ (ಶ್ರೀ) ಚಿಂಚಲಿ (ದ) ಅಯ್ವತ್ತಱುವರುಂ ಮಹಾಜನಂ ನೆರದಿರಲು...ವುರುದಂಣ್ಡ (ಲ್ಗೊಲೆ)ಯರ ಮಗಳ್ ಕಾಳಬ್ಬೆ...ಆಯ್ಕೆ ಬೀಳಿಸಿ ಕಲ್ಲಂ ನಿಜೆಸಿದೋರ್" ಶಕವರ್ಷ ೮೧೯ನೆಯ ಪಿಂಗಳ ಸಂವತ್ಸರದಲ್ಲಿ ಮಡಿದ ಯಾವುದೋ ಒಬ್ಬ ವೀರನ ನೆನಪಿಗಾಗಿ ಅಯ್ವತ್ತಮಿವರುಂ ಮಹಾಜನರ ಎದುರಿನಲ್ಲಿ ವೀರಗಲ್ಲು ನಿಲ್ಲಿಸಿದ ಉಲ್ಲೇಖ ಸಿಗುತ್ತದೆ. (ಎಸ್.ಐ.ಐ. ೧೧ ಚಿಂಚಲಿ, ಶಾ.ಸಂ-೨೪)

ಕೋಗಳಿ ಗ್ರಾಮದ ಹನುಮಂತನ ಗುಡಿಯ ಎದುರು ಇರುವ ಕ್ರಿ.ಶ. ೯೦೯ರ ವೀರಗಲ್ಲು ಶಾಸನದಲ್ಲಿ ರಾಷ್ಟ್ರಕೂಟರ ಅರಸನ (ಹೆಸರು ಹಾಳಾಗಿದೆ) ಕಾಲದಲ್ಲಿ ಹೆಗ್ಗಡೆ ತೊಮ್ಮನೆಂಬುವವನು ಕಾದಿ ಸತ್ತ. ಅವನ ಹೆಂಡತಿ ಬಳಕ್ಕೆ ಈ ವೀರಗಲ್ಲು ಶಾಸನವನ್ನು ನಿಲ್ಲಿಸಿದಳು. (ಕ.ವಿ.ವಿ.ಶಾ.ಸಂ-೧, ಹಗರಿಬೊಮ್ಮನಹಳ್ಳಿ-೧೪)

ಕಲಘಟಗಿ ತಾಲೂಕಿನ ತಂಬೂರು ಗ್ರಾಮದ ಬಸವಣ್ಣ ದೇವಾಲಯದ ಹೊರಗಿರುವ ಕ್ರಿ.ಶ. ೧೦ನೆಯ ಶತಮಾನದ ವೀರಗಲ್ಲು ಶಾಸನದಲ್ಲಿ ತುಣುಕು ಸಾಸಿರ್ವರ ಅನುಮತಿಯಿಂದ ಮರಣ ಹೊಂದಿದ ಯೋಧನ ಸ್ಮರಣಾರ್ಥವಾಗಿ ಆತನ ಮೈದುನ ವೀರಗಲ್ಲು ನಿಲ್ಲಿಸಿದ ಉಲ್ಲೇಖವಿದೆ. (ಧಾರವಾಡ ಜಿಲ್ಲೆಯ ಶಾಸನ ಸೂಚಿ, ಕಲಬುರ್ಗಿ ಎಂ.ಎಂ., ೧೯೭೫, ಶಾ.ಸಂ-೪೦೧)

ಈ ವೀರಗಲ್ಲು ಶಾಸನದ ವಿಶೇಷವೆಂದರೆ ಸೂಳೆಯೊಬ್ಬಳು ವೀರಗಲ್ಲನ್ನು ನಿಲ್ಲಿಸಿರುವುದು. ಇದರ ಪೂರ್ವದಲ್ಲಿ ಸೂಳೆಯರೂ ದಾನ, ದತ್ತಿ ನೀಡಿ ಖ್ಯಾತ ಪಡೆದ ಉದಾಹರಣೆಗಳಿವೆ. ಉಣಕಲ್ಲಿನ ಗ್ರಾಮದ ಪ್ರಾಚೀನತೆಯು ಈ ಶಾಸನದಿಂದ ತಿಳಿದುಬರುತ್ತದೆ. (ಹುಬ್ಬಳ್ಳಿ ತಾಲೂಕಿನ ಶಾಸನಗಳು (ಸಂ), ಹನುಮಾಕ್ಷಿ ಗೋಗಿ, ೨೦೦೪, ಪುಟ-೧೯೧)

ಯರಗೇರಿ ಹನುಮಂತ ದೇವಾಲಯದ ಎದುರು ಇರುವ ವೀರಗಲ್ಲು ಶಾಸನದ ಕಾಲ ಉಲ್ಲೇಖವಿಲ್ಲ, ಅರ್ಥ ಸ್ಪಷ್ಟವಿಲ್ಲ. ಯರಗೇರಿ ಮೇಲಗಿರಿಗೌಡನ ಮಗನು ಕಟ್ಟಿಸಿದಂತೆ ತಿಳಿಯುತ್ತದೆ. (ಕವಿಹಂ. ಶಾ.ಸಂ-೨, ಕುಷ್ಟಗಿ-೨೪)

ನೀಲಗುಂದ ರಾಮಲಿಂಗ ದೇವಾಲಯದ ಎದುರು ನಿಲ್ಲಿಸಿರುವ ವೀರಗಲ್ಲು ಶಾಸನದ ಕಾಲ ಕ್ರಿ.ಶ. ೧೧೦೬. ಚಾಗಲದೇವಿ ಎಂಬುವವಳು ದಾಳಿಯಿಟ್ಟಾಗ ಹೋರಾಟದಲ್ಲಿ ಚಾವಗಾವುಂಡ ಮತ್ತು ಹೊಲಿಗಾವುಂಡರು ವೀರ ಮರಣವನ್ನಪ್ಪುವರು. ದಾಳಿಯಿಟ್ಟ ಚಾಲಗದೇವಿ ಎಂಬುವವಳು ತೊಜಗಲೆನಾಡಿನ ಸಾಮಂತನ ಹೆಂಡತಿಯಾಗಿದ್ದಳು. ಈ ವೀರಗಲ್ಲು ಶಾಸನವನ್ನು ಕೆತ್ತಿದವನು ಸರಸ್ವತೀ ಗಣದಾಸಿಯಾದ ಚಾವುಣ್ಡೋಜ ಎಂದು ಉಲ್ಲೇಖಿಸಿದೆ. (ಕವಿಹಂ. ಶಾ.ಸಂ-೯, ಬಾಗಲಕೋಟೆ-೨೪)

ಕಟಗೇರಿಯ ಕೆ.ವಿ.ವಿ.ಎಸ್. ಹೈಸ್ಕೂಲು ಆವರಣದಲ್ಲಿನ ವೀರಗಲ್ಲಿನ ಪಾಠವು ತ್ರುಟಿತವಾಗಿದ್ದು, ಚಾವೆಯ ನಾಯ್ಕನ ಮಗನಾದ ಕಲ್ಲ ಮತ್ತು ಈತನ ಅಣ್ಣನ ಮಗನಾದ ಸಂಕಯಖರು ಕಡಕೆರೆಯ ಮಹಾಜನರ ಕೋರಿಕೆಯಂತೆ ಬಾದಾಮಿಯ ದಾರಿಯಲ್ಲಿ ಕಳ್ಳರೊಡನೆ ಹೋರಾಡಿ ಮಡಿಯುತ್ತಾರೆ. ಗ್ರಾಮದ ಮುಖಂಡರು ಇವರ ವೀರತನಕ್ಕೆ ಮೆಚ್ಚಿ ೧೨ ಮತ್ತರ ಹೊಲವನ್ನು ದಾನವಾಗಿ ನೀಡಿರುವರು. ಕಟಗೇರಿಯಲ್ಲಿ ವೀರಗಲ್ಲನ್ನು ಹಾಕಿಸಿದ್ದು, ಆದಿ ಅಗ್ರಹಾರ ಬಣಂಜರ ಮೂಲ ಪಟ್ಟಣ (ಬಣಂಜದಾರಿ ಪಟ್ಟಣಂ) ಎಂದು ಕರೆದಿದೆ. ಇದು ಕ್ರಿ.ಶ. ೧೧೧೦ನೆಯ ಶತಮಾನದಾಗಿದೆ. (ಕವಿಹಂ. ಶಾ.ಸಂ–೯, ಬಾದಾಮಿ–೩೩)

ಬಾದಾಮಿ ತಾಲೂಕಿನ ನಂದಿಹಾಳ ಗ್ರಾಮದ ಮಾರುತಿ ದೇವಾಲಯದಲ್ಲಿನ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲಿನ ೨೮ ಸಾಲಿನ ಶಾಸನ ಪಾಠವಿದ್ದು, ಇಡೀ ಜಿಲ್ಲೆಯಲ್ಲೇ ದೊರೆತ ದೀರ್ಘ ವೀರಗಲ್ಲು ಶಾಸನ ಇದಾಗಿದೆ. ಗವಲೂರ ಮೂಲಕ ಗಾವುಂಡ ಮತ್ತು ಬೀರಗಾವುಂಡ ಮತ್ತು ಗ್ರಾಮದ ಎಂಟು ಹಿಟ್ಟುಗಳು ಕೂಡಿಕೊಂಡು ಬಸವಂತನಿಗೆ ಹಿರಿಯ ಹೇರು, ಕುರಿದೆರೆ ಮತ್ತು ಕೆಲವು ತೆರಿಗೆಗಳನ್ನು ದಾನ ನೀಡಿದಂತೆ ವಿವರವಿದೆ.

ಕಲಘಟಗಿ ತಾಲೂಕಿನ ತಂಬೂರು ಗ್ರಾಮದ ಊರ ಅಗಸಿ ಕಟ್ಟೆ ಬಳಿಯಲ್ಲಿ ಕ್ರಿ.ಶ. ೧೧೫೯ರ ವೀರಗಲ್ಲು ಶಾಸನವಿದೆ. ಈ ಶಾಸನದಲ್ಲಿ ಗಾವಣಿಗ ಕುಲತಿಕ ಸಿಡಿಲ ಕೇತನನ ಪುತ್ರ ಸಾಮಂತ ಮೂಲಕರಸನ ನೆಚ್ಚಿನ ಆಳು ಜೋಳವಾಳಿಯ ಕ್ರಮದಿಂದ ಸುರಲೋಕವನ್ನು ಹೊಂದಿದನು. ವೀರನ ಹೆಸರು ದಾಖಲಾಗಿಲ್ಲ. ಆತನ ಮರಣದ ನಂತರ ಆತನ ತಂದೆ ಸಿಡಿಲಕೇತ ತಾಯಿ ನಾಗಿಯಕ್ಕ ಮತ್ತು ಆತನ ಅಣ್ಣ ಅಜಣನು ಈ ವೀರಗಲ್ಲು ನಿಲ್ಲಿಸಿದನು (ದ ಕದಂಬಾಸ್ ಆಫ್ ಗೋವಾ ಇನ್ಸ್‌ಕ್ರಿಪಷನ್, ಗುರುವ ಆರ್.ಎನ್. (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ೧೯೬೯, ಪು–೫೯೩)

ಜಗವೆಲ್ಲ ಮೆಚ್ಚುವಂತೆ ಶತ್ರು ಬಲವನ್ನು ಇರಿದು ಕೊಂದು ಮೆಚ್ಚುಗೆಯನ್ನು ಪಡೆದನೆಂದು ಶಾಸನ ಹೇಳುತ್ತದೆ. ಕಲ್ಲು ಕುಟಿಗರ ಬಲ್ಲನೆಂಬುವನು ಈ ವೀರಗಲ್ಲು ನಿರ್ಮಿಸಿದಂತೆ ತಿಳಿದುಬರುತ್ತದೆ. (ಕವಿಹಂ. ಶಾ.ಸಂ–೯, ಬಾದಾಮಿ–೨)

ವರೂರ ಹನುಮಾನ್ ದೇವರ ಗುಡಿಯ ಮುಂದೆ ನಿಲ್ಲಿಸಿದ ವೀರಗಲ್ಲು ಶಾಸನ ಕ್ರಿ.ಶ. ೧೨ನೆಯ ಶತಮಾನದಾಗಿದ್ದು, ನೂಲ್ವಿಯ ಅಧಿಕಾರಿಯೂ ಮಾಂಡಳಿಕನೂ ಆದ ಬಯಿರ ಖಂಡೇರಾಯ ಸಾಗರಸರು ಬಳಗಲೆಯ ಮಾಂಡಳಿಕ ಹಿರುಗಿ ದೇವನೊಂದಿಗೆ ನಡೆಸಿದ ಕಾಳಗದಲ್ಲಿ ಸಂಗರಸರ ಸಿಬೆಯ ಮಗ ಎಲಿವಳೆಯ ಬಿಜ್ಜೆಯ ಸಂಕಯ್ಯನವರು ಸತ್ತುದನ್ನು ಮತ್ತು ಬಹುಶಃ ಆತನ ಹೆಂಡತಿ ವೀರಗಲ್ಲು ನಿಲ್ಲಿಸಿದುದ್ದನ್ನು ತಿಳಿಸುತ್ತದೆ.

ಕ್ರಿ.ಶ. ೧೨೮೭ರ ಲಕ್ಷ್ಮೇಶ್ವರ ಶಾಸನವು ಯಾದವ ದೊರೆ ರಾಮಚಂದ್ರನ ಕಾಲಕ್ಕೆ ಸೇರಿದ್ದು ಇದು ತ್ರುಟಿತವಾಗಿದೆ. ಮುಮ್ಮಡಿ ಸಿಂಗ ನಾಯಕನ ಮೇಲೆ ಯುದ್ಧವನ್ನು ಮಾಡಲು, ಆಗ

ಹುಲಿಗೆರೆಯ ಸೈನ್ಯಾಧಿಪತಿಯಾಗಿ ಹೋಗಿದ್ದ ದಾಮನಾಯಕ ಆ ಹೋರಾಟದಲ್ಲಿ ಮಡಿದ ಸುದ್ದಿಯನ್ನು ಹೇಳುತ್ತದೆ. ಅವನ ನೆನಪಿಗಾಗಿ ಗ್ರಾಮದ ಮುಖಂಡರು ವೀರಗಲ್ಲನ್ನು ಹಾಕಿಸಿದ್ದು, ಈ ಶಾಸನದಿಂದ ತಿಳಿದುಬರುತ್ತದೆ. (ಎಸ್.ಐ.ಐ.-೨೦, ಲಕ್ಷ್ಮೇಶ್ವರ, ಶಾ.ಸಂ-೨೨೨)

ಕುಮ್ಮಟದುರ್ಗದ ದಕ್ಷಿಣ ಕಣಿವೆಯಲ್ಲಿ ಬೈಚಪ್ಪನ ಅರಮನೆ ಮುಂದೆ ಇರುವ ವೀರಗಲ್ಲು ಶಾಸನ. ವೀರ ಕಂಪಿಲದೇವನು ಕುಮ್ಮಟದಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ಸುರತ್ರಾಣನ (ಸುಲ್ತಾನನು) ದಳವು ನೇಮಿಯ ನೇತೃತ್ವದಲ್ಲಿ ಬಂದು ಯುದ್ಧ ಮಾಡಿದಾಗ ಕಾಳಗದಲ್ಲಿ ಗಡೆ ಸಿಂಗನಾಯ್ಕನ ತಂಮ್ಮ ಕಾಮಿನಾಯ್ಕ ಹೋರಾಡಿ ಸಾಯುತ್ತಾನೆ. ಅವನ ಅಕ್ಕ ಮತ್ತು ಅಳಿಯ ಸೇರಿ ವೀರಗಲ್ಲು ಹಾಕಿಸುತ್ತಾರೆ. ಈ ಶಾಸನವನ್ನು ರಚಿಸಿದವನು ಮೈದುನ ಮಾದೆಯ ಹೆಗಡೆ. ಇದರ ಕಾಲ ೧೩ನೆಯ ಶತಮಾನದಾಗಿದೆ. (ಕವಿಹಂ. ಶಾ.ಸಂ-೨, ಕೊಪ್ಪಳ-೧೬೪)

ನಿಟ್ಟೂರು ಕಲ್ಲೇಶ್ವರ ದೇವಸ್ಥಾನದ ಬಲಭಾಗದಲ್ಲಿ ಕ್ರಿ.ಶ. ೧೩ನೆಯ ಶತಮಾನದ ವೀರಗಲ್ಲು ಶಾಸನವಿದೆ. ಈ ವೀರಗಲ್ಲಿನಲ್ಲಿ ಹಲುವಾಗಿಲ ಬಡಗಮಟ್ಟ ಪೂಣೋಜಣನು ಕದಿರ ಮಿಡಿಯ ಕಾಳಗದಲ್ಲಿ ಸತ್ತ ಉಲ್ಲೇಖವಿದೆ. ಶಿವಕುಮಾರ ಚಿಕ್ಕೇಶನು ವೀರಗಲ್ಲನ್ನು ಹಾಕಿಸಿದ. ಕಲ್ಲೋಜನು ಈ ವೀರಗಲ್ಲನ್ನು ಕೆತ್ತಿದ. (ಕವಿಹಂ. ಶಾ.ಸಂ-೧, ಹರಪನಹಳ್ಳಿ-೫೩)

ಕಲಘಟಗಿ ತಾಲೂಕಿನ ತಂಬೂರಿನ ಬಸವಣ್ಣ ಗುಡಿಗೆ ಹೋಗುವ ದಾರಿಯಲ್ಲಿ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಇದೆ. ಈ ವೀರಗಲ್ಲು ಒಂದು ದೃಶ್ಯವನ್ನು ಮಾತ್ರ ಒಳಗೊಂಡಿದೆ. ಕುತೂಹಲವೆಂದರೆ ಮಡಿದ ವೀರನೂ ಮತ್ತು ತನ್ನ ಜತೆಯ ಸೈನ್ಯ ಪರಿವಾರದವರೂ ವೈರಿಗಳ ವಿರುದ್ಧ ಬಲಗಡೆಗೆ ಮುಖಮಾಡಿ ಹೋರಾಡುವ ಭಂಗಿಯಲ್ಲಿದ್ದಾರೆ. ಅವರು ಕೈಗಳಲ್ಲಿ ಬಿಲ್ಲುಗಳನ್ನು ಮುಂದಕ್ಕೆ ಚಾಚಿ ಹಿಡಿದಿದ್ದು, ಎಡಗೈಯಲ್ಲಿ ಡ್ಯಾಗರ್ (ಬಾಣದ ಬದಲು)ಗಳಿವೆ. ಬಲಗಡೆಯಲ್ಲಿ ಕೇವಲ ಮಡಿದ ವೈರಿಗಳು ಅಥವಾ ಕಳ್ಳರು ನೆಲಕ್ಕೆ ಬಿದ್ದಿರುವರು. ಮಡಿದ ವೀರನ ಎಡಭಾಗದಲ್ಲಿ ಕೆಳಗೆ ದನಕರುಗಳ ಚಿತ್ರಗಳಿವೆ. ಈ ದನಕರುಗಳ ಚಿತ್ರಗಳಿಂದ ದನಗಳನ್ನು ಕದಿಯಲು ಬಂದ ಕಳ್ಳರ ಸಂಗಡ ವೀರನು ಹೋರಾಡಿ ತನ್ನ ಪ್ರಾಣವನ್ನು ಕಳೆದುಕೊಂಡಿರುವುದು ವಿಧಿತವಾಗುತ್ತದೆ. ಇಂತಹ ವೀರಗಲ್ಲುಗಳನ್ನು ಗೋಗ್ರಹಣವೆಂದು ಕರೆಯುವರು. ಈ ಶಾಸನದ ಪ್ರಕಾರ ಅಲ್ಲಿಯ ಸಾವರ ಮಹಾಜನರ ಪರವಾನಗಿ ಪಡೆದು ವೀರನ ಮೈಯ್ದುನ ಈ ವೀರಗಲ್ಲನ್ನು ನಿಲ್ಲಿಸಿರಬೇಕೆಂದು ತಿಳಿಯುತ್ತದೆ. (ಇತಿಹಾಸ ದರ್ಶನ, ಸಂ-೧೯, ಪು-೭೭)

ಧಾರವಾಡ ತಾಲೂಕಿನ ಮನಗುಂಡ ಗ್ರಾಮದ ಸಿದ್ಧಲಿಂಗನ ಹಿತ್ತಲು ಬಳಿ ಕ್ರಿ.ಶ. ೧೪ನೆಯ ಶತಮಾನದ ವೀರಗಲ್ಲು ಇದೆ. ಈ ಶಾಸನದಲ್ಲಿ ಪೂರ್ವೋಕ್ತ ದಿನದಂದು ನಾಡಪ್ರಭು ಹಳಗೆರೆ ಮಲ್ಲಪ್ಪನು ಸ್ವರ್ಗಸ್ಥನಾಗಿದ್ದು, ಆತನ ನೆನಪಿಗಾಗಿ ಈ ವೀರಗಲ್ಲು ಶಾಸನವನ್ನು ನಿಲ್ಲಿಸಲಾಗಿದೆ. (ಎಸ್.ಐ.ಐ.-೧೫, ಶಾ.ಸಂ-೬೫೧)

## ಅಧ್ಯಾಯ : ೩

# ವೀರಗಲ್ಲುಗಳ ವಿಂಗಡನೆ

---

೩.೧. ರಾಷ್ಟ್ರಕೂಟರ ಕಾಲದ ಶಾಸನಸಹಿತ ವೀರಗಲ್ಲುಗಳು

೩.೨. ರಾಷ್ಟ್ರಕೂಟರ ಕಾಲದ ಶಾಸನರಹಿತ ವೀರಗಲ್ಲುಗಳು

# ಅಧ್ಯಾಯ : ಮೂರು

# ರಾಷ್ಟ್ರಕೂಟರ ಕಾಲದ ವೀರಗಲ್ಲುಗಳು

**ವೀರಗಲ್ಲುಗಳ ವಿಂಗಡಣೆ :**

ಅಭ್ಯಾಸದ ದೃಷ್ಟಿಯಿಂದ ವೀರಗಲ್ಲುಗಳ ವಿಂಗಡಣೆ ಮಾಡುವಲ್ಲಿ ಅರಸು ಮನೆತನಗಳನ್ನು ಗಮನದಲ್ಲಿಟ್ಟುಕೊಳ್ಳುವುದಕ್ಕಿಂತಲೂ ಹೋರಾಟ, ಪ್ರಭೇದಗಳನ್ನು ಗಮನದಲ್ಲಿಟ್ಟುಕೊಳ್ಳುವುದು ಸೂಕ್ತವೆಂದು ತೋರುತ್ತದೆ. ವೀರನಾದವನು ಯಾವುದೇ ರೀತಿಯ ವೀರಕೃತ್ಯದಲ್ಲಿ ಮಡಿದಿರಬಹುದು, ಆ ಕೃತ್ಯದ ಸಂಪೂರ್ಣ ಚಿತ್ರಣವನ್ನು ಪುನಾರಚಿಸಬೇಕಾದರೆ ಕರ್ನಾಟಕದಲ್ಲಿ ಕಾಲದಿಂದ ಕಾಲಕ್ಕೆ ಆದ ಬದಲಾವಣೆಗಳನ್ನು ಗಮನಿಸಬೇಕಾಗುತ್ತದೆ. ಆದ್ದರಿಂದ ಹೀಗೆ ಮಾಡುವಲ್ಲಿ ಸುಮಾರು ಎಂಟನೆಯ ಶತಮಾನದಿಂದ ಹದಿನೆಂಟನೆಯ ಶತಮಾನದವರೆಗೆ ಉತ್ತರ ಕರ್ನಾಟಕದ ಪ್ರದೇಶದಲ್ಲಿ ದೊರೆಯುವ ಎಲ್ಲಾ ವೀರಗಲ್ಲುಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಗಮನಿಸಿದ್ದೇನೆ.

**ರಾಷ್ಟ್ರಕೂಟರ ಕಾಲದ ವೀರಗಲ್ಲುಗಳು :**

ಉತ್ತರ ಕರ್ನಾಟಕದ ಭಾಗದಲ್ಲಿ ರಾಷ್ಟ್ರಕೂಟರ ಕಾಲದ ಸುಮಾರು ೬೪ ವೀರಗಲ್ಲುಗಳು ಸಿಕ್ಕಿವೆ. ಈ ವೀರಗಲ್ಲುಗಳಲ್ಲಿ ಸಾಮಾನ್ಯವಾಗಿ ಹಂತಗಳಲ್ಲಿ ಹೋರಾಟದ ದೃಶ್ಯ, ಮಡಿದ ವೀರನನ್ನು ಸ್ವರ್ಗಲೋಕಕ್ಕೆ ಅಪ್ಸರೆಯರು ಒಯ್ಯುತ್ತಿರುವ ದೃಶ್ಯ ಮತ್ತು ಮಡಿದ ವೀರ ಸ್ವರ್ಗಲೋಕದಲ್ಲಿ ತಂಗಿರುವುದನ್ನು ಸಾಮಾನ್ಯವಾಗಿ ಕಾಣಬಹುದು. ವೀರನ ಹೋರಾಟ ದೃಶ್ಯದಲ್ಲಿ ಚಿತ್ರ ದೊಡ್ಡದಾಗಿರುತ್ತದೆ. ಆತನನ್ನು ಕೆಳಹಂತದ ಶಿಲ್ಪದ ಬಲ ಭಾಗದಲ್ಲಿ ಚಿತ್ರಿಸುವುದು ರೂಢಿ. ಈ ದೃಶ್ಯದಲ್ಲಿ ವೀರನ-ಶತ್ರುಗಳ ವಸ್ತ್ರಾಭರಣ, ಆಯುಧ, ದೇಹಾಂಗ ವಿನ್ಯಾಸ, ಛತ್ರಿ-ಚಾಮರ ವಿಭಿನ್ನ ಸೈನ್ಯಗಳ ವಿವರಗಳಿರುತ್ತವೆ. ಸಾಮಾನ್ಯವಾಗಿ ಕತ್ತಿ ಡೊಂಕಾಗಿರುತ್ತದೆ. ಗುರಾಣಿ

ಆಯತಾಕಾರವಾಗಿದ್ದು, ದೊಡ್ಡ ಬಿಲ್ಲು ಬತ್ತಳಿಕೆಯಲ್ಲಿದ್ದು, ಮಿತ ವಸ್ತ್ರಾಭರಣಗಳಿವೆ. ಕಿರೀಟ ಧರಿಸಿದ ಅಥವಾ ಯಜ್ಞೋಪವೀತ ಧರಿಸಿದ ವೀರ, ಕಾಲ್ದಳ, ಕುದುರೆಗಳು ಸಾಮಾನ್ಯ. ಅಪರೂಪಕ್ಕೆ ಗಜದಳ ಕಾಣುತ್ತವೆ. ಕೆಲವೊಮ್ಮೆ ರಾಜ ಚಿಹ್ನೆಯುಳ್ಳ ಧ್ವಜ ಸ್ತಂಭಗಳಿವೆ. ಅಂಥವುಗಳಲ್ಲಿ ಆನೆ ಮತ್ತು ನಂದಿಯ ಧ್ವಜ ಸ್ತಂಭಗಳು ಈ ಕಾಲದಲ್ಲಿ ಕಾಣಿಸಿವೆ. ಕೆಲವೊಮ್ಮೆ ಹೋರಾಟದ ದೃಶ್ಯವನ್ನು ಎರಡು ಹಂತಗಳಲ್ಲಿ ಚಿತ್ರಿಸಲಾಗಿದೆ. ಅಪರೂಪಕ್ಕೆ ವೀರನು ವೈರಿಗಳ ವಿರುದ್ಧ ಹೋರಾಡುವುದನ್ನು ಶಿಲ್ಪದ ಎಡಭಾಗದಲ್ಲಿ ಚಿತ್ರಿಸಲಾಗಿದೆ. ಕೆಲವೊಮ್ಮೆ ಯುದ್ಧದಲ್ಲಿ ಮಹಿಳೆಯರ ಮಾನ ರಕ್ಷಣೆ ಮಾಡಿದ ಅಂಶಗಳಿವೆ. ವೈರಿಯು ವೀರನ ಪಾದಕ್ಕೆ ನಮಸ್ಕರಿಸುವ ಚಿತ್ರಗಳೂ ಇವೆ. ಬತ್ತಳಿಕೆಯನ್ನೂ ಹೊತ್ತವರು ಇದ್ದಾರೆ. ಡೊಂಕು ಕತ್ತಿಗಳನ್ನು ವೀರನ ಪರಿವಾರದವರು ಹಿಡಿದುಕೊಂಡಿದ್ದರೆ, ವೈರಿ ಪಡೆಯವರು ಕೆಲವೊಮ್ಮೆ ಬಿಲ್ಲುಗಳನ್ನು ಹಿಡಿದಿಡುವರು. ಕಳ್ಳರು ಕದ್ದ ಹಸುಗಳನ್ನು ವೀರನು ಬಿಡಿಸಿದ್ದರೆ ಆ ಹಸುಗಳನ್ನು ಶಿಲ್ಪದ ಎಡಗಡೆಯಿಂದ ಬಲಕ್ಕೆ ಬರುವುದನ್ನು ಅಥವಾ ವೀರನ ಬಲಬದಿಗಳಲ್ಲಿ ಇರುವುದನ್ನು ತೋರಿಸಲಾಗಿದೆ. ಬಾಣಗಳು ವೀರನ ಮೈಗೆ ನೆಟ್ಟ ಉದಾಹರಣೆಗಳು ಕಡಿಮೆ. ಆದರೆ ಗುರಾಣಿಗೆ ನೆಟ್ಟ ಉದಾಹರಣೆಗಳು ಹೆಚ್ಚಾಗಿವೆ. ವೀರನ ತಾತ್ವಿಕ ನೆಲೆಗಟ್ಟು ಯಾವ ರೀತಿಯಲ್ಲಿ ಸಮಾಜ ಸ್ಪಂದಿಸುತ್ತಿತ್ತು ಎನುವುದನ್ನು ಕಾಣಬಹುದು. ದೇಶಕ್ಕಾಗಿ, ಊರಿಗಾಗಿ, ರಾಜ್ಯಕ್ಕಾಗಿ ವೀರನು ವೈರಿಗಳ ವಿರುದ್ಧ, ಕಳ್ಳರ ವಿರುದ್ಧ ಹೋರಾಡಿ ಮಡಿಯುವುದು ಪುಣ್ಯದ ಕೆಲಸವೆಂದು ನಂಬಲಾಗಿತ್ತು. ವೀರ ಪರಾಕ್ರಮವನ್ನು ರುದ್ರ, ಭೀಮ, ಭೈರವ, ಯಮ, ಅರ್ಜುನ, ಭೀಷ್ಮ, ಅಭಿಮನ್ಯು ಮುಂತಾದ ಶಾಸನಗಳು ಹೊಗಳಿವೆ. ಅವು ವೀರತ್ವವನ್ನು ತಂದುಕೊಳ್ಳಲು ಸ್ಫೂರ್ತಿಯಾಗಿದ್ದವು. ಬಾದಾಮಿ ಚಾಲುಕ್ಯರ ಕಾಲದ ಕಪ್ಪೆ ಆರಭಟ್ಟ ಕ್ರಿ.ಶ. ೭೦೦ರ ಶಾಸನದಲ್ಲಿ ಕೇವಲ ಜೀವಿಸುವುದು ಜೀವನದ ಮುಖ್ಯ ಗುರಿಯಲ್ಲ, ಜೀವನದಲ್ಲಿ ಪ್ರಾಣವು ತಾತ್ಕಾಲಿಕ ಅದು ತೃಣಕ್ಕೆ ಸಮ. ಆದರೆ ಮಾನವನಲ್ಲ, ಸಾಧು ಜನರಿಗೆ ಸಾಧುವಾಗಿರಬೇಕು. ಅದೇ ರೀತಿಯಲ್ಲಿ ಕೆಣಕಿದವರ ವಿರುದ್ಧ ಹೋರಾಡಬೇಕು. ಇದು ಬಂಧನದಿಂದ ವಿಮುಕ್ತವೆಂದು ಉದ್ಗರಿಸಲಾಗಿದೆ.

ರಾಷ್ಟ್ರಕೂಟರ ಕಾಲದ ಈ ಭಾಗದ ವೀರಗಲ್ಲುಗಳಲ್ಲಿ ಎರಡನೇ ದೃಶ್ಯದಲ್ಲಿ ಮಡಿದ ವೀರನನ್ನು ಅಪ್ಸರೆಯರು ಅವನ ಕೈಗಳನ್ನು ತಮ್ಮ ಹೆಗಲ ಮೇಲೆ ಹಾಕಿಕೊಂಡು ಆಕಾಶದಲ್ಲಿ ಹಾರುತ್ತಿರುವುದು ಸಾಮಾನ್ಯ ಚಿತ್ರಣ. ಅವರನ್ನು ಗಂಧರ್ವರು ವಾದ್ಯ, ಮೇಳ, ಸಂಗೀತ, ನೃತ್ಯದೊಂದಿಗೆ ಹಾರವನ್ನು ಹಾಕಿ ಶುಭ ಕೋರುತ್ತ ಸ್ವರ್ಗಲೋಕಕ್ಕೆ ಒಯ್ಯುವ ದೃಶ್ಯವನ್ನು ಮನಮುಟ್ಟುವ ಹಾಗೆ ಚಿತ್ರಿಸಲಾಗಿದೆ. ಅವರು ಆಕಾಶದಲ್ಲಿ ಹಾರುತ್ತಿರುವುದನ್ನು, ಆಕಾಶದ ಚಿತ್ರವನ್ನು, ಮೋಡ ಪಟ್ಟಿಕೆಗಳು ಸುತ್ತ ಆವರಿಸಿ ಅಥವಾ ಮೋಡಗಳು ಚಲಿಸುತ್ತಿರುವಂತೆ ತೋರಿಸಲಾಗಿದೆ. ಸುರಕನ್ಯೆಯರನು (ಅಪ್ಸರೆಯರು) ಒಲಿಸಿಕೊಂಡು ವೀರನು ಸ್ವರ್ಗವನ್ನು ಪ್ರವೇಶಿಸಿದನೆನ್ನುವ ವಿಚಾರ ವೀರಗಲ್ಲು ಶಾಸನಗಳಲ್ಲೂ ಉಕ್ತವಾಗಿವೆ. ಹಾಗೂ ಅಪ್ಸರೆಯರು ಹೇಗೆ ವೈಭವದಿಂದ ವೀರನನ್ನು ಸ್ವರ್ಗಕ್ಕೆ

ಕೊಂಡೊಯ್ದರೆಂದು ಹೇಳಿವೆ. ಈ ಕಾಲದಲ್ಲಿ ಅಪ್ಸರೆಯರು ಸ್ವರ್ಗಲೋಕಕ್ಕೆ ವೀರನನ್ನು ವಿಮಾನದಲ್ಲಿ ಕೂಡಿಸಿ ಒಯ್ಯುವ ಪದ್ಧತಿ ರೂಢಿಯಲ್ಲಿಲ್ಲದಿರುವುದು ತಿಳಿದುಬರುತ್ತದೆ.

ವೀರನ ಪರಾಕ್ರಮಕ್ಕೆ ದೊರೆತ ಸಂತಸದಿಂದ ಅಪ್ಸರೆಯರು ಹೂವಿನ ಮಳೆಗರೆದರೆ, ಗಂಧರ್ವರು ಹಾಡುತ್ತಿರುವುದು, ದೇವತೆಗಳು ಆಕಾಶದಲ್ಲಿ ವೀರನ ಪರಾಕ್ರಮವನ್ನು ವೀಕ್ಷಿಸಿದರೆಂಬ ಸಂಗತಿಗಳೂ ಕಾಣುತ್ತವೆ. ಸ್ವರ್ಗಾರೋಹಣದಲ್ಲಿ ಅಪ್ಸರೆಯರು ವೀರರನ್ನು ಸಾಮಾನ್ಯವಾಗಿ ಎದುರಿನಿಂದ ಅಥವಾ ಎಡಗಡೆಗೆ ಒಯ್ಯುವುದನ್ನು ಕಾಣಬಹುದು. ವಿರಳವಾಗಿ ವೀರನನ್ನು ಅಪ್ಸರೆಯರು ಶಿಲ್ಪದ ಬಲಭಾಗದ ಕಡೆ ಒಯ್ಯುವುದನ್ನು ಚಿತ್ರಿಸಲಾಗಿದೆ. ಅಪ್ಸರೆಯರು ಒಂದು ಕೈಯಲ್ಲಿ ವೀರನನ್ನು ಇನ್ನೊಂದು ಕೈಯಲ್ಲಿ ಚೌರಿಯನ್ನು ಹಿಡಿದು ಆಕಾಶದಲ್ಲಿ ಹಾರುವುದು ಸಾಮಾನ್ಯ. ಆದರೆ ಇನ್ನೊಂದು ಕೈಯಲ್ಲಿ ಕುಂಭವನ್ನು ಹಿಡಿದಿರುವುದುಂಟು. ಇಬ್ಬರು ಅಪ್ಸರೆಯರು ವೀರನನ್ನು ಒಯ್ಯುವುದು ಸಾಮಾನ್ಯ. ಆದರೆ ಆರು ಮಂದಿ ವಾದ್ಯ ಮೇಳದಲ್ಲಿ ತುತ್ತೂರಿ, ಕಹಳೆ ಮತ್ತು ಕೊಳಲು ಊದುವವರು, ಜಾಗಟೆ, ಮೃದಂಗ, ವೀಣೆ, ಮದ್ದಳೆ, ತಾಳ ಬಾರಿಸುವವರನ್ನೂ ಶಿಲ್ಪಗಳಲ್ಲಿ ಕಾಣಬಹುದು.

ಮೂರನೆಯ ಹಂತದ ದೃಶ್ಯದಲ್ಲಿ ಮಡಿದ ವೀರನು ಸ್ವರ್ಗದಲ್ಲಿ ದೇವಲೋಕದಲ್ಲಿ ಆಸೀನನಾಗಿರುವುದು ಸಾಮಾನ್ಯ. ಅಪ್ಸರೆಯರಿಂದ ತನಗೆ ಬೇಕಾದ ಇಷ್ಟಾರ್ಥಗಳನ್ನು ಪಡೆದು ಸಂತೃಪ್ತನಾಗಿರುವುದು ವೀರಗಲ್ಲುಗಳ ಪಾಠದಿಂದ ತಿಳಿದುಬರುವುದು. ಈ ದೃಶ್ಯವನ್ನು ಸಾಮಾನ್ಯವಾಗಿ ಚೈತ್ರಗವಾಕ್ಷದ ನಡುವೆ ವಿರಳವಾಗಿ ಪ್ರತ್ಯಕ್ಷ ಚಿತ್ರಪಟದಲ್ಲಿ ಹಾಕಿರುವುದನ್ನು ಕಾಣಬಹುದು. ವೀರನು ಕಮಲ ಹಿಡಿದು ವೇದಿಕೆ ಅಥವಾ ಸಿಂಹಾಸನದ ಮೇಲೆ ಕುಳಿತಿರುವ ಸಾಮಾನ್ಯ. ಅಪರೂಪವಾಗಿ ಆತನ ಒಂದು ಕೈಯನ್ನು ಆಶೀರ್ವಾದ ಭಂಗಿಯಲ್ಲಿ ತೋರಿಸಲಾಗಿದೆ. ಆತನ ಬದಿಗಳಲ್ಲಿ ಇಬ್ಬರು ಅಥವಾ ನಾಲ್ವರು ಅಪ್ಸರೆಯರು ಇರುವುದನ್ನು ಚಿತ್ರಿಸಲಾಗಿದೆ. ವೀರನು ಸಾಮಾನ್ಯವಾಗಿ ಸವ್ಯ ಲಲಿತಾಸನದಲ್ಲಿ ಕುಳಿತಿರುವನು. ವಿಮಾನಗಳಿಗೆ ಅರೆಗಂಬಗಳ ಒಂದು ಅಥವಾ ಎರಡು ಹಂತಗಳನ್ನು ಒಳಗೊಂಡಿದೆ. ಈ ಅರೆಗಂಬಗಳು ವಿವಿಧ ಶೈಲಿಯಲ್ಲಿವೆ. ಕೆಲವೊಮ್ಮೆ ಅವುಗಳ ಬುಡದಲ್ಲಿ ವೀರನಿಗೆ ಅಥವಾ ದೇವರಿಗೆ ನಮಸ್ಕರಿಸುವ ಭಕ್ತರನ್ನು ಚಿತ್ರಸಲಾಗಿದೆ. ಆದರೆ ಒಂದು ಶಿಲ್ಪದಲ್ಲಿ ಒಂದು ಅರೆಗಂಬದ ಬುಡದಲ್ಲಿ ಏಳು ಮುಖಲಿಂಗ ಇರುವುದನ್ನು ಚಿತ್ರಿಸಲಾಗಿದೆ. ಇನ್ನೊಂದು ಪಗೋಡ ಮಾದರಿಯ ಶಿಖರಗಳಿರುವುದು ಅಪರೂಪವೆನಿಸಿದೆ. ಶಿಲ್ಪಗಳ ಮೇಲ್ಭಾಗದಲ್ಲಿ 'ಶಾಲಾ' ಮಾದರಿಯ ವಿಮಾನವಿರುತ್ತದೆ. ಅದರಲ್ಲಿ ಶಿವಲಿಂಗ, ಗಣೇಶ, ನಂದಿ, ಮಹಿಷಾಸುರ ಮರ್ದಿನಿ, ನಟರಾಜ, ವಿಷ್ಣು, ಬ್ರಹ್ಮ, ನರಸಿಂಹ ಮುಂತಾದ ದೇವತೆಗಳನ್ನು ಚಿತ್ರಿಸಿರುವುದು ಸಾಮಾನ್ಯ. ಶಿಲ್ಪದ ಕೆಳಭಾಗದಲ್ಲಿ ವಿರಳವಾಗಿ ಈ ದೇವತೆಗಳನ್ನು ಚಿತ್ರಿಸಲಾಗಿದೆ.. ಈ ಚಿತ್ರಗಳಿಂದ ಮಡಿದ ವೀರನ ದೇವರ ಸಾನ್ನಿಧ್ಯದಲ್ಲಿರುವುದು ತಿಳಿದುಬರುತ್ತದೆ. ಕೆಲವೆಡೆ ವೀರನ ತಲೆಯ ಮೇಲೆ ಶಿವಲಿಂಗವನ್ನು ಚಿತ್ರಿಸಲಾಗಿದೆ. ಈ ಕಾಲದ

ಅಂತ್ಯದಲ್ಲಿ ಶಿವಲಿಂಗವನ್ನು ವೀರ ಅಥವಾ ಯತಿ ಆರಾಧಿಸುವುದನ್ನು ಚಿತ್ರಿಸಲಾಗಿದೆ. ಜೊತೆಯಲ್ಲಿ ಸ್ಥಾನಾಚಾರ್ಯನೊಬ್ಬ ಒಂದು ಕೈಯಲ್ಲಿ ಕಮಂಡಲವನ್ನು ಹಿಡಿದಿದ್ದರೆ ಇನ್ನೊಂದು ಕೈಯಲ್ಲಿ ಆಶೀರ್ವಾದ ಭಂಗಿಯಲ್ಲಿ ಹಿಡಿದಿರುವುದು ಅಪರೂಪವಾಗಿ ಕಾಣಬರುತ್ತದೆ.

**೩.೧. ರಾಷ್ಟ್ರಕೂಟರ ಕಾಲದ ಶಾಸನ ಸಹಿತ ವೀರಗಲ್ಲು :**

ಕಾಲದ ದೃಷ್ಟಿಯಿಂದ ಪ್ರಾಚೀನವಾದ ವೀರಗಲ್ಲೆಂದರೆ ಬಾದಾಮಿ ವಸ್ತುಸಂಗ್ರಹಾಲಯದಲ್ಲಿನ ಕ್ರಿ.ಶ. ೮ನೆಯ ಶತಮಾನದ ವೀರಗಲ್ಲು; ಇದರಲ್ಲಿ ಕಾಲದ ಉಲ್ಲೇಖವಿಲ್ಲ. ಲಿಪಿಯ ಆಧಾರದಿಂದ ಇದನ್ನು ರಾಷ್ಟ್ರಕೂಟರ ಕಾಲಕ್ಕೆ ಸೇರಿಸಬಹುದು. ಮೂರು ಸಾಲು ಶಾಸನವಿರುವ ಇದರಲ್ಲಿ,

ಸ್ವಸ್ತಿ ವಿಜಯ ನಾದೌತಾಪ್ಯಧಿಷ್ಠಾನದಾ ಶ್ರೀ ಮಹಾಚಾತು
ದ್ಯ ಸಮುದಯ ವಿ ಜೌಸಿರ್ವರ ಸಮುಯಂ ಅರತಳಱ...
ಪಗ ಯನನ್ದು ಗಗ್ಗರ ರಾಋಂಣ್ಣ ಸತ್ತುಕಾದಿ...

ಎಂದಿದೆ. ವಾತಾಪಿ ಸ್ಥಳದ ಚತುರ್ವೇದ ಸಮುದಾಯದ ಎರಡು ಸಾವಿರ ಸಮಯದ ತಳವಾರನಾದ ಗಗ್ಗರ ರಾಯಣ್ಣ ಹೋರಾಟದಲ್ಲಿ ಮಡಿದ ವಿಷಯವಿದೆ. (ಕವಿಹಂ. ಶಾ.ಸಂ.,೬-ಬಾದಾಮಿ-೩೩) ಹೋರಾಟದ ಕಾರಣ ತಿಳಿಯುವುದಿಲ್ಲ. ತಳವಾರ ಉದ್ಯೋಗವಾದ್ದರಿಂದ ಊರ ಉಳಿವಿಗಾಗಿ ಸತ್ತಿರಬಹುದು. ಇದರಲ್ಲಿ ಉಲ್ಲೇಖವಾಗಿರುವ 'ನಾಲ್ಕು ವೇದಗಳ ೨೦೦೦ ಸಮುದಾಯ' ಯಾವುದೆಂದು ತಿಳಿದುಬರುವುದಿಲ್ಲ. ಬಾದಾಮಿಯಲ್ಲಿದ್ದಿರಬಹುದಾದ ಮಹಾಜನರ ಗುಂಪನ್ನು ಅಥವಾ ಬ್ರಾಹ್ಮಣ ಸಮುದಾಯದ ಒಂದು ಶಾಖೆಯನ್ನು ಇದು ಸೂಚಿಸುತ್ತಿರಬಹುದು.

ಕಲ್ಲೆ ಗ್ರಾಮದ ಬಸವಣ್ಣ ದೇವಾಲಯದ ಹತ್ತಿರವಿರುವ ವೀರಗಲ್ಲು. ಬಯ್ಸರ ಸಬ್ಬಯನೆಂಬುವನು ದೊಡ್ಡವಾಡ ಊರಳಿವಿನಲ್ಲಿ ವೀರಸ್ವರ್ಗವೇರಿದನೆಂದು ಹೇಳುತ್ತದೆ. ಈ ವೀರಗಲ್ಲಿನಲ್ಲಿ ಸುಮಾರು ೮ನೆಯ ಶತಮಾನದ ಅಕ್ಷರಗಳಿವೆ. (ಧಾರವಾಡ ತಾಲೂಕಿನ ಶಾಸನಗಳು, (ಸಂ) ಕಲಬುರ್ಗಿ ಎಂ.ಎಂ., ಪುಟ-೩೧)

ಪುರಾತತ್ವ ವಸ್ತುಸಂಗ್ರಹಾಲಯದಲ್ಲಿಟ್ಟಿರುವ ವೀರಗಲ್ಲಿನ ಮೇಲೆ ವಾತಾಪಿಯ ನಾಲ್ಕು ವೇದಗಳ ಸಮುದಾಯವಾದ ೨೦೦೦ದ ತಳರನಾದ ಗಗ್ಗರ ರಾಯಿಣ್ಣ ಎಂಬುವವನು ಹೋರಾಟದಲ್ಲಿ ಸತ್ತಂತೆ ತಿಳಿಸುತ್ತದೆ. ಈ ಶಾಸನವು ಸುಮಾರು ಕಿ.ಶ. ೮ನೆಯ ಶತಮಾನಕ್ಕೆ ಸೇರಿದುದಾಗಿದೆ. (ಕವಿಹಂ. ಶಾ.ಸಂ.,೬-ಬಾಗಲಕೋಟೆ-೩೩)

ಹಲಗೇರಿ ದ್ಯಾಮವ್ವನ ದೇವಾಲಯದ ಆವರಣದಲ್ಲಿರುವ ವೀರಗಲ್ಲು ಶಾಸನ ಪಲ್ಗಿರಿಯ ಬ್ರಾಹ್ಮಣನಾದ ಸಾವಿರ್ಪಿ ಎಂಬುವವನು ಯುದ್ಧದಲ್ಲಿ ಹೋರಾಡಿ ಸತ್ತಂತೆ ತಿಳಿಸುತ್ತದೆ. ಇದು ಕ್ರಿ.ಶ. ೮ನೆಯ ಶತಮಾನದ ಲಿಪಿಯಲ್ಲಿದೆ. (ಕವಿಹಂ. ಶಾ.ಸಂ.,೨-ಕೊಪ್ಪಳ-೧೮)

ಧಾರವಾಡದ ಮೈಲಾರಲಿಂಗ ಬೆಟ್ಟದ ಉತ್ತರ ದಿಕ್ಕಿನ ಹೊಂಡದ ವೀರಭದ್ರ ದೇವಾಲಯದ ಹಿಂದಿರುವ ವೀರಗಲ್ಲು ಅಧಿಕ ತ್ರುಟಿತವಾಗಿದ್ದು, ಇದರ ಕೆಲವು ಭಾಗಗಳನ್ನು ಮಾತ್ರ ಓದಲು ಸಾಧ್ಯವಾಗುತ್ತದೆ. ಯುದ್ಧದಲ್ಲಿ ಭಾಗವಹಿಸಿದ ಪಡೆವಳ ದೇರಣ್ಣನ ಹಾಗೂ ಅಗ್ರಹಾರ ನವಿಲೂರಿನ ಉಲ್ಲೇಖವಿದ್ದುದು ತಿಳಿದುಬರುತ್ತದೆ. ಲಿಪಿ ಸ್ವರೂಪದ ದೃಷ್ಟಿಯಿಂದ ಈ ಶಾಸನದ ಕಾಲವನ್ನು ಸುಮಾರು ೯ನೆಯ ಶತಮಾನವೆಂದು ಪರಿಗಣಿಸಬಹುದು. (ಧಾರವಾಡ ತಾಲೂಕಿನ ಶಾಸನಗಳು, (ಸಂ) ಕಲಬುರ್ಗಿ ಎಂ.ಎಂ., ಪುಟ-೨೯)

ಕ್ರಿ.ಶ. ೯ನೆಯ ಶತಮಾನಕ್ಕೆ ಸೇರಿಸಬಹುದಾದ ರಾಷ್ಟ್ರಕೂಟರ ಕೊನೆಯ ಕಾಲಮಾನದ ಮೂರು ವೀರಗಲ್ಲುಗಳು ಐಹೊಳೆಯ ಹುಚ್ಚಮಲ್ಲಿಗುಡಿ ಸಮೀಪದ ಬಾವಿಯ ಬಳಿಯಿದೆ. ಒಂದು ವೀರಗಲ್ಲಿನಲ್ಲಿ 'ವಹಮಾನ ಬಗುದೇವಪ್ಪ ಬೆಸಗೆ ಇಳಿದೊರ್' ಎಂದಿದ್ದು ಬಗುದೇವಪ್ಪ ಹೇಳಿದನೆಂದೋ ಅಥವಾ ಬಗುದೇವಪ್ಪ ಮಡಿದನೆಂದೋ ಹೇಳಬಹುದು. ಇಲ್ಲಿನ ಪಾಠವನ್ನು 'ಬೆಸಗೆ ಇಳಿದೊರ್' ಎಂಬುದನ್ನು ಬೆಸಗೆಯಿದೊನ್ ಎಂದು ಊಹಿಸಬಹುದಾಗಿದೆ. ಮತ್ತೊಂದು ವೀರಗಲ್ಲು ಯಾವುದೋ ವೀರನನ್ನು ಸತ್ತನೆಂದು ತಿಳಿಸುತ್ತದೆ. ಮತ್ತೊಂದು ವೀರಗಲ್ಲು ಆಕಾಲ ವರ್ಷನು ರಾಜ್ಯವಾಳುವಾಗ ವೀರನೊಬ್ಬನು ಯುದ್ಧದಲ್ಲಿ ಮಡಿದನೆಂದು ಅಸ್ಪಷ್ಟವಾಗಿ ತಿಳಿಸುತ್ತದೆ.

ಹುಬ್ಬಳ್ಳಿ ಗೋಕುಲದ ಶಿವಾನಂದ ಕಲ್ಯಾಣ ಮಂಟಪದ ಕ್ರಿ.ಶ.ಸುಮಾರು ೯ನೆಯ ಶತಮಾನದ ವೀರಗಲ್ಲು ಇದೆ. ಈ ವೀರಗಲ್ಲು ಕಪ್ಪು ಶಿಲೆಯಿಂದ ರಚಿತವಾಗಿದ್ದು, ಅದರ ಮೇಲಿನ ಅರ್ಧಭಾಗದಲ್ಲಿ ವೀರನ ಚಿತ್ರವಿದೆ. ಕೆಳಗಿನ ಅರ್ಧಭಾಗದಲ್ಲಿ ನಾಲ್ಕು ಸಾಲುಗಳುಳ್ಳ ಶಾಸನವಿದೆ. ಅದು ಕನ್ನಡ ಭಾಷೆ ಲಿಪಿಯಲ್ಲಿದೆ. ಈ ಶಾಸನದ ಕೆಲವು ಅಕ್ಷರಗಳು ತ್ರುಟಿತವಾಗಿವೆ ಮತ್ತು ಅದರ ಮೇಲ್ಭಾಗ ಒಡೆದು ಹೋಗಿದೆ. ಈ ವೀರಗಲ್ಲಿನ ಮೇಲಿನ ಅರ್ಧಭಾಗದಲ್ಲಿರುವ ವೀರನ ಶಿಲ್ಪವು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಅರ್ಧ ವೃತ್ತಾಕಾರದ ಗುರಾಣಿಯನ್ನು ಮುಂದಕ್ಕೆ ಚಾಚಿ ಹಿಡಿದಿದ್ದು, ಅದಕ್ಕೆ ಅನೇಕ ಬಾಣಗಳು ತಾಗಿದ್ದು, ಅವು ಸಮನಾಂತರದಲ್ಲಿರುವುದನ್ನು ಚಿತ್ರಿಸಲಾಗಿದೆ. ಕೆಲವು ಬಾಣಗಳು ಅವನ ಎದೆಯಲ್ಲಿ ನೆಟ್ಟಿವೆ. ಹೀಗಾಗಿ ಶಿಲ್ಪದ ದೃಷ್ಟಿಯಿಂದ ಶಾಸನವು ವಿಶಿಷ್ಟವಾಗಿದೆ. ಈ ಶಾಸನದಲ್ಲಿ ಊಣ್ಕಲ್ಲಿನ ವೀರನೊಬ್ಬ ಕಳ್ಳರೊಂದಿಗೆ ಹೋರಾಡುತ್ತಾ ಮರಣವನ್ನಪ್ಪಿದ ನಿಮಿತ್ತ ಅವನ ಸ್ಮರಣಾರ್ಥವಾಗಿ ಅವನ ಸೂಳೆಯೊಬ್ಬಳು ಈ ವೀರಗಲ್ಲು ನೆಡಿಸಿದಳೆಂದು ಹೇಳಲಾಗಿದೆ. ಈ ವೀರಗಲ್ಲು ಶಾಸನದ ವಿಶೇಷವೆಂದರೆ ಸೂಳೆಯೊಬ್ಬಳು ವೀರಗಲ್ಲನ್ನು ನಿಲ್ಲಿಸಿರುವುದು. ಇದರ ಪೂರ್ವದಲ್ಲಿ ಸೂಳೆಯರು ದಾನ, ದತ್ತಿ ನೀಡಿ ಖ್ಯಾತಿಪಡೆದ ಉದಾಹರಣೆಗಳಿವೆ. ಆದರೆ ಸೂಳೆಯರು ವೀರಗಲ್ಲು ನಿಲ್ಲಿಸಿದ ಉದಾಹರಣೆಗಳಿಲ್ಲ. ಊಣ್ಕಲ್ಲು ಗ್ರಾಮದ ಪ್ರಾಚೀನತೆಯು ಈ ಶಾಸನದಿಂದ ತಿಳಿದುಬರುತ್ತದೆ. (ಹುಬ್ಬಳ್ಳಿ ತಾಲೂಕಿನ ಶಾಸನಗಳು, (ಸಂ) ಹನುಮಾಕ್ಷಿ ಗೋಗಿ, ೨೦೦೪, ಪುಟ-೧೯೧)

ಐಹೊಳೆ ಹುಚ್ಚಿಮಲ್ಲಿ ಗುಡಿಯ ಬಾವಿಯ ಹತ್ತಿರದಲ್ಲಿ ಕ್ರಿ.ಶ.ಸುಮಾರು. ೯ನೆಯ ಶತಮಾನದ ವೀರಗಲ್ಲು ಅರ್ಥ ಸ್ಪಷ್ಟನೆಯಿಲ್ಲ. ಬಗುದೇವನು ಬೆಸಗೆಯನ್ನಯ ಕೊಟ್ಟಂತೆ ಉಲ್ಲೇಖಿಸುತ್ತದೆ. (ಕವಿಹಂ. ಶಾ.ಸಂ–೯, ಹುನಗುಂದ–೨೬)

ಸಿರಸಪ್ಪಯ್ಯನ ಕೆರೆ ಬಳಿ ಕಟ್ಟೆಯ ಮೇಲಿನ ಕಲ್ಲಿನ ವೀರಗಲ್ಲು ಇದ್ದು, ರಾಷ್ಟ್ರಕೂಟರ ಕಾಲದ ಲಿಪಿಯನ್ನು ಹೊಂದಿರುವ ಈ ಶಾಸನ ೯ನೆಯ ಶತಮಾನದವಾಗಿದ್ದು, ರಟ್ಟ ರಾಜ್ಯದ ಮೇಲೆ ದಾಳಿ ನಡೆದಾಗ ಆಲಕಬಾದಿ ಎಂಬುವನು ಹೋರಾಡಿ ಸತ್ತ ಉಲ್ಲೇಖವಿದೆ. (ಕವಿಹಂ. ಶಾ.ಸಂ.,೨–ಕೊಪ್ಪಳ–೫೬)

ಮುಧೋಳ ಊರಿನ ಮಲ್ಲಿಕಾರ್ಜುನ ದೇವಾಲಯದ ಬಳಿ ಇರುವ ವೀರಗಲ್ಲು ಲಿಪಿ ಸಹಿತವಾಗಿದೆ. ಶ್ರೀಮನ್ನುಂ ಎಂಬುವವನು ಶ್ರೀಶುಭತುಂಗ ದೇವರ ದಯೆಯಿಂದ ಬೆಳ್ವೊಲ ಮೂನೂರನ್ನು ಆಳುತ್ತಿರಲು ಮುದುವೊಲನ್ನು ಸನ್ತಯನೆಂಬುವವನು ಮುತ್ತಿದಾಗ ಆ ಊರನಲ್ಲಿ ಸಮ್ಮಗಾರರ ಚಂದನೆಂಬುವನನು ಹೋರಾಡಿ ಮರಣಿಸಿದ ಉಲ್ಲೇಖವಿದೆ. ಈ ವೀರಗಲ್ಲು ಶಾಸನ ೯ನೆಯ ಶತಮಾನದಾಗಿದೆ. (ಕವಿಹಂ. ಶಾ.ಸಂ.,೨–ಯಲಬುರ್ಗಾ–೩೦)

ಯೆರಗೇರಿ ಹನುಮಂತ ದೇವಾಲಯದ ಎದುರು ಇರುವ ವೀರಗಲ್ಲು ಶಾಸನದ ಕಾಲ ಉಲ್ಲೇಖವಿಲ್ಲ. ಅರ್ಥ ಸ್ಪಷ್ಟವಿಲ್ಲ. ಯೆರಗೇರಿ ಮೆಲಗಿರಿಗೌಡನ ಮಗನು ಕಟ್ಟಿಸಿದಂತೆ ತಿಳಿಯುತ್ತದೆ. (ಕವಿಹಂ. ಶಾ.ಸಂ.,೨–ಕುಷ್ಟಗಿ–೨೪)

ಕೊಪ್ಪಳದ ಖಾದರಲಿಂಗನ ಗೋರಿಯ ಬಳಿ ತ್ರುಟಿತ ವೀರಗಲ್ಲು ಇದೆ. ರಾಷ್ಟ್ರಕೂಟ ಅರಸ ನೃಪತುಂಗನು ಆಳುತ್ತಿದ್ದಾಗ ವೀರನೊಬ್ಬ ಯುದ್ಧದಲ್ಲಿ ಹೋರಾಡಿ ಸತ್ತಂತೆ ತಿಳಿಯುತ್ತದೆ . (ಕವಿಹಂ. ಶಾ.ಸಂ.,೨–ಕೊಪ್ಪಳ–೩೨)

ಕಡಬಗೆರೆ ಗ್ರಾಮದ ಪಶ್ಚಿಮಕ್ಕೆ ಇರುವ ಹೊಲದಲ್ಲಿ ನಿಲ್ಲಿಸಿರುವ ಕ್ರಿ.ಶ. ೯೩೩ರ ವೀರಗಲ್ಲು ಶಾಸನದಲ್ಲಿ ಇಂದ್ರವಲ್ಲಭನ ಕಾಲದಲ್ಲಿ ಇವನ ಮಹಾಸಾಮಾನ್ತ ಬಿಜ್ಜನೆಂಬುವವನು ಕೋಗಳಿ–೫೦೦, ಮಾಸಿಯವಾಡಿ–೧೪ನ್ನು ಆಳುತ್ತಿದ್ದಾಗ ಕದಂಬ ವಂಶದ ಮುದುದರ ದೇವಯ್ಯನ ಮಗ ಮಾಳಯ್ಯನು ನೊಳಂಬ ಅಯ್ಯಪದೇವನ ಮಗ ಅಣ್ಣಿಗನು ಪಡುಗಲ್ಲನ್ನು ಮುತ್ತಿದಾಗ ಕಾದಿ ಸತ್ತ. ((ಕವಿಹಂ. ಶಾ.ಸಂ.,೧–ಹರಪನಹಳ್ಳಿ–೨೧೦)

ಚಿರಸ್ತಹಳ್ಳಿ ಶಂಕರಲಿಂಗಸ್ವಾಮಿ ದೇವಾಲಯದ ಬಳಿಯಿರುವ ಕ್ರಿ.ಶ. ೯೩೨ರ ವೀರಗಲ್ಲು ಶಾಸನದಲ್ಲಿ 'ಪಡಿಗನೊಂಬಾ' ಎಂಬ ವೀರನು ರಾಷ್ಟ್ರಕೂಟ ದೊರೆ ಗೋವಿಂದರವಲ್ಲಭ (ಗೋವಿಂದ–೪)ನ ಕಾಲದಲ್ಲಿ ಊರ ದಾಳಿಯಲ್ಲಿ ಸತ್ತಾಗ ಮಾಸವಾಡಿ–೧೪೦ ಮತ್ತು ಕೋಗಳಿನಾಡನ್ನು ಆಳುತ್ತಿದ್ದ ಅಯ್ಯಪಯ್ಯ ಎಂಬುವವನು ಸತ್ತವನ ಕುಟುಂಬಕ್ಕೆ ಗದ್ದೆ ಮತ್ತು ಹೊಲವನ್ನು ನೀಡುತ್ತಾನೆ. (ಕವಿಹಂ. ಶಾ.ಸಂ.,೧–ಕೊಪ್ಪಳ–೫೩)

ಗದಗ ಜಿಲ್ಲೆಯ ರೋಣದ ವೀರಗಲ್ಲು ಶಾಸನವೊಂದರಲ್ಲಿ ಕ್ರಿ.ಶ. ೯೪೨ರ ರಾಷ್ಟ್ರಕೂಟರ ಅರಸ ಮುಮ್ಮಡಿ ಕೃಷ್ಣನ ಭಾವಗಂಗ ಭೂತಗನು ರೋಣದ ಅಗ್ರಹಾರದ ಮೇಲೆ ದಾಳಿ ಮಾಡುತ್ತಾನೆ. ಆದರೆ ರೋಣದ ಕೌಂಡಿನ್ನಯ ಗೋತ್ರದ ಜೈನ ಬ್ರಾಹ್ಮಣನಾದ ಪಂಪಯ್ಯ ಎಂಬುವನು "ನಾನೊಂದು ಅಕ್ಷತೆಯನಪ್ಪಂದ ವೀಯೆನೆಂದು" ನಿರ್ಧರಿಸಿ ಅವನೊಂದಿಗೆ ಹೋರಾಡಿ ವೀರ ಮರಣವನ್ನಪ್ಪುತ್ತಾನೆ. (ಇತಿಹಾಸ ದರ್ಶನ, ಸಂ-೨೪, ೨೦೦೯, ಪುಟ-೧೧೭) ಭೂತಗನು ತಾನು ಆಳಿದ ಅಗ್ರಹಾರವನ್ನು ಉಳಿಸಲು ಬಹಳಷ್ಟು ಪ್ರಯತ್ನಿಸುತ್ತಿದ್ದನಲ್ಲದೆ, ಅದಕ್ಕಾಗಿ ರಕ್ತ ಹರಿಸಿದರು. ಪಂಪಯ್ಯ ಮಡಿದ ನಂತರ ಈ ಪ್ರತಿಭಟನೆ ಅಷ್ಟಕ್ಕೆ ನಿಲ್ಲದೇ ಪಂಪಯ್ಯನಂತೆ ಮತ್ತೊಬ್ಬ ವೀರನು ಅದೇ ಹಾದಿ ತುಳಿದು ವೀರಮರಣ ಪಡೆಯುತ್ತಾನೆ. ಈ ಬಗೆಗಿನ ಅಪೂರ್ವ ಶಾಸನಶಿಲ್ಪವೊಂದು ರೋಣದ ಹಾಲಣ್ಣವರ ಮನೆ ಹತ್ತಿರದ ಶಿವದೇವಾಲಯವೊಂದರ ಎದುರು ಇದೆ. ಕರಿ ಕಲ್ಲಿನಲ್ಲಿ ಕೆತ್ತಿದ ತುಂಬ ಕಲಾತ್ಮಕವಾದ ಈ ಶಿಲ್ಪ ಮೂರು ಹಂತದಲ್ಲಿದ್ದು, ಈ ವೀರಗಲ್ಲಿನ ತಳಭಾಗ ನಾಶವಾಗಿ ಹೋಗಿದೆ. ವೀರನ ಮರಣ ಸ್ಪಷ್ಟವಾಗಿದ್ದು, ಕೆತ್ತನೆ ತುಂಬಾ ಕುಸುರಿನಿಂದ ಕೂಡಿದೆ. ೬೨ ಸಾಲಿನ ಈ ಶಾಸನವು ಬಹಳಷ್ಟು ತ್ರುಟಿತವಾಗಿದೆ.

ಪಂಪಯ್ಯನು ವೀರಮರಣವನ್ನಪ್ಪಿದ ೩೪ ವರ್ಷಗಳ ನಂತರ ರಾಚಗಿವರ್ಮಯ್ಯನೆಂಬುವನು ಕೂಡ ಅರಸನೊಂದಿಗೆ ಹೋರಾಡಿ ವೀರಮರಣವನ್ನಪ್ಪುತ್ತಾನೆ. ಇದು ವೀರ ಶಿಲ್ಪದಲ್ಲಿನ ಶಾಸನದ ಸಾರ. ಆದರೆ ಈ ಶಾಸನಕ್ಕೆ ಇತರೆ ಶಾಸನಕ್ಕಿಂತ ಬಹಳಷ್ಟು ಐತಿಹಾಸಿಕ ಮಹತ್ವವಿದೆ. ಪಂಪಯ್ಯ ಸೋಮಾಯಾಜಿಯಾ ಮಗನಾದ ರಾಚಂಗಿ ವರ್ಮಯ್ಯನೆಂಬುವನು ರಾಷ್ಟ್ರಕೂಟ ಅರಸರ ಡಂಬಾಚಾರದ ವರ್ತನೆಯಿಂದ ಬೇಸತ್ತು ಅವರೊಂದಿಗೆ ಅಗ್ರಹಾರದ ಉಳಿವಿಗಾಗಿ ಹೋರಾಡಿ ಮಡಿಯುತ್ತಾನೆ. ಈ ಶಾಸನವು ಶೈವ ಪರವಾದ ಶಾಸನವಾಗಿದ್ದು, ಈ ಅಗ್ರಹಾರದಲ್ಲಿದ್ದ ೧೦೪ ಜನ ಶೈವ ಬ್ರಾಹ್ಮಣರನ್ನು ರಾಷ್ಟ್ರಕೂಟ ಅರಸ ಖೊಟ್ಟಿಗನ ಮಗನಾದ ಕನ್ನರನೆಂಬ ಅರಸನು ದೀನ-ದಲಿತರನ್ನು ಕರೆದು ಸಹಾಯ ಮಾಡುತ್ತಾನೆ. ಆಗ ರೋಣದಲ್ಲಿರುವ ಕಾಶ್ಯಪ ಗೋತ್ರದ ಬಳಗವಟ್ಟ ವಂಶದ ಪಂಪಯ್ಯ ಸೋಮಾಯಾಜಿಯ ಮಗನಾದ ರಾಚಂಗಿ ವರ್ಮಯ್ಯನು ಧರ್ಮ ಕಾರ್ಯಗಳಾದ ದೇವಾಲಯ, ಕೆರೆ ನಿರ್ಮಾಣದಲ್ಲಿ ದಾನ-ದತ್ತಿಗಳನ್ನು ನೀಡುವಲ್ಲಿ ನಿರತವಾದ ಧರ್ಮವಂತನಾಗಿದ್ದನು. ಇವನಿಗೆ ಕನ್ನರದೇವನೆಂಬ ಅರಸನ ವರ್ತನೆಯು ಮೋಸದ್ದು ಮತ್ತು ಡಂಬಾಚಾರದ್ದೆಂದು ಈ ಅಗ್ರಹಾರದ ಮೇಲೆ ಅಪ್ರತ್ಯಕ್ಷನಾದ ದಾಹಿ ಎಂದು ತಿಳಿದು ಅರಸನ ವರ್ತನೆಯನ್ನು ಪ್ರತಿಭಟಿಸಿ ಮಡಿಯುತ್ತಾನೆ. ಇದು ನಡೆದದ್ದು ಕ್ರಿ.ಶ. ೯೭೬ರ ಈಶ್ವರನಾಮ ಸಂವತ್ಸರದಲ್ಲಿ ಭಾದ್ರಪದ ಶುಧ್ಧನವಮಿಯ ಆದಿತ್ಯವಾರದ ದಿನ ಎಂದು ಶಾಸನದಲ್ಲಿ ಉಲ್ಲೇಖಿತವಾಗಿದೆ. ಬಹಳಷ್ಟು ತ್ರುಟಿತವಾದ ಈ ಶಾಸನದ ಕೊನೆಯಲ್ಲಿ "ಸಸಿನ ಬರದಪಂ" ಎಂದು ಇರುವುದರಿಂದ ಈ ಶಾಸನವನ್ನು ಯಾರೋ ಬರೆದಿರಬೇಕು. ಇದು ಈ ಶಾಸನದಲ್ಲಿನ

ವಿವರಣೆಯನ್ನು ವಿದ್ವಾಂಸರಾದ ಡಾ. ಎಚ್.ಆರ್. ರಘುನಾಥ ಭಟ್ಟರು ಕ್ರಿ.ಶ. ೯೪೨ರಲ್ಲಿನ ಮಡಿದ ಪಂಪಯ್ಯನೆಂದೂ, ಈಗಿನ ಈ ಶಾಸನೋಕ್ತನಾದ ಪಂಪಯ್ಯನ ಮಗನ ರಾಜಂಗವರ್ಮಯ್ಯ ಎಂದೂ ಅಭಿಪ್ರಾಯಪಡುತ್ತಾರೆ. ಕ್ರಿ.ಶ. ೯೪೨ರ ಶಾಸನೋಕ್ತ ಪಂಪಯ್ಯನು ಕೌಂಡಿನ್ಯ ಗೋತ್ರದ ವಾಜಿ ಕುಲದ ಜೈನ ಬ್ರಾಹ್ಮಣನಾಗಿದ್ದಾನೆ. ಆದರೆ ಈಗ ದೊರೆತ ಶಾಸನೋಕ್ತ (ಕ್ರಿ.ಶ. ೯೭೬) ಪಂಪಯ್ಯ ಸೋಮಾಯಾಜಿಯು ಕಾಶ್ಯಪ ಗೋತ್ರದಲ್ಲಿ ಪ್ರಸಿದ್ಧನಾದ 'ಬಳಗಟ್ಟ' ವಂಶದವನು. ಅಲ್ಲದೇ ಈತನು ಶೈವ ಬ್ರಾಹ್ಮಣನಾಗಿದ್ದಾನೆ. ಇದರಿಂದ ಇಲ್ಲಿನ ಪಂಪಯ್ಯ ಮತ್ತು ಈ ಶಾಸನದಲ್ಲಿರುವ ಪಂಪಯ್ಯ ಸೋಮಾಯಾಜಿ ಭಿನ್ನರಾಗಿದ್ದಾರೆ. ಕ್ರಿ.ಶ. ೯೭೬ರ ಶಾಸನದಲ್ಲಿ ಅಂದು ಮಡಿದ ಪಂಪಯ್ಯನ ಬಗ್ಗೆ ಶಾಸನಕಾರರು ಉಲ್ಲೇಖಿಸದೇ ಇರುತ್ತಿರಲಿಲ್ಲ. ಹೀಗಾಗಿ ಈ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳಾಗಿದ್ದಾರೆ. ರಾಷ್ಟ್ರಕೂಟ ಅರಸರ ಹಾಗೂ ಅವರ ಅಧಿಕಾರಿಗಳ ದೌರ್ಜನ್ಯವನ್ನು ಸಾಮಾನ್ಯರಾದ ಅಗ್ರಹಾರದವರು ಪ್ರತಿಭಟಿಸಿ ಸಿಡಿದ ನಿದರ್ಶನಗಳು ಇತಿಹಾಸದ ಕಡೆಗೆ ಹೆಚ್ಚಿನ ಮಹತ್ವ ಪಡೆದುಕೊಂಡಿದೆ.

ಈ ಶಾಸನವು ಬಹಳಷ್ಟು ಐತಿಹಾಸಿಕ ಮಹತ್ವವನ್ನು ಪಡೆದಿದೆ. ರಾಷ್ಟ್ರಕೂಟ ಅರಸರ ಖೊಟ್ಟಿಗನ ಮಗನಾದ ಕನ್ನರನ ಬಗ್ಗೆ ಹೇಳುವ ಶಾಸನಗಳು ವಿರಳವಾಗಿವೆ. ರಾಷ್ಟ್ರಕೂಟರು ಸೋತು ನಾಲ್ಕನೆಯ ಇಂದ್ರನು ಬಂಕಾಪುರಕ್ಕೆ ಬಂದಾಗ ಅಲ್ಲಿದ್ದ ಅಜಿತಸೇನ ಮುನಿಗಳು "ಶ್ರವಣಬೆಳಗೊಳಕ್ಕೆ ಹೋಗು. ಅಲ್ಲಿ ಇನ್ನೂ ಜೈನ ಧರ್ಮಾವಲಂಬಿಗಳಾದ ಗಂಗರಿದ್ದಾರೆ" ಎಂದು ಹೇಳಿ ಕಳುಹಿಸಿದರು. ಈ ಹಿನ್ನೆಲೆಯಲ್ಲಿ ರಾಷ್ಟ್ರಕೂಟರ ಆಳ್ವಿಕೆ ಕ್ರಿ.ಶ. ೯೭೨-೭೪ರಲ್ಲಿ ಮುಕ್ತಾಯವಾಗದೆ ಮುಂದುವರೆಯಿತು. ಕನ್ನರ ದೇವನು ಕ್ರಿ.ಶ. ೯೭೬ರಲ್ಲಿದ್ದ ಬಗ್ಗೆ ಹೇಳುವುದರಿಂದ ರಾಷ್ಟ್ರಕೂಟರ ಆಳ್ವಿಕೆ ಕ್ರಿ.ಶ. ೯೭೪ಕ್ಕೆ ಮುಗಿಯದೇ ಅವರು ಕ್ರಿ.ಶ. ೯೭೪ರವರೆಗೆ ಇದ್ದ ಬಗ್ಗೆ ಈ ಶಾಸನವು ಬೆಳಕು ಚೆಲ್ಲುತ್ತದೆ.

ಕಲ್ಕೇರಿ ಆಂಜನೇಯ ದೇವಾಲಯದ ಎದುರು ಇರುವ ವೀರಗಲ್ಲು ಕ್ರಿ.ಶ. ೧೦ನೆಯ ಶತಮಾನದ ಲಿಪಿಯನ್ನು ಹೊಂದಿದೆ. ವೀರಗಲ್ಲು ವಿವರಗಳು ಲಭ್ಯವಿಲ್ಲ. ವೀರನಿಗೆ ನೀಡಿದ ದಾನವನ್ನು ನಾಶಪಡಿಸಿದವನಿಗೆ ೧೮ ಪಟ್ಟಣಗಳನ್ನು ವಾರಣಾಸಿಯನ್ನು ನಾಶ ಮಾಡಿದ ಪಾಪ ಬರಲಿ ಎಂಬ ಶಾಪಾಶಯವಿದೆ. (ಕವಿಹಂ. ಶಾ.ಸಂ.,೨-ಗಂಗಾವತಿ-೧೧೦)

ಹಲಗೇರಿ ಗ್ರಾಮದ ಕೆರೆ ಬಳಿ ಕಟ್ಟೆಯಲ್ಲಿ ನೆಟ್ಟ ವೀರಗಲ್ಲು. ಇದರ ಕಾಲವು ೧೦೧೮ ಶಾಸನದಲ್ಲಿ ಬೆಣ್ಣೆಕಲ್ಲು ಸೀಮೆಯ ಕಾಳಗದಲ್ಲಿ ತಳಾಜನಾಯಕ ಎಚೆಯಮ್ಮನೆಂಬುವವನು ಸತ್ತಾಗ ಅವನ ಕುಟುಂಬಕ್ಕೆ ಪಲ್ಗೆಜೆಯ ಊರೊಡೆಯ ಮತ್ತು ಮಹಾಜನರು ಸೇರಿ ಭೂದಾನ ನೀಡುತ್ತಾರೆ. (ಕವಿಹಂ. ಶಾ.ಸಂ.,೨-ಕೊಪ್ಪಳ-೨೧)

ಐಹೊಳೆ ಹುಚ್ಚಿಮಲ್ಲಿ ಗುಡಿಯ ಬಾವಿಯ ಹತ್ತಿರವಿದ್ದ ಎರಡನೆಯ ವೀರಗಲ್ಲು ತ್ರುಟಿತವಾಗಿದೆ. ಕ್ರಿ.ಶ. ೧೦ನೆಯ ಶತಮಾನ ಲಿಪಿಯನು ಹೊಂದಿದೆ. ಈ ಶಾಸನದಲ್ಲಿ ಯಾರೋ ಒಬ್ಬನು

ಸತ್ತದ್ದನ್ನು ಉಲ್ಲೇಖಿಸಿದೆ. (ಕವಿಹಂ. ಶಾ.ಸಂ.,೯-ಹುನಗುಂದ-೨೭) ಅಲ್ಲೇ ಮೂರನೆಯ ತ್ರುಟಿತ ವೀರಗಲ್ಲು ಇದ್ದು, ಕ್ರಿ.ಶ. ೧೦ನೆಯ ಶತಮಾನದ್ದು. ಆ ಕಾಲವರ್ಷದೇವನು ರಾಜ್ಯವಾಳುತ್ತಿದ್ದಾಗ ನಡೆದ ಯುದ್ಧವೊಂದರ ಬಗ್ಗೆ ತಿಳಿಸುತ್ತದೆ. (ಕವಿಹಂ. ಶಾ.ಸಂ.,೯-ಹುನಗುಂದ-೨೮) ಐಹೊಳೆ ಹನುಮಂತದೇವರ ಗುಡಿಯ ಮುಂದಿನ ಸ್ಥಳದಲ್ಲಿನ ಎರಡನೆಯ ತ್ರುಟಿತ ವೀರಗಲ್ಲಿದೆ. ಚಾಳುಕ್ಯ ವಿಕ್ರಮನ ಆಳ್ವಿಕೆಯ ಬಹುಧಾನ್ಯ ಸಂವತ್ಸರದ ಉಲ್ಲೇಖವಿದ್ದು, ಇದು ಕ್ರಿ.ಶ.ಸು. ೧೧೯೯ಕ್ಕೆ ಸಮವಾಗುತ್ತದೆ. ವೀರನೊಬ್ಬ ಕಾದಿ ಸತ್ತಂತೆ ತಿಳಿಯುತ್ತದೆ. (ಕವಿಹಂ. ಶಾ.ಸಂ.,೯-ಹುನಗುಂದ-೩೯)

ಬಿಜಾಪುರ ವಸ್ತುಸಂಗ್ರಹಾಲಯದಲ್ಲಿಟ್ಟಿರುವ ೨೭ನೆಯ ತ್ರುಟಿತ ವೀರಗಲ್ಲು ಶಾಸನ ಇದೆ. ಲೋಕೆಯ ಪೆರ್ಗಡೆಯ ಮೊಮ್ಮಗನು ಹೋರಾಡಿ ಮಡಿದಂತೆ ಹೇಳಿದೆ. ಇವನ ಸ್ವರ್ಗಭುವನಾದಿಗಳನ್ನು ಪಡೆಯಬೇಕೆಂದು ಹೋರಾಡಿ ಸತ್ತಾಗ ದೇವಲೋಕದ ಸ್ತ್ರೀಯರು ಸಂತೋಷದಿಂದ ಸ್ವರ್ಗಕ್ಕೆ ಕೊಂಡು ಹೋದರೆಂದು ಶಾಸನ ತಿಳಿಸುತ್ತದೆ. ಸುಮಾರು ಕ್ರಿ.ಶ. ೧೦ನೆಯ ಶತಮಾನದ ಲಿಪಿ, (ಕವಿಹಂ. ಶಾ.ಸಂ.,೧೦-ಬೀಳಗಿ-೨೭)

ಆಲೂರು ಗ್ರಾಮದಲ್ಲಿರುವ ಒಂದು ವೀರಗಲ್ಲು. ವೀರಗಲ್ಲಿನ ಕಾಲವು ಚಾಲುಕ್ಯ ತ್ರೈಲೋಕ್ಯಮಲ್ಲ ಮಹಾಮಂಡಳೇಶ್ವರ, ಗಂಡಭೇರುಂಡ, ಮನ್ನೆಯವಲ್ಲಭ, ಸಿದ್ಧರಸನ ಉಲ್ಲೇಖವಿದ್ದು, ಬಹುಶಃ ಚಿಕಸಾಹಣಿಯ ಮರಣವನ್ನು ತಿಳಿಸುತ್ತದೆ. ಈ ವೀರಗಲ್ಲು ಶಾಸನ ಕ್ರಿ.ಶ.ಸು. ೧೦೪೫ಕ್ಕೆ ಸಮನಾಗುತ್ತದೆ. (ಕ.ವಿ.ವಿ.ಶಾ.ಸಂ.,೯-ಮುದ್ದೇಬಿಹಾಳ-೧೩)

ಎಲೆಶಿರೂರಿನಲ್ಲಿ ಕ್ರಿ.ಶ. ೧೦೦೬ರ ಸತ್ಯಾಶ್ರಯ ಇರಿವ ಬೆಡಂಗನ ಕಾಲದ ವೀರಗಲ್ಲು ಇದ್ದು, ಇದು ಉಣಕಲ್ಲು ಕೋಟೆಯ ಯುದ್ಧದಲ್ಲಿ "ಊಣಕಲ್ಲ ಕೋಟೆಯೊಳಗಿವ್ದಿಣಿ ಸನ್ನಣೆಯಾಗಿ ನೊಂಕೆಮ್ಮಣ[ದಾಕೇತಾ ಪೆಣೆದಿಜೆದು ಸತ್ತೊಡಚ್ಚರಗಣಿಕೆಯ ರೊಡಗೊಣ್ಡು ದೇವಲೋಕ ಕುಯ್ದರ್" ಎಂಬುದಾಗಿ ಲೆಂಕಗೇತನು ಹೋರಾಡಿ ಮಡಿದ ವಿಷಯ ತಿಳಿಸುತ್ತದೆ. (ಎಸ್.ಐ.ಐ. ೧೧-ಎಲೆಶಿರೂರು ಶಾ.ಸಂ-೫೧)

ಗದುಗಿನ ಶಾಸನವೊಂದು ಬಹಳ ತ್ರುಟಿತವಾಗಿದ್ದು, ಇದು ಮಾಧವರಾಜನ ಸ್ತುತಿ ಮಾಡುತ್ತದೆ. ಅವನ ಹೋರಾಟವನ್ನು ತೈಲನೇ ಮೆಚ್ಚಿದ್ದನು. ಇವನನ್ನು "ದಣ್ಡಿನ ಧಾಳಿಯಂ ತುಳಿದ ದುರ್ಲ್ಲಘಮಾಗಿರ್ದಂ" ಎನ್ನುತ್ತದೆ ಶಾಸನ. ಇವನು ಚೋಳರೊಡನೆ ಹೋರಾಡಿದುದನ್ನು ನೆನಪಿಸುತ್ತದೆ. (ಎಸ್.ಐ.ಐ. ೧೧-ಗದಗ ಶಾ.ಸಂ-೭೬)

ಕ್ರಿ.ಶ. ೧೦ನೆಯ ಶತಮಾನದ ಹೊಸೂರಿನ ಗಬ್ಬೂರು ಶಾಸನವೊಂದು ಯಾವುದೋ ಒಂದು ಯುದ್ಧದಲ್ಲಿ ಒಬ್ಬ ವೀರ ಮರಣ ಹೊಂದುವುದನ್ನು ತಿಳಿಸುತ್ತದೆ. (ಎಸ್.ಐ.ಐ. ೧೫-ಹೊಸೂರು ಶಾ.ಸಂ-೭೬)

ಹುಬ್ಬಳ್ಳಿ ತಾಲೂಕಿನ ಗಬ್ಬೂರು ಗ್ರಾಮದ ಕ್ರಿ.ಶ. ೧೦ನೆಯ ಶತಮಾನದ ಆಂಜನೇಯ ದೇವಾಲಯದ ಮುಂಭಾಗದಲ್ಲಿ ವೀರಗಲ್ಲು ಇದೆ. ಈ ವೀರಗಲ್ಲು ಕಪ್ಪು ಶಿಲೆಯನ್ನು ಹೊಂದಿದೆ. ಮೂರು ಹಂತದಿಂದ ಕೂಡಿದ ಈ ವೀರಗಲ್ಲು ವೀರನ ಕೈಯಲ್ಲಿ ಕತ್ತಿ ಹಿಡಿದು ವೈರಿಯೊಡನೆ ಹೋರಾಡುತ್ತಿದ್ದಾನೆ. ವೀರನ ಸಹಚರ ಕೈಯಲ್ಲಿ ಬಿಲ್ಲು-ಬಾಣ ಹಿಡಿದು ಪ್ರಯೋಗ ಭಂಗಿಯಲ್ಲಿದ್ದಾನೆ. ವೈರಿ ಪಡೆಯ ಯೋಧರು ಮೂರು ಕೈಗಳಲ್ಲಿ ಕತ್ತಿಯಂತಹ ಆಯುಧಗಳನ್ನು ಹಿಡಿದಿದ್ದಾರೆ. ಇವರಲ್ಲಿ ಒಬ್ಬ ಕೆಳಗೆ ಬಿದ್ದು ಮರಣ ಹೊಂದಿದ್ದಾನೆ. ವೀರ ಮತ್ತು ಆತನ ಸಹಚರ ಕೆಳಭಾಗದಲ್ಲಿ ಹಸುಗಳು ಚೆಲ್ಲಾಪಿಲ್ಲಿಯಾಗಿ ನಿಂತಿವೆ. ಎರಡನೆಯ ದೃಶ್ಯ ಇಬ್ಬರೂ ಅಪ್ಸರೆಯರು ವೀರನನ್ನು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಮೇಲಿನ ದೃಶ್ಯದಲ್ಲಿ ವೀರ ರಾಜ ಲಲಿತಾಸನದಲ್ಲಿ ಕುಳಿತಿದ್ದಾನೆ. ಬದಿಗಳಲ್ಲಿ ಚೌರಿಧಾರಿಯರು ಒಂದು ಕೈಯಲ್ಲಿ ಚೌರಿ ಹಿಡಿದು ಮತ್ತೊಂದು ಕೈಯನ್ನು ಸೊಂಟದ ಮೇಲಿಟ್ಟುಕೊಂಡು, ಒಂದು ಕಾಲನ್ನು ಹಿಂದಕ್ಕೆ ಮಾಡಿ ನಿಂತಿದ್ದಾರೆ. ತಲೆಯ ಕೇಶವನ್ನು ಮೇಲಕ್ಕೆ ಕಟ್ಟಿದ್ದಾರೆ. ವೀರಗಲ್ಲಿನಲ್ಲಿ ವೀರ ಕಿರೀಟಧಾರಿಯಾಗಿದ್ದಾನೆ. ವೀರ ಮತ್ತು ಅಪ್ಸರೆಯರೆಲ್ಲ ಕಟೀ ವಸ್ತ್ರಧಾರಿಗಳಾಗಿದ್ದಾರೆ. ಕಟೀ ವಸ್ತ್ರದ ನೆರಿಗೆಗಳು ನೈಜವಾಗಿವೆ. ಇವರು ಆಭರಣಗಳನ್ನು ಧರಿಸಿದ್ದಾರೆ. ಈ ಶಿಲ್ಪಗಳಲ್ಲಿ ವೀರ ಅಪ್ಸರೆಯರ ಕೈ-ಕಾಲುಗಳನ್ನು ಚಿಕ್ಕದಾಗಿ ದೇಹದ ಪ್ರಮಾಣವನ್ನು ಬದ್ಧವಾಗಿ ತೋರಿಸಲಾಗಿದೆ. ಇವು ಈ ಶಿಲ್ಪದ ಪ್ರಧಾನ ಲಕ್ಷಣವಾಗಿವೆ. ಶಿಲ್ಪದ ಮಧ್ಯಪಟ್ಟಿಕಾ ಮತ್ತು ಮೇಲ್ಭಾಗದಲ್ಲಿ ಶಾಸನವಿದ್ದು, ರಾಷ್ಟ್ರಕೂಟರ ಕನ್ನರದೇವನ ಆಳ್ವಿಕೆಯ ಕಾಲದ್ದಾಗಿದೆ. (ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಗೋಪಾಲ್ ಆರ್. (ಸಂ), ೨೦೦೮, ಪುಟ-೨೮೯)

ಕೋಗಳಿ ಗ್ರಾಮದ ಚಾವಡಿ ಬಳಿ ಇರುವ ಕ್ರಿ.ಶ. ೧೦೪೭ರ ವೀರಗಲ್ಲು ಶಾಸನದಲ್ಲಿ ಚಾಲುಕ್ಯ ದೊರೆ ತ್ರೈಲೋಕ್ಯಮಲ್ಲನ ಸಾಮಂತ ತ್ರೈಲೋಕ್ಯಮಲ್ಲ ನನ್ನಿ ನೊಳಂಬ ಪಲ್ಲವ ಪೆರ್ಮಾನಡಿ ಕಾಲದಲ್ಲಿ ಉದಯಾದಿತ್ಯ ಏಚನಾಯಕನು ಪಟ್ಟಿದೇವನ ಆಜ್ಞೆಯಂತೆ ಕುದುರೆ ಏರಿ ಹೋಗಿ ಹಸುಗಳನ್ನು ಕದ್ದೊಯ್ಯುತ್ತಿದ್ದ ಕಳ್ಳರನ್ನು ಸದೆಬಡೆದು ಕೋಗಳಿಯ ಹಸುಗಳನ್ನು ಹಿಂತಿರುಗಿಸಿ ತಾನು ಸತ್ತನು. (ಕವಿಹಂ. ಶಾ.ಸಂ.,೧-ಹಗರಿಬೊಮ್ಮನಹಳ್ಳಿ-೯)

ಹುಬ್ಬಳ್ಳಿ ತಾಲೂಕಿನ ಇಂಗಳಹಳ್ಳಿ ಗ್ರಾಮದ ಕ್ರಿ.ಶ. ೧೦ನೆಯ ಶತಮಾನ ಮಸೀದಿಯ ಬಳಿಯಿರುವ ಈ ವೀರಗಲ್ಲು ಮೂರು ಪಟ್ಟಿಕೆಗಳಿಂದ ಕೂಡಿದ್ದು, ಕೆಳಗಿನ ಪಟ್ಟಿಕೆಯಲ್ಲಿ ವೀರ ವೈರಿಗಳೊಂದಿಗೆ ಕಾದಾಡುತ್ತಿದ್ದಾನೆ. ಎರಡನೆ ಪಟ್ಟಿಕೆಯಲ್ಲಿ ಅಪ್ಸರೆಯರು ವೀರನನ್ನು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಮೇಲಿನ ಪಟ್ಟಿಕೆಯಲ್ಲಿ ವೀರ ಸವ್ಯಲಲಿತಾಸನದಲ್ಲಿ ಕುಳಿತಿದ್ದಾನೆ. ಇಕ್ಕೆಲಗಳಲ್ಲಿ ಅಪ್ಸರೆಯರು ಕಲಶವನ್ನು ಹಿಡಿದು ನಿಂತಿದ್ದಾರೆ. ತಮ್ಮ ಮತ್ತೊಂದು ಕೈಯನ್ನು ಸೊಂಟದ ಮೇಲಿಟ್ಟುಕೊಂಡಿದ್ದಾರೆ. ವೀರಗಲ್ಲಿನಲ್ಲಿ ಅಪ್ಸರೆಯರು ಕೈಯಲ್ಲಿ ಕಲಶದಿಂದ ವೀರ ಸವ್ಯಲಲಿತಾಸನದಲ್ಲಿ ಕುಳಿತಿರುವುದು ವಿಶೇಷವೆನಿಸಿದೆ. (ಧಾರವಾಡ ಜಿಲ್ಲೆಯ ಪುರಾತತ್ವ, ಜಯಮ್ಮ ಜಿ., ೨೦೧೦, ಪುಟ-೨೮೯)

ಇದೇ ಗ್ರಾಮದ ಮೈಲಾರಲಿಂಗನ ಗುಡಿ ಬಳಿಯಲ್ಲಿ ವೀರಗಲ್ಲು ಇದೆ. ಇದು ೧೦ನೆಯ ಶತಮಾನಕ್ಕೆ ಸೇರುತ್ತದೆ. ಪ್ರಾಯಶಃ ವೀರಗಲ್ಲಿನ ಕೆಳಭಾಗ ಮಣ್ಣಿನಲ್ಲಿ ಹೂತುಹೋಗಿದೆ. ಸಧ್ಯ ಈಗ ಎರಡು ಭಾಗ ಮಾತ್ರ ಕಂಡುಬರುತ್ತದೆ. ಕೆಳಗಿನ ಭಾಗದಲ್ಲಿ ಮಡಿದ ವೀರನನ್ನು ಇಬ್ಬರು ಅಪ್ಸರೆಯರು ತಮ್ಮ ಭುಜದ ಮೇಲೆ ಹಾಕಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಇವರು ಹಾರುವ ಭಂಗಿಯಲ್ಲಿದ್ದಾರೆ. ಮೇಲಿನ ಭಾಗದಲ್ಲಿ ವೀರ ಅರ್ಧ ಪದ್ಮಾಸನದಲ್ಲಿ ಕುಳಿತಿದ್ದಾನೆ. ಈತನ ಬಲಗೈ ತೊಡೆಯ ಮೇಲಿದ್ದು, ಎಡಗೈ ಅಭಯ ಹಸ್ತದಲ್ಲಿದೆ. ವೀರನ ಇಕ್ಕೆಲಗಳಲ್ಲಿ ಅಪ್ಸರೆಯರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಅಪ್ಸರೆಯರು ತಮ್ಮ ಒಂದು ಕೈಯಲ್ಲಿ ಚೌರಿಯನ್ನು ಹಿಡಿದಿದ್ದಾರೆ. ಈ ಚಿತ್ರದ ಮೇಲ್ಭಾಗದಲ್ಲಿ ಸೂರ್ಯ–ಚಂದ್ರರ ಚಿತ್ರಗಳಿವೆ. ವೀರಗಲ್ಲಿನ ಮೇಲ್ಭಾಗ ಕಲಶದಂತಿದೆ. (ಧಾರವಾಡ ಜಿಲ್ಲೆಯ ಪುರಾತತ್ವ, ಜಯಮ್ಮ ಬಿ., ೨೦೧೦, ಪುಟ–೨೪೯)

ಬೆಟಗೇರಿಯಲ್ಲಿ ೧೭ ವೀರಗಲ್ಲುಗಳು ಕಾಣಿಸಿಕೊಂಡಿವೆ. ಅವುಗಳಲ್ಲಿ ೧೬ ವೀರಗಲ್ಲುಗಳು ಅಲ್ಲಿಯ ಮಲ್ಲರಾಯನ ಕಟ್ಟೆಯಲ್ಲಿವೆ. ಸುತ್ತಲೂ ಗೋಡೆಯಿದೆ. ಒಂದು ವೀರಗಲ್ಲು ಮಾತ್ರ ಅಲ್ಲಿಯ ಒಕ್ಕಲಕೇರಿಯಲ್ಲಿದೆ. ಮಲ್ಲರಾಯನ ಕಟ್ಟೆಯಲ್ಲಿ ಒಂದೇ ಕಡೆ ಹದಿನಾರು ವೀರಗಲ್ಲುಗಳು ಇರುವುದು ಗಮನೀಯ. ಅವುಗಳಲ್ಲಿ ಸುಮಾರು ೧೫ ವೀರಗಲ್ಲುಗಳು ರಾಷ್ಟ್ರಕೂಟರ ಕಾಲದ್ದಾಗಿವೆ. ಒಂದೆಡೆ ಇಷ್ಟೊಂದು ಪ್ರಮಾಣದ ರಾಷ್ಟ್ರಕೂಟರ ಕಾಲದ ವೀರಗಲ್ಲುಗಳು ಕರ್ನಾಟಕದ ಬೇರೆಲ್ಲೂ ಗೋಚರಿಸಿರುವುದಿಲ್ಲ. ಈ ವೀರಗಲ್ಲುಗಳಲ್ಲಿ ಏಳರಲ್ಲಿ ಮಾತ್ರ ಶಾಸನಗಳಿದ್ದು, ಅದರಲ್ಲಿ ಆರು ಶಾಸನಗಳು ಪ್ರಕಟವಾಗಿವೆ. ಎಸ್. ರಾಜಶೇಖರ ಅವರು ಈ ಎಲ್ಲ ೧೬ ವೀರಗಲ್ಲುಗಳನ್ನು ವಿಸ್ತೃತವಾಗಿ ಅಧ್ಯಯನ ಮಾಡಿದ್ದಾರೆ. ಅದರ ಕೆಲವು ವೀರಗಲ್ಲುಗಳನ್ನು ಶೇಷಶಾಸ್ತ್ರಿ ನಂತರ ಪರಮಶಿವಮೂರ್ತಿ ಅವರು ತಮ್ಮ ಅಧ್ಯಯನಗಳಲ್ಲಿ ಬಳಸಿಕೊಂಡಿದ್ದಾರೆ. ಆದರೆ ಅವುಗಳ ಸಂಪೂರ್ಣ ಕಲಾ ಸಂಸ್ಕೃತಿ ವೈವಿಧ್ಯತೆಯನ್ನು ತುಲನಾತ್ಮಕವಾಗಿ ನನ್ನ ಕ್ಷೇತ್ರಕಾರ್ಯದ ಮೂಲಕ ಅಧ್ಯಯನ ಮಾಡಲಾಗಿದೆ.

ಈ ವೀರಗಲ್ಲುಗಳು ಸುಮಾರು ೮ರಿಂದ ೧೨ ಅಡಿ ಎತ್ತರವಾಗಿವೆ. ಕೆಲವು ಬುಡಭಾಗ ನೆಲದಲ್ಲಿ ಹೂತಿರಬೇಕು. ಈ ವೀರಗಲ್ಲುಗಳನ್ನು ಶಿಲ್ಪಗಳ ವಿನ್ಯಾಸದಿಂದ ಐದು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ೧. ಹತ್ತು ವೀರಗಲ್ಲುಗಳಲ್ಲಿ ಆಯತಾಕಾರದ ಮೂರು ಹಂತಗಳ ಗೂಡುಗಳಿವೆ. ಮೂರನೆಯ ಗೂಡಿಗೆ ಮಾತ್ರ ಚೈತ್ಯಗವಾಕ್ಷವಿದೆ. ೨. ಒಂದೇ ವೀರಗಲ್ಲಿಗೆ ಆಯತಾಕಾರದ ನಾಲ್ಕು ಪಟ್ಟಿಕೆಯ ಮೇಲ್ಭಾಗವಿದೆ. ೩. ಎರಡು ವೀರಗಲ್ಲುಗಳಿಗೆ ಆಯತಾಕಾರದ ನಾಲ್ಕು ಹಂತದ ಗೂಡುಗಳಿವೆ. ೪. ಮೂರು ವೀರಗಲ್ಲುಗಳಿಗೆ ಆಯತಾಕಾರದ ಎರಡು ಹಂತಗಳಿವೆ. ೫. ಮೇಲಿನ ಭಾಗ ಶಾಲಾ ಮಾದರಿ ನಡುವೆ ಕಳಸವಿದೆ. ಸಾಮಾನ್ಯವಾಗಿ ಕೆಳಗಿನಿಂದ ಮೇಲಕ್ಕೆ ಯುದ್ಧ ದೃಶ್ಯ, ಮಡಿದ ವೀರನನ್ನು ಅಪ್ಸರೆಯರು ಸ್ವರ್ಗಲೋಕಕ್ಕೆ ಒಯ್ಯುತ್ತಿರುವ ದೃಶ್ಯ ಮತ್ತು ಕೊನೆಯಲ್ಲಿ ಮಡಿದ ವೀರನು ಸ್ವರ್ಗದಲ್ಲಿ ಅಪ್ಸರೆಯರಿಂದ ಸೇವೆ ಮಾಡಿಸಿಕೊಳ್ಳುತ್ತ ಕುಳಿತಿರುವ ದೃಶ್ಯಗಳಿವೆ. ವೀರನ ಚಿತ್ರವನ್ನು ದೊಡ್ಡದಾಗಿ ಚಿತ್ರಿಸಲಾಗಿದೆ.

ಮೊದಲನೆಯ ಮಾದರಿ ಶಿಲ್ಪದ ಯುದ್ಧ ದೃಶ್ಯದಲ್ಲಿ ವೀರನು ಶತ್ರುಗಳ ವಿರುದ್ಧ ಕತ್ತಿ, ಗುರಾಣಿಗಳನ್ನು ಹಿಡಿದು ವೀರಾವೇಶದಿಂದ ಹೋರಾಡಲು ನಿಂತಿದ್ದಾನೆ. ಆತನ ಪರಿವಾರದಲ್ಲಿ ಕಾಲ್ದಳದವರಿದ್ದಾರೆ. ಅವರು ಕುಳ್ಳರಂತೆ ಕಿರಿದಾಗಿ ಎರಡು ಸಾಲುಗಳಲ್ಲಿ ನಿಂತಿರುವರು. ವೀರನು ಹಿಡಿದಿರುವ ಕತ್ತಿ ಹಿಂದಕ್ಕೆ ಬಗ್ಗಿದೆ. ಆತನ ಪರಿವಾರದವರು ಎತ್ತಿ ಹಿಡಿದ ಕತ್ತಿಗಳು ಆಕಾರದಲ್ಲಿ ಮುಂದಕ್ಕೆ ಬಗ್ಗಿವೆ. ಕೆಳಗಡೆ ಸಾಲಿನಲ್ಲಿ ನಿಂತ ಒಬ್ಬನು ಎತ್ತರವಾದ ಧ್ವಜಸ್ತಂಭವನ್ನು ಹಿಡಿದಿರುವನು. ಧ್ವಜಸ್ತಂಭದ ಮೇಲೆ ಪಟ್ಟಿಕೆಯಿದೆ. ಅದರ ಮೇಲೆ ನಿಂತ ಆನೆಯ ಚಿತ್ರವಿದೆ. ಆ ಪಟ್ಟಿಕೆಯ ಬುಡದಲ್ಲಿ ಬಟ್ಟೆಯನ್ನು ಉದ್ದವಾಗಿ ಕಟ್ಟಲಾಗಿದೆ. ನಿಂತ ಆನೆಯು ರಾಷ್ಟ್ರಕೂಟರ ರಾಜ ಚಿಹ್ನೆಯಾಗಿದೆ. ಆನೆಯುಳ್ಳ ಧ್ವಜಸ್ತಂಭ ಭಾಗವನ್ನು ಮಾತ್ರ ಚಿತ್ರಗಳುಳ್ಳ ಆಯತಾಕಾರದ ಗೂಡಿನ ಮೇಲಿನ ಸಮತಟ್ಟಾದ ಭಾಗದಲ್ಲಿ ಚಿತ್ರಿಸಲಾಗಿದೆ. ವೀರನು ಹಿಡಿದ ಕತ್ತಿಯ ಅರ್ಧಭಾಗವನ್ನು ಅದರ ಮೇಲ್ಭಾಗದ ಪಟ್ಟಿಕೆಯಲ್ಲಿ ಚಿತ್ರಿಸಲಾಗಿದೆ. ವೀರನ ತಲೆಯನ್ನು ಹಿಂದಕ್ಕೆ ದೇಹವನ್ನು ಮುಂದಕ್ಕೆ ಬಾಗಿಸಿ, ಕಾಲುಗಳನ್ನು ಹಿಂದೆ-ಮುಂದೆ ಇಟ್ಟು ನಿಂತಿದ್ದಾನೆ. ವೀರ ಮತ್ತು ಆತನ ಪರಿವಾರದವರು ತಮ್ಮ ತಲೆಯ ಮೇಲೆ ಮುಡಿಯನ್ನು ಕಟ್ಟಿರುವರು. ವೀರನ ಕಿವಿಗಳಲ್ಲಿ ಓಲೆಗಳಿವೆ. ಕೈಗಳಲ್ಲಿ ದಪ್ಪನೆಯ ಬಳೆಗಳಿವೆ. ಕೊರಳಿನಲ್ಲಿ ಸರಗಳನ್ನು, ಎದೆಯ ಮೇಲೆ ದಪ್ಪನೆಯ ಯಜ್ಞೋಪವೀತವನ್ನು, ಸೊಂಟಕ್ಕೆ ಕಟಿಯನ್ನು ಮತ್ತು ಬಾಕುವನ್ನು ಕಟ್ಟಿದ್ದಾನೆ. ಎಡಗೈಯಲ್ಲಿರುವ ಆಯತಾಕಾರದ ಗುರಾಣಿಯನ್ನು ಶತ್ರುಗಳ ಕಡೆ ಹಿಡಿದಿದ್ದಾನೆ. ವೀರನಿಗೆ ಸಾಲಾಗಿ ಅನೇಕ ಬಾಣಗಳು ತಗುಲಿವೆ. ಶತ್ರುಪಡೆಯು ಎಡಗಡೆಯಿದ್ದು, ಅವರು ವೀರನ ವಿರುದ್ಧ ಹೋರಾಟಕ್ಕೆ ನಿಂತಿದ್ದಾರೆ. ಶತ್ರುಪಡೆಯನ್ನು ಅಡ್ಡವಾಗಿ ಎರಡು ಸಾಲುಗಳಲ್ಲಿ ಚಿತ್ರಿಸಲಾಗಿದೆ. ಮುಂದಿನ ಒಂದನೆಯ ಸಾಲಿನಲ್ಲಿ ಕತ್ತಿ ಹಿಡಿದ ಕುದುರೆ ದಳದವರನ್ನು ಅವರ ಹಿಂದುಗಡೆ ಬಿಲ್ಲಿನಿಂದ ಬಾಣಗಳನ್ನು ಪ್ರಯೋಗಿಸುವ ಕಾಲ್ದಳದವರಿದ್ದಾರೆ. ಕುದುರೆಗಳು ತಮ್ಮ ಮುಂದಿನ ಕಾಲುಗಳನ್ನು ಬಗ್ಗಿಸಿ ಹಿಂದಿನ ಕಾಲುಗಳನ್ನು ಹಿಂಚಾಚಿ ರಭಸದಿಂದ ಓಡುತ್ತಿರುವಂತೆ ಚಿತ್ರಿಸಲಾಗಿದೆ. ಕೆಳಗಡೆ ಒಬ್ಬನು ಬಿದ್ದಿರುವನು. ಶತ್ರು ಪಡೆಯಲ್ಲಿ ಒಬ್ಬ ಕುದುರೆ ಸವಾರನಿಗೆ ಒಬ್ಬ ಸೇವಕ ಛತ್ರಿಯನ್ನು ಹಿಡಿದಿರುವನು. ಈ ದೃಶ್ಯದ ಬುಡಭಾಗ ಮಣ್ಣಿನಲ್ಲಿ ಹೂತಿದೆ.

ಎರಡನೆಯ ಹಂತದಲ್ಲಿ ಮಡಿದ ವೀರನು ಅಪ್ಸರೆಯರಿಬ್ಬರ ಭುಜದ ಮೇಲೆ ಕೈಗಳನ್ನು ಹಾಕಿ ಆಕಾಶದಲ್ಲಿ ಹಾರುತ್ತಿರುವನು. ಅವರನ್ನು ವೃತ್ತಾಕಾರದ ಪಟ್ಟಿಕೆಯ ಒಳಗಡೆ ಚಿತ್ರಿಸಲಾಗಿದೆ. ತಟ್ಟೆಯಂತಿರುವ ಈ ವೃತ್ತ ಪಟ್ಟಿಕೆಯ ಅಂಚನ್ನು ಮೋಡಗಳ ಅಲೆಗಳಿಂದ ಸೂಚಿಸಲಾಗಿದೆ. ಈ ವೃತ್ತ ಪಟ್ಟಿಕೆಯ ಸುತ್ತ ಬದಿಗಳಲ್ಲಿ ವಾದ್ಯಮೇಳ, ಸಂಗೀತಗಾರರು, ನೃತ್ಯಗಾರ, ಗಂಧರ್ವದವರು ಆಕಾಶದಲ್ಲಿ ಹಾರುತ್ತಿರುವರು. ಈ ದೃಶ್ಯವು ಒಟ್ಟಾರೆ ಮಡಿದ ವೀರರನ್ನು ಸ್ವರ್ಗಲೋಕಕ್ಕೆ ಗಂಧರ್ವರು ಮೆರವಣಿಗೆಯಲ್ಲಿ ಆಕಾಶದಲ್ಲಿ ಚಲಿಸುತ್ತಿರುವಂತೆ ಕಾಣುತ್ತದೆ. ಹಿಂದಕ್ಕೆ ಓರೆಯಾಗಿ ಬಗ್ಗಿಸಿರುವ ವಿನ್ಯಾಸದಿಂದ ಅವರ ದೇಹಾಂಗ ಕಾಲುಗಳು ಅವರ ಚಲನೆಯನ್ನು ಎತ್ತಿ ತೋರಿಸುತ್ತಿವೆ.

ಮೇಲಿನ ಮೂರನೆಯ ಹಂತದಲ್ಲಿರುವ ಗೂಡನ್ನು ಎರಡು ಅರೆಗಂಬಗಳು ಕಪೋತದ ಮೇಲೆ ಮಧ್ಯದಲ್ಲಿ ಭವ್ಯವಾದ ಚೈತ್ರಗವಾಕ್ಷನ್ನು ಹೊತ್ತು ಹಿಡಿದಿವೆ. ಈ ಅರೆಗಂಬಗಳ ಹೊರ ಅಂಚುಗಳಲ್ಲಿ ಎರಡು ಸಿಂಹಗಳು ತಮ್ಮ ಮುಂದಿನ ಕಾಲುಗಳನ್ನು ಎತ್ತಿ ಹಿಡಿದು ನಿಂತಿವೆ. ಅರೆಗಂಬಗಳ ಮಧ್ಯದಲ್ಲಿ ಪ್ರಧಾನವಾಗಿ ಮಡಿದ ವೀರನು ನಾಲ್ವರು ಸೇವಕರ ಜೊತೆಯಲ್ಲಿದ್ದಾನೆ. ಆತ ಮಾತ್ರ ಎತ್ತರದ ಸಿಂಹಾಸನದ ಮೇಲೆ ಸವ್ಯಲಲಿತಾಸನದಲ್ಲಿ ಕಮಲ ಹಿಡಿದು ಕುಳಿತಿರುವನು. ಎಡಗೈಯನ್ನು ಮಡಚಿ ಎಡಗಾಲಿನ ಮೇಲಿಟ್ಟಿರುವನು. ಕಿರೀಟ, ಕುಂಡಲ, ಸರ, ಯಜ್ಞೋಪವಿತ, ಬಳೆ, ವಸ್ತ್ರ, ಕಡಗಗಳನ್ನು ಧರಿಸಿದ್ದಾನೆ. ಆತನ ಕೆಳಬದಿಗಳಲ್ಲಿಬ್ಬರು ಸೇವಕಿಯರು ಕಮಲ ಹಿಡಿದು ಕುಳಿತಿದ್ದಾರೆ. ಆತನ ತಲೆಯ ಬದಿಗಳಲ್ಲಿಬ್ಬರು ಸೇವಕಿಯರು ಚೌರಿ ಹಿಡಿದು ಬಾಗಿ ನಿಂತಿದ್ದಾರೆ. ಚೈತ್ಯಗವಾಕ್ಷದ ಮೇಲೆ ಕೀರ್ತಿಮುಖ ಮತ್ತು ಸುತ್ತಲೂ ಅಲಂಕರಣವಿದೆ. ಶಿಲ್ಪದ ತುದಿ ಭಾಗದಲ್ಲಿ ಶಾಲಾ ಮಾದರಿ ಇದ್ದು, ಅದರ ಮಧ್ಯದಲ್ಲಿರುವ ಕಳಸದ ತುದಿ ಮುರಿದಿದೆ. ಈ ವೀರಗಲ್ಲಿನ ಕಾಲ ಸುಮಾರು.ಕ್ರಿ.ಶ. ೯ನೆಯ ಶತಮಾನ.

ಎರಡು ಮೂರನೆಯ ಹಂತದಲ್ಲಿ ಚೈತ್ಯಗವಾಕ್ಷದ ಎರಡೆರಡು ಅರೆಗಂಬಗಳುಳ್ಳ ಎರಡು ಗೂಡುಗಳಿವೆ. ಎರಡನೆಯ ಹಂತದಲ್ಲಿ ವೀರನು ಅಪ್ಸರೆಯರ ಹೆಗಲ ಮೇಲೆ ಕೈಗಳನ್ನು ಹಾಕಿ ಆಕಾಶದಲ್ಲಿ ಹಾರುತ್ತಿರುವನು. ಸುತ್ತಲೂ ತಟ್ಟೆಯಂತಹ ಅಂಚುಳ್ಳ ಮೋಡಗಳ ತೆರೆಗಳಿವೆ. ಮೇಲ್ಭಾಗದಲ್ಲಿ ತುತ್ತೂರಿ ಊದುವ, ಹಾರ ಹಿಡಿದ ಮತ್ತು ನೃತ್ಯಗಾರರುಳ್ಳ ಗಂಧರ್ವರಿದ್ದಾರೆ. ಅದರ ಮೇಲೆ ಕಪೋತ ಪಟ್ಟಿಕೆಯಿದ್ದು, ಅದರ ಮೇಲ್ಗಡೆ ನಾಲ್ವರು ಸೇವಕಿಯರ ಜೊತೆ ಮಡಿದ ವೀರ ಕುಳಿತಿದ್ದಾನೆ. ಈ ಗವಾಕ್ಷವನ್ನು ಶಾಲಾ ಮಾದರಿಯ ಮೇಲೆ ಕಂಡರಿಸಲಾಗಿದೆ. ಮೇಲ್ಗಡೆ ಮಧ್ಯ ಕಳಸವಿದೆ. ಈ ವೀರಗಲ್ಲಿನ ಕಾಲ ಸುಮಾರು.ಕ್ರಿ.ಶ. ೯ನೆಯ ಶತಮಾನದ ಆದಿಭಾಗ. (ರಾಷ್ಟ್ರಕೂಟ ಹಿರೋಸ್ಟೋನ್, ರಾಜಶೇಖರ ಎಸ್. ಧಾರವಾಡ–೧೯೮೨)

ಬೆಟಗೇರೆ ರಾಷ್ಟ್ರಕೂಟರ ಕಾಲದ ವೀರಗಲ್ಲಿನಲ್ಲಿ ವೀರನು ಶತ್ರುಗಳ ವಿರುದ್ಧ ಎತ್ತಿಹಿಡಿದ ಆಯತಾಕಾರದ ಗುರಾಣಿಗೆ ಮೇಲಿಂದ ಕೆಳಕ್ಕೆ ಸಾಲಾಗಿ ಬಾಣಗಳು ಚುಚ್ಚಿರುವುದನ್ನು ತೋರಿಸಲಾಗಿದೆ. ಬಲಗೈಯಲ್ಲಿ ಡೊಂಕು ಕತ್ತಿ ಹಿಡಿದಿದ್ದಾನೆ. ಆತನ ಕಾಲುಗಳ ಕೆಳಗಡೆ ನೆಲದ ಮೇಲೆ ಕೆಲವರು ಬಿದ್ದಿದ್ದಾರೆ. ಶತ್ರು ಸೈನ್ಯದಲ್ಲಿ ಕೆಲವರು ಕುದುರೆ ಸವಾರರಿದ್ದಾರೆ. ಉಳಿದವರು ಕಾಲ್ದಳದವರಾಗಿದ್ದಾರೆ. ಕುದುರೆ ಸವಾರಿ ಮಾಡುವ ವೈರಿಯು ಒಂದು ಕೈಯಲ್ಲಿ ಕತ್ತಿಯನ್ನು ಹಿಡಿದು ಮೇಲಕ್ಕೆತ್ತಿದ್ದಾನೆ. ಉಳಿದವರು ಬಿಲ್ಲುಗಳಿಂದ ಬಾಣಗಳನ್ನು ಪ್ರಯೋಗಿಸುತ್ತಿರುವರು. ಎರಡನೆಯ ಹಂತದಲ್ಲಿ ವೀರನು ಸೇವಕಿಯರ ಹೆಗಲ ಮೇಲೆ ಕೈಹಾಕಿದ್ದಾನೆ. ಇವರ ಕೈಗಳಲ್ಲಿ ಕಮಲಗಳಿದ್ದರೆ, ಮೇಲ್ಗಡೆಯ ಸೇವಕಿಯರ ಕೈಗಳಲ್ಲಿ ಚೌರಿಗಳಿವೆ. ವೀರನು ಕಿರೀಟಧಾರಿ, ಓಲೆ, ಸರ, ಪಟ್ಟಿ, ಬಳೆ, ಕಡಗ ಧರಿಸಿರುವನು. ಈ ವೀರಗಲ್ಲಿನ ಮಧ್ಯದಲ್ಲಿ ಕೀರ್ತಿಮುಖವಿದ್ದರೆ, ಗವಾಕ್ಷದ ಬದಿಗಳಲ್ಲಿ ಮಕರಗಳನ್ನು ಚಿತ್ರಿಸಲಾಗಿದೆ. ಶಿಲ್ಪದ ತುದಿ ಮಧ್ಯದಲ್ಲಿ ಕಳಸವಿದೆ. ಕಾಲ

ಸುಮಾರು.ಕ್ರಿ.ಶ.೯ನೆಯ ಶತಮಾನದ ಮಧ್ಯಭಾಗ. (ರಾಷ್ಟ್ರಕೂಟ ಹಿರೋಸ್ಟೋನ್, ರಾಜಶೇಖರ, ಎಸ್. ಧಾರವಾಡ-೧೯೮೨)

ಮತ್ತೊಂದು ವೀರಗಲ್ಲು ಶಿಲ್ಪದಲ್ಲಿ ವೀರನು ಕುದುರೆ ಸವಾರಿ ಮಾಡುವ ಶತ್ರುಗಳ ವಿರುದ್ಧ ಕತ್ತಿ ಗುರಾಣಿ ಹಿಡಿದು ಹೋರಾಡುತ್ತ ನಿಂತಿದ್ದಾನೆ. ತನ್ನ ಕಾಲ್ದಳದವರನ್ನು ಕಿರಿದಾಗಿ ಮೂರು ಸಾಲುಗಳಲ್ಲಿ ಚಿತ್ರಿಸಲಾಗಿದೆ. ಶತ್ರು ದಳದವರು ಕತ್ತಿಯನ್ನು ಹಿಡಿದಿದ್ದಾರೆ. ಎರಡನೆಯ ಹಂತದಲ್ಲಿರುವ ದೃಶ್ಯದಲ್ಲಿ ವೃತ್ತಾಕಾರ ಪಟ್ಟಿಕೆಯಲ್ಲಿ ಮಡಿದ ವೀರ ಅಪ್ಸರೆಯರ ಹೆಗಲ ಮೇಲೆ ಕೈಗಳನ್ನು ಹಾಕಿ ಹಾರುತ್ತಿರುವನು. ಅವರನ್ನು ತಟ್ಟೆಯಂತಹ ಮೋಡಗಳ ನಡುವೆ ಚಿತ್ರಿಸಲಾಗಿದೆ. ವೀರನ ಎಡಗಡೆಗೆ ಹಾರ ಹಿಡಿದವರು, ನೃತ್ಯ ಮಾಡುವವರಿದ್ದಾರೆ. ಬಲಗಡೆಗೆ ಚಿತ್ರಗಳನ್ನು ಬಿಡಿಸಲು ಜಾಗ ಮಾಡಲಾಗಿದೆ. ಆದರೆ ಚಿತ್ರಗಳನ್ನು ಕೆತ್ತಿಲ್ಲ. ಹೀಗಾಗಿ ಇದೊಂದು ಅಪೂರ್ಣ ವೀರಗಲ್ಲೆಂದು ಹೇಳಬಹುದು. ಈ ದೃಶ್ಯವನ್ನು ಎರಡು ಅರೆಗಂಬಗಳ ಮಧ್ಯ ಚಿತ್ರಿಸಲಾಗಿದೆ. ಆದರೆ ಮೇಲೆ ಮಧ್ಯದಲ್ಲಿ ಕಪೋತಪಟ್ಟಿಕೆಯ ಮೇಲೆ ಕೇವಲ ಚೈತ್ಯ ತುದಿ ಮಧ್ಯ ಕೀರ್ತಿಮುಖವಿದ್ದರೆ, ಬಸದಿಗಳ ತುದಿಯಲ್ಲಿ ಮಕರ ತಲೆಗಳಿವೆ. ಶಿಲ್ಪದ ಮೇಲ್ಭಾಗದ ತುದಿಯಲ್ಲಿ ಕಳಸವಿದೆ. ಕಾಲಮಾನ ಸುಮಾರು ಕ್ರಿ.ಶ. ೯ನೆಯ ಶತಮಾನದ ಮಧ್ಯಭಾಗ (ಎ ಸ್ಟಡಿ ಮೆಮೋರಿಯಲ್ ಸ್ಟೋನ್ಸ್, ಶೆಟ್ಟರ್ ಎಸ್. ಧಾರವಾಡ-೧೯೮೨)

ಅಲ್ಲಿಯ ಮತ್ತೊಂದು ವೀರಗಲ್ಲಿನ ಬುಡಭಾಗ ಮಣ್ಣಲ್ಲಿ ಹೂತಿದೆ. ಕೇವಲ ಎರಡು ದೃಶ್ಯಗಳಿದ್ದು, ಕೆಲವು ವಿಶೇಷ ಅಂಶಗಳನ್ನು ಕಾಣಬಹುದು. ವೀರನು ಅಪ್ಸರೆಯರ ಹೆಗಲ ಮೇಲೆ ಕೈಗಳನ್ನು ಹಾಕಿ ಆಕಾಶದಲ್ಲಿ ಹಾರುತ್ತಿದ್ದು, ಅವರ ಸುತ್ತಲೂ ಇಲ್ಲಿಯೂ ಮೋಡದ ಪಟ್ಟಿಕೆ ಆವರಿಸಿದೆ. ದುಂಡ ಪಟ್ಟಿಕೆಯಿದೆ. ಬದಿಗಳಲ್ಲಿ ವಾದ್ಯ, ನೃತ್ಯ, ಮೇಳವಲ್ಲದೆ ಎಡಗಡೆಗೆ ಮೇಲ್ಭಾಗದಲ್ಲಿ ಶಿವಲಿಂಗ ಮತ್ತು ಅದರ ಎದುರು ಕುಳಿತ ನಂದಿಯನ್ನು ಚಿತ್ರಿಸಲಾಗಿದೆ. ಈ ದೃಶ್ಯವನ್ನು ಎರಡು ಅರೆಗಂಬಗಳ ಮಧ್ಯೆ ಚಿತ್ರಿಸಲಾಗಿದೆ. ಅರೆಗಂಬ ಪಟ್ಟಿಕೆ ಅಗಲವಾಗಿದ್ದು, ಅವುಗಳಲ್ಲಿ ಎಲೆ-ಬಳ್ಳಿಗನ್ನಿಟ್ಟ ಪೂರ್ಣಕುಂಭವಿದೆ. ಎರಡನೆಯ ಪಟ್ಟಿಕೆಯಲ್ಲಿ ಚೈತ್ಯಗವಾಕ್ಷವುಳ್ಳ ಗೂಡು ಎರಡು ಅರೆಗಂಬಳಿಂದ ಕೂಡಿದೆ. ಮಡಿದ ವೀರ ಕುಳಿತ ಸಿಂಹಾಸನ ಪೀಠಕ್ಕೆ ಹೂಬಳ್ಳಿಯ ಅಲಂಕಾರವಿದೆ ಹಾಗೂ ಕುಳಿತ ಪಟ್ಟಿಕೆಯಲ್ಲಿ ಮಕರಗಳಿವೆ. ಆತನ ಪೀಠದ ಬದಿಗಳಲ್ಲಿ ಇಬ್ಬರು ದಾಸಿಯರು ಕಮಲ ಹಿಡಿದು ಕುಳಿತಿದ್ದಾರೆ. ಆತನ ತಲೆಯ ಬದಿಗಳಲ್ಲಿ ಇಬ್ಬರು ಕಮಲ ಹಿಡಿದು ನಿಂತಿದ್ದಾರೆ. ವೀರನ ತಲೆಯ ಮೇಲ್ಗಡೆ ಚೈತ್ಯಗವಾಕ್ಷ ಮಧ್ಯದಿಂದ ಮೂರು ಹೂಗಳುಳ್ಳ ಗೊಂಚಲು ಇಳಿಬಿದ್ದಿದೆ. ಈ ವೀರಗಲ್ಲಿನ ಕಾಲ ಸುಮಾರು ಕ್ರಿ.ಶ. ೯ನೆಯ ಶತಮಾನ.

ಅಲ್ಲಿಯೇ ಮತ್ತೊಂದು ಶಿಲ್ಪದಲ್ಲಿ ಯುದ್ಧ ದೃಶ್ಯದಲ್ಲಿ ವೀರನು ಉದ್ದನೆಯ ಈಟಿ ಹಿಡಿದು ಕುದುರೆ ಏರಿರುವ ಶತ್ರುವಿನತ್ತ ನಿಂತಿರುವನು. ವೈರಿಗಳು ಬಿಟ್ಟ ಬಾಣಗಳು ಅವನ ಮೈಗೆ ಚುಚ್ಚಿವೆ.

ಅವನ ಪರಿವಾರದಲ್ಲಿ ಇನ್ನಿಬ್ಬರು ಇದ್ದು ಅವರು ಡೊಂಕಾದ ಕತ್ತಿ ಮತ್ತು ಆಯತಾಕಾರದ ಗುರಾಣಿಗಳನ್ನು ಹಿಡಿದು ನಿಂತಿದ್ದಾರೆ. ವೈರಿಯು ಒಂದೇ ಕೈಯಲ್ಲಿ ಕುದುರೆಯ ಕಡಿವಾಣವನ್ನು ಇನ್ನೊಂದು ಕೈಯಲ್ಲಿ ಕತ್ತಿಯನ್ನು ಹಿಡಿದು ಮೇಲೆತ್ತಿದ್ದಾನೆ. ಅವನ ಕುದುರೆಯ ಕಾಲಿನ ಕೆಳಗಡೆ ಶತ್ರು ಪಡೆಯವರು ನೆಲದ ಮೇಲೆ ಬಿದ್ದು ಒದ್ದಾಡುತ್ತಿರುವಂತೆ ಚಿತ್ರಿಸಲಾಗಿದೆ. ಅವನ ಪಡೆಯ ಇಬ್ಬರು ಬಿಲ್ಲಿನಿಂದ ಬಾಣಗಳನ್ನು ಪ್ರಯೋಗಿಸುತ್ತ ನಿಂತಿದ್ದಾರೆ. ವೀರನ ಪಡೆಯವರ ಇಬ್ಬರ ಚಿತ್ರಗಳು ಬಿಡಿಬಿಡಿಯಾಗಿವೆ. ಗಾತ್ರದಲ್ಲಿ ದೊಡ್ಡವಿದ್ದು, ವೀರನಿಗಿಂತ ಸ್ವಲ್ಪ ಕಡಿಮೆ ಗಾತ್ರದಲ್ಲಿವೆ. ಎರಡನೆಯ ಹಂತದಲ್ಲೂ ವೀರನು ಅಪ್ಸರೆಯರ ಹೆಗಲ ಮೇಲೆ ಕೈಗಳನ್ನು ಹಾಕಿ ಹಾರುತ್ತಿದ್ದಾನೆ. ಅವರ ಜೊತೆಯಲ್ಲಿ ಇನ್ನಿಬ್ಬರು ಮಹಿಳೆಯರು ಒಂದು ಕೈಯನ್ನು ಎತ್ತಿ ಇನ್ನೊಂದು ಕೈಯಲ್ಲಿ ಕಮಲವನ್ನು ಹಿಡಿದು ಎತ್ತಿಕೊಂಡು ಹಾರುತ್ತಿರುವುದು ವಿಶೇಷವಾಗಿದೆ. ಈ ದೃಶ್ಯ ಆಯತಾಕಾರದಲ್ಲಿದೆ. ಮುಂಭಾಗದಲ್ಲಿ ಮೋಡ ಚಿಹ್ನೆ ಪಟ್ಟಿಕೆಯಿದೆ. ಮೇಲ್ಭಾಗದಲ್ಲಿ ಮದ್ದಳೆ ಇತ್ಯಾದಿಗಳ ಚಿಹ್ನೆಗಳಿವೆ. ಈ ದೃಶ್ಯವನ್ನು ಎರಡು ಅರೆಗಂಬಗಳ ಮಧ್ಯ ಚಿತ್ರಿಸಲಾಗಿದೆ. ಅದರ ಮೇಲೆ ಕಪೋತಪಟ್ಟಿಕೆಯ ಮೇಲೆ ಕೇವಲ ಚೈತ್ಯಗವಾಕ್ಷವಿದೆ. ಚೈತ್ಯಗವಾಕ್ಷದ ಬದಿಗಳಲ್ಲಿ ಹೊರ ಮಗ್ಗಲು ಅಲಂಕಾರ ಪಟ್ಟಿಕೆಗಳಿವೆ. ಒಳಗಡೆ ಇಲ್ಲಿಯೂ ವೀರನು ನಾಲ್ವರು ಅಪ್ಸರೆಯರ ನಡುವೆ ವೇದಿಕೆಯ ಮೇಲೆ ಕುಳಿತಿದ್ದಾನೆ. ಚೈತ್ಯದ ತುದಿಯಲ್ಲಿ ಕೀರ್ತಿಮುಖವಿದೆ. ಶಿಲ್ಪದ ತುದಿಯಲ್ಲಿ ಕಳಸವಿದೆ. ಇದರ ಕಾಲ ಕ್ರಿ.ಶ. ೯ನೇ ಶತಮಾನದ ಮಧ್ಯಭಾಗ.

ಇನ್ನೊಂದು ಮಾದರಿ ಶಿಲ್ಪದಲ್ಲೂ ವೀರನು ಡೊಂಕು ಕತ್ತಿ ಮತ್ತು ಆಯತಾಕಾರದ ಗುರಾಣಿ ಹಿಡಿದು ಶತ್ರುಪಡೆಯ ಕುದುರೆ ಸವಾರರ ವಿರುದ್ಧ ಹೋರಾಡುತ್ತ ನಿಂತಿದ್ದಾನೆ. ಶತ್ರು ಪಡೆಯಲ್ಲಿ ಕಾಲ್ದಳದವರಿದ್ದಾರೆ. ಎರಡನೆಯ ಹಂತದಲ್ಲಿ ವೀರನು ಅಪ್ಸರೆಯರ ಹೆಗಲಿಗೆ ತನ್ನ ಕೈಗಳನ್ನು ಹಾಕಿ ಹಾರುತ್ತಿದ್ದಾನೆ. ಬದಿಗಳಲ್ಲಿ ಹಾರ ಹಿಡಿದವರು, ತುತ್ತೂರಿ ಊದುವವರು, ಮೃದಂಗ ಬಾರಿಸುವವರು ಮುಂತಾದವರಿದ್ದಾರೆ. ಮೂರನೆಯ ಹಂತದಲ್ಲೂ ವೀರನು ನಾಲ್ವರು ಅಪ್ಸರೆಯರ ನಡುವೆ ಸಿಂಹಾಸನದ ಮೇಲೆ ಕಮಲ ಹಿಡಿದು ಕುಳಿತಿದ್ದಾನೆ. ಇಬ್ಬರು ಕಮಲ ಹಿಡಿದು ಆತನ ಪಾದಗಳ ಬದಿಗಳಲ್ಲಿ ಕುಳಿತಿದ್ದಾರೆ. ಇನ್ನಿಬ್ಬರು ಆತನ ತಲೆಯ ಬದಿಗಳಲ್ಲಿ ಓರೆಯಾಗಿ ಬಗ್ಗಿಕೊಂಡು ನಿಂತಿದ್ದಾರೆ. ಈ ದೃಶ್ಯವನ್ನು ಚೈತ್ಯಗವಾಕ್ಷವುಳ್ಳ ಎರಡು ಅರೆಗಂಬಗಳ ನಡುವೆ ಚಿತ್ರಿಸಲಾಗಿದೆ. ಚೈತ್ಯಗವಾಕ್ಷದ ಮೇಲೆ ದ್ರಾವಿಡ ಮಾದರಿಯ ದೇವಾಲಯ ನಮೂನೆಯಿದೆ. ಅದರ ಅರೆಗಂಬಗಳ ಹೊರಬದಿಗಳಲ್ಲಿ ಮುಂದಿನ ಕಾಲುಗಳನ್ನು ಮೇಲೆತ್ತಿ ನಿಂತ ಸಿಂಹಗಳಿದ್ದರೆ, ಒಳಗಡೆ ಶಿವಲಿಂಗವೊಂದನ್ನು ಸುಂದರವಾಗಿ ಚಿತ್ರಿಸಲಾಗಿದೆ. ಶಿಲ್ಪದ ತುದಿಯು ಶಾಲಾ ಮಾದರಿಯಲ್ಲಿದ್ದು, ಮಧ್ಯೆ ಕಳಸವಿದೆ. ಇದರ ಕಾಲ ಕ್ರಿ.ಶ. ೯ನೆಯ ಶತಮಾನ.

ಈ ಮಾದರಿಯ ಮತ್ತೊಂದು ವೀರಗಲ್ಲಿನಲ್ಲಿ ಯುದ್ಧ ದೃಶ್ಯದಲ್ಲಿ ನಡುವೆ ಇಬ್ಬರು ವೀರರನ್ನು ಒಂದೇ ಗಾತ್ರದಲ್ಲಿ ದೊಡ್ಡದಾಗಿ ಚಿತ್ರಿಸಲಾಗಿದೆ. ಅವರ ಪರಿವಾರದಲ್ಲಿರುವ ಸೈನ್ಯದಳವನ್ನು

ಕಿರಿದಾಗಿ ಮೂರು ಸಾಲುಗಳಲ್ಲಿ ಚಿತ್ರಿಸಲಾಗಿದೆ. ಮುಂದೆ ಆ ವೀರನ ಎದುರಿಗಿನ ಶತ್ರುಪಡೆಯಲ್ಲಿ ಕುದುರೆ ಸವಾರರಿದ್ದಾರೆ. ವೀರನು ಆ ಕುದುರೆಗಳ ಎದುರು ತನ್ನ ಆಯತಾಕಾರದ ಗುರಾಣಿಯನ್ನು ಎದುರು ಹಿಡಿದು ನಿಂತಿದ್ದಾನೆ. ಬಲಗೈ ದೇಹದ ಮೇಲಿಟ್ಟದ್ದಾನೆ. ತನ್ನ ಪಡೆಯವರು ಕತ್ತಿಗಳನ್ನು ಮತ್ತು ಶತ್ರು ಪಡೆಯವರು ಬಿಲ್ಲುಗಳನ್ನು ಹಿಡಿದಿರುವರು. ಅದರ ಮೇಲಿನ ಎರಡು ಮತ್ತು ಮೂರನೆಯ ಹಂತಗಳನ್ನು ಎರಡು ಅರೆಗಂಬಗಳ ಒಳಗಡೆ ಚಿತ್ರಿಸಲಾಗಿದೆ. ಕೆಳಗಡೆ ವೀರನು ಅಪ್ಸರೆಯರಿಬ್ಬರು ಹೆಗಲ ಮೇಲೆ ಕೈಗಳನ್ನು ಹಾಕಿ ಹಾರುತ್ತಿದ್ದರೆ, ಆತನ ಬದಿಗಳಲ್ಲಿ ತುತ್ತೂರಿ ಊದುವವರು, ಮದ್ದಳೆ ಬಾರಿಸುವವರು, ನೃತ್ಯಗಾರರುಳ್ಳ, ಗಂಧರ್ವರನ್ನೊಳಗೊಂಡ ಆಕಾಶ ಮೆರವಣಿಗೆಯಿದೆ. ಮೇಲಿನ ಹಂತದಲ್ಲಿ ಕಮಲ ಹಿಡಿದು ನಿಂತು ನಾಲ್ವರು ಅಪ್ಸರೆಯರ ನಡುವೆ ಮಡಿದ ವೀರನು ವೇದಿಕೆಯ ಮೇಲೆ ಕಮಲ ಹಿಡಿದು ಕುಳಿತಿದ್ದಾನೆ. ಇವನ್ನು ಒಂದೇ ಸಾಲಿನಲ್ಲಿ ಚಿತ್ರಿಸಲಾಗಿದೆ. ಅರೆಗಂಬಗಳು ವಿಭಿನ್ನ ಮಾದರಿಯಲ್ಲಿವೆ. ಅದರ ಕಪೋತಪಟ್ಟಿಕೆಯ ಮೇಲೆ ಆಳವಲ್ಲದ ಚೈತ್ರಗವಾಕ್ಷವಿದೆ. ಅದರಲ್ಲಿ ಉಗ್ರನರಸಿಂಹನನ್ನು ಕಂಡರಿಸಲಾಗಿದೆ. ಈ ಚೈತ್ಯದ ಹೊರಬದಿಗಳಲ್ಲಿ ಓಡುವ ಸಿಂಹಗಳು ಮತ್ತು ಅಂಚಿನಲ್ಲಿ ಮಕರಗಳಿವೆ. ಚೈತ್ಯದ ಮೇಲೆ ಕೀರ್ತಿಮುಖವಿದೆ. ಶಿಲ್ಪತುದಿ ನಡುವೆ ಕಳಸವಿದೆ. ಇದರ ಕಾಲಮಾನ ಸುಮಾರು ಕ್ರಿ.ಶ. ೯ನೆಯ ಶತಮಾನದ ಮಧ್ಯಭಾಗ.

ಬೆಟಗೇರಿಯ ಎರಡನೆಯ ಗುಂಪಿನ ವೀರಗಲ್ಲುಗಳಲ್ಲಿ ಮಡಿದ ವೀರನನ್ನು ಚೈತ್ಯಗವಾಕ್ಷವುಳ್ಳ ಹಂತದಲ್ಲಿ ಚಿತ್ರಿಸಿಲ್ಲ. ಅದರಲ್ಲಿ ಕೆಲವು ವಿನ್ಯಾಸಗಳ ವಿವರಣೆಗಳಿಲ್ಲ. ಕೆಲವು ವಿಭಿನ್ನ ಅಂಶಗಳಿವೆ. ಒಂದರಲ್ಲಿ ಯುದ್ಧ ದೃಶ್ಯದಲ್ಲೂ ಸಹ ವೀರನು ಡೊಂಕು ಕತ್ತಿ ಹಿಡಿದು ಎತ್ತಿ ಆಯತಾಕಾರದ ಗುರಾಣಿಯನ್ನು ಶತ್ರುಪಡೆಯ ಕುದುರೆ ಸವಾರರಿಗೆ ಹಿಡಿದು ವೀರಾವೇಶದಿಂದ ನಿಂತಿದ್ದಾನೆ. ಆತನ ಜೊತೆ ಕಾಲ್ದಳದವರಿದ್ದಾರೆ. ಅವರನ್ನು ಸಹ ಮೂರು ಸಾಲುಗಳಲ್ಲಿ ಕಿರಿದಾಗಿ ಚಿತ್ರಿಸಲಾಗಿದೆ. ಶತ್ರುಪಡೆಯಲ್ಲಿ ಕಾಲ್ದಳದವರು ಇದ್ದಾರೆ. ಈ ದೃಶ್ಯದ ಕೆಳಗಡೆ ನೇಗಿಲ ಚಿಹ್ನೆಯಿದೆ. ಎರಡನೆಯ ಹಂತದಲ್ಲೂ ಮಡಿದ ವೀರ ಅಪ್ಸರೆಯರ ಹೆಗಲಿಗೆ ಕೈಗಳನ್ನೂ ಹಾಕಿ ಹಾರುತ್ತಿರುವನು. ಅವರ ಸುತ್ತಲೂ ಮೋಡದ ಚಿಹ್ನೆಯನ್ನು ಮೇಲ್ಭಾಗದಲ್ಲಿ ಚಿತ್ರಿಸಲಾಗಿದೆ. ಬದಿಗಳಲ್ಲಿ ವಾದ್ಯಮೇಳ, ನೃತ್ಯಮೇಳ ಮತ್ತು ಸಂಗೀತ ಮೇಳದವರಿದ್ದಾರೆ. ಈ ಆಯತಾಕಾರದ ದೃಶ್ಯದ ಸುತ್ತ ಮೋಡದ ಅಲಂಕರಣವಿದೆ. ಅದರ ಮೇಲಿನ ಹಂತದಲ್ಲಿ ಚೌಕಾದ ಗೂಡಿದೆ. ಚೌಕಾಗೂಡು ಪಟ್ಟಿಕೆಯ ಮಧ್ಯೆ ಇಬ್ಬರು ಚೌರಿ ಹಿಡಿದು ನಿಂತ ಸೇವಕಿಯರ ನಡುವೆ ವೇದಿಕೆಯ ಮೇಲೆ ಕಮಲ ಹಿಡಿದು ಮಡಿದ ವೀರ ಕುಳಿತಿದ್ದಾನೆ. ಮೇಲಿನ ಭಾಗದಲ್ಲಿ ಕಪೋತ ಪಟ್ಟಿಕೆಯಿದೆ. ಇದೊಂದು ಆಧುನಿಕ ಚಿತ್ರಪಟದಂತೆ ಗೋಡೆಗೆ ತೂಗುಹಾಕಿದಂತೆ ಕಾಣುವುದು ಗಮನರ್ಹವಾಗಿದೆ. ಈ ಚಿತ್ರಪಟ್ಟಕ್ಕೆ ನಾಲ್ಕು ಕಡೆಗಳಲ್ಲಿ ಪಟ್ಟಿಕೆಗಳಿವೆ. ಈ ಪಟ್ಟಿಯನ್ನು ಎರಡು ಅರೆಗಂಬಗಳ ನಡುವೆ ಹಾಕಲಾಗಿದೆ. ಈ ಚಿತ್ರಪಟದ ಪಟ್ಟಿಕೆಯ ಮೇಲೆ ಮಕರಗಳ, ಸಿಂಹಗಳ ಚಿತ್ರಗಳಿವೆ. ಮೇಲಿನ

ಶಿಲ್ಪ ಭಾಗವು ಶಾಲಾ ಮಾದರಿಯಲ್ಲಿದ್ದು, ಮಧ್ಯದಲ್ಲಿ ಕಳಸವಿದೆ. ಈ ವೀರಗಲ್ಲಿನ ಕಾಲ ಸುಮಾರು ಕ್ರಿ.ಶ. ೯ನೆಯ ಶತಮಾನ ಮಧ್ಯಭಾಗ.

ಈ ಮಾದರಿಯ ಮತ್ತೊಂದು ವೀರಗಲ್ಲಿನ ಮೇಲೆ ಬಲಭಾಗ ಅಡ್ಡವಾಗಿ ಮುರಿದಿದೆ. ಇದರಿಂದ ಶಿಲ್ಪದ ಮೂರನೆಯ ಹಂತದ ಮೇಲಿನ ಬಲಭಾಗದಿಂದ ಮೇಲ್ತುದಿಯವರೆಗಿನ ಚಿತ್ರಗಳು ತಿಳಿಯುವುದಿಲ್ಲ. ಈ ಮೇಲೆ ಹೇಳಿದಂತೆ ಮೊದಲನೆಯ ದೃಶ್ಯದಲ್ಲೂ ಡೊಂಕು ಕತ್ತಿ ಹಿಡಿದೆತ್ತಿ ಆಯತಾಕಾರದ ಗುರಾಣಿಯನ್ನು ಶತ್ರು ಕುದುರೆಗೆ ಹಿಡಿದು ವೀರಾವೇಶದಿಂದ ವೀರ ನಿಂತಿದ್ದಾನೆ. ಇಬ್ಬರ ಪಡೆಗಳನ್ನು ಕಿರಿದಾಗಿ ತಲಾ ಒಂದು ಕಡೆ ಮೂರು ಸಾಲುಗಳಲ್ಲಿ ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ಚಲಿಸುವ ಮೋಡಗಳ ನಡುವೆ ವೀರ ಅಪ್ಸರೆಯರ ಹೆಗಲ ಮೇಲೆ ಕೈಗಳನ್ನು ಹಾಕಿ ಹಾರುತ್ತಿದ್ದಾನೆ. ಬದಿಗಳಲ್ಲಿ ವಾದ್ಯ, ನೃತ್ಯ, ಸಂಗೀತ ಮೇಳದ ಗಂಧರ್ವರಿದ್ದಾರೆ. ಮೂರನೆಯ ಹಂತದಲ್ಲಿ ಕೆಲವು ವಿಶೇಷ ಅಂಶಗಳಿವೆ. ವೇದಿಕೆಯ ಮೇಲೆ ವೀರನು ಕಮಲ ಹಿಡಿದು ಕುಳಿತಿದ್ದಾನೆ. ಆತನ ಬದಿಗಳಲ್ಲಿ ಮೃದಂಗ ಬಾರಿಸುವವರು, ಕೊಳಲನ್ನೂದುತ್ತಿರುವವರು, ಚಾಮರ ಬೀಸುವವರು, ನೃತ್ಯ ಮಾಡುತ್ತಿರುವವರು ಮುಂತಾದವರಿದ್ದಾರೆ. ವೀರನ ತಲೆಯ ಮೇಲೆ ದಪ್ಪನೆಯ ಹಾವಿನ ಹಾರ ಜೋತುಬಿದ್ದಿದೆ. ಇದು ವೀರನು ಸ್ವರ್ಗಲೋಕದಲ್ಲಿ ವಾದ್ಯ, ನೃತ್ಯ, ಸಂಗೀತ ಪರಿಸರವನ್ನುಂಡು ಸವಿಯುವುದನ್ನು ವ್ಯಕ್ತಪಡಿಸುತ್ತದೆ. ಮೇಲಿನ ಅಳಿದುಳಿದ ಭಾಗದಲ್ಲಿ ಚೈತ್ಯ ನಮೂನೆ, ಆನೆ ಇತ್ಯಾದಿ ಚಿತ್ರಗಳಿವೆ. ಇದರ ಕಾಲಮಾನ ಸುಮಾರು ಕ್ರಿ.ಶ. ೯ನೆಯ ಶತಮಾನದ ಮಧ್ಯಭಾಗ.

ಮತ್ತೊಂದು ವೀರಗಲ್ಲಿನ ಕೆಲವು ಅಂಶಗಳು ವಿಶೇಷ ಗಮನವನ್ನು ಸೆಳೆಯುತ್ತವೆ. ಯುದ್ಧ ದೃಶ್ಯದ ಪಟ್ಟಿಕೆಯಲ್ಲಿ ಮತ್ತು ವೀರ ವೈರಿಯನ್ನು ಮುಖ್ಯವಾಗಿ ಗುರುತಿಸಲು ಅವರ ಚಿತ್ರಗಳನ್ನು ದೊಡ್ಡದಾಗಿ ತೋರಿಸಲಾಗಿದೆ. ವೀರನು ಡೊಂಕು ಕತ್ತಿಯನ್ನು ಆಯತಾಕಾರದ ಗುರಾಣಿಯನ್ನು ಹಿಡಿದು ಕುದುರೆ ಸವಾರಿ ಮಾಡುವ ವೈರಿಯ ವಿರುದ್ಧ ನಿಂತಿದ್ದಾನೆ. ಈರ್ವರ ಬದಿಗಳಲ್ಲಿ ಮೂರು ಸಾಲುಗಳಲ್ಲಿ ಮತ್ತು ಮೇಲ್ಗಡೆ ಅವರಿಬ್ಬರ ಸೈನ್ಯ ಪಡೆಯವರನ್ನು ತೋರಿಸಲಾಗಿದೆ. ಈ ವೀರ ಸೈನ್ಯ ಪಡೆಯವರು ಕೈಗಳಲ್ಲಿ ಬಾಗಿದ ಕತ್ತಿಗಳನ್ನೂ, ವೈರಿ ಪಡೆಯವರು ಬಿಲ್ಲುಗಳನ್ನೂ ಹಿಡಿದು ಹೋರಾಟದಲ್ಲಿ ಧುಮುಕುತ್ತಿರುವರು. ವೀರನ ಗುರಾಣಿಗೆ ಬಾಣಗಳು ನೆಟ್ಟಿವೆ. ವೈರಿಯು ಕುದುರೆಯಿಂದ ಕೆಳಗಡೆಗೆ ವೀರನ ಪಾದಕ್ಕೆ ಬಿದ್ದು ನಮಸ್ಕರಿಸುತ್ತಿರುವನು. ಕುದುರೆಯ ಹಿಂದೆ ಒಬ್ಬ ಸೇವಕ ಛತ್ರಿಯನ್ನು ಎತ್ತಿ ಹಿಡಿದಿದ್ದಾನೆ. ಎರಡು ಪಡೆಗಳ ಕೆಲವರು ಹೋರಾಡುವುದನ್ನು ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ಮಡಿದ ವೀರನನ್ನು ಸ್ವರ್ಗಲೋಕಕ್ಕೆ ಅಪ್ಸರೆಯರು ಹಾರುತ್ತ ಒಯ್ಯುತ್ತಿರುವರು. ಅವರ ಬದಿಗಳಲ್ಲಿ ಆತನನ್ನು ಸ್ವಾಗತಿಸಲು ಅಪ್ಸರೆಯರು ಹಾರ ಹಿಡಿದಿರುವರು. ಕೆಲವರು ಬಲಗಡೆಗೆ ಮಾತ್ರ ತುತ್ತೂರಿಯನ್ನು ಊದುತ್ತಿರುವರು. ಈ ಎಲ್ಲರ ನಡುವೆಯೂ ಮೋಡಗಳನ್ನು ತೋರಿಸಿರುವುದು ಗಮನೀಯ. ಏಕೆಂದರೆ ಆ ಕಾಲದ ವೀರಗಲ್ಲುಗಳ

ಇಂತಹ ದೃಶ್ಯಗಳಲ್ಲಿ ಮೋಡಗಳನ್ನು ವೀರ ಮತ್ತು ಅಪ್ಸರೆಯರ ಸುತ್ತ ಸಾಮಾನ್ಯವಾಗಿ ಚಿತ್ರಿಸುತ್ತಾರೆ. ಮೂರನೆಯ ಹಂತದಲ್ಲಿ ವೀರನು ಸ್ವರ್ಗದಲ್ಲಿ ಕುಳಿತಿದ್ದಾನೆ. ವೀರನು ಸಿಂಹಾಸನದಲ್ಲಿ ಸವ್ಯಲಲಿತಾಸನದಲ್ಲಿ ಕುಳಿತಿದ್ದಾನೆ. ಆತ ಒತ್ತಿಕೊಂಡ ಆಸನಕ್ಕೆ ಎರಡು ಅರೆಗಂಬಗಳ ಮೇಲೆ ಮಕರ ಪಟ್ಟಿಕೆಗಳಿವೆ. ಕುತೂಹಲವೆಂದರೆ ಆತನ ಬದಿಗಳಲ್ಲಿ ವಾದ್ಯ ಮೇಳದವರಿದ್ದಾರೆ. ತಾಳ ಹಾಕುವವರು, ಕೊಳಲು ಊದುವವರೂ, ಮೃದಂಗ ಬಾರಿಸುತ್ತ, ನೃತ್ಯ ಮಾಡುವವರೂ ಇತ್ಯಾದಿ ಪರಿವಾರವಿದೆ. ಈ ವೀರಗಲ್ಲಿನಲ್ಲಿ ಕಾಣಬಹುದು.

ಅಲ್ಲಿಯ ಮತ್ತೊಂದು ವೀರಗಲ್ಲಿನಲ್ಲಿ ಯುದ್ಧ ದೃಶ್ಯದಲ್ಲಿ ವೀರನು ಬಾಗಿದ ಕತ್ತಿ ಮತ್ತು ಆಯತಾಕಾರದ ಗುರಾಣಿಯನ್ನು ವೈರಿಗಳ ವಿರುದ್ಧವಾಗಿ ಹಿಡಿದು ಹೋರಾಡುವ ಭಂಗಿಯಲ್ಲಿ ನಿಂತಿದ್ದಾನೆ. ವೈರಿಯು ತನ್ನ ಪರಿವಾರದ ಸಂಗಡ ಕುದುರೆಯ ಮೇಲೆ ಕೂತು ಯುದ್ಧ ಮಾಡಲು ಹೊರಟಿರುವನು. ವೈರಿಯು ಕುದುರೆಯ ಕೆಳಗಿಳಿದು ವೀರನ ಕಾಲಿಗೆ ನಮಸ್ಕರಿಸಿದ್ದಾನೆ. ಎರಡನೆಯ ದೃಶ್ಯದಲ್ಲಿ ಅಪ್ಸರೆಯರಿಬ್ಬರು ವೀರನ ಕೈಗಳನ್ನು ಹೆಗಲ ಮೇಲೆ ಹಾಕಿಕೊಂಡು ಆಕಾಶದ ಮೇಲೆ ಹಾರುತ್ತಿರುವರು. ಅವರ ಎಡಗಡೆಗೆ ಆಕಾಶದಲ್ಲಿ ಹಾರ ಹಿಡಿದು ಒಬ್ಬ ಗಂಧರ್ವ ಸ್ವಾಗತಿಸಲು ನಿಂತಿದ್ದಾನೆ. ಮತ್ತೊಬ್ಬ ವೀಣೆ ನುಡಿಸುತ್ತ ಕುಳಿತರುವನು. ವೀರನ ಬಲಗಡೆಗೆ ಹಲವರು ತುತ್ತೂರಿ ಊದುತ್ತಿರುವರು. ಕೆಲವರು ನೃತ್ಯ ಮಾಡುತ್ತಿರುವರು. ಹೀಗೆ ಸಂಭ್ರಮದಿಂದ ಮಡಿದ ವೀರನಿಗೆ ಶುಭ ಕೋರುವುದನ್ನು ತೋರಿಸಲಾಗಿದೆ. ಮೂರನೆಯ ದೃಶ್ಯದಲ್ಲಿ ವೀರನು ವೇದಿಕೆಯ ಮೇಲೆ ಸವ್ಯ ಲಲಿತಾಸನದಲ್ಲಿ ಕುಳಿತಿರುವನು. ಬಲಗೈಯಲ್ಲಿ ಕಮಲವನ್ನು ಎತ್ತಿ ಹಿಡಿದಿದ್ದಾನೆ. ಎಡಗೈಯನ್ನು ತೊಡೆಯ ಮೇಲೆ ಇರಿಸಿರುವನು. ಆತನ ಬದಿಗಳಲ್ಲಿ ದೇವಲೋಕದ ಸುರಸುಂದರಿಯರು ಇದ್ದಾರೆ. ಆತನ ಬಲಬದಿಯಲ್ಲಿ ವಾದ್ಯಮೇಳದವರಿದ್ದಾರೆ. ಆತನ ಬದಿಗಳಲ್ಲಿ ಮುಂಚಾಚಿತ ಪಟ್ಟಿಕೆಯ ಮೇಲೆ ನೃತ್ಯಗಾರ್ತಿಯರಿದ್ದಾರೆ. ಮೇಲ್ಗಡೆ ಅಲ್ಲಲ್ಲಿ ಇಳಿಬಿಟ್ಟ ಏಕ ಹೂವಿನ ಹಾರವಿದೆ. ಇದನ್ನು ಎರಡು ಅರೆಗಂಬಗಳ ನಡುವೆ ಚಿತ್ರಸಲಾಗಿದೆ. ಈ ಅರೆಗಂಬಗಳ ಬದಿಗಳಲ್ಲಿ ಇನ್ನೆರಡು ಅರೆಗಂಬಗಳು ಶಿಲ್ಪದ ಅಂಚಿಗೆ ಹೊಂದಿಕೊಂಡಿವೆ. ನಡುವೆ ಕುಂಭ, ಕಳಸ, ಹಾರಗಳನ್ನು ಹಿಡಿದು ನಿಂತ ನಾಲ್ಕು ಸೇವಕಿಯರನ್ನು ಕಂಡರಿಸಲಾಗಿದೆ. ಇದೆಲ್ಲ ಮಡಿದ ವೀರ ಇಂದ್ರಲೋಕ (ಸ್ವರ್ಗಲೋಕ)ದ ಸುಖವನ್ನು ಸವಿಯುತ್ತಿರುವ ಕಲ್ಪನೆಯಾಗಿದೆ. ಅದರ ಕಪೋತ ಪಟ್ಟಿಕೆಯಲ್ಲಿ ಚೈತ್ಯ ನಮೂನೆಯ ಮೂರು ಕಿರು ಗೂಡುಗಳಿದ್ದು ಅವುಗಳಲ್ಲಿ ಕ್ರಮವಾಗಿ ಕುಳಿತ ಗಣೇಶ, ನಂದಿ ಮತ್ತು ಮಹಿಷಾಸುರ ಮರ್ಧಿನಿಯ ಚಿತ್ರಗಳಿವೆ. ಅವುಗಳ ಚೈತ್ಯನಮೂನೆಗಳ ಮೇಲೆ ಕುಳಿತ ಸಿಂಹಗಳಿವೆ. ಅದರ ಮೇಲಿನ ಮತ್ತೊಂದು ಪಟ್ಟಿಕೆಯಲ್ಲಿ ಚಲಿಸುವ ಸಿಂಹಗಳಿವೆ. ಅವುಗಳ ಮಧ್ಯಭಾಗ ಖಾಲಿಯಿದ್ದು, ಅದರ ಮೇಲಿನ ಭಾಗದಲ್ಲಿ ವಿಮಾನದ ಪಟ್ಟಿಕೆಯಿದೆ. ಅದರ ಮೇಲಿನ ಒಟ್ಟಾರೆ ಶಾಲಾ ಮಾದರಿ ಪಟ್ಟಿಕೆಯ ಮೇಲೆ ಮಧ್ಯದಲ್ಲಿ ಚೈತ್ಯಗವಾಕ್ಷದಲ್ಲಿ ಶಿವಲಿಂಗದ ಚಿತ್ರವಿದೆ. ಅದರ ಬದಿಗಳಲ್ಲಿ ಅಲಂಕಾರವಿದೆ.

ಶಿವಲಿಂಗದ ಮೇಲಿನ ಭಾಗದಲ್ಲಿ ಕಳಸವಿದೆ. ಈ ಎಲ್ಲ ಚಿತ್ರಗಳ ನಿರೂಪಣೆಯಿಂದ ಇಂದ್ರಲೋಕ ಮತ್ತು ದೇವಲೋಕದಲ್ಲಿರುವ ಶಿವಲಿಂಗ, ನಂದಿ, ಗಣೇಶ ಮತ್ತು ಮಹಿಷಾಸುರಮರ್ಧಿನಿಯರಿರುವುದು ಕಾಣುತ್ತದೆ. ಈ ವೀರಗಲ್ಲು ಕ್ರಿ.ಶ. ೯ನೆಯ ಶತಮಾನದ ಮಧ್ಯಭಾಗದ್ದಾಗಿದೆ.

ಇದೇ ಮಾದರಿಯ ಮತ್ತೊಂದು ವೀರಗಲ್ಲಿನಲ್ಲಿ ಕೆಲವು ವಿಶೇಷತೆಗಳಿವೆ. ಈ ವೀರಗಲ್ಲಿನ ಕೆಳಭಾಗದ ಪಟ್ಟಿಕೆಯಲ್ಲಿ ಶಿವ, ಗಜಮರ್ಧನ (ನಟರಾಜ) ಮತ್ತು ವಿಷ್ಣು ಇವರನ್ನು ಒಂದೇ ಗಾತ್ರದಲ್ಲಿ ದೊಡ್ಡದಾಗಿ ತೋರಿಸಲಾಗಿದೆ. ಶಿವನು ತನ್ನ ಕೈಗಳಲ್ಲಿ ಅಭಯ, ತ್ರಿಶೂಲ, ನಾಗ ಮತ್ತು ಗದೆಗಳನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿದ್ದಾನೆ. ಮಧ್ಯದಲ್ಲಿ ಗಜಮರ್ಧನ ಶಿವನು ನೃತ್ಯ ಮಾಡುತ್ತಿರುವನು. ತನ್ನ ಬಲಗೈಗಳನ್ನು ಮೇಲಕ್ಕೆತ್ತಿ ಸಂಹರಿಸಿದ ಆನೆಯ ಚರ್ಮವನ್ನು ಮೇಲೆ ಹಿಡಿದುಕೊಂಡಿದ್ದಾನೆ. ಕೆಳಗಿನ ಎಡಗೈಯನ್ನು ಸೊಂಟದ ಮೇಲಿಟ್ಟಿದ್ದಾನೆ. ಭಕ್ತನೊಬ್ಬ ಆತನ ಬಲಗಡೆ ಇದ್ದಾನೆ. ಕೊನೆಯಲ್ಲಿ ವಿಷ್ಣು ತನ್ನ ಕೈಗಳಲ್ಲಿ ಗದೆ, ಚಕ್ರ, ಶಂಖವನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿದ್ದಾನೆ. ಕೆಳಗಿನ ಎಡಗೈಯನ್ನು ಸೊಂಟದ ಮೇಲಿಟ್ಟಿದ್ದಾನೆ. ಚೌಕಾಕಾರದ ಎರಡನೇ ಫಲಕದಲ್ಲಿ ವೀರನು ಅಪ್ಸರೆಯರ ಮೇಲೆ ಕೈಗಳನ್ನು ಹಾಕಿ ಹಾರುತ್ತಿರುವನು. ಬದಿಗಳಲ್ಲಿ ವಾದ್ಯಮೇಳ, ನೃತ್ಯಮೇಳ ಇನ್ನಿತರ ಅಪ್ಸರೆಯರಿದ್ದಾರೆ. ಯುದ್ಧ ಮತ್ತು ಸ್ವರ್ಗಲೋಕಕ್ಕೆ ವೀರನು ಹೋಗುವ ಈ ಎರಡು ಹಂತಗಳ ದೃಶ್ಯಗಳನ್ನು, ಎರಡು ಅರೆಗಂಬಗಳ ನಡುವೆ ಚಿತ್ರಿಸಲಾಗಿದೆ. ಮೇಲಿನ ಕಪೋತ ಪಟ್ಟಿಕೆಯಲ್ಲಿ ಗವಾಕ್ಷಗಳಿವೆ. ಮೇಲೆ ಮತ್ತೊಂದು ಪಟ್ಟಿಕೆಯಲ್ಲಿ ಸಾಲಾಗಿ ಅರೆಗಂಬಗಳುಳ್ಳ ವಿಮಾನಗಳ ಮೂರು ಗೂಡುಗಳಿವೆ. ಬದಿಗಳಲ್ಲಿ ಅಪ್ಸರೆಯರಿದ್ದಾರೆ. ಈ ವೀರನು ವೇದಿಕೆಯ ಮೇಲೆ ಕುಳಿತಿದ್ದಾನೆ. ಬದಿಗಳಲ್ಲಿರುವ ತಲಾ ಒಂದು ಗೂಡುಗಳಲ್ಲಿ ಕಮಲ ಅಥವಾ ಕಳಸ ಹಿಡಿದು ನಿಂತ ಸೇವಕಿ ಮತ್ತು ನೃತ್ಯಗಾರ್ತಿ ಇದ್ದಾರೆ. ಒಂದಕ್ಕೊಂದು ಶಿಖರ ನಮೂನೆಗಳಿವೆ. ಮಧ್ಯದ ಶಿಖರ ಅಗಲವಾಗಿದೆ. ಮತ್ತು ಅದರ ತುದಿ ಮುರಿದು ಹೋಗಿದೆ.

ಬೆಟಗೇರಿಯ ಇನ್ನೆರಡು ಶಿಲ್ಪಗಳಲ್ಲಿ ಕೇವಲ ಮೇಲ್ಭಾಗದಲ್ಲಿ ಚಿತ್ರವುಳ್ಳ ಪಟ್ಟಿಕೆಗಳಿವೆ. ಒಂದರಲ್ಲಿ ಧ್ವಜಸ್ತಂಭದ ಮೇಲೆ ಕುಳಿತ ನಂದಿಯಿದೆ. ಬಲಗಡೆ ಡಮರು ಇದೆ. ಈ ಧ್ವಜಸ್ತಂಭಕ್ಕೆ ಅನೇಕ ಬಾಣಗಳು ನೆಟ್ಟಿವೆ. ವೀರನು ಡೊಂಕು ಕತ್ತಿ ಮತ್ತು ಆಯತಾಕಾರದ ಗುರಾಣಿಯನ್ನು ಹಿಡಿದು ನಿಂತಿದ್ದಾನೆ. ಅವನ ಎದುರಿಗೆ ಶತ್ರು ಆನೆಯ ಮೇಲೆ ಅಂಬಾರಿಯಲ್ಲಿ ನಿಂತು ವೀರನಿಗೆ ಬಾಣವನ್ನು ಪ್ರಯೋಗಿಸುತ್ತಿದ್ದಾನೆ. ಆತನಿಗೆ ಛತ್ರಿಯನ್ನು ಹಿಡಿಯಲಾಗಿದೆ. ಅವನ ಹಿಂದೆ ಒಬ್ಬ ಸೇವಕ ನಿಂತಿದ್ದಾನೆ. ಆನೆಯು ತನ್ನ ಸೊಂಡಿಲನ್ನು ಸುತ್ತಿ ತನ್ನ ಎಡಗಾಲನ್ನು ಮೇಲೆತ್ತಿದೆ. ಧ್ವಜಸ್ತಂಭಕ್ಕೆ (ಮತ್ತು ಎಡ ಡಮರುವಿಗೂ) ಬಟ್ಟೆಯನ್ನು ಕಟ್ಟಲಾಗಿದೆ. ಶಿಲ್ಪದ ತುದಿ ಮಧ್ಯ ಕಳಸವಿದೆ. ಇಲ್ಲಿ ತೋರಿಸಿರುವ ನಂದಿ ಧ್ವಜಸ್ತಂಭ ವಿಶೇಷ ಗಮನವನ್ನು ಸೆಳೆಯುತ್ತದೆ. ಶೈಲಿಯಲ್ಲಿ ಈ ವೀರಗಲ್ಲು ರಾಷ್ಟ್ರಕೂಟರ ಕಾಲದ್ದಾಗಿದೆ. ಹೀಗಾಗಿ ಈ ನಂದಿಧ್ವಜ ರಾಷ್ಟ್ರಕೂಟರ

ರಾಜ ಚಿಹ್ನೆಯೋ ಅಥವಾ ಅದರ ಈ ಭಾಗದ ಒಬ್ಬ ಸಾಮಂತರ ಚಿಹ್ನೆಯೋ ಎಂಬುದನ್ನು ಪರಿಶೀಲಿಸಬೇಕಾಗಿದೆ. ಇಲ್ಲಿಯ ಮತ್ತೊಂದು ಶಿಲ್ಪದ ಫಲಕದಲ್ಲಿ ವೀರನೊಬ್ಬ ಕುದುರೆ ಸವಾರಿಯಾದ ವೈರಿಗೆ ಅವನ ಎದುರು ಬಿಲ್ಲನ್ನು ಚಾಚಿ ಬಾಣ ಹೊಡೆಯಲು ಸನ್ನದ್ಧನಾಗಿ ನಿಂತಿದ್ದಾನೆ. ಬತ್ತಳಿಕೆಗಳನ್ನು ಹೊತ್ತಿದ್ದಾನೆ. ವೈರಿಯು ಒಂದು ಕೈಯಲ್ಲಿ ಹಿಡಿದ ದುಂಡಾದ ಗುರಾಣಿಯನ್ನು ಅವನ ಎದುರು ಹಿಡಿದಿದ್ದು, ಅದಕ್ಕೆ ಅನೇಕ ಬಾಣಗಳು ಚುಚ್ಚಿವೆ. ಬಲಗೈಯಲ್ಲಿ ಕತ್ತಿಯನ್ನು ಎತ್ತಿ ಹಿಡಿದಿದ್ದಾನೆ. ವಿಶೇಷವೆಂದರೆ ಎಡ ಅಂಚಿನಲ್ಲಿ ಮೇಲಿನಿಂದ ಸರಪಳಿ ಇಳಿ ಬಿದ್ದಿದೆ. ಮೇಲ್ಭಾಗ ಶಾಲಾ ಮಾದರಿಯದ್ದಾಗಿದ್ದು ನಡುವೆ ಕಳಸವಿದೆ.

ರೋಣ ತಾಲೂಕಿನ ಕರಮಡಿ ಗ್ರಾಮದಲ್ಲಿ ರಾಷ್ಟ್ರಕೂಟರ ಕಾಲದ ಎರಡು ವೀರಗಲ್ಲುಗಳಿವೆ. ಈ ಎರಡೂ ನೆಲದಲ್ಲಿ ಹೂತಿರುವುದರಿಂದ ಅವುಗಳ ಕೆಳಭಾಗದ ದೃಶ್ಯಗಳು ಗೋಚರಿಸುವುದಿಲ್ಲ. ಒಂದರಲ್ಲಿ ಮಡಿದ ವೀರ ಅಪ್ಸರೆಯರ ಹೆಗಲ ಮೇಲೆ ಕೈಗಳನ್ನು ಹಾಕಿ ಹಾರುತ್ತಿರುವನು. ಅವನಷ್ಟೇ ಎತ್ತರದ ಅಪ್ಸರೆಯರು ಅವರ ಬದಿಗಳಲ್ಲಿ ನಿಂತಿದ್ದಾರೆ. ಅವರ ಸುತ್ತಲೂ ಆಯತಾಕಾರದ ಮೋಡ ಅಲೆಗಳ ಪಟ್ಟಿಕೆ ಹೆಚ್ಚು ಮುಂಚಾಚಿಕೊಂಡಿರುವುದು ಗಮನೀಯ. ಆ ಪಟ್ಟಿಕೆಗಳ ವೀರ ಅಪ್ಸರೆಯರ ತಲೆ ಮೇಲ್ಭಾಗ ಮುಂಚಾಚಿಲ್ಲ. ಅದರ ಮೇಲಿನ ಮತ್ತೊಂದು ಪಟ್ಟಿಕೆಯಲ್ಲಿ ನಡುವೆ ಮಡಿದ ವೀರ ವೇದಿಕೆಯ ಮೇಲೆ ಕುಳಿತಿದ್ದಾನೆ. ಕುಳಿತ ಭಂಗಿಯಲ್ಲಿ ತನ್ನ ಕಾಲುಗಳನ್ನು ಬಲಗಡೆಗೆ ಓರೆಯಾಗಿ ಮಡಚಿಕೊಂಡಿರುವುದು ವಿಶೇಷವಾಗಿದೆ. ಹಾಗೂ ಆತನ ಬದಿಗಳಲ್ಲಿ ಚಲಿಸುವ ಮೋಡದ ಮೇಲೆ ಆರು ಜನ ಅಪ್ಸರೆಯರು ಕಮಲ ಹಿಡಿದು ನಿಂತಿದ್ದಾರೆ. ಮೋಡದ ಬುಡದಲ್ಲಿ ಹಾಗೂ ವೀರನ ವೇದಿಕೆಯ ಬದಿಗಳಲ್ಲಿ ಅನೇಕರು ಕುಳಿತಿದ್ದಾರೆ. ಈ ರೀತಿ ಕುಳಿತವರನ್ನೂ, ವೀರರನ್ನೂ ಸ್ವರ್ಗಕ್ಕೆ ಕರೆದೊಯ್ಯುವ ದೃಶ್ಯದಲ್ಲಿ ತೋರಿಸಿರುವುದು ಅಪರೂಪವೆನಿಸಿದೆ. ಆದಕಾರಣ ಅವರು ಅವನ ಹೆಂಡತಿ ಮಕ್ಕಳೇ? ಈ ಎರಡು ದೃಶ್ಯಗಳನ್ನು ಎರಡು ಅರೆಗಂಬಗಳ ಮಧ್ಯೆ ಚಿತ್ರಿಸಲಾಗಿದೆ. ಅರೆಗಂಬಗಳ ಮೇಲೆ ಬೋರಲು ಹಾಕಿದ ಉದ್ದನೆಯ ಲಾಳಿಕೆಯ ಪಟ್ಟಿಕೆಯಿದೆ. ಈ ಕಂಬದ ಮೇಲ್ಗಡೆ ಎರಡು ವೃತ್ತಾಕಾರ ಪಟ್ಟಿಕೆಯ ಮೇಲ್ಗಡೆ ವಿಶಾಲವಾದ ಅರ್ಧ ವೃತ್ತಾಕಾರದ ವಿಮಾನ ಪಟ್ಟಿಕೆಯನ್ನು ಅರೆಗಂಬಗಳ ಮೇಲೆ ಕೂಡಿಸಲಾಗಿದೆ. ಅದರ ನಡುವೆ ಚೈತ್ಯಗವಾಕ್ಷವಿದೆ. ಅದರೊಳಗೆ ಶಿವಲಿಂಗ, ಹೊರಬದಿಗಳಲ್ಲಿ ಗಣೇಶ ಮತ್ತು ಕುಳಿತ ನಂದಿಯರ ಚಿತ್ರಗಳಿವೆ. ಅರ್ಧ ವೃತ್ತಾಕಾರ ವಿಮಾನ ತುದಿಯ ಮೇಲೆ ಮೂರು ಕಳಸಗಳಿವೆ. ನಡುವಿನದು ದೊಡ್ಡದಿದೆ. ಈ ವಿಮಾನದ ಬುಡಭಾಗದಲ್ಲಿರುವ ಕಪೋತವು ಬದಿಗಳಲ್ಲಿ ಚಾಚಿದೆ. ಈ ಮೇಲೆ ವಿವರಿಸಿದ ಯಾವ ವೀರಗಲ್ಲುಗಳಿಗೂ ಈ ರೀತಿಯಲ್ಲಿ ಏಕ ವಿಮಾನವನ್ನು ಮೇಲ್ಗಡೆ ಕಂಡರಿಸಿಲ್ಲ. ಅಲ್ಲಿಯ ಇನ್ನೊಂದು ವೀರಗಲ್ಲು ಇದೇ ಮಾದರಿಯಲ್ಲಿದೆ. ಸ್ವಲ್ಪ ಬದಲಾವಣೆಯನ್ನು ಕಾಣಬಹುದು. ಕೆಳಗಿನ ಹಂತದ ಅಪೂರ್ಣವಾಗಿರುವ ದೃಶ್ಯದಲ್ಲಿ ಗೋವುಗಳ ಮತ್ತು ವೀರನು ಬಿಲ್ಲಿನಿಂದ ಬಾಣವನ್ನು ವೈರಿಗಳ ಕಡೆ ಪ್ರಯೋಗಿಸುತ್ತಿರುವನು. ಇಲ್ಲಿ ಗೋವುಗಳನ್ನು ಚಿತ್ರಿಸಿರುವುದರಿಂದ

ಈ ಶಿಲ್ಪ ಗೋಗ್ರಹಣಕ್ಕೆ ಸಂಬಂಧಿಸಿದ್ದೆಂದು ಸ್ಪಷ್ಟವಾಗುತ್ತದೆ. ಎರಡನೇ ಪಟ್ಟಿಕೆಯ ದೃಶ್ಯದಲ್ಲಿ ಆಯತಾಕಾರದ ಚಲಿಸುವ ಮೋಡ ತೆರೆಗಳ ಮಧ್ಯೆ ಮಡಿದ ವೀರನನ್ನು ಅಪ್ಸರೆಯರು ಹೊತ್ತುಕೊಂಡು ಆಕಾಶದಲ್ಲಿ ಹಾರುತ್ತಿರುವುದನ್ನು ತೋರಿಸಲಾಗಿದೆ. ಈ ಮೋಡದ ಅಲೆಗಳು ಬದಿಗಳಲ್ಲೂ ವಿಸ್ತರಿಸಿದ್ದು, ಅದರಲ್ಲಿ ಹಾರ ಹಿಡಿದ ಗಂಧರ್ವರನ್ನು ಕಾಣಬಹುದು. ಅದರ ಮೇಲೆ ವಿಶಾಲವಾದ ವಿನ್ಯಾಸವನ್ನು ಹೊತ್ತ ಎರಡು ಅರೆಗಂಬಗಳುಳ್ಳ ಪಟ್ಟಿಕೆಯಿದೆ. ಈ ಅರೆಗಂಬಗಳ ನಡುವಿನ ಆಯತಾಕಾರದ ಪಟ್ಟಿಕೆಯಲ್ಲಿ ಇಬ್ಬರು ಅಪ್ಸರೆಯರ ನಡುವೆ ವೇದಿಕೆಯ ಮೇಲೆ ಕಮಲ ಹಿಡಿದ ವೀರನಿದ್ದಾನೆ. ಅರೆಗಂಬಗಳಿಗೆ ಚೌಕ ಪೀಠವಿದೆ. ಮೇಲೆ ಚೌಕಕಾಂಡ, ಅದರ ಮೇಲಿನ ಕಾಂಡಭಾಗದಲ್ಲಿ ತ್ರಿಕೋನಾಕಾರದ ಪಟ್ಟಿಕೆಗಳಿವೆ. ಮೇಲ್ಗಡೆ ಆಯತಾಕಾರ ಪಟ್ಟಿಕೆಯ ಮೇಲೆ ತರಂಗ ಮಾದರಿಯ ಬೋಧಿಗೆಗಳಿವೆ. ಅದರ ಮೇಲ್ಭಾಗದಲ್ಲಿರುವ ವಿಶಾಲವಾದ ಅರ್ಧ ವೃತ್ತಾಕಾರ ವಿಮಾನದ ನಡುವೆ ಕಪೋತ ಪಟ್ಟಿಕೆಯ ಮೇಲೆ ಚೈತ್ಯಗವಾಕ್ಷದಲ್ಲಿ ಶಿವಲಿಂಗವಿದೆ. ಚೈತ್ಯರ ಬಲಗಡೆ ಹೊರಭಾಗದಲ್ಲಿ ಕುಳಿತ ನಂದಿಯಿದೆ. ಚೈತ್ಯದ ಮೇಲೆ ಹೂಬಳ್ಳಿಗಳ ಅಲಂಕರಣವಿದೆ. ವಿಮಾನದ ಮೇಲ್ಭಾಗದಲ್ಲಿ ನಡುವೆ ಏಕ ಕಳಸವಿದೆ. ಅಂಚುಗಳಲ್ಲಿ ಮೇಲ್ಚಾಚಿದ ಪಟ್ಟಿಕೆಗಳಿವೆ. ವಿಮಾನದ ಬಸದಿಗಳ ಅಂಚುಗಳಲ್ಲೂ ಕೆಳಗೆ ಇಳಿಬಿದ್ದ ಹೂಬಳ್ಳಿಗಳ ಅಲಂಕರಣವಿದೆ.



ಕರಮಡ ಗ್ರಾಮದ ಈ ಎರಡು ವೀರಗಲ್ಲುಗಳಲ್ಲಿ ಎರಡು ರೀತಿಯ ಅರೆಗಂಬಗಳ ಶೈಲಿಗಳಿವೆ. ಒಂದು ರೀತಿಯ ವಿಮಾನವನ್ನು ಸ್ವಲ್ಪ ವ್ಯತ್ಯಾಸದಲ್ಲಿ ತೋರಿಸಲಾಗಿದೆ. ಈ ಶೈಲಿ ಲಕ್ಷಣಗಳು ಸುಮಾರು ಕ್ರಿ.ಶ. ೯ನೆಯ ಶತಮಾನದ್ದಾಗಿದೆ.

ಗದಗ ತಾಲೂಕಿನ ಬೆಂತೂರಿನಲ್ಲಿ ಒಂದು ವೀರಗಲ್ಲಿದ್ದು, ಅದರ ಕೆಳಗಿನ ಫಲಕ ಮಣ್ಣಲ್ಲಿ ಹೂತುಹೋಗಿದೆ. ಕೇವಲ ಎಡಗಡೆ ವಿಭಾಗದ ಮೇಲ್ಭಾಗ ಕಾಣುತ್ತದೆ. ಎರಡನೆಯ ಹಂತದಲ್ಲಿ ವೀರನನ್ನು ಅಪ್ಸರೆಯರು ಒಯ್ಯುವುದನ್ನು ದೊಡ್ಡದಾಗಿ ಚಿತ್ರಿಸಲಾಗಿದೆ. ಅವರ ಕೆಳಗಡೆ ಎಡಗಡೆ ಸಾಲಾಗಿ ಅನೇಕರು ಆತನನ್ನು ನೋಡುತ್ತ ಕುಳಿತಿರುವರು. ಬಲಕ್ಕೆ ಕೆಳಗಡೆ ಮತ್ತು ಮೇಲ್ಗಡೆ ಆತನ ಬದಿಗೆ ವಾದ್ಯ ಮೇಳದವರಿದ್ದಾರೆ. ಈ ಮೇಲೆ ತಿಳಿಸಿದ ಶಿಲ್ಪಗಳನ್ನು ಈ ರೀತಿಯಲ್ಲಿ ವೀರನ ಕೆಳಬದಿಯಲ್ಲಿ ಸಾಲಾಗಿ ಕುಳಿತವರನ್ನು ತೋರಿಸಿದ್ದನ್ನು ಕಾಣುವುದಿಲ್ಲ. ಮೇಲಿನ ಫಲಕದಲ್ಲಿ ಎರಡು ಅರೆಗಂಬಗಳ ನಡುವಿನ ಆಯತಾಕಾರದ ಪಟ್ಟಿಕೆಯಲ್ಲಿ ಎರಡು ದೃಶ್ಯಗಳಿವೆ. ಬಲಗಡೆಯ ದೃಶ್ಯದಲ್ಲಿ ವೀರನು ತನ್ನಿಬ್ಬರು ಪತ್ನಿಯರ ಜೊತೆ ಕುಳಿತಿದ್ದಾನೆ. ಎಡಗಡೆಯ ಭಾಗದಲ್ಲಿ ಅರೆಗಂಬವುಳ್ಳ ವಿಮಾನದಲ್ಲಿ ಸತಿ ಸಂಗಡ ಕುಳಿತಿರುವನು. ಅದರ ಮೇಲಿನ ಪಟ್ಟಿಕೆಯ ಅಂಚಿನಲ್ಲಿ ಮಕರದ ಮುಖಗಳಿವೆ. ಮೇಲ್ಭಾಗದ ಅರ್ಧ ವೃತ್ತಾಕಾರ ವಿಮಾನ ಪಟ್ಟಿಕೆಯಲ್ಲಿ ವೀರನು ತನ್ನಿಬ್ಬರು ಪತ್ನಿಯರ ಜೊತೆ ಕುಳಿತಿರುವುದು ವಿಶೇಷವಾಗಿದೆ. ಪತ್ನಿಯೊಬ್ಬಳು ಕೈಮುಗಿದಿದ್ದರೆ, ಇನ್ನೊಬ್ಬಳು ತನ್ನ ಎಡಗೈಯಲ್ಲಿ ಲಿಂಗವನ್ನು ಹಿಡಿದುಕೊಂಡಿರುವಳು. ಬದಿಗಳಲ್ಲಿ

ಸೇವಕಿಯರು ಸೇವೆ ಮಾಡುತ್ತ ನಿಂತಿದ್ದು, ಮೇಲ್ಭಾಗದಲ್ಲಿ ಕಳಸವಿದೆ.

ಗದಗ ತಾಲೂಕಿನ ಮೇವುಂಡಿಯ ಸುಮಾರು ಕ್ರಿ.ಶ. ೯ನೆಯ ಶತಮಾನದ ವೀರಗಲ್ಲು ಹೆಚ್ಚು ಅಗಲವಾಗಿರುವುದು ಗಮನೀಯವಾಗಿದೆ. ಅದಕ್ಕೆ ಅಗಲವಾದ, ವಿಶಾಲ ಮಾದರಿಯ ಶಿಖರವಿದೆ. ಅದರ ಬುಡಭಾಗ ಸ್ವಲ್ಪ ನೆಲದಲ್ಲಿ ಹೂತಿದೆ. ಅದಕ್ಕೆ ಸಂಬಂಧಿಸಿದ ಯುದ್ಧ ಭಾಗ ಕಾಣುವುದಿಲ್ಲ. ಅದರ ಬದಿಯ ಒಂದು ತುಂಡು ಶಿಲ್ಪ ಈ ವೀರಗಲ್ಲಿನ ಕೆಳಭಾಗಕ್ಕೆ ಸೇರಿದ್ದಾಗಿದೆ. ಅದರಲ್ಲಿ ಆನೆ ಮತ್ತು ಕುದುರೆಗಳಿವೆ. ಆನೆಯ ಮೇಲೆ ಅಂಬಾರಿಯಿದೆ. ಅಂಬಾರಿಯಲ್ಲಿ ವೀರನು ಕುಳಿತಿರುವನು. ಶತ್ರು ಒಬ್ಬನು ವೀರನ ಆನೆಗೆ ನಮಸ್ಕರಿಸುತ್ತಿರುವನು. ಶತ್ರು ಪಡೆಯಲ್ಲಿ ಒಬ್ಬ ಮಾತ್ರ ಕುದುರೆ ಸವಾರಿ ಮಾಡುತ್ತಿರುವನು. ಕೆಲವರು ರಣಭೂಮಿಯಲ್ಲಿ ಬಿದ್ದಿರುವರು. ಎರಡನೆಯ ಹಂತದ ಮತ್ತೊಂದು ಭಾಗದಲ್ಲಿ ಮಡಿದ ವೀರನನ್ನು ಎಂಟು ಅಪ್ಸರೆಯರು ಆತನ ಕೈಗಳನ್ನು ಅವರ ಹೆಗಲ ಮೇಲೆ ಹೊತ್ತು ಆಕಾಶದಲ್ಲಿ ಹಾರುತ್ತಿರುವವರು. ಇದನ್ನು ಒಂದೇ ಸಾಲಿನಲ್ಲಿ ಚಿತ್ರಿಸಲಾಗಿದೆ. ಅವರ ಕಾಲುಗಳು ಉದ್ದವಾಗಿ ಸಮಾನಾಂತರವಾಗಿ ಹಿಂದಕ್ಕೆ ಚಾಚಿರುವುದು ಅವರ ಚಲನೆಯನ್ನು ಸೂಚಿಸುತ್ತದೆ. ಈ ಪಟ್ಟಿಕೆಯ ಕಪೋತದ ಮೇಲೆ ಸಾಲಾಗಿ ನಾಲ್ಕು ಚೈತ್ಯಗಳಿವೆ. ಹಾಗೂ ಅರೆಗಂಬಗಳ ಸಾಲುಗಳಿವೆ. ಅವುಗಳ ವಿಶಾಲವಾದ ದೊಡ್ಡ ವಿಮಾನವನ್ನು ಹೊತ್ತು ನಿಂತಿವೆ. ಈ ವಿಶಾಲ ಭಾಗದ ನಡುವೆ ಒಂದು ಚೈತ್ಯಗವಾಕ್ಷವಿದೆ. ಅದರಲ್ಲಿ ಎತ್ತರದ ವೇದಿಕೆಯ ಮೇಲೆ ವೀರನು ಕಮಲವನ್ನು ಹಿಡಿದು ಅರ್ಧಪರ್ಯಂಕಾಸನದಲ್ಲಿ ಕುಳಿತಿರುವನು. ಬದಿಗಳಲ್ಲಿ ಅಪ್ಸರೆಯರಿಬ್ಬರು ಆತನ ಸೇವೆ ಮಾಡಲು ನಿಂತಿರುವರು. ಶಾಲಾ ವಿಮಾನದ ಮಧ್ಯೆ ಕಲಶವಿದೆ. ಈ ಚೈತ್ಯ ಪಟ್ಟಿಕೆಯ ಬಲಗಡೆ ಕೆಲವು ರಂಧ್ರಗಳಿವೆ. ಅಲ್ಲಿ ಆರು ರಂಧ್ರಗಳ ಮೂರು ಸಾಲುಗಳನ್ನು ಕಂಡರಿಸಲಾಗಿದೆ. ಇವುಗಳ ನೂತನ ಶಿಲಾಯುಗದ ನೆಲೆಗಳಲ್ಲಿ ಕಂಡುಬಂದಿರುವುದನ್ನು ಇಲ್ಲಿ ನೆನೆಯಬಹುದು. ಈ ಶಿಲ್ಪದ ಹಿಂಬದಿಯಲ್ಲಿ ಶಾಲಾ ಫಲಕದ ನಡುವೆ ಒಂದು ಚೈತ್ಯಗವಾಕ್ಷವಿದೆ. ಅದರಲ್ಲಿ ಗಜಲಕ್ಷ್ಮಿಯನ್ನು ಕಂಡರಿಸಲಾಗಿದ್ದು, ಲಕ್ಷ್ಮಿಯು ಪದ್ಮಾಸನದಲ್ಲಿ ಕುಳಿತಿರುವಳು.

ಗದಗ ತಾಲೂಕಿನ ಮೇವುಂಡಿಯ ಸುಮಾರು ಕ್ರಿ.ಶ. ೮೬೫ರ ಮತ್ತೊಂದು ವೀರಗಲ್ಲಿನಲ್ಲಿ ಶಾಸನವಿದೆ. ಅದರಲ್ಲಿ ಅಮೋಘವರ್ಷನ ಕಾಲದಲ್ಲಿ ಸಾಮಂತನಾದ ಯಾದವ ವಂಶದ ಕುಪ್ಪೆಯರಸ ಪುಲಿಗೆರೆ ನಾಡನ್ನು ಆಳುತ್ತಿದ್ದನೆನ್ನಲಾಗಿದೆ. ಈ ಸಂದರ್ಭದಲ್ಲಿ ಆತನ ಸೇವಕ ಅಣ್ಣುಗ ರೆಟ್ಟಿಯಣ್ಣ ಎಂಬುವ ಅರಸನು ಅನಾರೋಗ್ಯದಿಂದ ಬಳಲುತ್ತಿರುವ ವಿಷಯವನ್ನು ತಿಳಿಸಿದನು. ಅರಸನನ್ನು ನೋಡಲು ಹೊರಟ ಅಣ್ಣುಗ ರೆಟ್ಟಿಯಣ್ಣ ತಲುಪಿದಾಗ ಆತನು ಸತ್ತು ಹೋಗಿ, ಆತನ ದೇಹವು ಚಿತೆಯಲ್ಲಿ ಉರಿಯುತ್ತಿರುವುದನ್ನು ಕಂಡನು. ಈ ದೃಶ್ಯವನ್ನು ನೋಡಿದ ತಕ್ಷಣ ಅಣ್ಣುಗ ರೆಟ್ಟಿಯಣ್ಣ ತನ್ನ ಕುತ್ತಿಗೆಯನ್ನು ಕತ್ತರಿಸಿಕೊಂಡನೆಂದು ಈ ವೀರಗಲ್ಲು ಶಾಸನ ಪಾಠದಿಂದ ತಿಳಿದುಬರುತ್ತದೆ. (ಕನ್ನಡ ಶಾಸನ ಶಿಲ್ಪ, ಪರಮಶಿವಮೂರ್ತಿ ಡಿ.ವಿ., ೧೯೯೯. ಪುಟ-೪೫)

ಕುರ್ತುಕೋಟೆಯ ವೀರಭದ್ರ ದೇವಾಲಯದ ಮುಂದಿರುವ ರಾಷ್ಟ್ರಕೂಟರ ಕಾಲದ ವೀರಗಲ್ಲು ಕಲಾ ಲಕ್ಷಣದಲ್ಲಿ ಈ ಪ್ರದೇಶದಲ್ಲೇ ವಿಶೇಷವಾಗಿದೆ. ಅದರ ಕೆಳಭಾಗ ಸ್ವಲ್ಪ ಮಣ್ಣಲ್ಲಿ ಹೂತಿದೆ. ಹೋರಾಟ ದೃಶ್ಯದಲ್ಲಿ ವೀರನ ಮೇಲೆ ವೈರಿ ಸಮೂಹದವರು ಸಾಲಾಗಿ ಬಿಲ್ಲುಗಳನ್ನು ಮುಂದೆ ಚಾಚಿ ಬಾಣ ಪ್ರಯೋಗಿಸುತ್ತಿದ್ದಾರೆ. ವೀರನು ಈಟಿಯನ್ನು ಹಿಡಿದು ಎಡಗೈಯನ್ನು ಮಡಚಿ ವೀರಾವೇಶದಿಂದ ಅವರ ವಿರುದ್ಧ ಹೋರಾಡುತ್ತ ನಿಂತಿರುವ ಭಂಗಿ ವಿಶೇಷವೆನಿಸಿದೆ. ಮೂವರು ವೈರಿ ಪಡೆಗಳ ದಂಡು, ಅವರ ಮುಂದೆ ಹಿಡಿದ ಬಿಲ್ಲುಗಳು ಒಂದಕ್ಕೊಂದು ಪಕ್ಕದಲ್ಲಿವೆ. ಎರಡನೆಯ ದೃಶ್ಯದಲ್ಲಿ ಖಡ್ಗಾಸನದಲ್ಲಿ ವೀರನು ಮತ್ತು ಅಪ್ಸರೆಯರು ವೀರನನ್ನು ಹಿಡಿದುಕೊಂಡು ಹಾರುತ್ತಿರುವರು. ಅವರೆಲ್ಲ ವೀರನ ಕಡೆಗೇ ಮುಖಮಾಡಿ ಕುಳಿತಂತೆ ಚಿತ್ರಿಸಿರುವುದು ವಿಶೇಷವಾಗಿದೆ. ಮೂರನೆಯ ದೃಶ್ಯದಲ್ಲಿ ವೀರನು ತನ್ನ ಬಲಗಾಲನ್ನು ಅಡ್ಡ ಮಡಚಿ ಎಡಗಾಲನ್ನು ಮಡಚಿ ಕುಳಿತುಕೊಂಡಿದ್ದಾನೆ. ಬಲಗೈಯನ್ನು ಬಲಪಾದದ ಮೇಲೆ ಎಡಗಾಲನ್ನು ಎಡಗಾಲಿನ ಮಂಡಿಯ ಮೇಲೆ ಇಟ್ಟಿರುವನು. ತಲೆಯ ಕೂದಲು ಗುಂಗುರು ಗುಂಗುರವಾಗಿದೆ. ಆತನು ವಸ್ತ್ರಾಭರಣ ಧರಿಸಿದ್ದು, ಆತನ ಬದಿಗಿಬ್ಬರು ಸೇವಕಿಯರು ಸೇವೆ ಮಾಡುತ್ತ ಚೌರಿ ಹಿಡಿದು ನಿಂತಿದ್ದಾರೆ. ಈ ಪಟ್ಟಿಕೆಯ ಮೇಲ್ಗಡೆ ಅರೆಗಂಬಗಳುಳ್ಳ ಮೂರು ಪಗೋಡ ಮಾದರಿಯ ಶಿಖರಗಳಿವೆ. ಬದಿಯ ಶಿಖರ ಮಾದರಿಗಳು ಕಿರುದಾಗಿವೆ. ನಡುವಿನ ಶಿಖರ ಮಾದರಿಯು ಎತ್ತರವಾಗಿದೆ. ಇವುಗಳ ನಡುವೆ ಅಲಂಕಾರ ಪಟ್ಟಿಕೆ ಇದೆ. ಈ ಶಿಖರ ಮಾದರಿಗಳು ಘಂಟಾಕಾರದಲ್ಲಿರುವುದರಿಂದ ಇವುಗಳನ್ನು ಪಗೋಡಗಳೆನ್ನುವರು. ಈ ಪಗೋಡ ಮಾದರಿಯ ಶಿಖರಗಳು ಕರ್ನಾಟಕದ ವಾಸ್ತುಶಿಲ್ಪ ಇತಿಹಾಸದಲ್ಲಿ ವಿರಳ. ಈ ಶಿಖರ ಮಾದರಿಗಳು ತ್ರಿಕೋನಾಕಾರದ ಗುಮ್ಮಟದಂತಿವೆ. (ರಾಷ್ಟ್ರಕೂಟ ಹಿರೋಸ್ಟೋನ್, ರಾಜಶೇಖರ ಎಸ್. ಧಾರವಾಡ-೧೯೮೨, ಪುಟ-೭೨)

ಎಲೆಶಿರೂರಿನಲ್ಲಿ (ಗದಗ ತಾಲೂಕು) ನಾಲ್ಕು ರಾಷ್ಟ್ರಕೂಟರ ಕಾಲದ ವೀರಗಲ್ಲುಗಳಿವೆ. ಒಂದರಲ್ಲಿ ಸ್ವರ್ಗ ದೃಶ್ಯವಿದೆ. ಅದರ ಕೆಳಗಿನ ಭಾಗ ಮಣ್ಣಲ್ಲಿ ಹೂತಿದೆ. ಈ ದೃಶ್ಯದಲ್ಲಿ ವೀರ ವೇದಿಕೆಯ ಮೇಲೆ ಕುಳಿತಿದ್ದಾನೆ. ಬದಿಗಳಲ್ಲಿ ನಾಲ್ವರು ಅಪ್ಸರೆಯರು ಅವನ ಸೇವೆಗೆ ಸನ್ನದ್ಧರಾಗಿ ನಿಂತಿದ್ದಾರೆ. ಮೇಲ್ಭಾಗದಲ್ಲಿ ಸಾಲಾಗಿ ಅರೆಗಂಬಗಳುಳ್ಳ ಗೂಡುಗಳಿವೆ. ನಡುವಿನ ಗೂಡಿನಲ್ಲಿ ಶಿವಲಿಂಗವಿದ್ದರೆ, ಬಲಗಡೆಯ ಗೂಡುಗಳಲ್ಲಿ ಗಣೇಶ ಮತ್ತು ನಂದಿ ಚಿತ್ರಗಳಿವೆ. ಎಡಬದಿ ಗೂಡುಗಳ ಶಿಲ್ಪಗಳು ಹಾಳಾಗಿವೆ. ಕಾಲಮಾನ ಸುಮಾರು ಕ್ರಿ.ಶ. ೯ನೆಯ ಶತಮಾನ. ಊರಿನ ಚಾವಡಿಯ ವೀರಗಲ್ಲಿನಲ್ಲಿ ರಾಷ್ಟ್ರಕೂಟರ ಇಮ್ಮಡಿ ಕೃಷ್ಣನ ಶಾಸನವಿದ್ದು, ಅದರಲ್ಲಿ ಮಹಾ ಸಾಮಂತ ಶ್ರೀಮಂತನು (ಮಹಾಶಿರಿವಂತ ಬೆಳ್ವೊಲ-೩೦೦) ಆಳುತ್ತಿದ್ದನೆನ್ನಲಾಗಿದೆ. (ಎಸ್.ಐ.ಐ. ೧೧ ಎಲಿಶಿರೂರ ಶಾ.ಸ.-೨೫) ಈ ಶಿಲ್ಪದಲ್ಲಿ ಮೂರು ದೃಶ್ಯಗಳಿವೆ. ಕೆಳಗಿನ ದೃಶ್ಯದಲ್ಲಿ ಕತ್ತಿಯಿಂದ ವೈರಿಗೆ ಇರಿಯುತ್ತ ನಿಂತಿದ್ದಾನೆ. ಎದುರಿಗೆ ವೈರಿ ಪಡೆಯವರು ಹೋರಾಡುತ್ತ ನಿಂತಿದ್ದಾರೆ. ಎರಡನೆಯ ದೃಶ್ಯದಲ್ಲಿ ವೀರನನ್ನು ಹೊತ್ತು ಅಪ್ಸರೆಯರಿಬ್ಬರು ಹಾರುತ್ತಿದ್ದಾರೆ. ಅವರ

ಇನ್ನೊಂದು ಕೈ ಚೌರಿ ಹಿಡಿದಿದೆ. ಮೂರನೆಯ ದೃಶ್ಯದಲ್ಲಿ ಕಮಲ ಹಿಡಿದು ವೀರನು ವೇದಿಕೆಯ ಮೇಲೆ ಕುಳಿತಿದ್ದಾನೆ. ಸೇವೆಗಾಗಿ ಬದಿಗಳಲ್ಲಿ ಸೇವಕಿಯರು ಚೌರಿ ಹಿಡಿದು ನಿಂತಿದ್ದಾರೆ. ಅಲ್ಲಿರುವ ಇದೇ ಕಾಲದ ಮತ್ತೊಂದು ವೀರಗಲ್ಲಿನಲ್ಲಿಯೂ ಮೂರು ಹಂತಗಳಿವೆ. ಮೊದಲನೆಯ ದೃಶ್ಯದಲ್ಲಿ ಮಡಿದ ವೀರನನ್ನು ಅಪ್ಸರೆಯರು ಸ್ವರ್ಗಲೋಕಕ್ಕೆ ಒಯ್ಯುತ್ತಿರುವರು. ಅವರ ಬದಿಗಳಲ್ಲಿ ಹಾರ ಹಿಡಿದು ಅಪ್ಸರೆಯರು ಆತನನ್ನು ಸ್ವಾಗತಿಸಲು ನಿಂತಿದ್ದಾರೆ. ಎರಡನೆಯ ಹಂತವನ್ನು ಎರಡು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಎಡಗಡೆ ಪಟ್ಟಿಕೆಯಲ್ಲಿ ವೀರನು ವೈರಿಯ ವಿರುದ್ಧ ಯುದ್ಧ ಮಾಡುತ್ತಿದ್ದಾನೆ. ಬಲಭಾಗದಲ್ಲಿ ವೀರ–ಶಿವ ಸವ್ಯಲಲಿತಾಸನದಲ್ಲಿ ಕುಳಿತಿದ್ದಾನೆ. ಮೂರನೆಯ ಹಂತದಲ್ಲಿ ವೀರನು ಪದ್ಮಾಸನದಲ್ಲಿ ಕುಳಿತಿರುವುದು ಗಮನಾರ್ಹ. ಆತನಿಗೆ ಸೇವೆ ಮಾಡಲು ಇಬ್ಬರು ಅಪ್ಸರೆಯರು ಬದಿಗಳಲ್ಲಿ ಚೌರಿ ಹಿಡಿದು ನಿಂತಿದ್ದಾರೆ. ಆತನ ತಲೆಯ ಮೇಲ್ಭಾಗದಲ್ಲಿ ಎರಡು ಕಮಲಗಳ ಚಿತ್ರಗಳಿವೆ. ಅದರ ಮೇಲೆ ಅರೆಗಂಬಗಳ ಮೇಲೆ ಶಾಲಾ ಮಾದರಿಯಿದ್ದು, ನಡುವೆ ಕಳಸವಿದೆ.

ಕರಮಡಿಯ (ರೋಣ ತಾಲೂಕು) ವೀರಗಲ್ಲಿನಲ್ಲಿ ಮೂರು ಹಂತಗಳಿದ್ದು, ಯುದ್ಧ ದೃಶ್ಯದ ಹಂತ ನೆಲದಲ್ಲಿ ಹೂತಿದೆ. ಎರಡನೆಯ ಮತ್ತು ಮೂರನೆಯ ಹಂತಗಳನ್ನು ಎರಡು ಅರೆಗಂಬಗಳ ನಡುವೆ ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ಅಪ್ಸರೆಯರು ಮಡಿದ ವೀರನ ಕೈಗಳನ್ನು ಹೆಗಲ ಮೇಲೆ ಹಾಕಿಕೊಂಡು ಹಾರುತ್ತಿದ್ದರೆ, ಅವರನ್ನು ಸಂತೋಷ–ಸಡಗರದಿಂದ ಗಂಧರ್ವರು, ನೃತ್ಯಗಾರರು ಮತ್ತು ವಾದ್ಯ ಮೇಳದವರೊಂದಿಗೆ ಸ್ವರ್ಗಲೋಕಕ್ಕೆ ಒಯ್ಯುತ್ತಿರುವರು. ಮೂರನೆಯ ದೃಶ್ಯದಲ್ಲಿ ವೀರನು ಬಲಕ್ಕೆ ಮುಖ ಮಾಡಿಕೊಂಡು ಆಶೀರ್ವಾದ ಮುದ್ರೆಯಲ್ಲಿ ಕುಳಿತಿರುವನು. ಬಲಕ್ಕೆ ಮುಖವನ್ನು ತಿರುಗಿಸಿರುವನು. ಆತನಿಗೆ ಸೇವೆ ಮಾಡಲು ವೀರನು ಎರಡೂ ಕಡೆಗಳಲ್ಲಿ ದೇವಲೋಕದ ಗಂಧರ್ವರು ಎರಡು ಸಾಲುಗಳಲ್ಲಿ ನಿಂತಿದ್ದಾರೆ. ಒಂದನೆಯ ಸಾಲಿನಲ್ಲಿ ಕೊಳಲು ಊದುವವರು, ಜಾಗಟೆ ಬಾರಿಸುವವರು, ತಾಳ ಬಾರಿಸುವವರು, ಚೌರಿ ಬೀಸುವವರು ಹೀಗೆ ಹತ್ತು ಮಂದಿಯಿದ್ದಾರೆ. ಎರಡನೆಯ ಸಾಲಿನಲ್ಲಿ ಎಂಟು ಅಪ್ಸರೆಯರಿದ್ದಾರೆ. ಇಬ್ಬರು ಹಾರ ಹಿಡಿದು ನಿಂತಿದ್ದಾರೆ. ಕಮಲ ಹಿಡಿದು ಇಬ್ಬರು ನಿಂತಿದ್ದಾರೆ. ಚೌರಿ ಬೀಸುತ್ತ ಇಬ್ಬರು ನಿಂತಿದ್ದಾರೆ. ಅದರ ಮೇಲ್ಭಾಗದಲ್ಲಿ ಅರೆಗಂಬಗಳ ಸಾಲಿನ ಮೇಲೆ ವಿಶಿಷ್ಟ ರೀತಿಯ ವಿಮಾನ ಪಟ್ಟಿಕೆಯಿದೆ. ಈ ಪಟ್ಟಿಕೆಯಲ್ಲಿ ಎರಡು ಅರೆಗಂಬಗಳ ನಡುವೆ ಶಿವಲಿಂಗವಿದೆ. ಅದರ ಬಲಕ್ಕೆ ಶಿವಲಿಂಗವನ್ನು ಆರಾಧಿಸುತ್ತ ಯತಿ ನಿಂತಿರುವನು. ಬಲಗೈ ಬದಿಗೆ ಇಟ್ಟಿದ್ದರೆ, ಎಡಗೈಯಲ್ಲಿ ಕುಂಭವನ್ನು ಎತ್ತಿ ಹಿಡಿದು ನಿಂತಿದ್ದಾನೆ. ಆತನ ಬಲಕ್ಕೆ ಚತುರ್ಭುಜ ಗಣಪತಿ ಕುಳಿತಿದ್ದರೆ, ಎಡಕ್ಕೆ ಮಹಿಷಾಸುರ ಮರ್ಧಿನಿ ಮತ್ತು ಕುಳಿತ ನಂದಿ ಚಿತ್ರಗಳಿವೆ. ಶಿವಲಿಂಗದ ಮೇಲೆ ಕಪೋತಕ್ಕೆ ಹೊಂದಿಕೊಂಡಂತೆ ಇಳಿಬಿಟ್ಟ ಹೂವಿನ ಹಾರವಿದೆ. ಇಡೀ ದೃಶ್ಯ ಅಲಂಕೃತ ಪಟ್ಟಿಕೆಯಿಂದ ಆವೃತಗೊಂಡಿದೆ. ಅದರ ಬಲಬುಡದಲ್ಲಿ ಆಯತಾಕಾರದ ಪಟ್ಟಿಕೆಯ ಮೇಲೆ ಸಾಲಾಗಿ ಏಳು ಶಿವನ ಮುಖವಿರುವುದು

ಈ ಪ್ರದೇಶದಲ್ಲೇ ಅಪರೂಪದ ಲಕ್ಷಣವೆನಿಸಿದೆ. ಅರೆಗಂಬಗಳನ್ನು ಹೊತ್ತ ಕಪೋತದ ಮೇಲೆ ಎರಡು ಕಳಸಗಳಿವೆ. ಈ ದೃಶ್ಯವನ್ನು ವಿಮಾನದ ಶಿಖರ ಮುಂಭಾಗದಲ್ಲಿ ಕಂಡರಿಸಲಾಗಿದೆ. ಅದರ ಮೇಲೆ ಮೂರು ಕಳಸಗಳಿವೆ. ಇದರ ಕಾಲ ಸುಮಾರು ಕ್ರಿ.ಶ. ೯ನೆಯ ಶತಮಾನದ ಅಂತ್ಯಭಾಗ. ಚಿಂಚಲಿಯ ಕ್ರಿ.ಶ. ೮೯ರ ವೀರಗಲ್ಲು ಶಾಸನದಲ್ಲಿ ಮಡಿದ ಕೆಲವರ ನೆನಪಿಗೆ ಒಂದು ಸ್ಮಾರಕ ಶಿಲೆಯನ್ನು ನಿಲ್ಲಿಸಲಾಯಿತೆನ್ನಲಾಗಿದೆ. (ಎಸ್.ಐ.ಐ. ೧೧ ರೋಣ ಶಾ.ಸ.–೨೪)

ಗದಗ ತಾಲೂಕಿನ ಮಲ್ಲಸಮುದ್ರದ ವೀರಗಲ್ಲಿನಲ್ಲಿ ಅಪ್ಸರೆಯರು ಒಂದು ಕೈಯಲ್ಲಿ ವೀರನನ್ನು, ಮತ್ತೊಂದು ಕೈಯಲ್ಲಿ ಕುಂಭವನ್ನು ಹಿಡಿದು ಹಾರುತ್ತಿರುವ ದೃಶ್ಯವಿದೆ. ರೋಣ ತಾಲೂಕಿನ ಜಕ್ಕಲಿಯ ಕಲ್ಮೇಶ್ವರ ದೇವಾಲಯದ ವೀರಗಲ್ಲಿನಲ್ಲೂ ಇದೇ ರೀತಿಯಿದೆ. ಆದರೆ ಅಪ್ಸರೆಯರು ವೀರನನ್ನು ಹಿಡಿದು ಹಾರುವಾಗ ಅವರೆಲ್ಲರ ಕಾಲುಗಳು ಮಡಚಿವೆ. ಸುತ್ತಲೂ ಮೋಡದ ತೆರೆಗಳಿವೆ. ಮತ್ತೊಂದು ಕೈಗಳಲ್ಲಿ ಹಿಡಿದು ಪೂರ್ಣ ಕುಂಭಗಳು ಸ್ವಲ್ಪ ದೊಡ್ಡವಿದೆ.

ರೋಣ ತಾಲೂಕಿನ ಜಕ್ಕಲಿಯ ವೀರಗಲ್ಲಿನಲ್ಲಿ ಮೂರನೆಯ ಹಂತದಲ್ಲಿ ವೀರನು ವೇದಿಕೆಯ ಮೇಲೆ ಕುಳಿತಿದ್ದಾನೆ. ಬದಿಗಳಲ್ಲಿ ಸೇವಕಿಯರು ನಿಂತಿದ್ದಾರೆ. ಈ ದೃಶ್ಯವನ್ನು ಎರಡು ಅರೆಗಂಬಗಳ ನಡುವೆ ಚಿತ್ರಿಸಲಾಗಿದೆ. ಮಲ್ಲಸಮುದ್ರದ ವೀರಗಲ್ಲಿನಲ್ಲಿ ಮೂರನೆಯ ಹಂತದ ಚಿತ್ರದಲ್ಲಿ ವೀರ ಪದ್ಮಾಸನದಲ್ಲಿ ಕುಳಿತಿದ್ದು, ಬದಿಗೆ ಸೇವೆ ಮಾಡುತ್ತ ನಿಂತ ಅಪ್ಸರೆಯರು ಇನ್ನೊಂದು ಕೈಯಲ್ಲಿ ಪಾನಪಾತ್ರೆಯಿರುವುದು ವಿಶೇಷವೆನ್ನಬಹುದು. ಈ ಶಿಲ್ಪದ ಕೆಳಗಿನ ಹೋರಾಟ ದೃಶ್ಯದಲ್ಲಿ ಮೇಲೆ ಬಣ್ಣವನ್ನು ಲೇಪಿಸಿದ್ದರಿಂದ ಚಿತ್ರಗಳ ವಿವರಗಳು ಅಸ್ಪಷ್ಟವಾಗಿವೆ. ಅದೇ ರೀತಿ ಜಕ್ಕಲಿಯ ವೀರಗಲ್ಲು ಶಿಲ್ಪದಲ್ಲೂ ಎಣ್ಣೆ ಬಿದ್ದಿರುವುದರಿಂದ ಅದರಲ್ಲಿಯ ಹೆಚ್ಚಿನ ವಿವರಗಳು ಅಸ್ಪಷ್ಟವಾಗಿವೆ.

ಕ್ರಿ.ಶ. ೯೩೩ರ ಸ್ಮಾರಕ ಶಿಲ್ಪ ಕೌಜಗೇರಿ (ರೋಣ ತಾಲೂಕು)ಯ ಕೆರೆಯ ಮೇಲಿದೆ. ಅದರ ಶಾಸನದಲ್ಲಿ ನಲ್ಮಡಿ ಗೋವಿಂದನ ಆಳ್ವಿಕೆಯ ಕಾಲದಲ್ಲಿ ಕೋವುಜಗೆಜೆಯ ಗವುಣ್ಡ ಬಳ್ಳಜ್ಜ ತಾನು ಮಾಡಿಸಿದ ಭಟರಿಯ ದೇಗುಲ, ವಿನಾಯಕ ದೇಗುಲ, ಕೇಶವಾದಿತ್ಯರ ದೇಗುಲ, ಸಿದ್ಧೇಶ್ವರ ದೇಗುಲ, ಮಠದ ಮದೇರ ದೇಗುಲಗಳಿಗೆ ವಿವಿಧ ದಾನ ಮಾಡಿದ. ತಾನು ಮಾಡಿಸಿದ ದೇವಾಲಯಕ್ಕೆ ಹೋದೋಟವನ್ನು ದತ್ತಿಬಿಟ್ಟ. ಹಾಗೂ ತನ್ನ ಮಕ್ಕಳಿಬ್ಬರಿಗೆ ವೀರಗಲ್ಲನ್ನು ಮತ್ತು ತನಗಾಗಿ 'ಗವಿಕಲ್ಲ'ನ್ನು ನಿರ್ಮಿಸಿದನೆಂದು ಹೇಳಿರುವುದು (ಎಸ್.ಐ.ಐ. ೧೧ ರೋಣ ಶಾ.ಸ.–೨೪) ವಿಶೇಷವೆನಿಸಿದೆ.

ಈ ವೀರಗಲ್ಲಿನಲ್ಲಿ ನಾಲ್ಕು ಹಂತಗಳಿವೆ. ಕೆಳಗಿನ ಮೊದಲನೆಯ ಹಂತದಲ್ಲಿ ನಡುವೆ ಇಬ್ಬರು ಎದುರಬದುರಾಗಿ ನಿಂತಿದ್ದಾರೆ. ಅವರ ಎಡಕ್ಕೆ ಒಬ್ಬಳು ನೃತ್ಯ ಮಾಡುತ್ತಿರುವಳು. ಎರಡನೆಯ ಹಂತದಲ್ಲಿ ಬಲಗಡೆಯಿಂದ ಎಡಗಡೆಗೆ ಒಬ್ಬನು ಕುದುರೆ ಸವಾರಿ ಮಾಡುತ್ತಿರುವನು. ಅವನ

ಎದುರಿಗೆ ಮೂವರಲ್ಲಿ ಇಬ್ಬರು ಈಟಿಯನ್ನು ಹಿಡಿದು ನಿಂತಿದ್ದಾರೆ. ಇನ್ನೊಬ್ಬನು ಕಿರಿದಾಗಿದ್ದಾನೆ. ಕುದುರೆ ಸವಾರಿ ಮಾಡುವವನು ಬಳ್ಳಿಜ್ಜನೆಂದು, ಬದಿಗಿರುವ ಇಬ್ಬರು ಆತನ ಮಕ್ಕಳೆಂದೂ ಗುರುತಿಸಬಹುದು. ಮೂರನೆಯ ಹಂತದಲ್ಲಿ ಹಸು-ಕರು ನಿಂತಿವೆ. ಸುತ್ತಲೂ ಅರ್ಧ ವೃತ್ತಾಕಾರದ ಹೂಬಳ್ಳಿಗಳ ಪಟ್ಟಿಕೆಯಿದೆ. ಈ ಶಿಲ್ಪದ ಮೇಲಿನ ಭಾಗದಲ್ಲಿ ಎರಡು ಅರೆಗಂಬಗಳ ಮೇಲೆ ಕಳಸವಿದೆ. ಅರೆಗಂಬಗಳ ನಡುವೆ ಶಿವಲಿಂಗವನ್ನು ಯತಿಯೊಬ್ಬ ಪೂಜಿಸುತ್ತಿರುವನು. ಆತನ ಎಡಕ್ಕೆ ಕೆಳಗಡೆ ಕುಳಿತ ಗಣೇಶ, ಹಿಂದೆ ಭಕ್ತ ಕೈಮುಗಿದು ನಿಂತಿದ್ದಾನೆ. ಶಿವಲಿಂಗದ ಮೇಲೆ ಇಳಿಬಿಟ್ಟ ಗಂಟೆಯಿದೆ. ಅದರ ಎಡಕ್ಕೆ ಸ್ಥಾನಾಚಾರ್ಯನೊಬ್ಬ ಶಿವಲಿಂಗದ ಮುಂದೆ ಕುಳಿತ ನಂದಿ ಮತ್ತು ಮೇಲ್ಗಡೆ ಮಹಿಷಾಸುರಮರ್ಧಿನಿಯಿದ್ದಾಳೆ. ಅದಕ್ಕೆ ದ್ರಾವಿಡ ಮಾದರಿ ಶಿಖರ ನಮೂನೆಯಿದೆ. ಈ ಮಾದರಿಯ ಶಿಲ್ಪವು ಸ್ಮಾರಕ ಶಿಲ್ಪಗಳಲ್ಲಿ ವಿರಳವೆಂದೇ ಹೇಳಬಹುದು.

ರೋಣ ತಾಲೂಕಿನಲ್ಲಿ ರಾಷ್ಟ್ರಕೂಟರ ಕಾಲದ ಎರಡು ಮಹತ್ತರವಾದ ವೀರಗಲ್ಲುಗಳಿವೆ. ಒಂದನ್ನು ಧಾರವಾಡದಲ್ಲಿ ಕರ್ನಾಟಕ ಸರ್ಕಾರದ ಪುರಾತತ್ವ ಇಲಾಖೆಯ ಪ್ರದರ್ಶನಾಲಯದಲ್ಲಿ ಇಡಲಾಗಿದೆ. ಆ ಶಿಲ್ಪದ ಶಾಸನದಲ್ಲಿ ಪಂಪಯ್ಯನೆಂಬುವವನು ಯಾವ ಕಾರಣಕ್ಕಾಗಿ ಯುದ್ಧ ಮಾಡಿ ಮಡಿದನೆಂಬ ವಿಷಯ ಕುತೂಹಲದ್ದಾಗಿದೆ. ರಾಷ್ಟ್ರಕೂಟರ ರಾಜಕೀಯ ಚರಿತ್ರೆಯಲ್ಲಿ ದೊರೆ ಮುಮ್ಮಡಿ ಕೃಷ್ಣನು ಚೋಳರ ವಿರುದ್ಧ ತಕ್ಕೋಳಂದಲ್ಲಿ ಮಾಡಿದ ಯುದ್ಧದಲ್ಲಿ ಗಂಗ ಇಮ್ಮಡಿ ಬೂತುಗ ಮುಂದಾಳತ್ವವನ್ನು ವಹಿಸಿದ್ದನು. ಚೋಳರನ್ನು ಸೋಲಿಸಲು ಕಾರಣನಾದ ಈ ಬೂತುಗನಿಗೆ ಕಾಣಿಕೆಯಾಗಿ ಬನವಾಸಿ, ಪುಲಿಗೆರೆ ಮತ್ತು ಬೆಳ್ವೊಲ ನಾಡುಗಳನ್ನು ರಾಜ ಮುಮ್ಮಡಿ ಕೃಷ್ಣ ನೀಡಿದ್ದನು. ಇದರಿಂದ ಬೂತುಗ ಈ ಪ್ರದೇಶದ ಉಸ್ತುವಾರಿಯನ್ನು ನೋಡುತ್ತಿದ್ದನು. ಈತನು ಕ್ರಿ.ಶ. ೯೪೨ರಲ್ಲಿ ರೋಣಕ್ಕೆ ಬಂದು "ಕಿಡಿಸಿ ಭತ್ತಾಯ (ಭತ್ತದ ತೆರಿಗೆ) ಮನೀಯ ಮೇಯ್ದಿಂ" ಅಂದರೆ ಹೆಚ್ಚಿನ ಸುಂಕವನ್ನು ಕೊಡಬೇಕೆಂದು ದರ್ಪದಿಂದ ಹಿಂಸಿಸಿದನು. ಆ ಸಂದರ್ಭದಲ್ಲಿ ಆ ಊರಿನ (ಅಗ್ರಹಾರದ) ಕೌಂಡಿನ್ಯ ಗೋತ್ರದ ಪಂಪಯ್ಯನೆಂಬುವನು ಅಲ್ಲಿಯ ಮಹಾರಾಜರು ಅಪ್ಪಣೆ ಪಡೆದು ಬೂತಯ್ಯನ ದರ್ಪದ ವಿರುದ್ಧ "ನಾನೊಂದಕ್ಷತೆಯನುಪುಂದ ವೀಯನ್" ಅಂದರೆ ತಾನು ಕೊಡಬೇಕಾದ ಸುಂಕಕ್ಕಿಂತಲೂ ಒಂದು ಅಕ್ಷತೆಯಷ್ಟೂ ಹೆಚ್ಚಾಗಿ ಕೊಡುವುದಿಲ್ಲವೆಂದು ನಿಶ್ಚಯಿಸಿ ಪ್ರತಿಭಟಿಸಿದನು. ಆಗ ಬೂತಯ್ಯನ ವಿರುದ್ಧ ಪಂಪಯ್ಯ ಹೋರಾಡಿದನು. ಕೊನೆಗೆ ಬೂತಯ್ಯನ ಅಧೀನದಿಂದ ಆ ಊರನ್ನು ಬಿಡಿಸಲು ಕಾರಣವಾಗಿ ಸಾವನ್ನಪ್ಪಿದ. ಆ ಪಂಪಯ್ಯನ ಬಗ್ಗೆ ಊರಿನ ಜನರಿಗೆ ಹೆಮ್ಮೆಯ ಸಂಗತಿಯಾಗಿತ್ತೆಂದು ಈ ವೀರಗಲ್ಲು ಶಾಸನ ತಿಳಿಸುತ್ತದೆ. (ಕರ್ನಾಟಕ ವೀರಗಲ್ಲುಗಳು, ಶೇಷಶಾಸ್ತ್ರಿ ಆರ್. ೧೯೮೨, ಪುಟ-೫೬)

ರೋಣದ ರಾಷ್ಟ್ರಕೂಟರ ಕಾಲದ ಇನ್ನೊಂದು ವೀರಗಲ್ಲು ಲೋಕನಾಥ ಕಲ್ಮೇಶ್ವರ ದೇವಾಲಯದ ಮುಂದಿದೆ. ಅದರಲ್ಲೂ ಕೆಳಗಿನ ಭಾಗ ಮುರಿದಿದೆ. ಅದರಲ್ಲಿದ್ದ ಯುದ್ಧ ದೃಶ್ಯದ ಫಲಕ

ಕಣ್ಮರೆಯಾಗಿದೆ. ಈ ವೀರಗಲ್ಲಿನಲ್ಲೂ ಚಿತ್ರಿಸಿದ ಹೆಚ್ಚಿನ ವಿವರಗಳು ಶಾಸನವುಳ್ಳ ಕ್ರಿ.ಶ. ೯೪೨ರ ಪಂಪಯ್ಯನ ವೀರಗಲ್ಲನ್ನು ಹೋಲುತ್ತದೆ. ಅದರಲ್ಲಿ ಚಿತ್ರಿಸಿದ ಮೇಲಿನ ಸಾಲಿನಲ್ಲಿರುವ ಹಾರ, ಛತ್ರಿ ಹಿಡಿದವರನ್ನು ಕಾಣಬಹುದು. ವೀರನನ್ನು ಅಪ್ಸರೆಯರಿಬ್ಬರು ಆತನನ್ನು ಭುಜಗಳ ಮೇಲೆ ಹೊತ್ತು ಆಕಾಶದಲ್ಲಿ ಹದಿನಾರು ಮಂದಿ ನೃತ್ಯಗಾರರು, ಸಂಗೀತಗಾರರು, ಗಂಧರ್ವರು ಮತ್ತು ಕಿನ್ನರರ ಜೊತೆಯಲ್ಲಿ ಹಾರುವ ದೃಶ್ಯವನ್ನು ಪ್ರಸ್ತುತ ಶಿಲ್ಪದಲ್ಲೂ ಕಾಣಬಹುದು. ಮೂರನೆಯ ಫಲಕದಲ್ಲಿ ಏಕ ಸಾಲಿನಲ್ಲಿ ಮೂರು ಗೂಡುಗಳಿವೆ. ಅವುಗಳನ್ನು ಅರೆಗಂಬಗಳಿಂದ ವಿಭಾಗಿಸಲಾಗಿದೆ. ಮಧ್ಯದ ಗೂಡಿನಲ್ಲಿ ಮಡಿದ ವೀರನು ಎತ್ತರದ ಪೀಠದ ಮೇಲೆ ಕುಳಿತಿದ್ದಾನೆ. ಆತನ ಬದಿಗಳಲ್ಲಿ ಒಟ್ಟು ನಾಲ್ಕು ಮಂದಿ ಸೇವಕಿಯರಿದ್ದಾರೆ. ಆತನ ಎಡಗಡೆಯ ಗೂಡಿನಲ್ಲಿ ವಿಷ್ಣು ಸಮಭಂಗಿಯಲ್ಲಿ ನಿಂತಿದ್ದಾನೆ. ವೀರನು ಬಲಗೈಯಲ್ಲಿ ಕಮಲವನ್ನು ಹಿಡಿದೆತ್ತಿ, ಎಡಗೈಯನ್ನು ಅಡ್ಡಬಾಗಿಸಿ, ಮಡಚಿಟ್ಟ ತೊಡೆಯ ಮೇಲೆ ಭಾರಹಾಕಿ ಇಟ್ಟಿರುವನು. ತಲೆಯ ಮೇಲೆ ಮತ್ತು ಇಬ್ಬರು ಸೇವಕರು ತಲೆಗಳ ಮಧ್ಯದಲ್ಲಿ ಸರಳವಾದ ದುಂಡನೆಯ ದಪ್ಪ ಹೂವಿನ ಹಾರದ ಪಟ್ಟಿಕೆಯಿದೆ. ವೀರನು ಎಡಬಲಗಳ ಅರೆಗಂಬಗಳ ಪೀಠದಲ್ಲಿ ಕ್ರಮವಾಗಿ ಕಾಲುಗಳನ್ನು ಮಡಚಿ ನಮಸ್ಕಾರ ಮಾಡುತ್ತಿರುವುದನ್ನು ಎರಡು ರೀತಿಯಲ್ಲಿ ಚಿತ್ರಿಸಿರುವುದು ವಿಶೇಷ ಗಮನ ಸೆಳೆಯುತ್ತದೆ. ಒಬ್ಬನು ವಿಷ್ಣುವಿನ ಕಡೆಗೆ ಮುಖಮಾಡಿ ಮಲಗಿ ನಮಸ್ಕರಿಸಿದರೆ, ಇನ್ನೊಬ್ಬನು ಬ್ರಹ್ಮ ಮತ್ತು ಮಡಿದ ವೀರನ ನಡುವೆ ಕಾಲುಗಳನ್ನು ಮುಂದಕ್ಕೆ ಮಡಚಿ ಮಲಗಿ ನಮಸ್ಕರಿಸುವುದನ್ನು ಸೂಚಿಸುವುದು. ಗೂಡುಗಳ ನಾಲ್ಕು ಅರೆಗಂಬಗಳ ಕಾಂಡಭಾಗದಲ್ಲಿ ಎರಡು ಚೌಕಗಳಿವೆ. ಮೇಲಿನ ಚೌಕಭಾಗದಲ್ಲಿ ವೀರನ ಬದಿಯ ಅರೆಗಂಬಗಳಲ್ಲಿ ಮಾತ್ರ ಕುಂಭಗಳನ್ನು ಕಂಡರಿಸಲಾಗಿದೆ. ಉಳಿದೆರಡು ಅರೆಗಂಬಗಳ ಕಾಂಡಭಾಗದ ಎರಡು ಚೌಕಗಳ ಮಧ್ಯದಲ್ಲಿ ಚೌಕಭಾಗವು ಉಳಿದವುಗಳಿಗಿಂತ ಭಿನ್ನವಾಗಿವೆ. ಸಿಂಹದ ಬದಿಯ ಗೂಡುಗಳಲ್ಲಿ ಗಣೇಶ ಮತ್ತು ಮಹಿಷಾಸುರಮರ್ಧಿನಿಯರನ್ನು ನಟರಾಜನ ಬದಿಗಳಲ್ಲಿರುವ ಕಿರುಗೂಡುಗಳಲ್ಲಿ ಮಡಿದ ವೀರ ಮತ್ತು ಆತನ ಹೆಂಡತಿಯರು ಕುಳಿತಿರುವುದನ್ನು ಚಿತ್ರಿಸಿರುವುದು ಮತ್ತೊಂದು ಮಹತ್ವದ ಸಂಗತಿಯಾಗಿದೆ. ನಟರಾಜನ ಬದಿಗಳಲ್ಲಿರುವ ಅರೆಗಂಬಗಳು ದುಂಡಾಗಿವೆ. ಬದಿಯ ಗೂಡುಗಳ ಅರೆಗಂಬಗಳು ಚೌಕಾಕಾರದಲ್ಲಿದೆ. ಮೇಲ್ಗಡೆ ಬಳ್ಳಿಗಳ ಚಿತ್ರಗಳಿವೆ. ಈ ವೀರಗಲ್ಲಿನ ಅನೇಕ ಕಲಾ ಲಕ್ಷಣಗಳು ಮೇಲೆ ತಿಳಿಸಿದ ವೀರಗಲ್ಲನ್ನು ಹೋಲುವುದರಿಂದ ಈ ಶಿಲ್ಪವೂ ಸಹ ಪಂಪಯ್ಯನ ಸ್ಮಾರಕವೆಂದು ತಿಳಿದುಬರುತ್ತದೆ. (ಕರ್ನಾಟಕ ವೀರಗಲ್ಲುಗಳು, ಶೇಷಶಾಸ್ತ್ರಿ, ಆರ್. ೧೯೮೨, ಪುಟ-೫೮)

ಸುಮಾರು ಕ್ರಿ.ಶ. ೯ನೆಯ ಶತಮಾನದ ಬೆಟಗೇರಿಯ ಮತ್ತೊಂದು ವೀರಗಲ್ಲಿನಲ್ಲಿ ಎರಡು ದೃಶ್ಯಗಳು ಕಾಣಿಸುತ್ತವೆ. ಅಪ್ಸರೆಯರಿಬ್ಬರು ವೀರನ ಕೈಗಳನ್ನು ತಮ್ಮ ತೋಳುಗಳಲ್ಲಿ ಹಾಕಿಕೊಂಡು ಹಾರುತ್ತಿದ್ದಾರೆ. ಬದಿಯ ಮೇಲಿನ ಮೂಲೆಗಳಲ್ಲಿಬ್ಬರು ಹಾರ ಹಿಡಿದ ಗಂಧರ್ವರಿದ್ದಾರೆ. ಇವರೆಲ್ಲರ ಸುತ್ತ ಮೋಡದ ಚಿಹ್ನೆಯಿದೆ. ಮೇಲಿನ ಹಂತದಲ್ಲಿ ಚೌರಿ ಹಿಡಿದು ನಿಂತ ಇಬ್ಬರು

ಸೇವಕಿಯರ ಮಧ್ಯೆ ಮಡಿದ ವೀರ ಕಮಲ ಹಿಡಿದು ಕುಳಿತಿದ್ದಾನೆ. ಮೇಲ್ಗಡೆ ಹಾರ ಜೋತು ಬಿದ್ದಿದೆ. ಅದರ ಕಪೋತದಲ್ಲಿ ಎರಡು ವಿಮಾನದ ಶಿಖರಗಳಿವೆ. ಈ ವಿಮಾನದ ನಡುವೆ ಸ್ವಲ್ಪ ಮೇಲೆ ಚತುರ್ಭುಜ ಗಣೇಶನು ಪದ್ಮ ಪೀಠದ ಮೇಲೆ ಕುಳಿತಿದ್ದಾನೆ. ಶಿಲ್ಪ ತುದಿಯ ನಡುವೆ ಕಳಸವಿದೆ.

ಗದಗ ತಾಲೂಕಿನ ಎಲಿಶಿರೂರ ವೀರಗಲ್ಲಿನ ಕೆಳಹಂತದಲ್ಲಿ ವೀರನು ಕುದುರೆ ಸವಾರಿ ಮಾಡುತ್ತ ವೈರಿಯ ವಿರುದ್ಧ ಹೋರಾಡುತ್ತಿದ್ದಾನೆ. ಇಬ್ಬರ ಕಡೆಯಲ್ಲೂ ಅವರಿಗೆ ಛತ್ರಿಯನ್ನು ಎತ್ತಿ ಹಿಡಿಯಲಾಗಿದೆ. ತಲಾ ಒಬ್ಬರಿಗೆ ಸಮ ಪ್ರಮಾಣದಲ್ಲಿ ಪಡೆಗಳಿವೆ. ಎರಡನೆಯ ಹಂತದಲ್ಲಿ ವೀರನು ಅಪ್ಸರೆಯರ ಸಂಗಡ ಹಾರುತ್ತಿದ್ದು, ಆತನಿಗೆ ಗಂಧರ್ವರು ಶುಭ ಕೋರುತ್ತಿರುವರು. ಬೆಟಗೇರಿಯ ಒಕ್ಕಲುಗೇರಿಯ ಓಣಿ ಶಿಲ್ಪದಲ್ಲಿ ವೀರನು ವೈರಿಯ ವಿರುದ್ಧ ಯುದ್ಧ ಮಾಡುತ್ತಿರುವನು. ವೈರಿಯು ಕಾದಾಡುತ್ತ ವೀರನಿಗೆ ಉದ್ದವಾದ ಈಟಿನಿಂದ ತಿವಿಯಲು ನಡೆದಿದ್ದಾನೆ. ಅದನ್ನು ವೀರನ ಪಡೆಯವನು ಕತ್ತಿಯಿಂದ ತಡೆ ಹಿಡಿದಿದ್ದಾನೆ. ವೀರನು ಬಲಗಡೆಯಿಂದ ಬಿಲ್ಲನ್ನು ಹಿಡಿದು ಬಾಣ ಪ್ರಯೋಗಿಸುತ್ತಿರುವನು. ಎರಡನೆಯ ಹಂತದಲ್ಲಿ ಎರಡು ಅರೆಗಂಬಗಳ ನಡುವೆ ವೀರನನ್ನು ಅಪ್ಸರೆಯರು ಒಯ್ಯುವ ದೃಶ್ಯವಿದೆ. ಮೂರನೆಯ ದೃಶ್ಯದಲ್ಲಿ ಎರಡು ಅರೆಗಂಬಗಳ ನಡುವೆ ಮಡಿದ ವೀರನು ಶಿವಲಿಂಗದ ಮುಂದೆ ಕುಳಿತಿದ್ದಾನೆ. ಅದರ ಮೇಲೆ ಶಿಖರ ಮಾದರಿಯಿದೆ. ಇದರ ಕಾಲ ಸುಮಾರು ಕ್ರಿ.ಶ. ೧೦ನೆಯ ಶತಮಾನದ ಕೊನೆಭಾಗ. (ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, (ಸಂ), ಗೋಪಾಲ್ ಆರ್., ೨೦೦೬, ಪುಟ-೩೭೬)

ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರದ ಲಕ್ಷಮಣೇಶ್ವರ ದೇವಾಲಯದ ಸಭಾಮಂಟಪದ ಛತ್ತಿನಲ್ಲಿ ಈ ಕಾಲದ ವೀರಗಲ್ಲೊಂದಿದೆ. ಅದರ ಮೇಲಿನ ಭಾಗ ಮುರಿದಿದೆ. ಉಳಿದ ಭಾಗದಲ್ಲಿ ಎರಡು ಹಂತಗಳಿವೆ. ಒಂದರಲ್ಲಿ ವೀರರು ವೈರಿಗಳ ಸಂಗಡ ಹೋರಾಡುವ ಎರಡು ದೃಶ್ಯಗಳಿವೆ. ಇನ್ನೊಂದರಲ್ಲಿ ವೀರರು ವೈರಿಗಳ ಸಂಗಡ ಹೋರಾಡುವ ಎರಡು ದೃಶ್ಯಗಳಿವೆ. ಇನ್ನೊಂದರಲ್ಲಿ ಮಡಿದ ವೀರರನ್ನು ಅಪ್ಸರೆಯರು ದೇವಲೋಕಕ್ಕೆ ಒಯ್ಯುವ ದೃಶ್ಯವಿದೆ. ಕೆಳಗಿನ ಮೊದಲನೆಯ ಪಟ್ಟಿಕೆಯಲ್ಲಿ ಇಬ್ಬರು ವೀರರು ವೈರಿಗಳ ವಿರುದ್ಧ ಕಾದಾಡುತ್ತಿರುವರು. ಅದನ್ನು ವಿಶಿಷ್ಟ ರೀತಿಯಲ್ಲಿ ತೋರಿಸಲಾಗಿದೆ. ಅವರನ್ನು ಏಕಸಾಲಿನಲ್ಲಿ ಕಂಡರಿಸಲಾಗಿದೆ. ವೈರಿಯ ಪಡೆಯನ್ನು ಎರಡು ಸಾಲುಗಳಲ್ಲಿ ಚಿತ್ರಿಸಲಾಗಿದೆ. ವೀರನ ಪಡೆಯವರನ್ನು ಒಂದೇ ಗಾತ್ರದಲ್ಲಿ ಸಮಾನಾಂತರವಾಗಿ ತೋರಿಸಲಾಗಿದೆ. ಎಲ್ಲರೂ ಕೈಗಳಲ್ಲಿ ಬಿಲ್ಲನ್ನು ಹಿಡಿದು ಬಾಣ ಪ್ರಯೋಗಿಸುತ್ತಿರುವರು. ಕೆಲವರು ರಣಭೂಮಿಯಲ್ಲಿ ಸತ್ತು ಬಿದ್ದಿರುವರು. ಎರಡನೆಯ ಹಂತದಲ್ಲೂ ಯುದ್ಧದ ದೃಶ್ಯವಿದೆ. ಅಲ್ಲಿಯೂ ಏಕಸಾಲಿನಲ್ಲಿ ತೋರಿಸಲಾಗಿದೆ. ಆದರೆ ವೈರಿ ಗುಂಪನ್ನು ಎರಡು ಸಾಲುಗಳಲ್ಲಿ ಮತ್ತು ವೀರನ ಗುಂಪಿನಲ್ಲಿ ಐವರನ್ನು ಚಿತ್ರಿಸಲಾಗಿದೆ. ವೈರಿ ಪಡೆಯಲ್ಲಿ ಆರು ಮಂದಿ ಇದ್ದಾರೆ. ಇಲ್ಲಿ ಕೆಲವರು ವೈರಿ ಪಡೆಯವರು ಕೆಳಗಡೆ ಸತ್ತು ಬಿದ್ದಿರುವರು. ಈ ಎರಡು ಹಂತಗಳಲ್ಲಿ ನಿರೂಪಿಸಿದ

ಯೋಧರ ದೇಹಾಂಗ ಮತ್ತು ಕಾಲುಗಳು ಉದ್ದವಾಗಿವೆ. ಸಮಾನಾಂತರವಾಗಿ ಚಲಿಸುವ ರೀತಿಯಲ್ಲಿ ರೂಪಿಸಲಾಗಿದೆ. ಅವರೆಲ್ಲರೂ ತಲೆಯ ಮೇಲೆ ಮುಡಿ ಕಟ್ಟಿರುವರು. ಮೂರನೆಯ ಹಂತದಲ್ಲಿ ಮಡಿದ ಮೂವರು ವೀರರನ್ನು ಅಪ್ಸರೆಯರು ಹೆಗಲ ಮೇಲೆ ಅವರ ಕೈಗಳನ್ನು ಹಾಕಿಕೊಂಡು ಆಕಾಶದಲ್ಲಿ ಹಾರುತ್ತಿರುವರು. ಈ ವೀರಗಲ್ಲಿನ ಕಾಲ ಕ್ರಿ.ಶ. ೧೦ನೆಯ ಶತಮಾನ. (ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, (ಸಂ) ಗೋಪಾಲ್ ಆರ್., ೨೦೦೬, ಪುಟ-೩೭೭)

**೩.೨. ರಾಷ್ಟ್ರಕೂಟರ ಶಾಸನ ರಹಿತ ವೀರಗಲ್ಲುಗಳು :**

ಚಿಂಚೋಳಿ ತಾಲೂಕಿನ ಗೊಟ್ಟಂಗೊಟ್ಟಿ ಗ್ರಾಮದ ಗೊಟ್ಟಂಗೊಟ್ಟಿ ಗುಡ್ಡದ ಬಳಿ ಸುಮಾರು ಎಂಟು ವೀರಗಲ್ಲುಗಳಿವೆ.

**ವೀರಗಲ್ಲು-೧ :** ೧೦ನೆಯ ಶತಮಾನದ ವೀರಗಲ್ಲುಗಳು. ಈ ವೀರಗಲ್ಲು ಒಂದು ಸ್ಥರದಿಂದ ಕೂಡಿದ್ದು, ವೀರನು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಗುರಾಣಿ ಹಿಡಿದಂತೆ ತೋರುತ್ತದೆ. ಈರ್ವರು ಶತ್ರುಗಳನ್ನು ಬಿಂಬಿಸಲಾಗಿದೆ. ಒಬ್ಬ ಶತ್ರು ಗುರಾಣಿಯ ಬಳಿ ನಿಂತಿರುವಂತೆ, ಮತ್ತೊಬ್ಬ ಕುದುರೆಯ ಮೇಲೆ ಕುಳಿತು ಹೋರಾಡುತ್ತಿರುವಂತೆ ದೃಶ್ಯಾವಳಿಯಲ್ಲಿ ಮೂಡಿಬಂದಿದೆ. ವೀರನು ಮುಂಗೈಗೆ ಮಣಿಕಂಠ ಮುತ್ತಿನಿಂದ ಕೂಡಿರುವ ಕಂಕಣ ಪಟ್ಟಿ, ತೋಳ್ಬಂದಿ ಹಾಕಿಕೊಂಡಿರುವಂತೆ ತೋರುತ್ತದೆ. ಕಟಿವಸ್ತ್ರ ಹಾಕಿಕೊಂಡಿದ್ದಾನೆ. ಈ ವೀರಗಲ್ಲು ಶಿಲ್ಪ ಕಪ್ಪು ಶಿಲೆಯಲ್ಲಿದ್ದು, ವೀರ ಮುಡಿ ಕಟ್ಟಿದಂತೆ ಚಿತ್ರಿಸಲಾಗಿದೆ.

**ವೀರಗಲ್ಲು-೨ :** ೧೦ನೆಯ ಶತಮಾನದ ಈ ವೀರಗಲ್ಲು ಭರ್ಚಿ ಹಿಡಿದಿರುವ ವೀರನು ಕಟಿವಸ್ತ್ರ ಧರಿಸಿರುವ, ಸೊಂಡದಲ್ಲಿ ಖಡ್ಗವಿಟ್ಟುಕೊಂಡಂತೆ ರಚಿಸಲಾಗಿದೆ. ಈ ರೀತಿಯ ವಸ್ತ್ರ ಧರಿಸುವ ವೀರರ ಶಿಲ್ಪಗಳು ಈ ಪ್ರದೇಶದಲ್ಲಿ ಸರ್ವೇಸಾಮಾನ್ಯವಾಗಿವೆ. ನೆಲಕ್ಕುರುಳಿರುವ ಇಬ್ಬರು ಶತ್ರುಗಳನ್ನು ಇಲ್ಲಿ ಬಿಂಬಿಸಲಾಗಿದೆ. ವೀರನು ಕೊರಳಲ್ಲಿ ಹಾರ, ಮುಂಗೈಪಟ್ಟಿ ಮತ್ತು ಕಿವಿ ಓಲೆ ಹಾಕಿದ್ದಾನೆ. ಒಂದು ಸ್ತರದ ವೀರಗಲ್ಲಿನಲ್ಲಿ ವೀರನು ಸೈನಿಕನಾಗಿ ಹೋರಾಡುತ್ತಿರುವನು.

**ವೀರಗಲ್ಲು-೩ :** ೧೦ನೆಯ ಶತಮಾನದ ಈ ವೀರಗಲ್ಲು ಮುಡಿ ಕಟ್ಟಿರುವ ವೀರನು 'ಯು' ಆಕಾರದ ವಸ್ತ್ರ ಧರಿಸಿರುವನು. ಕರ್ಣಕುಂಡಲ, ಮುತ್ತಿನ ತೋಳ್ಬಂದಿ ಮತ್ತು ಮುಂಗೈಗೆ ಮಣಿಕಟ್ಟು ಕಟ್ಟಿರುವನು. ಬಲಭಾಗದ ಸೊಂಟದಲ್ಲಿ ಒಂದು ಚಾಕು ಇದೆ. ಎಡಗೈಯಲ್ಲಿ ಗುರಾಣಿ ಹಿಡಿದಿದೆ. ನಿಂತ ಭಂಗಿಯಲ್ಲಿರುವ ವೀರನ ಎಡಕ್ಕೆ ಶರಣಾಗತಿ ಸ್ಥಿತಿಯಲ್ಲಿ ಕುಳಿತ ಶತ್ರುವಿನ ದೃಶ್ಯಾವಳಿ ಮೂಡಿಬಂದಿದೆ. ಉಳಿದ ಭಾಗ ತ್ರುಟಿತವಾಗಿದೆ. ಇದರ ಎಡಭಾಗದಲ್ಲಿರುವ ತ್ರುಟಿತ ಶಿಲ್ಪದಲ್ಲಿ ಲಿಂಗ ಮತ್ತು ಅಂಜಲಿ ಮುದ್ರೆಯ ವೀರನ ಶಿಲ್ಪವಿದೆ.

**ವೀರಗಲ್ಲು-೪ :** ೧೦ನೆಯ ಶತಮಾನದ ಈ ವೀರಗಲ್ಲು ನಿಂತ ಭಂಗಿಯಲ್ಲಿರುವ ವೀರ ಚಾಕುವಿನಿಂದ ಕುದುರೆಯ ಮೇಲಿರುವ ಶತ್ರುವನ್ನು ಇರಿಯುವಂತೆ ಪ್ರದರ್ಶಿಸಲಾಗಿದೆ. ಕಟಿವಸ್ತ್ರ,

ಸೊಂಟಪಟ್ಟಿ, ಮೊಳಕಾಲಿನವರೆಗೂ ಧೋತಿ ಹಾಕಿಕೊಂಡಂತೆ ಶಿಲ್ಪದಲ್ಲಿದೆ. ಮುಡಿ ಧರಿಸಿದ ವೀರ ಎಡಗೈಯಲ್ಲಿ ಗುರಾಣಿ ಹಿಡಿದಿರುವನು. ಇದರ ಮೇಲ್ಭಾಗದಲ್ಲಿ ಲಿಂಗವಿದೆ ಮತ್ತು ಅಂಜಲಿ ಹಸ್ತದಲ್ಲಿ ಕುಳಿತ ಲಿಂಗೈಕ್ಯನಾದ ವೀರನ ಶಿಲ್ಪವಿದೆ.

**ವೀರಗಲ್ಲು-೫ :** ೧೧ನೆಯ ಶತಮಾನದ ಈ ವೀರಗಲ್ಲು ಎರಡು ಸ್ತರದಲ್ಲಿದೆ. ವೀರ ಮತ್ತು ಶತ್ರು ಇಬ್ಬರನ್ನು ಸಮಾನರಾಗಿ ತೋರಿಸಲ್ಪಟ್ಟಿರುವುದು ಈ ಶಿಲ್ಪದ ವಿಶೇಷತೆ. ವೀರ ಖಡ್ಗದಿಂದ ಶತ್ರುವನ್ನು ಇರಿದಂತೆ ಶಿಲ್ಪದಲ್ಲಿ ಮೂಡಿಬಂದಿದೆ. ಶತ್ರುವಿನ ಎಡಗೈಯಲ್ಲಿ ಬಿಲ್ಲಿದೆ. ಶತ್ರುವಿನ ಶಿಲ್ಪ ಅಲಂಕಾರಿಕವಾಗಿದೆ. ಕೊರಳಿನ ಹಾರ ಕಂಠಹಾರ ಧರಿಸಿರುವಂತೆ ಅವನ ಕೆಳಗೆ ಒಬ್ಬ ಶತ್ರು ನೆಲಕ್ಕೆ ಉರುಳಿದಂತೆ ಚಿತ್ರಿಸಲಾಗಿದೆ. ಎರಡನೆಯ ಸ್ತರದಲ್ಲಿ ಸುರಾಂಗನೆಯರು ಚಾಮರ ಹಿಡಿದು ವೀರನನ್ನು ವಿಮಾನದಲ್ಲಿ ದೇವಲೋಕಕ್ಕೆ ಕರೆದೊಯ್ಯುತ್ತಿರುವಂತೆ ಬಿಂಬಿಸಲಾಗಿದೆ. ವೀರನು ನಿಂತ ಭಂಗಿಯಲ್ಲಿ ಹೋರಾಡುತ್ತಿರುವ ಶಿಲ್ಪವಿದೆ.

**ವೀರಗಲ್ಲು-೬ :** ಈ ವೀರಗಲ್ಲು ೧೧ನೆಯ ಶತಮಾನದ್ದಾಗಿದ್ದು, ಬಹಳಷ್ಟು ತ್ರುಟಿತ ವೀರಗಲ್ಲು. ಬಲಗೈಯಲ್ಲಿ ಭರ್ಚಿ ಹಿಡಿದ ವೀರನ ಶಿಲ್ಪವಿದೆ. ಬಲಭಾಗದ ಸೊಂಟದಲ್ಲಿ ಚೂರಿ ಇಟ್ಟುಕೊಂಡು, ಸೊಂಟ ಪಟ್ಟಿಕೆ ಮತ್ತು ಯಜ್ಞೋಪವೀತ ಧರಿಸಿದೆ. ಎಡಗೈ ಮತ್ತು ಎಡಗಾಲಿನ ಭಾಗ ತ್ರುಟಿತವಾಗಿದೆ. ನಿಂತ ಭಂಗಿಯಲ್ಲಿ ಹೋರಾಡುತ್ತಿರುವ ಒಂದು ಸ್ತರದ ವೀರಗಲ್ಲಾಗಿದೆ.

**ವೀರಗಲ್ಲು-೭ :** ೧೧ನೆಯ ಶತಮಾನದ ಈ ವೀರಗಲ್ಲು ಎರಡು ಸ್ತರದಿಂದ ಕೂಡಿದ್ದು, ವೀರ ಎಡಗೈಯಲ್ಲಿ ಬಿಲ್ಲು ಹಿಡಿದಂತಿದೆ. ಸೊಂಟಪಟ್ಟಿ, ಕಿವಿ ಓಲೆ ಹಾಕಿದೆ. ಅವನ ಎಡಕ್ಕೆ ಶತ್ರುವನ್ನು ನಿಂತ ಭಂಗಿಯಲ್ಲಿ ಬಿಂಬಿಸಲಾಗಿದೆ. ಲಿಂಗೈಕ್ಯನಾದ ವೀರ ಲಿಂಗದ ಮುಂದೆ ಅಂಜಲಿ ಮುದ್ರೆಯಲ್ಲಿ ಕುಳಿತಿರುವ ಶಿಲ್ಪವಿದೆ.

**ವೀರಗಲ್ಲು-೮ :** ೧೧ನೆಯ ಶತಮಾನದ ಈ ವೀರಗಲ್ಲು ಒಂದು ಸ್ತರದ ವೀರಗಲ್ಲಿನಲ್ಲಿ ವೀರನು ಎಡಗೈಯಲ್ಲಿ ಬಿಲ್ಲು ಹಿಡಿದಿದ್ದಾನೆ. ನಿಂತ ಭಂಗಿಯಲ್ಲಿ ಹೋರಾಡುತ್ತಿರುವ ವೀರನನ್ನು ಚಿತ್ರಿಸಲಾಗಿದೆ. ವೀರನು ಮುಡಿ ಕಟ್ಟಿರುವನು. ಕರ್ಣಕುಂಡಲ ಹಾಕಿದೆ.

ಚಿಂಚೋಳಿ ತಾಲೂಕಿನ ಎಚ್ಚಾಪುರ ಗ್ರಾಮದ ಹನುಮಾನ್ ಮಂದಿರ ಬಳಿ ಇರುವ ೧೧ನೆಯ ಶತಮಾನದ ವೀರಗಲ್ಲು. ಈ ವೀರಗಲ್ಲು ಒಂದು ಹಂತದಲ್ಲಿದ್ದು, ವೀರ ಕಟಿವಸ್ತ್ರ ಧರಿಸಿದ್ದು, ಸೊಂಟದಲ್ಲಿ ಒಂದು ಖಡ್ಗವಿದೆ. ಬಲಗೈಯಲ್ಲಿ ಚೂಪಾದ ಚಾಕು ಮತ್ತು ಎಡಗೈಯಲ್ಲಿ ಗುರಾಣಿ ಹಿಡಿದಿದೆ. ಇದು ತ್ರುಟಿತವಾಗಿದ್ದು, ವೀರನ ಎದುರು ಶತ್ರುವಿಗೆ ತೋರಿಸದೆ, ಆರು ಚಾಕು ಮತ್ತು ಗುರಾಣಿಯಿಂದ ತಡೆಯಲು ಸಿದ್ಧನಿರುವಂತೆ ದೃಶ್ಯಾವಳಿಯಲ್ಲಿ ಮೂಡಿಬಂದಿದೆ.

ಚಿಂಚೋಳಿ ತಾಲೂಕಿನ ಕೂಡಹಳ್ಳಿ ಗ್ರಾಮದ ಹನುಮಾನ್ ಮಂದಿರ ಬಳಿ ಇರುವ ೧೧ನೆಯ ಶತಮಾನದ ವೀರಗಲ್ಲು. ಒಂದು ಸ್ತರದ ವೀರಗಲ್ಲಿನಲ್ಲಿ ವೀರನು ಕುದುರೆ ಮೇಲೆ ಕುಳಿತ ಶತ್ರುವಿಗೆ ಖಡ್ಗದಿಂದ ಇರಿಯುತ್ತಿರುವಂತೆ ಬಿಂಬಿಸಲಾಗಿದೆ.

ಅಧ್ಯಾಯ : ೪

# ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲುಗಳು

# ಅಧ್ಯಾಯ – ನಾಲ್ಕು
# ಕಲ್ಯಾಣದ ಚಾಲುಕ್ಯರ ವೀರಗಲ್ಲುಗಳು

ರಾಷ್ಟ್ರಕೂಟರ ಕಾಲದ ನಂತರ ಕಂಡುಬರುವ ವೀರಗಲ್ಲುಗಳೆಂದರೆ ಕಲ್ಯಾಣಿ ಚಾಲುಕ್ಯರ ವೀರಗಲ್ಲುಗಳು. ಕಲ್ಯಾಣ ಚಾಲುಕ್ಯರ ಆರಂಭ ಕಾಲದಲ್ಲಿ ಶಿಲ್ಪಿಗಳು ವೀರಗಲ್ಲುಗಳನ್ನು ಮಾಡಲು ಬಿಳಿಯ ಕಲ್ಲನ್ನು ಉಪಯೋಗಿಸುತ್ತಿದ್ದರು. ಆದರೆ ದೇವಾಲಯಗಳ ನಿರ್ಮಾಣಕ್ಕೆ ಕರಿಯ ಕಲ್ಲಿನ ಬಳಕೆ ಹೆಚ್ಚಾದಂತೆ ಅವುಗಳನ್ನು ವೀರಗಲ್ಲುಗಳಿಗಾಗಿ ಉಪಯೋಗಿಸುವ ಪರಿಪಾಠವೂ ಬೆಳೆದಂತೆ ತೋರುತ್ತದೆ. ಆದಕಾರಣ ಇವರ ಕಾಲದಲ್ಲಿ ಮೂಡಿಬಂದ ಬಹುಪಾಲು ವೀರಗಲ್ಲುಗಳು ನಿಷಿಧಿಗಲ್ಲುಗಳು ಮಹಾಸತಿ ಕಲ್ಲುಗಳು ಕರಿಯ ಕಲ್ಲಿನಿಂದ ಮಾಡಲ್ಪಟ್ಟಿವೆ. ಇವುಗಳೊಂದಿಗೆ ಬಿಳಿಯ ಕಲ್ಲಿನ ಬಳಿಕೆಯನ್ನು ಹೋಲಿಸಿ ನೋಡಿದಾಗ ಅವುಗಳ ಬಳಕೆ ಕಡಿಮೆಯೆಂದೇ ಹೇಳಬೇಕು.

ಕರಿಯಕಲ್ಲು (ಬಳಪದ ಕಲ್ಲು) ಸೂಕ್ಷ್ಮವಾದ ವಿವರಗಳನ್ನು ಬಿಡಿಸುವುದಕ್ಕೆ ಸಹಾಯಕವಾಗಿರುವುದರಿಂದ, ಶಿಲ್ಪಿಗಳು ತಮ್ಮ ಕುಸುರಿ ಕಲೆಯ ಪ್ರದರ್ಶನಕ್ಕಾಗಿ ಇದನ್ನು ಬಳಸಲು ಆರಂಭಿಸಿದರೆಂದು ತೋರುತ್ತದೆ. ವೀರನ ಹೋರಾಟದ ಚಿತ್ರಣವನ್ನು ನಿರೂಪಿಸುದಲ್ಲಿ ಚಲನೆ ಮತ್ತು ಕ್ರಿಯೆಯನ್ನು ಸಮರ್ಥವಾಗಿ ನಿರೂಪಿಸುವಲ್ಲಿ ಈ ಕಲ್ಲು ನೆರವಾಗಿದೆ.

ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಶೈವಧರ್ಮ ಪ್ರಬಲವಾಗಿದ್ದುದರಿಂದ ವೀರಗಲ್ಲಿನ ಮೇಲಿನ ಹಂತದಲ್ಲಿ ಶೈವಧರ್ಮದ ಸಂಕೇತಗಳಾದ ಶಿವಲಿಂಗ, ನಂದಿಗಳನ್ನು ಸಾಮಾನ್ಯವಾಗಿ ತೋರಿಸಲಾಗುತ್ತದೆ.

ಗಂಗರ ಅಥವಾ ರಾಷ್ಟ್ರಕೂಟರ ಕಾಲದ ವೀರಗಲ್ಲುಗಳಲ್ಲಿ ಶೌರ್ಯದ ಗಾಂಭೀರ್ಯ ವ್ಯಕ್ತವಾಗಿದ್ದರೆ, ಕಲ್ಯಾಣದ ಚಾಲುಕ್ಯರ ಕಾಲದ ವೀರಗಲ್ಲುಗಳ ಶಿಲ್ಪದಲ್ಲಿ ಲಾಲಿತ್ಯ, ಮಾಧುರ್ಯ ಗುಣಗಳು

ವ್ಯಕ್ತವಾಗಿವೆ. ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುವ ಹಂತ, ವೀರನು ಸ್ವರ್ಗದಲ್ಲಿಯೋ ಅಥವಾ ತನ್ನ ಇಷ್ಟ ದೈವದ ಸಾನಿಧ್ಯದಲ್ಲಿಯೋ ಇರುವ ಹಂತಗಳು ಸುಂದರವಾಗಿದ್ದು ತಮ್ಮ ಪ್ರಶಾಂತ ವಾತಾವರಣವನ್ನು ಕಲ್ಯಾಣದ ಚಾಲುಕ್ಯರ ಕಾಲದ ವೀರಗಲ್ಲು ತೋರಿಸುತ್ತವೆ. ಇವರ ಅವಧಿಯ ಎಲ್ಲಾ ವೀರಗಲ್ಲುಗಳಿಗೂ ಪೂರ್ಣ ಆಕೃತಿಯನ್ನು ನೀಡುವ ಪ್ರಯತ್ನವನ್ನು ಶಿಲ್ಪಿಗಳು ಮಾಡಿದ್ದಾರೆ. ಆದರೆ ಈ ಕಾಲದ ಬಹುಪಾಲು ವೀರಗಲ್ಲುಗಳು ಏಕತಾನತೆಯ ದೋಷವನ್ನು ಹೊಂದಿವೆ. ಒಂದೇ ಊರಿನಲ್ಲಿರುವ ವೀರಗಲ್ಲುಗಳು ಕೆಲವೊಮ್ಮೆ ಅಲ್ಪಸಲ್ಪ ವ್ಯತ್ಯಾಸದೊಂದಿಗೆ ಒಂದೇ ರೀತಿಯಲ್ಲಿರುತ್ತವೆ. ಇಲ್ಲವೆ ಒಂದರ ಪಡಿಯಚ್ಚು ಇನ್ನೊಂದಾಗಿರುತ್ತದೆ. ಘಟ್ಟಘಟ್ಟಗಳಲ್ಲಿ ಬೆಳೆದು ಬಂದ ಈ ಕಾಲದ ಬಹುಪಾಲು ವೀರಗಲ್ಲುಗಳು ಒಂದೇ ರೀತಿಯಲ್ಲಿರುತ್ತವೆ.

**೪.೧. ಕಲ್ಯಾಣ ಚಾಲುಕ್ಯರ ಕಾಲದ ಶಾಸನಸಹಿತ ವೀರಗಲ್ಲುಗಳು :**

ಸಂಡೂರು ತಾಲೂಕಿನಲ್ಲಿ ಅನೇಕ ವೈವಿಧ್ಯಮಯವಾದ ವೀರಗಲ್ಲುಗಳು ದೊರೆತಿವೆ. ಅವುಗಳಲ್ಲಿ ಒಂದು ಹಂತದ, ಎರಡು ಹಂತದ ಹಾಗೂ ಮೂರು ಹಂತದ ವೀರಗಲ್ಲುಗಳು ಕಂಡುಬಂದರೂ ಈ ತಾಲೂಕಿನಲ್ಲಿ ಒಂದು ಹಂತದ ವೀರಗಲ್ಲು ಸ್ಮಾರಕಗಳೇ ಅಧಿಕವಾಗಿ ಕಾಣುತ್ತೇವೆ. ಅವುಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ.

ಸಂಡೂರು ತಾಲೂಕಿನ ಭುಜಂಗನಗರ ಗ್ರಾಮದ ಪುಂಡಿ ಹಿರೇಗೌಡ್ರು ನಾಗಪ್ಪನವರ ಹೊಲದ ಕಣದಲ್ಲಿ ದೊರೆತ ಕ್ರಿ.ಶ.೧೧ನೆಯ ಶತಮಾನದ್ದಾಗಿದೆ. ಈ ವೀರಗಲ್ಲು ಶಾಸನವು ಚೊರಬೊಲ್ಲಿಯ ಜಕ್ಕಗಾವುಡನ ಮಗ ಕಾಳೆಯನು ಹಟ್ಟಿಗೆರೆಯಲ್ಲಿ ನಡೆದ ಒಂದು ದಾಳಿಯಲ್ಲಿ ಹೋರಾಡಿ ಗೆದ್ದ ವಿಷಯವನ್ನು ತಿಳಿಸಿರುವುದು ಈ ವೀರಗಲ್ಲು ಶಾಸನದ ವಿಶೇಷವಾಗಿದೆ. ಆದರೆ ಇದನ್ನು ಯಾವ ಅರಸರ ಆಳ್ವಿಕೆಯ ಕಾಲದಲ್ಲಿ ಬರೆಸಲ್ಪಟ್ಟಿದೆಂದು ತಿಳಿದುಬರುವುದಿಲ್ಲ. (ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು, ಕಲಬುರ್ಗಿ.ಎಂ.ಎಂ.೧೯೮೦.ಪು)

ಈ ವೀರಗಲ್ಲು ಮೂರು ಹಂತದ್ದಾಗಿದ್ದು. ಕೆಳಗಿನ ಹಂತದಲ್ಲಿ ವೀರನು ಬಿಲ್ಲು–ಬಾಣಗಳನ್ನು ಹಿಡಿದು ಎದುರಿಗಿರುವ ಕುದುರೆಯ ಮೇಲೆ ಕುಳಿತು ಹೋರಾಡುತ್ತಿರುವ ಶತ್ರುವಿನ ಮೇಲೆ ಬಾಣ ಪ್ರಯೋಗ ಮಾಡುತ್ತಿದ್ದಾನೆ. ಎರಡನೆಯ ಹಂತದಲ್ಲಿ ಅಪ್ಸರೆಯರ ವೀರನನ್ನು ದೇವಲೋಕಕ್ಕೆ ಕರೆದುಕೊಂಡು ಹೋಗುತ್ತಿದ್ದಾರೆ. ಮೂರನೇ ಹಂತದಲ್ಲಿ ವೀರನು ಶಿವಲಿಂಗದ ಬಳಿ ಕುಳಿತು ಧ್ಯಾನಾಸಕ್ತನಾಗಿದ್ದಾನೆ. ಮತ್ತೊಬ್ಬ ಭಕ್ತನು ಪೂಜೆ ಸಲ್ಲಿಸುತ್ತಿದ್ದಾನೆ. ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ.

ಈ ತಾಲೂಕಿನ ಗೆಂತಿಕಟ್ಟೆ (ಸೋವೇನಹಳ್ಳಿಯ ಉಪಗ್ರಾಮ) ಗ್ರಾಮದಲ್ಲಿಯ ಗಾಳಿಗನ ಕಣ ಎಂದು ಕರೆಯಲ್ಪಡುವ ಕಣದಲ್ಲಿ ದೊರೆತಿರುವ ಈ ವೀರಗಲ್ಲು ಶಾಸನವು ಕನ್ನಡ ಭಾಷೆಯಲ್ಲಿದೆ. ಈ ಶಾಸನದಲ್ಲಿ ಗೊಸ್ತಿಕಟ್ಟೆಯ ಉಲ್ಲೇಖವಿದ್ದು. ದಾಳಿಯಾದಂತೆ ತಿಳಿದುಬರುತ್ತದೆ. ಈ

ದಾಳಿಯಲ್ಲಿ ಸಾವಿಗ ಎಂಬ ವೀರನು ಮೋರದ ಕೋಟೆಯ ಮೇಲೆ ಮುತ್ತಿಗೆ ಹಾಕಿದ ಸಿಂಗ (೨)ನ ಸೈನ್ಯದೊಡನೆ ಹೋರಾಡಿ ಸಾವನ್ನಪ್ಪಿದ್ದನ್ನು ದಾಖಲಿಸುತ್ತದೆ. (ಕವಿಹಂ. ಶಾ.ಸಂ.೧.ಸಂಡೂರು.೨೫) ಈ ವೀರನ ಸ್ಮರಣೆಗಾಗಿ ಈ ವೀರಗಲ್ಲು ಶಾಸನ ನಿಲ್ಲಿಸಿದಂತೆ ತಿಳಿದುಬರುತ್ತದೆ. ಈ ಶಾಸನದಲ್ಲಿ ಉಲ್ಲೇಖಗೊಂಡಿರುವ ಗೊನ್ತಿಕಟ್ಟೆ ಎಂಬ ಗ್ರಾಮನಾಮವು ಇಂದು ಗೆಂತಕಟ್ಟೆ ಎಂಬ ಹೆಸರಿನಿಂದ ಕರೆಯಲ್ಪಡುತ್ತದೆ.

ಈ ವೀರಗಲ್ಲು ಎರಡು ಹಂತದ್ದಾಗಿದ್ದು. ಕೆಳಗಿನ ಹಂತದಲ್ಲಿ ವೀರನು ಖಡ್ಗ, ಭರ್ಜಿಯನ್ನು ಹಿಡಿದು ಕುದುರೆ ಮೇಲೆ ಕುಳಿತು ದಾಳಿ ಮಾಡುತ್ತಿರುವ ಶತ್ರುಗಳನ್ನು ಸಂಹರಿಸುತ್ತಿದ್ದಾನೆ. ಆತನ ಕಾಲ ಕೆಳಗೆ ಮಡಿದು ಬಿದ್ದ ಶತ್ರುವಿನ ಶವವಿದೆ. ಮೇಲ್ಭಾಗದಲ್ಲಿ ಅಪ್ಸರೆಯರು ವೀರರನ್ನು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ.

ಎರಡನೇ ಹಂತದಲ್ಲಿ ಇಬ್ಬರು ವೀರರು ಶಿವಲಿಂಗದ ಬಳಿ ಧ್ಯಾನಾಸಕ್ತರಾಗಿ ಕುಳಿತಿದ್ದಾರೆ. ಅವರ ಅಕ್ಕಪಕ್ಕದಲ್ಲಿ ನಿಂತ ಹಾಗೂ ಕುಳಿತ ನಂದಿ ಮತ್ತು ಸೂರ್ಯ, ಚಂದ್ರರ ಶಿಲ್ಪಗಳಿವೆ. ಒಟ್ಟಿನಲ್ಲಿ ಈ ವೀರಗಲ್ಲಿನ ಶಿಲ್ಪವು ರಣಾಂಗಣದಲ್ಲಿ ಹೋರಾಡುತ್ತಿರುವ ಬೀಭತ್ಸ ದೃಶ್ಯದಿಂದ ನೋಡುಗರ ಗಮನವನ್ನು ಸೆಳೆಯುವ ವಿಶಿಷ್ಟವಾದ ಸ್ಮಾರಕ ಶಿಲೆಯಾಗಿದೆ.

ಈ ತಾಲೂಕಿನ ಸುಲ್ತಾನಪುರ ಗ್ರಾಮದ ಪೂರ್ವಕ್ಕೆ ಇರುವ ಒಂದು ವೀರಗಲ್ಲು ಶಾಸನವು ಜಯಕಾಮ ಅವನ ಮಗ ಬಿಜಯಿತಿಯ ಎರೆಯಮ ಕಪೇ ಎಂಬುವವನ ಸೈನ್ಯದ ವಿರುದ್ಧ ಹೋರಾಡಿದಂತೆ ತಿಳಿಸುತ್ತದೆ. (ಎ.ಆರ್.ಐ.ಇ(೧೯೨೨-೨೫)ಸಂ.೭೩೧) ಈ ವೀರಗಲ್ಲಿನ ಶಿಲ್ಪವು ಯುದ್ಧದಲ್ಲಿ ಹೋರಾಡುತ್ತಿರುವ ವೀರರು ಮತ್ತು ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿದ್ದಾರೆನ್ನುವಂತೆ ಕಂಡರಿಸಲಾಗಿರುವ ಇದು ಹಂತದ ವೀರಗಲ್ಲು ಶಿಲ್ಪವಾಗಿದೆ. ಈ ಶಿಲ್ಪದ ವೀರರು ಕೇಶಾಲಂಕಾರ ಮಾಡಿಕೊಂಡಿರುವ, ಮುಡಿ ಕಟ್ಟಿರುವ ಕೊರಳಲ್ಲಿ ಮಣಿಹಾರ, ತೋಳಲ್ಲಿ ತೋಳಬಂಧಿ, ಕರ್ಣಾಭರಣ, ಕೈಗಡಗ, ಸೊಂಟಪಟ್ಟಿ ತೊಟ್ಟು ಅಲಂಕಾರಿಕ ಉಡುಗೆಯನ್ನು ಧರಿಸಿರುವುದು ಈ ಶಿಲ್ಪದ ಮತ್ತೊಂದು ವಿಶೇಷ ಮೇಲಿನ ಹಂತದಲ್ಲಿ ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಅಪ್ಸರೆಯರು ಸಹ ಅಲಂಕಾರಿಕ ವಸ್ತ್ರಾಭರಣ ಧರಿಸಿ, ಕೈಯಲ್ಲಿ ಚಾಮರವನ್ನು ಹಿಡಿದಿದ್ದಾರೆ. ಕಲ್ಲಿನ ತುದಿಯಲ್ಲಿ ಮಧ್ಯಕಾಲೀನ ಕನ್ನಡ ಲಿಪಿಯಲ್ಲಿ ಶಾಸನವನ್ನು ಕಂಡರಿಸಲಾಗಿದೆ. (ವಿಜಯ ಕರ್ನಾಟಕ, ಸಂಪುಟ-೪, ಸಂಚಿಕೆ-೧೦೨, ೨೦೦೪, ಪುಟ-೦೧).

ಚಿಂಚೋಳಿ ತಾಲೂಕಿನ ಕೋಡ್ಲಿ ಗ್ರಾಮದ ಗಣೇಶ ಗುಡಿಯೊಳಗೆಯಿರುವ ೧೧ನೆಯ ಶತಮಾನದ ವೀರಗಲ್ಲು. ಕೋಡ್ಲಿಯ ಕ್ರಾಸ್‌ನಿಂದ ಸುಮಾರು ಮೂರು ಕಿ.ಮೀ. ದೂರವಿರುವ ಗಣೇಶನ ಗುಡಿಯೊಳಗೆ ಗಣೇಶನ ಮೂರ್ತಿಯ ಎಡಕ್ಕೆ ಈ ವೀರಗಲ್ಲಿದೆ. ಮೊದಲ ಸ್ತರದಲ್ಲಿ ವೀರನು ಹೋರಾಡುತ್ತಿರುವ ದೃಶ್ಯವಿದೆ. ಶತ್ರುವಿನ ಕೈಯಲ್ಲಿ ಕತ್ತಿ ಇದೆ. ಎರಡನೇ ಸ್ತರದಲ್ಲಿ ಸುರಾಂಗನೆಯರಿಬ್ಬರು ವೀರನನ್ನು ಒಯ್ಯುವ ದೃಶ್ಯವಿದೆ. ವೀರನ ಎಡ ಪಕ್ಕಕ್ಕೆ ಕುದುರೆ

ನಿಂತಿರುವ ಶಿಲ್ಪವಿದೆ. ವೀರ ಮುಡಿ ಧರಿಸಿರುವನು. (ಕರ್ನಾಟಕ ಸರ್ಕಾರದ ರಾಜ್ಯ ಗೆಜೆಟಿಯರ್ ಕಲಬುರ್ಗಿ ಜಿಲ್ಲೆ, (ಸಂ) ಪಾಟೀಲ ಎಂ.ಬಿ., ೧೯೯೭ ಪು-೭೦೬.)

ಚಿಂಚೋಳಿ ತಾಲೂಕಿನ ಭೂತಪುರ ಗ್ರಾಮದ ಮಲ್ಲಿಕಾರ್ಜುನ ಗುಡಿಯಲ್ಲಿರುವ ೧೧ನೇ ಶತಮಾನದ ವೀರಗಲ್ಲು. ಈ ವೀರಗಲ್ಲು ಶಿಲ್ಪಿ ಮೂರು ಸ್ತರದಲ್ಲಿದೆ. ಹೋರಾಡುತ್ತಿರುವ ವೀರನ ಕೈಗಳಲ್ಲಿ ಗುರಾಣಿ ಮತ್ತು ಖಡ್ಗವಿದೆ. ಶತ್ರುವಿನ ಭಾಗ ತ್ರುಟಿತವಾಗಿದೆ. ಸುರಾಂಗನೆಯರು ವಿಮಾನದಲ್ಲಿ ವೀರನಿಗೆ ದೇವಲೋಕಕ್ಕೆ ಒಯ್ಯುತ್ತಿರುವ ದೃಶ್ಯವಿದೆ. ಮೇಲ್‌ಸ್ತರದಲ್ಲಿ ಎಡಕ್ಕೆ ವೀರ ಕೈ ಮುಗಿದು ಲಿಂಗದ ಬಳಿ ಕುಳಿತ ಲಿಂಗೈಕ್ಯದ ದೃಶ್ಯಾವಳಿ ಇದೆ. (ಕರ್ನಾಟಕ ರಾಜ್ಯ ಗೆಜೆಟಿಯರ್ ಕಲಬುರ್ಗಿ ಜಿಲ್ಲೆ .ಸಂ. ಪಾಟೀಲ ಎಂ.ಬಿ. ೧೯೯೭. ಪು. ೭೪೭)

ಚಿಂಚೋಳಿ ತಾಲೂಕಿನ ರಟಕಲ್ ಗ್ರಾಮದ ಮುಕ್ರಂಬಿ ಅಗಸಿಕಟ್ಟೆಯಲ್ಲಿ ೧೧ನೇ ಶತಮಾನದ ವೀರಗಲ್ಲು ಇದೆ. ಯುದ್ಧದಲ್ಲಿ ಹೋರಾಡುತ್ತಿರುವ ವೀರನ ಬಗ್ಗೆ ವಿವರಿಸುವ ಮೂರು ಸ್ತರದ ವೀರಗಲ್ಲು ಇದು. ಖಡ್ಗ ಮತ್ತು ಗುರಾಣಿ ಹಿಡಿದು ಹೋರಾಡುತ್ತಿರುವ ವೀರನ ಶಿಲ್ಪ ಮೊದಲ ಸ್ತರದಲ್ಲಿದೆ. ಸುರಾಂಗನೆಯರು ದೇವಲೋಕಕ್ಕೆ ವೀರನನ್ನು ವಿಮಾನದಲ್ಲಿ ಒಯ್ಯುತ್ತಿರುವ ಶಿಲ್ಪ ಎರಡನೆಯ ಸ್ತರದಲ್ಲಿದೆ. ಮೇಲ್‌ಸ್ತರದಲ್ಲಿ ಲಿಂಗೈಕ್ಯದ ದೃಶ್ಯಾವಳಿ ಇದೆ. (ಕರ್ನಾಟಕ ರಾಜ್ಯ ಗೆಜೆಟಿಯರ್ ಕಲಬುರ್ಗಿ ಜಿಲ್ಲೆ, (ಸಂ) ಪಾಟೀಲ ಎಂ.ಬಿ., ೧೯೯೭, ಪು-೭೬೯) ರಟಕಲ್ ಮಕ್ರಂಬಿ ಅಗಸಿಕಟ್ಟೆ ಬಳಿಯಿರುವ ೧೧ನೆಯ ಶತಮಾನದ ಎರಡನೆಯ ವೀರಗಲ್ಲಿನಲ್ಲಿ ಮೂರು ಸ್ತರಗಳಿದ್ದು, ಕೆಳಸ್ತರದಲ್ಲಿ ವೀರ ಹೋರಾಡುತ್ತಿರುವ ಶಿಲ್ಪವಿದೆ. ಸುರಾಂಗನೆಯರು ವೀರನನ್ನು ವಿಮಾನದಲ್ಲಿ ಒಯ್ಯುತ್ತಿರುವ ದೃಶ್ಯಾವಳಿ ಎರಡನೆಯ ಸ್ತರದಲ್ಲಿದೆ. ಲಿಂಗೈಕ್ಯವಾಗಿರುವ ವೀರನ ಶಿಲ್ಪ ಮೇಲ್ ಸ್ತರದಲ್ಲಿದೆ. (ಕರ್ನಾಟಕ ರಾಜ್ಯ ಗೆಜೆಟಿಯರ್ ಕಲಬುರ್ಗಿ ಜಿಲ್ಲೆ, (ಸಂ) ಪಾಟೀಲ ಎಂ.ಬಿ., ೧೯೯೭, ಪು. ೭೬೬)

ರಟಕಲ್ ಗ್ರಾಮದ ಮಕ್ರಂಬಿ ಅಗಸಿ ಬಳಿ ಇರುವ ೧೧ನೇ ಶತಮಾನದ ಮೂರನೆಯ ವೀರಗಲ್ಲು ಮೂರು ಸ್ತರಗಳನ್ನೊಳಗೊಂಡಿದೆ. ವೀರನು ಹೋರಾಡುತ್ತಿರುವ ಶಿಲ್ಪವಿದೆ. ಖಡ್ಗ ಮತ್ತು ಗುರಾಣಿ ಕೈಯಲ್ಲಿದೆ. ಎರಡನೇ ಸ್ತರದಲ್ಲಿ ಸುರಾಂಗನೆಯರು ವಿಮಾನದಲ್ಲಿ ವೀರನನ್ನು ದೇವಲೋಕಕ್ಕೆ ಒಯ್ಯುತ್ತಿರುವ ಚಿತ್ರವಿದೆ. ಮತ್ತು ಮೂರನೇ ಸ್ತರದಲ್ಲಿ ಲಿಂಗೈಕ್ಯದ ದೃಶ್ಯವಿದೆ. (ಕರ್ನಾಟಕ ರಾಜ್ಯ ಗೆಜೆಟಿಯರ್ ಕಲಬುರ್ಗಿ ಜಿಲ್ಲೆ, (ಸಂ) ಪಾಟೀಲ ಎಂ.ಬಿ., ೧೯೯೭. ಪು.೭೬೯)

ರಟಕಲ್ ಗ್ರಾಮದ ಮಕ್ರಂಬಿ ಅಗಸಿ ಬಳಿ ಇರುವ ೧೧ನೆಯ ಶತಮಾನ ನಾಲ್ಕನೆಯ ವೀರಗಲ್ಲು ಶಿಲ್ಪ ಮೂರು ಸ್ತರದಲ್ಲಿದೆ. ವೀರ ಹೋರಾಡುತ್ತಿರುವ ಮೊದಲ ಸ್ತರದ ಶಿಲ್ಪ ಪ್ರಸ್ತುತ ಹಾಳಾಗಿದೆ. ಎರಡನೆಯ ಸ್ತರದಲ್ಲಿ ಸುರಾಂಗನೆಯರು ದೇವಲೋಕಕ್ಕೆ ವೀರನನ್ನು ಒಯ್ಯುತ್ತಿರುವರು.

ಮೂರನೇ ಸ್ತರದಲ್ಲಿ ಲಿಂಗೈಕ್ಯದ ದೃಶ್ಯವಿದೆ. (ಕರ್ನಾಟಕ ರಾಜ್ಯ ಗೆಜೆಟಿಯರ್ ಕಲಬುರ್ಗಿ ಜಿಲ್ಲೆ,ಸಂ.ಪಾಟೀಲ ಎಂ.ಬಿ., ೧೯೯೭, ಪು. ೭೬೯).

ರಟಕಲ್ ಗ್ರಾಮದ ಬಂಕನಾಥ ದೇವಾಲಯ ಬಳಿ ಇರುವ ೧೧ನೇ ಶತಮಾನದ ವೀರಗಲ್ಲು. ದೇವಾಲಯದ ಪ್ರಮುಖ ಪ್ರವೇಶ ದ್ವಾರದ ಎಡಭಾಗಕ್ಕೆ ತ್ರುಟಿತ ವೀರಗಲ್ಲಿದೆ. ಮೂರು ಸ್ತರದ ಈ ಶಿಲ್ಪದ ಮೇಲ್‌ಸ್ತರ ಪ್ರಸ್ತುತ ಹಾಳಾಗಿದೆ. ಎರಡು ಸ್ತರ ಮಾತ್ರ ಉಳಿದಿದೆ. ವೀರ ಹೋರಾಡುತ್ತಿರುವ ಶಿಲ್ಪ ಮತ್ತು ಸುರಾಂಗನೆಯರು ವಿಮಾನದಲ್ಲಿ ದೇವಲೋಕಕ್ಕೆ ಒಯ್ಯುತ್ತಿರುವ ಶಿಲ್ಪಾವಳಿಯನ್ನೊಳಗೊಂಡಿದೆ. (ಕರ್ನಾಟಕ ರಾಜ್ಯ ಗೆಜೆಟಿಯರ್ ಕಲಬುರ್ಗಿ ಜಿಲ್ಲೆ, (ಸಂ) ಪಾಟೀಲ.ಎಂ.ಬಿ., ೧೯೯೭, ಪು-೭೬೯)

ರಟಕಲ್ ಗ್ರಾಮದ ಬಂಕನಾಥ ದೇವಾಲಯ ಎರಡನೆಯ ಪ್ರವೇಶ ದ್ವಾರದ ಎಡಕ್ಕೆ ನಿಲ್ಲಿಸಿದ ೧೧ನೆಯ ಶತಮಾನದ ಎರಡನೆಯ ವೀರಗಲ್ಲು. ಈ ವೀರಗಲ್ಲಿನ ಕೆಳಸ್ತರ ಸಂಪೂರ್ಣ ಹಾಳಾಗಿದೆ. ಮೂರು ಸ್ತರದ ವೀರಗಲ್ಲಿನ ಎರಡನೆಯ ಸ್ತರದಲ್ಲಿ ಸುರಾಂಗನೆಯರು ವೀರನಿಗೆ ಚಾಮರ ಬೀಸುತ್ತಾ. ವಿಮಾನದಲ್ಲಿ ದೇವಲೋಕಕ್ಕೆ ಒಯ್ಯುತ್ತಿರುವ ಶಿಲ್ಪವಿದೆ. ಮೇಲ್‌ಸ್ತರ ವೀರ ಲಿಂಗಕ್ಕೆ ನಮಸ್ಕರಿಸುತ್ತಾ ಕುಳಿತಿರುವ ದೃಶ್ಯಾವಳಿಯನ್ನೊಳಗೊಂಡಿದೆ. (ಕರ್ನಾಟಕ ರಾಜ್ಯ ಗೆಜೆಟಿಯರ್, ಕಲಬುರ್ಗಿ ಜಿಲ್ಲೆ, (ಸಂ) ಪಾಟೀಲ.ಎಂ.ಬಿ., ೧೯೯೭, ಪು-೭೬೯)

ರಟಕಲ್ ಗ್ರಾಮದ ಬಂಕನಾಥ ದೇವಾಲಯದ ಎರಡನೆ ಪ್ರವೇಶ ದ್ವಾರದ ಬಲಕ್ಕೆ ನಿಲ್ಲಿಸಿರುವ ೧೧ನೇ ಶತಮಾನದ ವೀರಗಲ್ಲಿನ ಮೂರು ಸ್ತರದ ಶಿಲ್ಪದಲ್ಲಿ ಮೊದಲ ಸ್ತರದಲ್ಲಿ ವೀರ ಹೋರಾಡುತ್ತಿರುವ ದೃಶ್ಯಾವಳಿಯಿದೆ. ಭರ್ಜಿ ಮತ್ತು ಗುರಾಣಿ ಹಿಡಿದ ವೀರ ನೆಲದ ಮೇಲೆ ನಿಂತು ಕುದುರೆ ಮೇಲಿರುವ ಶತ್ರುವನ್ನು ಚುಚ್ಚಲು ಹೋಗುತ್ತಿರುವ ದೃಶ್ಯ ಮತ್ತು ಶತ್ರು ತನ್ನ ಭರ್ಚಿಯಿಂದ ವೀರನಿಗೆ ತಿವಿಯಲು ಬರುತ್ತಿರುವ ಚಿತ್ರವನ್ನೊಳಗೊಂಡಿದೆ. ಎರಡನೆಯ ಸ್ತರದಲ್ಲಿ ವೀರನಿಗೆ ಸುರಾಂಗನೆಯರು ಚಾಮರ ಬೀಸುತ್ತಾ ದೇವಲೋಕಕ್ಕೆ ಒಯ್ಯುತ್ತಿರುವ ಶಿಲ್ಪವಿದೆ. ಮೇಲ್‌ಸ್ತರದಲ್ಲಿ ಲಿಂಗೈಕ್ಯನಾದ ವೀರ ಲಿಂಗವನ್ನು ನಮಸ್ಕರಿಸುತ್ತಾ ಕುಳಿತ ಶಿಲ್ಪವಿದೆ. ವೀರನು ತಲೆಯ ಹಿಂಬದಿಯಲ್ಲಿ ಮುಡಿ ಕಟ್ಟಿರುವನು. (ಕರ್ನಾಟಕ ರಾಜ್ಯ ಗೆಜೆಟಿಯರ್ ಕಲಬುರ್ಗಿ ಜಿಲ್ಲೆ, (ಸಂ) ಪಾಟೀಲ.ಎಂ.ಬಿ., ೧೯೯೭, ಪು-೭೬೯)

ಚಿಂಚೋಳಿ ತಾಲೂಕಿನ ಸೋಮನಿಂಗದ ಹಳ್ಳಿಯ ಮಂದಗಡ್ಡಿ ಸ್ಥಳದಲ್ಲಿರುವ ೧೧ನೇ ಶತಮಾನದ ವೀರಗಲ್ಲು. ಸೋಮನಿಂಗದಳ್ಳಿಯ ಮೂರು ಸ್ತರದ ಒಂದು ವೀರಗಲ್ಲಿನಲ್ಲಿ ವೀರನು ತಲೆಯ ಹಿಂಭಾಗದಲ್ಲಿ ಮುಡಿ ಕಟ್ಟಿರುವಂತೆ. ಸೊಂಟದಿಂದ ತೊಡೆಯವರೆಗೂ ಅರ್ಧೋರು ಉಡುಪು ಧರಿಸಿರುವ ಶಿಲ್ಪವಿದೆ. ಯುದ್ಧದಲ್ಲಿ ವೀರ ಬಿಲ್ಲುಬಾಣ ಹಿಡಿದು ನಿಂತು ಹಲವು ಶತ್ರುಗಳೊಂದಿಗೆ ಹೋರಾಡುವ ದೃಶ್ಯಾವಳಿ ಶಿಲ್ಪದಲ್ಲಿ ಕೆತ್ತಿದ್ದಾರೆ. ಕುದುರೆಯ ಮೇಲೆ ಕುಳಿತು ಹೋರಾಡುವ ಶತ್ರುಗಳನ್ನು ಬಿಂಬಿಸಲಾಗಿದೆ. ವೀರನು ಹಾರ, ತೋಳುಬಂಧಿ ಹಾಕಿರುವಂತೆ

ದೃಶ್ಯಾವಳಿಯಲ್ಲಿದೆ. ಕುದುರೆ ಮೇಲಿರುವ ಶತ್ರುಗಳ ಭರ್ಜಿ ಎಸೆಯುತ್ತಿರುವ ದೃಶ್ಯ ಶಿಲ್ಪಾವಳಿಯಲ್ಲಿದೆ. ಎರಡನೆಯ ಸ್ತರದಲ್ಲಿ ಸುರಾಂಗನೆಯರು ವೀರನಿಗೆ ಚಾಮರ ಬೀಸುತ್ತಾ ದೇವಲೋಕಕ್ಕೆ ವಿಮಾನದಲ್ಲಿ ಒಯ್ಯುತ್ತಿರುವ ಕೆತ್ತನೆಯನ್ನೊಳಗೊಂಡಿದೆ. ಮೂರನೆಯ ಸ್ತರದಲ್ಲಿ ಐಕ್ಯನಾದ ವೀರ ಅಂಜಲಿ ಹಸ್ತದಲ್ಲಿ ಲಿಂಗದ ಮುಂದೆ ಕುಳಿತಿದೆ. ವೀರಗಲ್ಲು ಉತ್ತಮ ಸ್ಥಿತಿಯಲ್ಲಿದೆ. (ಶೇರಿಕಾರ್ ಡಿ. ಪ್ರಜಾವಾಣಿ, ೨೪-೧೦-೨೦೧೦.)

ಸೋಮನಿಂಗದ ಹಳ್ಳಿಯ ಮಂದಗಡ್ಡಿ ಬಳಿ ಇರುವ ೧೧ನೆಯ ಶತಮಾನದ ಮೂರು ಸ್ತರದ ಎರಡನೆಯ ವೀರಗಲ್ಲಿನಲ್ಲಿ ಶತ್ರುಗಳ ಕುದುರೆ ಮೇಲೆ ಕುಳಿತು ಭರ್ಜಿ ಎಸೆಯುವ ದೃಶ್ಯಾವಳಿಯನ್ನು ಬಿಂಬಿಸಲಾಗಿದೆ. ವೀರನು ಅವರ ವಿರುದ್ಧ ಹೋರಾಡುತ್ತಿರುವ ದೃಶ್ಯ ಶಿಲ್ಪದಲ್ಲಿದೆ. ವೀರನು ವೀರ ಮುಡಿ ಧರಿಸಿರುವನು. ಎರಡನೆಯ ಸ್ತರದಲ್ಲಿ ಸುರಾಂಗನೆಯರು ದೇವಲೋಕಕ್ಕೆ ವೀರನನ್ನು ವಿಮಾನದಲ್ಲಿ ಒಯ್ಯುವ ದೃಶ್ಯವಿದೆ. ಮೂರನೆಯ ಸ್ತರದಲ್ಲಿ ಲಿಂಗೈಕ್ಯನಾದ ವೀರ ಲಿಂಗದ ಮುಂದೆ ಅಂಜಲಿ ಹಸ್ತದಲ್ಲಿ ಕುಳಿತಿರುವಂತೆ ಬಿಂಬಿಸಲಾಗಿದೆ. (ಶೇರಿಕಾರ್ ಡಿ., ಪ್ರಜಾವಾಣಿ, ೨೪-೧೦, ೨೦೧೦)

ಸೋಮನಿಂಗದ ಹಳ್ಳಿಯ ಮಂದಗಡ್ಡಿ ಬಳಿ ೧೧ನೇ ಶತಮಾನದ ಮೂರನೆಯ ವೀರಗಲ್ಲು ಇದೆ. ಎರಡು ಸ್ತರದ ಈ ವೀರಗಲ್ಲಿನಲ್ಲಿದೆ. ಗುರಾಣಿ ಮತ್ತು ಭರ್ಜಿ ಹಿಡಿದು ವೀರನ ಶಿಲ್ಪವಿದೆ. ಸೊಂಟದಲ್ಲೊಂದು ಖಡ್ಗವಿದೆ. ವೀರನು ಮುಡಿ, ಹಾರ, ಕರ್ಣಕುಂಡಲ ಮತ್ತು ಸ್ಕರ್ಟ್‌ನಂತಹ ಕೆಳ ಉಡುಪು ಧರಿಸಿರುವುದು ಈ ಶಿಲ್ಪದಲ್ಲಿದೆ. ನಿಂತ ಭಂಗಿಯಲ್ಲಿ ವೀರ ಹೋರಾಡುತ್ತಿರುವಂತೆ ಕೆಳಸ್ತರದ ಶಿಲ್ಪದಲ್ಲಿದೆ. ಮೇಲ್‌ಸ್ತರದಲ್ಲಿ ಲಿಂಗೈಕ್ಯನಾದ ದೃಶ್ಯವಿದೆ. (ಶೇರಿಕಾರ್ ಡಿ., ಪ್ರಜಾವಾಣಿ, ೨೪-೧೦, ೨೦೧೦)

ಸೋಮನಿಂಗದ ಹಳ್ಳಿಯ ಮಂದಗಡ್ಡಿ ಬಳಿ ಇರುವ ೧೧ನೆಯ ಶತಮಾನದ ನಾಲ್ಕನೆಯ ವೀರಗಲ್ಲು ತ್ರುಟಿತವಾಗಿದೆ. ಮೂರು ಸ್ತರದ ಈ ವೀರಗಲ್ಲು ಸುರಾಂಗನೆಯರು ವೀರನನ್ನು ಒಯ್ಯುವ ಮತ್ತು ಲಿಂಗೈಕ್ಯನಾದ ವೀರನು ಅಂಜಲಿ ಹಸ್ತದಲ್ಲಿ ಲಿಂಗದ ಮುಂದೆ ಕುಳಿತಿರುವ ದೃಶ್ಯಾವಳಿಯನ್ನೊಳಗೊಂಡಿದೆ. (ಶೇರಿಕಾರ್ ಡಿ., ಪ್ರಜಾವಾಣಿ, ೨೪-೧೦, ೨೦೧೦)

ಸೋಮನಿಂಗದ ಹಳ್ಳಿಯ ಮಂದಗಡ್ಡಿಯಲ್ಲಿರುವ ೧೧ನೆಯ ಶತಮಾನದ ಐದನೆಯ ವೀರಗಲ್ಲು ಮೂರು ಸ್ತರದ ವೀರಗಲ್ಲಿನಲ್ಲಿ ವೀರ ಮುಡಿ ಕಟ್ಟಿಕೊಂಡಿದ್ದಾನೆ. ಕರ್ಣಕುಂಡಲ ಅರ್ಧೋರುಕ ರೂಪದ ಉಡುಪು ಧರಿಸಿದ್ದಾನೆ. ಸೊಂಟದಲ್ಲಿ ಆಯುಧವಿಟ್ಟುಕೊಂಡಿರುವನು. ಬಲಗೈಯಲ್ಲಿ ಭರ್ಜಿ, ಎಡಗೈಯಲ್ಲಿ ಗುರಾಣಿ ಹಿಡಿದು ಹೋರಾಡುತ್ತಿರುವಂತಿದೆ. ಎರಡನೆಯ ಸ್ತರದಲ್ಲಿ ಸುರಾಂಗನೆಯರು ವೀರನನ್ನು ದೇವಲೋಕಕ್ಕೆ ಒಯ್ಯುತ್ತಿರುವಂತೆ ಬಿಂಬಿಸಲಾಗಿದೆ. ತ್ರುಟಿತವಾಗಿರುವ ಶಿಲ್ಪದ ಮೇಲ್ಭಾಗ ಎಡಕ್ಕೆ ಮುರಿದುಬಿದ್ದಿದೆ. ಅದರಲ್ಲಿ ಲಿಂಗದ ಮುಂದೆ ಅಂಜಲಿ ಹಸ್ತದ ಪದ್ಮಾಸನ ಭಂಗಿಯಲ್ಲಿ ಕುಳಿತ ವೀರನನ್ನು ಚಿತ್ರಿಸಲಾಗಿದೆ. ಇದು ಲಿಂಗೈಕ್ಯವನ್ನು ಸೂಚಿಸುತ್ತದೆ. (ಶೇರಿಕಾರ್ ಡಿ., ಪ್ರಜಾವಾಣಿ, ೨೪-೧೦, ೨೦೧೦)

ಸೋಮನಿಗಂದ ಹಳ್ಳಿಯ ಮಂದಗಡ್ಡಿಯಲ್ಲಿರುವ ೧೧ನೇ ಶತಮಾನದ ಆರನೆಯ ಒಂದು ಸ್ತರದ ವೀರಗಲ್ಲಿನಲ್ಲಿ ಹೋರಾಡುತ್ತಿರುವ ವೀರ ಭರ್ಜಿಯಿಂದ ಶತ್ರುವಿಗೆ ಇರಿಯಲು ಮುಂದಾದಂತೆ ಕೆತ್ತಲ್ಪಟಿದೆ. ಅದರ ಮೇಲೆ ಲಿಂಗೈಕ್ಯವನ್ನು ಸೂಚಿಸುವ ಅಂಜಲಿ ಹಸ್ತದ ವೀರ ಮತ್ತು ಲಿಂಗದ ಶಿಲ್ಪವಿದೆ. (ಪ್ರಜಾವಾಣಿ, ಶೇರಿಕಾರ್ ಡಿ. ೨೪-೧೦.೨೦೧೦).

ಸೋಮನಿಂಗದ ಹಳ್ಳಿಯ ಮಂದಗಡ್ಡಿಯಲ್ಲಿರುವ ೧೧ನೇ ಶತಮಾನದ ಏಳನೆಯ ವೀರಗಲ್ಲು. ಎರಡು ಸ್ತರಗಳನ್ನು ಹೊಂದಿದೆ. ಈ ವೀರಗಲ್ಲಿನ ವೀರ ಎಡಗೈಯಲ್ಲಿ ಗುರಾಣಿ ಹಿಡಿದಿದ್ದಾನೆ. ಬಲಗೈಯಲ್ಲಿ ಖಡ್ಗ ಹಿಡಿದು ಕುದುರೆ ಮೇಲೆ ಕುಳಿತು ಶತ್ರುವಿಗೆ ಇರಿಯುತ್ತಿರುವ ದೃಶ್ಯವಿದೆ. ಕಂಠಮಾಲೆ ವೃಕ್ಷಕವಚ , ಕೊರಳಹಾರ, ವೀರ ಮುಡಿ ಹಾಕಿಕೊಂಡಂತಿದೆ ಅಲ್ಲದೆ ಕರ್ಣಕುಂಡಲ, ಸೊಂಟಪಟ್ಟಿ, ಅರ್ಧೋರಕ ಉಡುಪು ಧರಿಸಿರುವ ಕೆತ್ತನೆ ಶಿಲ್ಪಾವಳಿಯಲ್ಲಿದೆ. ಮೇಲ್‌ಸ್ತರದಲ್ಲಿ ಲಿಂಗೈಕ್ಯವನ್ನು ತಿಳಿಸುವ ಅಂಜಲಿ ಹಸ್ತದ ವೀರ ಲಿಂಗದ ಮುಂದೆ ಕುಳಿತಿರುವಂತೆ ಬಿಂಬಿಸಲಾಗಿದೆ. (ಶೇರಿಕಾರ್ ಡಿ., ಪ್ರಜಾವಾಣಿ, ೨೪-೧೦, ೨೦೧೦)

ಸೋಮನಿಂಗದ ಹಳ್ಳಿಯ ಮಂದಗಡ್ಡಿ ಬಳಿ ಇರುವ ೧೧ನೇ ಶತಮಾನದ ಎಂಟನೆಯ ವೀರಗಲ್ಲಿನಲ್ಲಿ ಯುದ್ಧದಲ್ಲಿ ಹೋರಾಡುತ್ತಿರುವ ವೀರನ ಶಿಲ್ಪವಿದೆ. ಇದರಲ್ಲಿ ಶತ್ರು ಕುದುರೆಯ ಮೇಲೆ ಕುಳಿತು ಹೋರಾಡುತ್ತಿರುವ ಮತ್ತು ವೀರ ನಿಂತು ಹೋರಾಡುವ ದೃಶ್ಯವಿದೆ. ಎರಡನೇ ಸ್ತರದಲ್ಲಿ ಸುರಾಂಗನೆಯರು ವೀರನನ್ನು ವಿಮಾನದಲ್ಲಿ ದೇವಲೋಕಕ್ಕೆ ಒಯ್ಯುತ್ತಿರುವಂತೆ ಶಿಲ್ಪದಲ್ಲಿ ಬಿಂಬಿಸಲಾಗಿದೆ. ಮೂರನೇ ಸ್ತರದಲ್ಲಿ ಲಿಂಗೈಕ್ಯ ಹೊಂದಿದ ವೀರ ಅಂಜಲಿ ಹಸ್ತದಲ್ಲಿ ಲಿಂಗದ ಮುಂದೆ ಕುಳಿತ ಭಂಗಿಯಲ್ಲಿರುವ ಶಿಲ್ಪವಿದೆ. (ಶೇರಿಕಾರ್ ಡಿ., ಪ್ರಜಾವಾಣಿ, ೨೪-೧೦, ೨೦೧೦)

ಸೋಮನಿಂಗದ ಹಳ್ಳಿಯ ಮಂದಗಡ್ಡಿಯಲ್ಲಿರುವ ೧೧ನೇ ಶತಮಾನದ ಒಂಬತ್ತನೆಯ ವೀರಗಲ್ಲಿನ ಶಿಲ್ಪದಲ್ಲಿ ವೀರನು ಹೋರಾಡುತ್ತಿರುವ ದೃಶ್ಯವಿದೆ. ಸುರಾಂಗನೆಯರು ವೀರನನ್ನು ವಿಮಾನದಲ್ಲಿ ಒಯ್ಯುತ್ತಿರುವ ದೃಶ್ಯಾವಳಿ ಮತ್ತು ಮೂರನೆ ಸ್ತರದಲ್ಲಿ ಲಿಂಗೈಕ್ಯದ ದೃಶ್ಯಾವಳಿಯನ್ನು ಬಿಂಬಿಸಲಾಗಿದೆ. (ಶೇರಿಕಾರ್ ಡಿ., ಪ್ರಜಾವಾಣಿ, ೨೪-೧೦, ೨೦೧೦)

ಸೋಮನಿಂಗದ ಹಳ್ಳಿಯ ಮಂದಗಡ್ಡಿ ಬಳಿ ೧೧ನೇ ಶತಮಾನದ ಹತ್ತನೆಯ ವೀರಗಲ್ಲು ಇದೆ. ಮೂರು ಸ್ತರದ ಈ ಶಿಲ್ಪದಲ್ಲಿ ನಿಂತ ಭಂಗಿಯಲ್ಲಿ ವೀರ ಹೋರಾಡುತ್ತಿರುವ ದೃಶ್ಯಾವಳಿ ಮೊದಲ ಸ್ತರದಲ್ಲಿದ್ದರೆ, ಎರಡನೇ ಸ್ತರವು ಸುರಾಂಗನೆಯರು ವಿಮಾನದಲ್ಲಿ ವೀರನನ್ನು ಒಯ್ಯುತ್ತಿರುವ ದೃಶ್ಯಾವಳಿಯನ್ನೊಳಗೊಂಡಿದೆ. ಮೂರನೇ ಸ್ತರದಲ್ಲಿ ನಮಸ್ಕರಿಸುತ್ತ ಲಿಂಗದ ಮುಂದೆ ಕುಳಿತ ವೀರನ ಶಿಲ್ಪವಿದೆ. ಇದು ಲಿಂಗೈಕ್ಯವನ್ನು ಸೂಚಿಸುತ್ತದೆ. ಈ ಊರಿನ ವೀರಗಲ್ಲು ಸ್ಮಾರಕಗಳಲ್ಲಿ ಹೆಚ್ಚಾಗಿ ಯುದ್ಧದಲ್ಲಿ ವೀರ ಕೆಳಗೆ ನಿಂತು ಖಡ್ಗ ಗುರಾಣಿ ಮತ್ತು ಭರ್ಜಿಗಳಿಂದ ಹೋರಾಡುತ್ತಿರುವ ಶಿಲ್ಪ ಕೆತ್ತಲ್ಪಟ್ಟಿವೆ. (ಶೇರಿಕಾರ್ ಡಿ., ಪ್ರಜಾವಾಣಿ, ೨೪-೧೦, ೨೦೧೦)

ಕ್ರಿ.ಶ. ೧೧ನೆಯ ಶತಮಾನದ ಎಲೆಶಿರೂರಿನ ಶಾಸನವು ಪೊರೆಗನುಮಾಯಿಚ ವೀರನು ಮಡಿದುದ್ದರ ನೆನಪಿಗೆ ವೀರಗಲ್ಲನ್ನು ನೆಡಿಸಿದ್ದ ಬಗ್ಗೆ ತಿಳಿಸುತ್ತದೆ. (ಎಸ್.ಐ.ಐ.೧೧ ಶಿರೂರು.ಶಾ.ಸಂ.೨೦೯).

ಕ್ರಿ.ಶ. ೧೧ನೆಯ ಶತಮಾನದ ಒಂದು ವೀರಗಲ್ಲಿನಲ್ಲಿ ಬಹುಧಾನ್ಯ ಸಂವತ್ಸರದಲ್ಲಿ ವೀರನೊಬ್ಬನು ಹೋರಾಡಿ ಮಡಿದ ವಿಷಯವಿದೆ. ವೀರನ ಹೆಸರು ತ್ರುಟಿತವಾಗಿದೆ. ಹೋರಾಟದ ವಿವರವೂ ಲಭ್ಯವಿಲ್ಲದಾಗಿದೆ. (ಕವಿಹಂ. ಶಾ.ಸಂ.೯. ಹುನಗುಂದ-೩೯) ಇದೇ ಸ್ಥಳದ ಮತ್ತೊಂದು ವೀರಗಲ್ಲಿನಲ್ಲಿ ಅಯ್ಯಹೊಳೆ ಐನೂರ್ವರು ಮಹಾಜನರ ತುಱುಗಳನ್ನು ಅಪಹರಿಸಿದಾಗ ಬಿಲಾಯ ನಾಯಕನು ಹೋರಾಡುತ್ತಾನೆ. ಇದಕ್ಕಾಗಿ ಊರು ಪಶ್ಚಿಮಕ್ಕೆ ೧೨ ಮತ್ತರ ಭೂಮಿಯನ್ನು ದಾನ ನೀಡಲಾಗಿದೆ. ವೀರ ಸತ್ತಂತೆ ಶಾಸನದಲ್ಲಿ ಇಲ್ಲ. ಈ ವೀರಗಲ್ಲಿನ ಅವಧಿ ಕ್ರಿ.ಶ. ೧೧೦೧ ಜುಲೈ ೮ ಸೋಮವಾರ (ಕವಿಹಂ. ಶಾ.ಸಂ.೯. ಹುನಗುಂದ. ೩೮).

ಹುಬ್ಬಳ್ಳಿ ತಾಲೂಕಿನ ಮಂಟೂರು ಗ್ರಾಮದ ಹನುಮಂತ ದೇವಾಲಯ ಎದುರು ಕ್ರಿ.ಶ. ೧೧ನೆಯ ಶತಮಾನದ ವೀರಗಲ್ಲು ಇದೆ. ತೃಟಿತವಾಗಿರುವ ಈ ಶಾಸನದಲ್ಲಿ ಕಲಿವಿಟ್ಟನ ವೀರಮರಣ ಎಂದಿದೆ. (ಧಾರವಾಡ ಜಿಲ್ಲೆಯ ಶಾಸನ ಸೂಚಿ.(ಸಂ) ಕಲಬುರ್ಗಿ ಎಂ.ಎಂ.೧೯೭೫ ಶಾ.ಸಂ.೨೪೬)

ಧಾರವಾಡ ತಾಲೂಕಿನ ಅಳ್ನಾವರ ಗ್ರಾಮದ ಬರಗುಂಡಿಯವರ ಮನೆಯ ಆವರಣದಲ್ಲಿ ಕ್ರಿ.ಶ. ೧೧ನೇ ಶತಮಾನದ ವೀರಗಲ್ಲು ಇದೆ. ಈ ವೀರಗಲ್ಲು ಶಾಸನ ಲಿಪಿಯ ದೃಷ್ಟಿಯಿಂದ ಶಾಸನದ ಕಾಲ ಕ್ರಿ.ಶ.೧೧ನೆಯ ಶತಮಾನ. ಗೋವೆಯ ಕದಂಬ ಗೋವಲ ದೇವನು ಆಳುತ್ತಿರಲು ವೀರನು ಯುದ್ಧದಲ್ಲಿ ಹೋರಾಡಿ ಸ್ವರ್ಗಸ್ಥನಾದ ಉಲ್ಲೇಖವು ವೀರಗಲ್ಲಿನಲ್ಲಿ ಕಂಡು ಬಂದಿದ್ದು, ವೀರನ ಹೆಸರು ಸ್ಪಷ್ಟವಾಗಿಲ್ಲ. (ಎಸ್.ಐ.ಐ. ೧೫. ಶಾ.ಸಂ. ೨೨೬)

ನೀಲಗುಂದದ ಕ್ರಿ.ಶ. ೧೧೦೬ರ ವೀರಗಲ್ಲಿನಲ್ಲಿ ತೊರಗಲೆಯ ಮಹಾಸಾಮಂತನ ಆಳ್ವಿಕೆಯಲ್ಲಿ ಇವನ ಹೆಂಡತಿ ಚಾಗಲ ದೇವಿಯು ಗ್ರಾಮದ ಮೇಲೆ ದಾಳಿ ಮಾಡಿದಾಗ ಚಾವಗಾವುಂಡ ಮತ್ತು ಹೊಲ್ಲಿಗಾವುಂಡರು ಹೋರಾಡಿ ಸ್ವರ್ಗಸ್ಥರಾಗುತ್ತಾರೆ. ಈ ವೀರಗಲ್ಲನ್ನು ಕೆತ್ತಿದವನು ಸರಸ್ವತಿಯ ಸೇವಕನಾದ ಚಾವುಣ್ಡೋಜನೆಂದು ಶಾಸನದ ಕೊನೆಯಲ್ಲಿದೆ. ಮಹಿಳೆ ದಾಳಿಮಾಡಿ ವೀರನನ್ನು ಕೊಂದ ಅಪರೂಪದ ವೀರಗಲ್ಲಿದು. ವೀರಗಲ್ಲಿನ ಶಿಲ್ಪದಲ್ಲಿ ಹೋರಾಡುತ್ತಿರುವುದು ಮಹಿಳೆಯೆಂದು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. (ಕವಿಹಂ. ಶಾ.ಸಂ. ೯ ಬಾದಾಮಿ, ೨೯)

ನೀಲಗುಂದ ರಾಮಲಿಂಗ ದೇವಾಲಯದ ಎದುರು ನಿಲ್ಲಿಸಿರುವ ವೀರಗಲ್ಲು ಶಾಸನದ ಕಾಲ. ಕ್ರಿ.ಶ.೧೧೦೬ರ ಚಾಗಲದೇವಿ ಎಂಬುವವಳು ಧಾಳಿಯಿಟ್ಟಾಗ ಹೋರಾಟದಲ್ಲಿ ಚಾವಗಾವುಂಡ ಮತ್ತು ಹೊಲಿಗಾವುಂಡರು ವೀರ ಮರಣವನ್ನಪ್ಪುವರು. ದಾಳಿಯಿಟ್ಟ ಚಾಗಲದೇವಿ ಎಂಬುವವಳು

ತೊರಗಲೆನಾಡಿನ ಸಾವಂತ ಹೆಂಡತಿಯಾಗಿದ್ದಳು. ಈ ಶಾಸನವನ್ನು ಕೆತ್ತಿದವನು ಸರಸ್ವತೀಗಣದಾಸಿಯಾದ ಚಾವುಣ್ಡೋಜ ಎಂದು ಉಲ್ಲೇಖಿಸಿದೆ. (ಕವಿಹಂ. ಶಾ.ಸಂ. ೯. ಬಾಗಲಕೋಟೆ. ೨೪)

ಕಟಗೇರಿಯ ಕೆ.ವಿ.ವಿ.ಎಸ್.ಹೈಸ್ಕೂಲು ಆವರಣದಲ್ಲಿನ ವೀರಗಲ್ಲಿನ ಪಾಠವು ತ್ರುಟಿತವಾಗಿದೆ. ಚಾವೆಯನಾಯ್ಕನ ಮಗನಾದ ಕಲ್ಲ ಮತ್ತು ಈತನ ಅಣ್ಣನ ಮಗನಾದ ಸಂಕಯಕಖ್ಮರು ಕಡಕೆರೆಯ ಮಹಾಜನರ ಕೋರಿಕೆಯಂತೆ ಬಾದಾಮಿಯ ದಾರಿಯಲ್ಲಿ ಕಳ್ಳರೊಡನೆ ಹೋರಾಡಿ ಮಡಿಯುತ್ತಾರೆ. ಗ್ರಾಮದ ಮುಖಂಡರು ಇವರ ವೀರತನಕ್ಕೆ ಮೆಚ್ಚಿ ೧೨ ಮತ್ತರ ಹೊಲವನ್ನು ದಾನವಾಗಿ ನೀಡಿರುವರು. ಕಟಗೆರೆಯನ್ನು ಆದಿ ಅಗ್ರಹಾರ ಬಣಂಜರ ಮೂಲ ಪಟ್ಟಣ (ಬಣಂಜದಾದಿ ಪಟ್ಟಣಂ) ಎಂದು ಕರೆದಿದೆ. ಇದು ೧೦-೧೧ನೇ ಶತಮಾನದ್ದಾಗಿದೆ. (ಕವಿಹಂ. ಶಾ.ಸಂ. ೯-ಬಾದಾಮಿ, ೩೩)

ಬೆಳಗಾವಿ ಜಿಲ್ಲೆಯ ತಾಲೂಕು ಕೇಂದ್ರವಾದ ರಾಯಭಾಗ ನಗರದಲ್ಲಿರುವ ಶ್ರೀ ೧೦೦೮ ಆದಿನಾಥ ತೀರ್ಥಂಕರನ ಜಿನಾಲಯದ ಆವರಣದ ಕ್ರಿ.ಶ ೧೧೧೦ರ ಕಲ್ಯಾಣದ ಚಾಲುಕ್ಯ ಅರಸು ಮನೆತನದ ಆರನೆಯ ವಿಕ್ರಮಾದಿತ್ಯನಿಗೆ ಸಂಬಂಧಿಸಿದ ವೀರಗಲ್ಲು ಶಾಸನ ಇದೆ. ಈ ಶಿಲ್ಪ ಫಲಕವು ಮೂರು ಹಂತದ ಶಿಲ್ಪ ಪಟ್ಟಿಕೆಗಳಿಂದ ಕೂಡಿದೆ. ಕಂದು ಬಣ್ಣದ ಬಳಪದ ಶಿಲೆಯಲ್ಲಿ ಕಂಡರಿಸಲ್ಪಟ್ಟ ಇದರ ಕೆಳಗಿನ ಶಿಲ್ಪ ಪಟ್ಟಿಕೆಯಲ್ಲಿ ಕೆಲವು ಜನ ವೀರರು ವೈರಿಗಳೊಂದಿಗೆ ಹೋರಾಡುತ್ತಿರುವ ದೃಶ್ಯವಿದೆ. ಎರಡನೆಯ ಶಿಲ್ಪ ಪಟ್ಟಿಕೆಯಲ್ಲಿ ಯುದ್ಧದಲ್ಲಿ ಹೋರಾಡಿ ಮಡಿದ ವೀರನೊಬ್ಬನನ್ನು ದೇವಲೋಕದ ಅಪ್ಸರೆಯರು ಪುಷ್ಪಕ ವಿಮಾನದಲ್ಲಿ ಹೊತ್ತುಕೊಂಡು ದೇವಲೋಕಕ್ಕೆ ಹಾರುತ್ತಿರುವುದು. ಮೂರನೆಯ ಶಿಲ್ಪ ಪಟ್ಟಿಕೆಯಲ್ಲಿ ಶಿವಲಿಂಗಕ್ಕೆ ಪೂಜೆ ನಡೆಯುತ್ತಿದ್ದು, ಅದರ ಮುಂಭಾಗದಲ್ಲಿ ಹತ್ತು ಜನ ವೀರರು ಅಂಜಲಿ ಮುದ್ರೆಯಲ್ಲಿ ಆಸೀನರಾಗಿದ್ದಾರೆ. ಈ ಪಟ್ಟಿಕೆಯ ಸುತ್ತಲೂ ಮಕರತೋರಣ ಪ್ರಭಾವಳಿಯಿದ್ದು, ಮೇಲ್ಭಾಗದಲ್ಲಿ ಕೀರ್ತಿಮುಖದ ಅಲಂಕಾರವಿದೆ. (ಶಾಸನ ಅಧ್ಯಯನ.(ಸಂ) ಭಟ್‌ಸೂರಿ ಕೆ.ಜಿ. ಸಂಪುಟ-೨, ಸಂಚಿಕೆ-೨, ೨೦೦೫, ಪು-೨೬) ಈ ತ್ರುಟಿತ ವೀರಗಲ್ಲು ಶಾಸನ. ಕಲ್ಯಾಣದ ಚಾಲುಕ್ಯರ ಅರಸು ಮನೆತನದ ಆರನೆಯ ವಿಕ್ರಮಾದಿತ್ಯನ ಆಳ್ವಿಕೆಯ ಕಾಲದಲ್ಲಿ ಆತನ ಸಾಮಂತ ತೇರಿದಾಳದ ಮುಖ್ಯಸ್ಥನಾದ ಭುವನಗಾವುಂಡನು, ಹೆಮ್ಮಗಾವುಂಡ ಮತ್ತು ಚಾವುಂಡನ ಮಕ್ಕಳೊಡಗೂಡಿ ದಿಗ್ಗಜವಾಡವನ್ನು ಮುತ್ತಿದ ಖಳಗಿಳದ ಮಹಾಮಂಡಳೇಶ್ವರ ಗಂಡರಾದಿತ್ಯ ದೇವನ ಅಧಿಕಾರಿ ಕಾವಸೆಟ್ಟಿಯ ವಿರುದ್ಧ ಹೋರಾಡುತ್ತ ಹಲವರನ್ನು ಕೊಂದು ತಾನು ವೀರಮರಣವನ್ನಪ್ಪಿದನು. (ಮುಂದಿನ ವಿವರ ನಷ್ಟವಾಗಿದೆ. (ಶಾಸನ ಅಧ್ಯಯನ. (ಸಂ) ಭಟ್‌ಸೂರಿ ಕೆ.ಜಿ. ಸಂಪುಟ-೨, ಸಂಚಿಕೆ-೨, ೨೦೦೫, ಪು-೨೭)

ಚಿಗಟೇರಿ ಗ್ರಾಮದ ರಾಮಲಿಂಗಸ್ವಾಮಿ ದೇವಾಲಯದ ಸಭಾಂಗಣದಲ್ಲಿ ನಿಲ್ಲಿಸಿರುವ ಕ್ರಿ.ಶ. ೧೧೩೨ರ ವೀರಗಲ್ಲು ಶಾಸನದಲ್ಲಿ ಹೊಯ್ಸಳ ವೀರಬಲ್ಲಾಳನ ಕಾಲದಲ್ಲಿ ಚಂಡು ರೊಡೆಯ

ಪೊಂಮಯ್ಯ ಯುದ್ಧದಲ್ಲಿ ಮಡಿದಂತೆ(?) ತಿಳಿಯುತ್ತದೆ. (ಕವಿಹಂ. ಶಾ.ಸಂ. ೧.ಹರಪನಹಳ್ಳಿ. ೨೦೫)

ಕಲಘಟಗಿ ತಾಲೂಕಿನ ಕಂದಲಿ ಗ್ರಾಮದ ಹಾಳು ಜಾಗೆಯಲ್ಲಿರುವ. ಕ್ರಿ.ಶ. ೧೧೩೨ ರ ವೀರಗಲ್ಲು ಶಾಸನದಲ್ಲಿ ಅಜ್ಜಿಗಾದೆಯ ತೈಲಯ ಸಾಮಂತನು ಕಿರುವತ್ತಿಯನ್ನು ಮುತ್ತಿದಾಗ ಅಹವಮಲ್ಲಯ್ಯ ನಾಯಕನ ವೀರಮರಣ ಎಂದು ದಾಖಲಿಸಿದೆ.(ಎಸ್.ಐ.ಐ. ೧೫. ೨೭೭)

ಕಲಘಟಗಿ ತಾಲೂಕಿನ ತಂಬೂರು ಗ್ರಾಮದ ಈಶ್ವರ ದೇವಾಲಯದ ಬಳಿಯಿರುವ ಕ್ರಿ.ಶ. ೧೧೩೫ ರ ವೀರಗಲ್ಲು ಶಾಸನ. ಯುದ್ಧದಲ್ಲಿ ಮಾಚನಾಯಕನ ವೀರಮರಣ ಉಲ್ಲೇಖಿಸಿದೆ. (ದ ಕದಂಬಾಸ್ ಆಫ್ ಗೋವಾ ಇನ್ಸ್‌ಕ್ರಿಪ್‌ಷನ್ಸ್ ಗುರುವ ಆರ್.ಎನ್. (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ ೧೯೬೯. ಪು. ೫೯೧)

ಕಲಘಟಗಿ ತಾಲೂಕಿನ ತಂಬೂರು ಗ್ರಾಮದ ಕೋಟೆಯ ಕಂದಲಿ (ಕೆ.ಆರ್.ಐ)ನಲ್ಲಿರುವ ಕ್ರಿ.ಶ. ೧೧೩೬ರ ವೀರಗಲ್ಲು ಶಾಸನದಲ್ಲಿ ಕಾಲವನ್ನು ಶ್ರೀಭೂಲೋಕ ವರ್ಷ ೧೧ನೆಯ ನಳ ಸಂವತ್ಸರ ಜೇಷ್ಠ ಶು೧ಳ ಮಂಗಳವಾರವೆಂದಿದ್ದು, ಇದು ಕ್ರಿ.ಶ. ೧೧೩೬ಕ್ಕೆ ಸರಿ ಹೊಂದುತ್ತದೆ. ಹಾನಗಲ್ಲು ಕದಂಬ ಅರಸನಿಗೆ ಸಂಬಂಧಿಸಿದೆ. ಮಹಾಮಂಡಳೇಶ್ವ ವೀರ ಕದಂಬ ಮಲ್ಲಿಕಾರ್ಜುನ ದೇವನು ತನ್ನ ರಾಜಧಾನಿಗೆ ಬಂದು ಹಾನಗಲ್ಲಿನ ಪೂರ್ವದಲ್ಲಿ ಬೀಡುಬಿಟ್ಟು ಹಾನಗಲ್ಲು ಕೋಟೆಗೆ ತನ್ನ ಆನೆಯನ್ನು ಕೊಂದು ವೀರಮರಣ ಹೊಂದಿದ ವಿಷಯವಿದೆ (ದ ಕದಂಬಾಸ್ ಆಫ್ ಗೋವಾ ಇನ್ಸ್‌ಕ್ರಿಪ್‌ಷನ್ಸ್ ಗುರುವ ಆರ್.ಎನ್. (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ೧೯೬೯. ಪು ೫೯೧)

ಕಲಘಟಗಿ ತಾಲೂಕಿನ ತಂಬೂರು ಗ್ರಾಮದ ಊರ ಅಗಸಿ ಕಟ್ಟೆ ಬಳಿಯಿರುವ ಕ್ರಿ.ಶ.೧೧೪೯ ರ ವೀರಗಲ್ಲು ಶಾಸನದ ಕಾಲವನ್ನು ಭೂಲೋಕ ವರ್ಷದ ೧೩ನೆಯ ಕಾಳಯುಕ್ತ ಸಂವತ್ಸರದ ಪಾಲ್ಗುಣ ಶುದ್ದ ೭ ಆದಿವಾರವೆಂದಿದ್ದು, ಇದು ಕ್ರಿ.ಶ.೧೧೪೯ ಫೆಬ್ರವರಿ ೫ ಆದಿತ್ಯವಾರಕ್ಕೆ ಸರಿ ಹೊಂದುತ್ತದೆ. ಇದು ಜೋಳವಳಿ ಸ್ಮಾರಕ ಶಾಸನವಾಗಿದ್ದು, ಗಾವಣಿಗ ಕುಲತಿಲಕ ಸಿಡಿಲಕೇತನನ ಪುತ್ರ ಸಾಮಂತ ಮೂಲಕರಸನ ನೆಚ್ಚಿನ ಆಳು ಜೋಳವಾಳಿಯ ಕ್ರಮದಿಂದ ಸುರಲೋಕವನ್ನು ಹೊಂದಿದನು. ವೀರನ ಹೆಸರು ದಾಖಲಾಗಿಲ್ಲ. ಆತನ ಮರಣದ ನಂತರ ಆತನ ತಂದೆ ಸಿಡಿಲಕೇತ ತಾಯಿ ನಾಗಿಯಕ್ಕ ಮತ್ತು ಆತನ ಅಣ್ಣ ಅಜಣನು ಈ ವೀರಗಲ್ಲನ್ನು ನಿಲ್ಲಿಸಿದನು. (ದ ಕದಂಬಾಸ್ ಆಫ್ ಗೋವಾ ಇನ್ಸಕ್ರಿಪಷನ್, ಗುರುವ ಆರ್.ಎನ್. (ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ೧೯೬೯, ಪು–೫೯೩)

ಕ್ರಿ.ಶ. ೧೧೭೧ರ ಹರ್ಲಾಪುರ ಶಾಸನವು ರಾಯಮುರಾರಿ ಸೋವಿದೇವನ ಕಾಲದ್ದಾಗಿದ್ದು ಇದು ಯಾವುದೋ ವೀರನು ಮರಣ ಹೊಂದಿದ್ದು ಅವನ ನೆನಪಿಗೆ ನಿಲ್ಲಿಸಿದ ವೀರಗಲ್ಲು ಎಂದು ತಿಳಿಸುತ್ತದೆ. (ಎಸ್.ಐ.ಐ. ೧೧. ಹರ್ಲಾಪೂರ. ಶಾ.ಸಂ. ೧೧೮)

ಮುಂಡರಗಿ ತಾಲೂಕಿನ ಶಿರೂರಿನ ಶಾಸನವು ೬ನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದೆ. ಇದು ಬಾಗಲ ಮಹಾದೇವಿ ಮತ್ತು ಅವಳ ಮಾವ ಪೆರ್ಗಡೆ ಮಾರ್ತಂಡಯ್ಯರ ಉಲ್ಲೇಖವನ್ನು ತಿಳಿಸುತ್ತದೆ. (ಎಸ್.ಐ.ಐ. ೧೧ ಶಿರೂರು. ಶಾ.ಸಂ. ೨೦೬)

ಜಮಖಂಡಿಯ ಕ್ರಿ.ಶ. ೧೧೭೫ರ ಅವಧಿಯ ವೀರಗಲ್ಲು ಎರಡು ಸಾಲಿನ ಪಾಠವನ್ನು ಹೊಂದಿದ್ದು ಕಳಚೂರ್ಯ ಚಕ್ರವರ್ತಿ ಸೋವಿದೇವನ ಅವಧಿಯಲ್ಲಿ ನಡೆದ ಹೋರಾಟದಲ್ಲಿ ಯಾರೋ ಮಡಿದಂತೆ ತಿಳಿಯುತ್ತದೆ. ಶಾಸನ ಬಹಳ ಹಾಳಾಗಿರುವುದರಿಂದ ಹೆಚ್ಚಿನ ವಿವರ ಲಭ್ಯವಿಲ್ಲ. (ಕವಿಹಂ. ಶಾ.ಸಂ. ೯, ಜಮಖಂಡಿ. ೧೮)

ಅಳ್ನಾವರ ಗ್ರಾಮದ ಬರಗುಂಡಿಯವರ ಮನೆಯ ಆವರಣದಲ್ಲಿ ವೀರಗಲ್ಲು ಇದೆ. ಇಲ್ಲಿ ಉಲ್ಲೇಖಿತನಾದವನು ಕ್ರಿ.ಶ. ೧೦೭೮ರಿಂದ ೧೧೨೫ರವರೆಗೆ ಆಳಿದ ಗೋವ ಕದಂಬ ಮೂರನೆಯ ಗೊವಲದೇವ. ಕಾಳಗದಲ್ಲಿ ವೀರಸ್ವರ್ಗವೇರಿದವನ ಹೆಸರು ಮತ್ತು ವಿವರಗಳು ಈ ತ್ರುಟಿತ ಶಾಸನದಿಂದ ಸ್ಪಷ್ಟವಾಗುವುದಿಲ್ಲ. ಇದು ಕ್ರಿ.ಶ.ಸುಮಾರು ೧೧೦೦ರಲ್ಲಿ ಹುಟ್ಟಿರಬಹುದೆಂದು ಅರಸು ಮತ್ತು ಅಕ್ಷರಗಳ ಆಧಾರದಿಂದ ಹೇಳಬಹುದು. (ಧಾರವಾಡ ತಾಲೂಕಿನ ಶಾಸನಗಳು, (ಸಂ), ಕಲಬುರ್ಗಿ.ಎಂ.ಎಂ., ೧೯೭೬, ಪು. ೨೩)

ಮದರಖಂಡಿಯ ನಂದಿಗಪ್ಪ ದೇವಾಲಯದಲ್ಲಿರುವ ವೀರಗಲ್ಲಿನ ಶಾಸನ ಬಹಳಷ್ಟು ಹಾಳಾಗಿದ್ದು, ಕಾಲದ ಉಲ್ಲೇಖವಿರುವ ಭಾಗ ಮಾತ್ರ ಉಳಿದಿದೆ. ಕಳಚುರ್ಯ ವಂಶದ ರಾಯಮುರಾರಿ ಸೋವಿದೇವನ ವರ್ಷ ೮ ಮನ್ಮಥ, ಮಾರ್ಗಶಿರ,ಸು.ಅಷ್ಟಮಿ ಎಂದಿದ್ದು. ವಾರದ ಉಲ್ಲೇಖದ ಭಾಗ ಹಾಳಾಗಿದೆ. ಇದು ಕ್ರಿ.ಶ.ಸುಮಾರು ೧೧೭೫ಕ್ಕೆ ಸಮನಾಗುತ್ತದೆ. (ಕವಿಹಂ. ಶಾ.ಸಂ. ೯. ಜಮಖಂಡಿ. ೧೮)

ಕ್ರಿ.ಶ. ೧೧೮೪ರ ಮುಳಗುಂದ ಶಾಸನವು ಶ್ರೀ ಕ್ರೋಧ್ಧ ವೈಶಾಖ ಶುದ್ಧ ಪೂರ್ಣಮೆಯ ಗುರುವಾರದಲು ಮುಳಗುಂದದ ಚಿಂದಿಯ ಚಂದಂಣನು ರಣದಲಿ ಮಡಿದ ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ ಎಂಬುದಾಗಿ ತಿಳಿಸುತ್ತದೆ. (ಎಸ್.ಐ.ಐ. ೧೫. ಮುಳಗುಂದ. ಶಾ.ಸಂ. ೫೪೬)

ರಾಯಚೂರು ತಾಲೂಕಿನ ಚಿಕ್ಕಸೂಗುರು ಗ್ರಾಮದ ಎರಕಲ್ ಮಲ್ಲನಗೌಡನ ಹೊಲದಲ್ಲಿನ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲು ಶಾಸನದ ಕಾಲವು ಕ್ರಿ.ಶ. ೧೧೯೪ರ ಮಹಾಮಂಡಳೇಶ್ವರ ಹಂದಿಯರಸ ಮತ್ತು ಮೊರಟದ ಮಲ್ಲರಸರು ಗೆದ್ದರೆ ಲಕ್ಷ್ಮಿ ದೊರೆಯುತ್ತದೆ, ಸತ್ತರೆ ಸುರಾಂಗನೆಯರು ದೊರೆಯುತ್ತಾರೆ. ಕ್ಷಣದಲ್ಲಿ ನಾಶವಾಗುವ ಈ ದೇಹವನ್ನು ರಣರಂಗದಲ್ಲಿ ಬಿಡಲು ಏಕೆ ಚಿಂತಿಸಬೇಕು ಎಂಬ ತತ್ವವನ್ನು ತಿಳಿದು ತಳಹನೂರ ಕೋಟೆಯಲ್ಲಿ ಕಾದಾಡಿ ತಳಹನೂರನ್ನು ನೆತ್ತರುಪಟ್ಟವಾಗಿ ಪಡೆದ ವಿಷಯವಿದೆ. (ಕವಿಹಂ. ಶಾ.ಸಂ. ೭. ರಾಯಚೂರು. ೫೨)

ಮಸ್ಕಿಯ ಪ್ರವಾಸ ಮಂದಿರದಲ್ಲಿನ ಹದಿಮೂರನೆಯ ಶಾಸನ ವೀರಗಲ್ಲು. ಗೋನಯ್ಯನ ಮಗ ಕಳಯಬ್ಬೆ ಎಂಬುವವನ ನೆನಪಿಗೆ ಹಾಕಿಸಿರಬಹುದಾದ ಈ ಶಾಸನದ ಕಾಲದ ಉಲ್ಲೇಖವಿಲ್ಲ; ಬಹಳ ತ್ರುಟಿತವಾಗಿದೆ. (ಕವಿಹಂ. ಶಾ.ಸಂ. ೭. ಲಿಂಗಸೂಗೂರು. ೪೨)

ಹುಬ್ಬಳ್ಳಿ ತಾಲೂಕಿನ ಬೆಳಗಲಿ ಗ್ರಾಮದ ಊರಿನ ಕೆರೆಯ ದಂಡೆಯ ಮೇಲಿದೆ. ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು. ಈ ವೀರಗಲ್ಲು ಶಾಸನ ತ್ರುಟಿತವಾಗಿದ್ದು, ಗಾವುಂಡ ಹಾಗೂ ಹಿಟ್ಟುಗಳು ಮರಣ ಹೊಂದಿದ ಬಗ್ಗೆ ಹಾಗೂ ವೀರನಿಗೆ ನೀಡಿದ ದಾನದ ಉಲ್ಲೇಖವಿದೆ. (ಧಾರವಾಡ ಜಿಲ್ಲೆಯ ಶಾಸನ ಸೂಚಿ (ಸಂ), ಕಲಬುರ್ಗಿ ಎಂ.ಎಂ., ೧೯೭೫. ಶಾ.ಸ. ೭೪)

ಹುಬ್ಬಳ್ಳಿ ತಾಲೂಕಿನ ವರೂರು ಗ್ರಾಮದ ಹನುಮಂತ ದೇವಾಲಯದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಶಾಸನದಲ್ಲಿ ಎಳವಳೆಯ ಬಿಜ್ಜಮ್ಮ ಮತ್ತು ಜಕ್ಕರಸರ ವೀರ ಮರಣದ ವಿಷಯವಿದೆ. (ಧಾರವಾಡ ಜಿಲ್ಲೆಯ ಶಾಸನ ಸೂಚಿ (ಸಂ), ಕಲಬುರ್ಗಿ ಎಂ.ಎಂ., ೧೯೭೫. ಶಾ.ಸಂ-೫೯)

ಧಾರವಾಡ ತಾಲೂಕಿನ ಮುಗದ ಗ್ರಾಮದ ಕೆರೆಯ ಏರಿಯ ಮೇಲಿದೆ. ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು. ಈ ವೀರಗಲ್ಲು ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಇದು ಸ್ಮಾರಕ ಶಾಸನವಾಗಿದ್ದು ತುರುಗೋಳ್ ಕಾಳಗಕ್ಕೆ ಸಂಬಂಧಿಸಿದ ಮಾಹಿತಿಯನ್ನು ನೀಡುತ್ತದೆ. ಸಿವನಾಯಕಾಗ್ರಣಿ ಮತ್ತು ನಾಗವುಂಡನ ಉಲ್ಲೇಖ ಶಾಸನದಲ್ಲಿದೆ. (ಎಸ್.ಐ.ಐ. ೧೫. ಶಾ.ಸಂ. ೫೫೩)

ಧಾರವಾಡ ತಾಲೂಕಿನ ಮುಗದ ಗ್ರಾಮದ ಹೆಗ್ಗರೆಯ ದಿಬ್ಬದ ಮೇಲಿನ ಈಶ್ವರ ಗುಡಿಯಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು. ಶಾಸನ ಅಸ್ಪಷ್ಟವಾಗಿದ್ದು, ಶ್ಲೋಕದ ಕೊನೆಯ ಭಾಗದಲ್ಲಿ "ಮುಗುದ" ಗ್ರಾಮದ ಹೆಸರಿಸಿದೆ. (ಧಾರವಾಡ ಜಿಲ್ಲೆಯ ಶಾಸನ ಸೂಚಿ. ಕಲಬುರ್ಗಿ. ಎಂ.ಎಂ. ೧೯೭೫. ಶಾ.ಸಂ. ೪೫೬)

ಹುಬ್ಬಳ್ಳಿ ತಾಲೂಕಿನ ಬ್ಯಾಹಟ್ಟಿ ಗ್ರಾಮದ ಹನುಮಂತ ದೇವಾಲಯದ ಆವರಣದಲ್ಲಿರುವ ಕ್ರಿ.ಶ.೧೨ನೆಯ ಶತಮಾನದ ವೀರಗಲ್ಲು ತ್ರುಟಿತವಾಗಿದೆ. ಈಶ್ವರನೆಂಬವನು ಗ್ರಾಮುಂಡನಾಗಿದ್ದ ಉಲ್ಲೇಖವಿದೆ. (ಧಾರವಾಡ ಜಿಲ್ಲೆಯ ಶಾಸನ ಸೂಚಿ (ಸಂ), ಕಲಬುರ್ಗಿ ಎಂ.ಎಂ., ೧೯೭೫. ಶಾ.ಸಂ. ೭೫)

ನವಲಗುಂದ ತಾಲೂಕಿನ ಹನಸಿ ಗ್ರಾಮದ ಹನುಮಂತ ದೇವಾಲಯದ ಎದುರು ಇರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಶಾಸನ ಅಸ್ಪಷ್ಟವಾಗಿದೆ. ಕಾಲದ ಉಲ್ಲೇಖವಿರುವುದಿಲ್ಲ. ಒಬ್ಬ ವೀರನ ಪರಾಕ್ರಮವನ್ನು ವರ್ಣಿಸುವಂತಿದೆ. ಚಂದಿಯಪ್ಪ ಮತ್ತು ನಾರಯಣಿ ಎಂಬೆರಡು ಹೆಸರಿನ ವಿಷಯವಿದೆ. (ಎಸ್.ಐ.ಐ. ೧೫. ಶಾ.ಸಂ. ೫೮೬)

ಕುಂದಗೋಳ ತಾಲೂಕಿನ ಹಂಚಿನಾಳ ಗ್ರಾಮದ ಕೆರೆಯ ದಂಡೆ ಮೇಲಿರುವ ಕ್ರಿ.ಶ.೧೨ನೆಯ ಶತಮಾನದ ವೀರಗಲ್ಲು ಶಾಸನದಲ್ಲಿ ಸಿಂಧ ಪೆರ್ಮಾಡಿ, ಯುದ್ಧಗಳಲ್ಲಿ ಜಯಹೊಂದಿದ ಉಲ್ಲೇಖವಿದೆ. (ಕೆ.ಐ. ೫. ಶಾ.ಸಂ. ೭೨).

ಬಾದಾಮಿ ತಾಲೂಕಿನ ನಂದಿಹಾಳ್ ಗ್ರಾಮದ ಮಾರುತಿ ದೇವಾಲಯದಲ್ಲಿರುವ ಕಲ್ಯಾಣ ಚಾಲುಕ್ಯರ ಶತಮಾನದ ವೀರಗಲ್ಲಿನಲ್ಲಿ ೨೮ ಸಾಲಿನ ಪಾಠವಿದ್ದು ಇಡೀ ಜಿಲ್ಲೆಯಲ್ಲೇ ದೊರೆತ ದೀರ್ಘ ವೀರಗಲ್ಲು ಶಾಸನ ಇದಾಗಿದೆ. ಗವಲೂರು ಮೂಲಕ ಗಾವುಂಡ ಮತ್ತು ಬಿರಾಗಾವುಂಡ ಮತ್ತು ಗ್ರಾಮದ ಎಂಟು ಹಿಟ್ಟುಗಳು ಕೂಡಿಕೊಂಡು ಬಸವಂತನಿಗೆ ಹಿರಿಯಹೇರು, ಕುರಿದೆರೆ ಮತ್ತು ಕೆಲವು ತೆರಿಗೆಗಳನ್ನು ದಾನ ನೀಡಿದಂತೆ ವಿವರವಿದೆ. ಜಗವೆಲ್ಲ ಮೆಚ್ಚುವಂತೆ ಶತ್ರು ಬಲವನ್ನು ಇರಿದು ಕೊಂದು ಮೆಚ್ಚುಗೆಯನ್ನು ಪಡೆದನೆಂದು ಶಾಸನ ಹೇಳುತ್ತದೆ. ಕಲ್ಲುಕುಟಿಗರ ಬಲ್ಲನೆಂಬುವನು ಈ ವೀರಗಲ್ಲನ್ನು ನಿರ್ಮಿಸಿದಂತೆ ತಿಳಿದುಬರುತ್ತದೆ. (ಕವಿಹಂ. ಶಾ.ಸಂ.೯–ಬಾದಾಮಿ–೨)

ಬಾದಾಮಿ ತಾಲೂಕಿನ ಹಂಗರಗಿಯ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲಿನಲ್ಲಿ ಜಿತೇನ ಲಭ್ಯತೇ ಲಕ್ಷ್ಮೀ–ಶ್ಲೋಕ ಮಾತ್ರವಿದೆ. ಬೇರೆ ಯಾವ ವಿವರವೂ ಇಲ್ಲ. (ಕವಿಹಂ. ಶಾ.ಸಂ. ೯. ಬಾದಾಮಿ–೧೯) ಮಾಸ್ಕಿ ಗ್ರಾಮದ ವೀರಶಾಸನದಲ್ಲಿ ಸ್ವಭಾನು ಸಂವತ್ಸರದಲ್ಲಿ ಸತ್ತ ವೀರನೊಬ್ಬನನಿಗೆ ಹದಿನೈದು ಕಮ್ಮ ಭೂಮಿಯನ್ನು ಗ್ರಾಮ ಐನೂರ್ವ ಮಹಾಜನರು ಬಿಟ್ಟ ವಿಷಯವಿದೆ. (ಕ.ವಿ.ವಿ.ಶಾ.ಸಂ.೯.ಬಾದಾಮಿ.೧೮)

ಕಲಾದಗಿ ಗ್ರಾಮದ ಕ್ರಿ.ಶ. ೧೨ನೇ ಶತಮಾನದ ವೀರಗಲ್ಲು ನಾಲ್ಕು ಸಾಲಿನ ಪಾಠವನ್ನು ಒಳಗೊಂಡಿದ್ದು ಅಪೂರ್ಣವಾದ ಶಾಸನವಾಗಿದೆ. ಇದರಲ್ಲಿ ಶಿವ, ಗಣಪತಿ, ಸರಸ್ವತಿಯರಿಗೆ ನಮಸ್ಕರಿಸುವ ಶ್ಲೋಕವಿದೆ. ಮಿಕ್ಕ ವಿಷಯವಿಲ್ಲ. (ಕವಿಹಂ. ಶಾ.ಸಂ. ೯, ಬಾಗಲಕೋಟೆ–೧೮)

ಮೈಲಾರ ಗ್ರಾಮದ ಅರಳಿಕಟ್ಟೆಯ ಮೇಲಿರುವ ಕ್ರಿ.ಶ. ೧೨ನೇ ಶತಮಾನದ ವೀರಗಲ್ಲು ಶಾಸನದಲ್ಲಿ ಮಹಾದೇವಣ್ಣ ಮತ್ತು ಮಯಿಲಾರನ ಮರಣವನ್ನು ಉಲ್ಲೇಖಿಸುತ್ತದೆ. (ಕವಿಹಂ. ಶಾ.ಸಂ. ೧. ಹಡಗಲಿ. ೩೨)

ಮೋರ್ಖಂಡಿ ಹನುಮಂತ ದೇವರ ಗುಡಿಯ ಮುಂಭಾಗದಲ್ಲಿರುವ ಪಾಠವು ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿದೆ. ಮಾರನೆಂಬುವನ ಶೌರ್ಯವನ್ನು ಹೊಗಳಿದೆ. ಊರಳಿವಿನಲ್ಲಿ ಹಾಗೂ ಪೆಂಡರು ಮಾನ ಹೋಗುವ ಸಂದರ್ಭದಲ್ಲಿ ಹೋರಾಡಿದಂತೆ ತಿಳಿಯುತ್ತದೆ. (ಕವಿಹಂ. ಶಾ.ಸಂ. ೮. ಬಸವಕಲ್ಯಾಣ–೬೪)

ರಂಜೋಳ ಊರಿನ ಹಿರೇಮಠದಲ್ಲಿರುವ ವೀರಗಲ್ಲು ಕ್ರಿ.ಶ.ಸುಮಾರು ೧೨ನೆಯ ಶತಮಾನದ್ದಾಗಿದೆ. ಹೆಚ್ಚಿನ ವಿವರಗಳಿಲ್ಲ ಚಂಡಿಗನ ಉಲ್ಲೇಖವಿದೆ. (ಕವಿಹಂ. ಶಾ.ಸಂ. ೮. ಬೀದರ್–೬೧)

ಕಲಾದಗಿ ಗ್ರಾಮದ ಬಾಲಾಜಿ ಚಿತ್ರಮಂದಿರ ಸಮೀಪದ ಬಾವಿಯ ಮೇಲಿನ ವೀರಗಲ್ಲಿನ ಶಾಸನ ಲಿಪಿಯ ದೃಷ್ಟಿಯಿಂದ ೧೨ನೆಯ ಶತಮಾನಕ್ಕೆ ನಿಗದಿಪಡಿಸಬಹುದಾಗಿದೆ. ಇದು ಮಂಗಳ ಶ್ಲೋಕವನ್ನೊಳಗೊಂಡಿದ್ದು, ಶಿವಸ್ತುತಿ, ಗಣಪತಿ ಮತ್ತು ಸರಸ್ವತಿ ನಮನವನ್ನು ತಿಳಿಸುತ್ತದೆ. ಇದೊಂದು ಅಪೂರ್ಣ ಶಾಸನ. (ಕವಿಹಂ. ಶಾ.ಸಂ. ೯. ಬಾಗಲಕೋಟೆ–೧೮)

ಕೊಣ್ಣೂರು ಹನುಮಂತ ದೇವರ ಗುಡಿಯಲ್ಲಿ ಇಡಲಾದ ವೀರಗಲ್ಲು ತುಂಡಾಗಿದ್ದು ವಿವರಗಳು ಮತ್ತು ಕಾಲದ ಉಲ್ಲೇಖ ಹಾಳಾಗಿವೆ. ಅಶೇಷ ಮಹಾಜನ ಮತ್ತಯ ಗಾವುಂಡರು ಬಹುಶ: ಯುದ್ಧದಲ್ಲಿ ಮಡಿದ ಇಬ್ಬರು ಮಕ್ಕಳಿಗೆ ಹೊಲೆಗೆರೆಯನ್ನು ಬಿಟ್ಟಂತೆ ಉಲ್ಲೇಖವಿದೆ. (ಕವಿಹಂ. ಶಾ.ಸಂ. ೯. ಬೀಳಗಿ–೩)

ಮದರಖಂಡಿ ರಾಮೇಶ್ವರ ದೇವಾಲಯದಲ್ಲಿ ನಿಲ್ಲಿಸಿರುವ ವೀರಗಲ್ಲು ತ್ರುಟಿತವಾಗಿದೆ. ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರುವ ಈ ವೀರಗಲ್ಲಿನಲ್ಲಿ ಮಾಚ್ಯಯ ಮತ್ತು ಬೊಪ್ಪಯ್ಯ ಎಂಬ ವ್ಯಕ್ತಿನಾಮಗಳೂ ಹಿಪ್ಪರಿಗೆ ಎಂಬ ಸ್ಥಳದ ಹೆಸರೂ ಉಲ್ಲೇಖವಾಗಿದೆ. ಬಹುಶ: ಮೇಲಿನ ವ್ಯಕ್ತಿಗಳು ಹಿಪ್ಪರಿಗೆಯ ಬಳಿಯ ಹೋರಾಟದಲ್ಲಿ ಸತ್ತಿರಬೇಕು. (ಕವಿಹಂ. ಶಾ.ಸಂ. ೯.ಬೀಳಗಿ–೧೨)

ನಂದಿಹಾಳ್ ಮಾರುತಿ ದೇವಾಲಯದಲ್ಲಿ ನಿಲ್ಲಿಸಿರುವ ಕಲ್ಯಾಣ ಚಾಲುಕ್ಯರ ವೀರಗಲ್ಲು ಮಲ್ಲಿದೇವರಸನೆಂಬುವನು ಆಳುತ್ತಿದ್ದಾಗ, ಗಜುವಲೂರು ಮೂಲಿಗನಾದ ಮೂಕಗಾವುಂಡ ಮತ್ತು ಬೀರಗಾವುಂಡ ಮುಖ್ಯವಾಗಿ ಎಂಟು ಹಿಟ್ಟುಗಳು ಸೇರಿಕೊಂಡು ಶಾಸನ ಸಮೇತವಾಗಿ ವೀರನೊಬ್ಬನಿಗೆ ದಾನ ನೀಡಿದ ವಿವರವಿದೆ. ವೀರನ ಹೆಸರನ್ನು ಶಾಸನದಲ್ಲಿ ಹಳ್ಳಿಯ ಬಸವಂತನೆಂದು ಉಲ್ಲೇಖಿಸಿದೆ. ಹಿರಿಯಹೇರು, ಕುಜೆದೆಳೆ ಮಾನ್ಯ ಮತ್ತು ಕೆಲವು ರೀತಿಯ ಕೊಳಗಗಳನ್ನು ದಾನ ನೀಡಿದ ವಿವರವಿದೆ. ಕಲ್ಕುಟಿಗರ ಬಿಲ್ಲನು ಈ ವೀರಗಲ್ಲನ್ನು ಕೆತ್ತಿದೆ. ಮೂರು ಹಂತದ ಈ ವೀರಗಲ್ಲು ಸುಂದರವಾದ ಶಿಲ್ಪವನ್ನು ಒಳಗೊಂಡಿದ್ದು ಮೇಲ್ಭಾಗದ ಕಾಲದ ಉಲ್ಲೇಖ ಮತ್ತು ಶಾಸನ ಪಾಠ ಬಹಳ ಸವೆದು ಹೋಗಿದೆ. (ಕವಿಹಂ. ಶಾ.ಸಂ. ೯. ಬಾಗಲಕೋಟೆ–೨)

ಹಂಗರಗಿ ಮಾರುತೇಶ್ವರ ಗುಡಿ ಎದುರು ಇರುವ ವೀರಗಲ್ಲಿನ ಮೇಲೆ ಕ್ರಿ.ಶ.ಸುಮಾರು ೧೨ನೆಯ ಶತಮಾನದ ಶಾಸನವಿದೆ. ಈ ಶಾಸನದಲ್ಲಿ ವೀರಗಲ್ಲಿನ ಅಂತ್ಯದಲ್ಲಿ ಕಂಡುಬರುವ 'ಜಿತೇನ ಲಭ್ಯತೇ ಲಕ್ಷ್ಮೀ' ಶ್ಲೋಕ ಮಾತ್ರವಿದೆ. ಉಳಿದ ಯಾವ ವಿವರಗಳನ್ನು ಬರೆದಿಲ್ಲ. (ಕವಿಹಂ. ಶಾ.ಸಂ. ೯. ಬಾಗಲಕೋಟೆ–೧೪.

ಮಾಳ್ಗಿ ಮಾರುತಿ ದೇವಾಲಯದ ಆವರಣದಲ್ಲಿರುವ ಒಡೆದುಹೋದ ವೀರಗಲ್ಲಿನ ಮೇಲೆ ಶಾಸನದ ಕಾಲವು ಕ್ರಿ.ಶ. ೧೨ನೇಯ ಶತಮಾನಕ್ಕೆ ಸರಿಹೊಂದುತ್ತದೆ. ಯಾವುದೋ ಹೋರಾಟದಲ್ಲಿ ಮಡಿದ ವೀರನಿಗೆ ಗ್ರಾಮದ ಐನೂರ್ವರು ಹದಿನೈದು ಕಂಡು ಭೂಮಿಯನ್ನು ದಾನ ಬಿಟ್ಟಂತೆ ತಿಳಿದು ಬರುತ್ತದೆ. ಶಾಸನ ಭಾಗ ಬಹಳಷ್ಟು ಹಾಳಾಗಿದೆ. (ಕವಿಹಂ. ಶಾ.ಸಂ. ೯. ಬಾಗಲಕೋಟೆ–೧೮)

ಕಟಗೇರಿ ಗ್ರಾಮದ ಕೆ.ವಿ.ವಿ.ಎಸ್. ಹೈಸ್ಕೂಲ್ ಮುಂದೆ ನಿಲ್ಲಿಸಿರುವ ವೀರಗಲ್ಲು ತ್ರುಟಿತವಾಗಿದೆ. ಸುಂದರವಾದ ಶಿಲ್ಪವುಳ್ಳ ಮೂರು ಹಂತದ ಈ ವೀರಗಲ್ಲು ಕೆಳಭಾಗದ ಪಟ್ಟಿಯಲ್ಲಿ ಮಾತ್ರ ಪಾಠವನ್ನು ಹೊಂದಿದೆ. ಇದು ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲಾಗಿದೆ. ತಳಾರ ಚಾವೆಯನಾಯ್ಕನ ಮಗ ಕಲ್ಲ, ಅವನ ಅಣ್ಣನ ಮಗ ಸಂಕಯೆಖ್ಯರು ಬಾದಾಮಿ ದಾರಿಯಲ್ಲಿ ಕಡಕೆರೆಯ ಮಹಾಜನರ ಕೋರಿಕೆಯಂತೆ ಕಳ್ಳರೊಡನೆ ಕಾದಿ ಸತ್ತಾಗ ಅವರ ಧೈರ್ಯವನ್ನು ಮೆಚ್ಚಿದ ಮಹಾಜನರು ಭೂದಾನ ನೀಡಿದಂತೆ ಉಲ್ಲೇಖವಿದೆ. ಕಡಕೆರೆಯನ್ನು ಅನಾದಿ ಅಗ್ರಹಾರ ಬಣಂಜದ ಆದಿ ಪಟ್ಟಣವೆಂದು ಕರೆಯಲಾಗಿದೆ. (ಕವಿಹಂ. ಶಾ.ಸಂ. ೯. ಬಾಗಲಕೋಟೆ-೩೩)

ಅರ್ಜುಣಗಿ ಹನುಮಂತ ಗುಡಿ ಬಳಿಯಿರುವ ವೀರಗಲ್ಲು ತ್ರುಟಿತವಾಗಿದೆ. ಶಾಸನವು ಕಲಚುರ್ಯ ಚಕ್ರವರ್ತಿ ಬಿಜ್ಜಳದೇವನ ಅವಧಿಯದಾಗಿದ್ದು, ಅರ್ಜುನಗಿಯ ಅಮ್ಮಗಾವುಂಡನನ್ನು ತರ್ದ್ದವಾಡಿ ಸಾವಿರದ ಯಿಸರಸ ಮತ್ತು ನಾಲವತ್ತು ಬಾಡದ ಹೆಗ್ಗಡೆಯನ್ನು ಹೆಸರಿಸಿದೆ. ಈ ಯಿಸರಸನನ್ನು ಮಹಾಮಂಡಳೇಶ್ವರ ಎಂದೂ ಹೇಳಿದೆ. ಈ ಶಾಸನ ಕಾಲ ಕ್ರಿ.ಶ.ಸುಮಾರು ೧೨ನೆಯ ಶತಮಾನ. (ಕವಿಹಂ. ಶಾ.ಸಂ. ೧೦. ಇಂಡಿ-೭)

ಅರ್ಜುಣಗಿ ಹನುಮಂತ ಗುಡಿಯ ಬಳಿಯಿರುವ ವೀರಗಲ್ಲು ಶಾಸನ ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿದೆ. ಈ ಶಾಸನದಲ್ಲಿ ರನ್ನ ವೀರನೆಂಬುವವನು ಒಡೆಯನಿಗೆ ಕೋಟೆಯಂತೆ, ತಂದೆಗೆ ಉಗ್ರಾಣದಂತೆ ಎಂಬ ಅರ್ಥ ಬರುವ ವಿಷಯವನ್ನು ಹೊಂದಿದೆ. (ಕವಿಹಂ. ಶಾ.ಸಂ. ೧೦. ಇಂಡಿ-೮)

ಯಾರಗಲ್ ಹನುಮಾನ್ ದೇವಾಲಯದಲ್ಲಿ ನಿಲ್ಲಿಸಿದ ವೀರಗಲ್ಲು ತ್ರುಟಿತಗೊಂಡಿದೆ. ಶಾಸನ ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿದೆ. ಶಾಸನ ಹೆಚ್ಚಿನ ಭಾಗ ಹಾಳಾಗಿದ್ದು, ವ್ಯಕ್ತಿಯೋರ್ವನ ಮರಣವನ್ನು ಉಲ್ಲೇಖಿಸಿದೆ. ಶಾಸನದಲ್ಲಿ ಕನ್ನ ಪೆರ್ಗ್ಗಡೆ ಹೆಸರುಗಳಿವೆ. (ಕವಿಹಂ. ಶಾ.ಸಂ. ೧೦. ಸಿಂದಗಿ-೪.

ಕೋಳೂರು ಗ್ರಾಮದ ಬಿಲ್ವವೃಕ್ಷದ ಕೆಳಗೆ ನಿಲ್ಲಿಸಿರುವ ಕಲ್ಯಾಣ ಚಾಲುಕ್ಯರ ಕಾಲದ್ದು. ರಾಯ ರಾಜಧಾನಿ ಕೋಳೂರು ಮುಮ್ಮರಿದಂಡಗಳು ಎಂಟು ಹಿಟ್ಟು. ಪಂಚಮಠದವರು ಹಾಗೂ ಮಹಾಮಂಡಳೇಶ್ವರ ವೀರ ಹೆಮ್ಮಡಿ ದೇವರಸನು ಸೇರಿ ನಾಗಯ್ಯನ ಮಗ ರಾವೆಯ ಎಂಬುವವನಿಗೆ ಮನೆಯನ್ನು ವೀರ ವೃತ್ತಿಯಾಗಿ ಕೊಟ್ಟ ವಿಷಯವನ್ನು ಈ ವೀರಗಲ್ಲು ಹೇಳುತ್ತದೆ. (ಕವಿಹಂ. ಶಾ.ಸಂ. ೧೦. ಮುದ್ದೇಬಿಹಾಳ-೧೧)

ಹಂದರಗಲ್ ಗ್ರಾಮದ ಹಾಳು ಸಂಗಮೇಶ್ವರ ದೇವಾಲಯದ ಬಳಿ ಒಂದು ವೀರಗಲ್ಲನ್ನು ನಿಲ್ಲಿಸಲಾಗಿದೆ. ಬಹು ತ್ರುಟಿತವಾಗಿರುವ ವೀರಗಲ್ಲಾಗಿದ್ದು, ವೀರನೊಬ್ಬನ ಹೋರಾಟದಲ್ಲಿ ಮರಣವನ್ನಪ್ಪಿದ ವಿಷಯವನ್ನು ಹೇಳುತ್ತಿರುವಂತೆ ತೋರುತ್ತದೆ. ತಂತ್ರಪಾಳ ಕರ್ಣನನ್ನು ಉಲ್ಲೇಖಿಸುತ್ತದೆ.

ಈ ವೀರಗಲ್ಲು ಶಾಸನದ ಕಾಲ. ಕ್ರಿ.ಶ. ಸುಮಾರು ೧೨ನೆಯ ಶತಮಾನ. (ಕವಿಹಂ. ಶಾ. ಸಂ.೧೦. ಮುದ್ದೇಬಿಹಾಳ-೧೯)

ದೇವಾಲಯದಲ್ಲಿರುವ ಇನ್ನೊಂದು ವೀರಗಲ್ಲು ೧೨ನೆಯ ಶತಮಾನದ ಲಿಪಿಯಲ್ಲಿರುವ ವೀರಗಲ್ಲಿನಲ್ಲಿ ಶ್ರೀ ಸ್ವಯಂಭು ತೊಂಡೇಶ್ವರ ದೇವರ ಮಠದಾಚಾರ್ಯ ಸರ್ವೇಶ್ವರ ದೇವನನ್ನು ಉಲ್ಲೇಖಿಸುತ್ತದೆ. (ಕವಿಹಂ. ಶಾ. (ಸಂ) ೧೦. ಮುದ್ದೇಬಿಹಾಳ-೧೭)

ಬೈಚಬಾಳ ಗ್ರಾಮದ ಗೊಂಬಿಯವರ ಮನೆ ಬಚ್ಚಲಿನ ಮೋರಿಗೆ ಆನಿಸಿಟ್ಟ ಈ ವೀರಗಲ್ಲಿನಲ್ಲಿ ಬಿಲ್ಲು, ಬಾಣ ಹಿಡಿದ ವೀರನ ಚಿತ್ರವಿದೆ. ಇದರ ಕಾಲ ಕ್ರಿ.ಶ. ೧೨ನೆಯ ಶತಮಾನ. ವೀರನಿರಬಹುದಾದ ಬೈಸಂಬಾಳ ಕೆಜಿಯರ ಲೋಕನೆಂಬುವನಿಗೆ ಬಿಟ್ಟ ಭೂದತ್ತಿಯನ್ನು ತಿಳಿಸುವಂತಿದೆ. (ಸುರಪುರ ತಾಲೂಕಿನ ಶಾಸನಗಳು (ಸಂ), ಹನುಮಾಕ್ಷಿ ಗೋಗಿ, ೧೯೯೫, ಪು. ೧೦೨)

ಕೋಳಿವಾಡ ಕರಿಮಲ್ಲೇಶ್ವರ ದೇವಾಲಯದ ಹೊರಗೋಡೆಯಲ್ಲಿ ನಿಲ್ಲಿಸಿರುವ ಕ್ರಿ.ಶ. ೧೨ನೆಯ ಶತಮಾನದ ಅಪ್ರಕಟಿತ ವೀರಗಲ್ಲು ಶಾಸನ ಇದೆ. ಈ ವೀರಗಲ್ಲು ನಾಲ್ಕು ಹಂತಗಳಿಂದ ಕೂಡಿದ್ದು. ಮೇಲಿನ ಸ್ತರದಲ್ಲಿ ಕೈಮುಗಿದು ಕುಳಿತ ವೀರ ಪೂಜಾರಿ ಶಿವಲಿಂಗ ಮತ್ತು ಕುಳಿತ ನಂದಿಗಳಿವೆ. ಅದರ ಕೆಳಗಿನ ಸ್ತರದಲ್ಲಿ ಬಿಲ್ಲು ಬಾಣಗಳನ್ನು ಹಿಡಿದು ವೀರರು ಹೋರಾಡುತ್ತಿದ್ದಾರೆ. ಮೂರನೆಯ ಸ್ತರದಲ್ಲಿ ವೀರನೊಬ್ಬ ವಿಮಾನದಲ್ಲಿ ಕುಳಿತಿದ್ದು, ಒಬ್ಬೊಬ್ಬ ಅಪ್ಸರೆಯರು ಚಾಮರಧಾರಿಗಳಾಗಿ ವಿಮಾನವನ್ನು ಹಿಡಿದು ಹಾರುತ್ತಿದ್ದಾರೆ. ನಾಲ್ಕನೆಯ ಸ್ತರದಲ್ಲಿ ೧೨ನೆಯ ಶತಮಾನದ ಅಕ್ಷರಗಳು ೪ ಸಾಲುಗಳ ಶಾಸನವಿದೆ. (ಹುಬ್ಬಳ್ಳಿ ತಾಲೂಕಿನ ಶಾಸನಗಳು. (ಸಂ), ಹನುಮಾಕ್ಷಿ ಗೋಗಿ, ೧೯೯೫, ಪು. ೬೯)

ವರೂರು ಹನುಮಾನ್ ದೇವರ ಗುಡಿಯ ಮುಂದೆ ನಿಲ್ಲಿಸಿದ ವೀರಗಲ್ಲು ಶಾಸನ ಕ್ರಿ.ಶ. ೧೨ನೆಯ ಶತಮಾನದಾಗಿದೆ. ನೂಲ್ವಿಯ ಅಧಿಕಾರಿಯೂ ಮಾಂಡಳಿಕನೂ ಆದ ಬಯಿರ ಖಂಡೇರಾಯ ಸಂಗರಸರು ಬೆಳಗಲೆಯ ಮಾಂಡಳಿಕ ಹಿರುಗಿ ದೇವನೊಂದಿಗೆ ನಡೆಸಿದ ಕಾಳಗದಲ್ಲಿ ಆದ ಬಯಿರ ಖಂಡೇರಾಯ ಸಂಗರಸರ ಸಿಖೆಯ ಮಗ ಎಲೆವಳೆಯ ಬಿಜ್ಜಯ ಸಂಕಯ್ಯನವರು ಸತ್ತುದನ್ನು ಮತ್ತು ಬಹುಶಃ ಆತನ ಹೆಂಡತಿ ವೀರಗಲ್ಲು ನಿಲ್ಲಿಸಿದುದನ್ನು ತಿಳಿಸುತ್ತದೆ. 'ಸಿಖಿಯ ಮಗ' ಎನ್ನುವ ವಿಶಿಷ್ಟ ಪದ ಇಲ್ಲಿ ಬಳಕೆಗೊಂಡಿದೆ.

ಕ್ರಿ.ಶ. ೧೨೦೯ರ ಚಿಗಟೇರಿ ಶಾಸನದಲ್ಲಿ ಹೊಯ್ಸಳ ವೀರ ಬಲ್ಲಾಳನ ಕಾಲದಲ್ಲಿ ಚಂಡುರೊಡಯ ಪೊಂಮಯ್ಯ ಯುದ್ಧದಲ್ಲಿ ಮಡಿದನೆಂದು ಹೇಳಿದೆ. (ಕವಿಹಂ. ಶಾ.ಸಂ.೧. ಹರಪನಹಳ್ಳಿ, ಶಾ.ಸಂ, ೨೦೫). ಕಾಲ ಉಲ್ಲೇಖವಿಲ್ಲದ ಶಾಸನವೊಂದರಲ್ಲಿ ನಿತ್ಯವರ್ಷನ ಮಹಾಸಾವಂತ ಬಿಜ್ಜನು ಮಾಸಿಮಾಡಿ ೧೪೦ ಕೋಗಳಿ ೫೦೦ ಆಳುತ್ತಿದ್ದಾಗ ಕದಂಬ ವಂಶದ ನಾಕತೊಕ್ಕನ ಮಗನು ಅಯ್ಯಪ ದೇವನ ಮಗ ಅಣ್ಣಿಗ ದೇವನು ಪಡುಗಲ್ಲನು ಮುತ್ತಿದಾಗ ಹೋರಾಡಿ ಸತ್ತ ವಿಷಯವಿದೆ.

ಕುಂದಗೋಳ ತಾಲೂಕಿನ ಕುಯಿಬಾಳ ಗ್ರಾಮದ ಚಾವಡಿಯ ಹತ್ತಿರ ಕ್ರಿ.ಶ. ೧೨೨೩ರ ವೀರಗಲ್ಲು ಶಾಸನವಿದೆ. ಈ ಶಾಸನದಲ್ಲಿ ಶ್ರೀ ಸಿಂಹಣದೇವ ವರುಷದ ೧೮ನೇಯ ಸ್ವಭಾ ಸಂವತ್ಸರದ ಮಾರ್ಗಶಿರ ಬಹುಳ ಅಮವಾಸ್ಯೆ ಆದಿವಾರ ಎಂದಿದೆ. ಇದು ಕ್ರಿ.ಶ. ೧೨೨೩ ಡಿಸೆಂಬರ್ ೨೩ಕ್ಕೆ ಸರಿ ಹೊಂದುತ್ತದೆ. ಯಾದವ ನಾರಾಯಣ ಪ್ರತಾಪ ಚಕ್ರವರ್ತಿ ಸಿಂಹಣ ದೇವನ ಉಲ್ಲೇಖವಿದೆ. ಈತನು ಆಳ್ವಿಕೆ ನಡೆಸುತ್ತಿರಲು ನಡೆದ ಯುದ್ಧದಲ್ಲಿ ಯಾರೋ (ಅಸ್ಪಷ್ಟ) ವೀರ ಪುರುಷನು ವೀರ ಮರಣವನ್ನು ಹೊಂದಿರುವ ವಿಷಯವನ್ನು ತಿಳಿಸುತ್ತದೆ. (ಎಸ್.ಐ.ಐ. ೨೦. ಶಾ.ಸಂ. ೧೯೫)

ಧಾರವಾಡ ತಾಲೂಕಿನ ಅಮೀನಭಾವಿ ಕಲ್ಮೇಶ್ವರ ದೇವಾಲಯದ (ಕೆ.ಆರ್.ಐ)ಲ್ಲಿ ಕ್ರಿ.ಶ. ೧೨೪೩ರ ವೀರಗಲ್ಲು ಶಾಸನವಿತ್ತು. ಪ್ರಸ್ತುತ ಈ ಶಾಸನ ಕರ್ನಾಟಕ ವಿಶ್ವವಿದ್ಯಾಲಯ ಇತಿಹಾಸ ಮತ್ತು ಪ್ರಾಚ್ಯವಸ್ತು ವಿಭಾಗದಲ್ಲಿದೆ. ಶಾಸನದಲ್ಲಿ ಕಾಲವನ್ನು ವೀರ ತ್ರಿಭುವನ ಮಲ್ಲಿ ದೇವರಸ ೧೮ನೆಯ ಶೋಭ ಕೃತ ಸಂವತ್ಸರ ಚೈಯಿತ್ರ ಸು. ೧೧ ಮಂಗಳವಾರ ಎಂದಿದ್ದು, ಇದು ಕ್ರಿ.ಶ. ೧೨೪೩ ಮಾರ್ಚ್ ೩೧ ಮಂಗಳವಾರಕ್ಕೆ ಸರಿ ಹೊಂದುತ್ತದೆ. ಶ್ರೀ ಕದಂಬ ಶ್ರೀ ಸಿವಚಿತ್ತ ವೀರ ತ್ರಿಭುವನ ಮಲ್ಲಿದೇವನ ಆಳ್ವಿಕೆಯ ಕಾಲದಲ್ಲಿ ಪರಮ ವಿಶ್ವಾಸಿಯೂ ಬಂಧುಜನ ಚಿಂತಾಮಣಿಯೂ ತ್ರಿಭುವನ ಮಲ್ಲಿದೇವರನ ಅನುಚರನೂ ಶ್ರೀ ಮೂಲಸ್ಥಾನ ದೇವರ ದಿವ್ಯ ಪಾದಾರಾಧಕನೂ ಆದ ಮೂಗುಡ ಹಿಟ್ಟೆಯನಾಯ್ಕನು ಅರಸರ ಸಲುವಾಗಿ ಯುದ್ಧದಲ್ಲಿ ಹೋರಾಡಿ ಸ್ವರ್ಗಸ್ಥನಾದ ವಿಷಯವಿದೆ. (ಎಸ್.ಐ.ಐ. ೧೫. ಶಾ.ಸಂ. ೨೩೧)

ಕಲಘಟಗಿ ತಾಲೂಕಿನ ತಂಬೂರು ಗ್ರಾಮದ ಊರ ಅಗಸಿಯ ಬಳಿಯಿರುವ ಕ್ರಿ.ಶ. ೧೨೫೨ರ ವೀರಗಲ್ಲು ಶಾಸನದಲ್ಲಿ ಸಾತೇನಹಳ್ಳಿಯ ಮುತ್ತಿಗೆಯಲ್ಲಿ ಮಣಿಗೆರೆಯ ಠಾಣೆಯ ನಾಯಕನ ನೆಚ್ಚಿನ ಆಳು ಹಿರಿಯ ರಾಮನ ಮರಣ ಉಲ್ಲೇಖವಿದೆ. (ದ ಕದಂಬಾಸ್ ಆಫ್ ಗೋವಾ ಇನ್ಸ್‌ಕ್ರಿಪ್ಸನ್ಸ್ ಗುರುವ ಆರ್.ಎನ್. (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ೧೯೬೯ ಪು. ೭೦೦)

ಹಲುವಾಗಿಲು ಕಲ್ಲೇಶ್ವರ ದೇವಾಲಯದಲ್ಲಿರುವ ಕ್ರಿ.ಶ. ೧೨೮೭ರ ವೀರಗಲ್ಲು ಶಾಸನದಲ್ಲಿ ಸೆಜಿಯ ಮಲ್ಲಯ್ಯನು ಹೋರಾಡಿ ಮಡಿದ ಉಲ್ಲೇಖವಿದೆ. (ಕವಿಹಂ. ಶಾ.ಸಂ. ೧. ಹರಪನಹಳ್ಳಿ. ೬೮)

ಅಲಗಿಲವಾಡಿ ಕಲ್ಲೇಶ್ವರ ದೇವಾಲಯ ಬಳಿ ಇರುವ ಕ್ರಿ.ಶ. ೧೨೮೭ರ ವೀರಗಲ್ಲು ಶಾಸನದಲ್ಲಿ ಅರಗಿಲವಾಡದ ಉರಳಿವಿನಲ್ಲಿ ಹೊಳಲಕೆರೆಯ ಬಣಜಿಗ ಸಿಂಗಯ್ಯನ ತಮ್ಮನಾದ ಹಂಪಸೆಟ್ಟಿ ಹೋರಾಡಿ ಮಡಿದ ಉಲ್ಲೇಖವಿದೆ. (ಕವಿಹಂ. ಶಾ.ಸಂ. ೧. ಹರಪ್ಪನಹಳ್ಳಿ. ೫೦)

ನವಲಗುಂದ ತಾಲೂಕಿನ ಹಾಳು ಕುಸುಗಲ್ಲ ಗ್ರಾಮದ ಹನುಮಂತ ದೇವಾಲಯದ ಬಳಿಯುದೆ ವೀರಗಲ್ಲು ಶಾಸನ. ಈ ಶಾಸನದಲ್ಲಿ ಕಾಲವನ್ನು ಶಕವರ್ಷ ೧೨೯೨ನೆಯ

ರವಿವಾರದಲು ಸೋಮ ಎಂದು ಉಲ್ಲೇಖಿಸಿದ್ದು, ಮಾಸನ ಉಲ್ಲೇಖವಿರುವುದಿಲ್ಲ. ಇದರ ಕಾಲ ಕ್ರಿ.ಶ.೧೩೭೧ ಪೂರ್ವೋಕ್ತ ದಿನದಂದು ಒಬ್ಬ ವೀರನು ಹೋರಾಡಿ ಮರಣ ಹೊಂದಿದ ವಿವರವಿದೆ. (ಎಸ್.ಐ.ಐ. ೧೫. ಶಾ.ಸಂ. ೬೫೦)

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಕಡೇಬಾಗಿಲು ಗ್ರಾಮದಲ್ಲಿ ಕ್ರಿ.ಶ. ೧೨ನೆಯ ಶತಮಾನದ ಅಪ್ರಕಟಿತ ಶಾಸನ ಸಹಿತ ವೀರಗಲ್ಲು ಕಂಡುಬಂದಿದೆ. ಈ ವೀರಗಲ್ಲು ನಾಲ್ಕು ಅಡಿ ಎತ್ತರದ ಶಾಸನವಿರುವ ವೀರಗಲ್ಲು. ಇದರಲ್ಲಿ ಮೂರು ಹಂತಗಳಿದ್ದು ಕೆಳಭಾಗದ ಮೊದಲ ಹಂತವು ದೊಡ್ಡದಾಗಿದ್ದು ಮೇಲೆ ಹೋದಂತೆ ಕಿರಿದಾಗುತ್ತಾ ಸಾಗುತ್ತದೆ. ಮೂರು ಹಂತಗಳಲ್ಲಿ ನಿರೂಪಣಾತ್ಮಕ ಉಬ್ಬು ಶಿಲ್ಪಿಗಳಿದ್ದು, ವೀರಗಲ್ಲಿನ ಕೆಳಹಂತದಲ್ಲಿ ಇಬ್ಬರು ವೀರರು ಆಯುಧ ಪಾಣಿಗಳಾಗಿ ಹೋರಾಡುತ್ತಿರುವಂತೆ ಮತ್ತು ಇನ್ನೊರ್ವನು ಕೆಳಗೆ ಬಿದ್ದಿರುವಂತೆ ತೋರಿಸಲಾಗಿದೆ. ಓರ್ವ ವೀರನ ಪಕ್ಕದಲ್ಲಿ ಸ್ತ್ರೀಯ ಶಿಲ್ಪವನ್ನು ತೋರಲಾಗಿದೆ. ಹೋರಾಡುತ್ತಿರುವ ವ್ಯಕ್ತಿಗಳಿಬ್ಬರಲ್ಲಿ ಎಡಬದಿಯಲ್ಲಿ ತೋರಲಾಗಿರುವ ವ್ಯಕ್ತಿಯ ಬಿಲ್ಲನ್ನು ಎಡಗೈಯಲ್ಲಿ ಹಿಡಿದುಕೊಂಡಿದ್ದಾನೆ. ಬಲಗೈಯಲ್ಲಿ ಬಾಣವನ್ನು ಹೂಡಲು ಎತ್ತಿರುವಂತೆ ತೋರಲಾಗಿದೆ. ಆ ವ್ಯಕ್ತಿಯು ಮಂಡಿಯವರೆಗೆ ಧೋತ್ರವನ್ನು ಧರಿಸಿದ್ದಾನೆ. ಮುಂಭಾಗದಲ್ಲಿ ಧೋತ್ರದ ನೆರಿಗೆಗಳು ಇಳಿ ಬಿದ್ದಿರುವಂತೆ ಕಲಾತ್ಮಕವಾಗಿ ಹಾಗೂ ಸ್ಪಷ್ಟವಾಗಿ ತೋರಲಾಗಿದೆ. ವೀರನ ಕಾಲಿಗೆ ಕಡಗವನ್ನು ಧರಿಸಿದ್ದಾನೆ. ಈ ವೀರನ ವೇಷಭೂಷಣ, ಆಭರಣ ಮತ್ತು ಅವನ ಹಿಡಿದಿರುವ ಆಯುಧಗಳಿಂದ ಆ ವ್ಯಕ್ತಿಯ ರಕ್ಷಣಾ ವ್ಯವಸ್ಥೆಗೆ ಸಂಬಂಧಿಸಿದ ವ್ಯಕ್ತಿಯಂತೆ ಕಂಡುಬರುತ್ತಾನೆ.

ಎರಡನೆಯ ಹಂತದಲ್ಲಿ 'ಅರವಯ ಮಡಿದು' ಎಂಬ ಶಾಸನವಿದೆ. ಇದರಲ್ಲಿ ಮಡಿದ ವ್ಯಕ್ತಿಯನ್ನು ದೇವಲೋಕದ ಸುಂದರಿಯರು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವುದನ್ನು ತೋರಿಸಲಾಗಿದೆ. ಮೂರನೆ ಹಂತದಲ್ಲಿ ವ್ಯಕ್ತಿಯು ಶಿವಲೋಕವನ್ನು ತಲುಪಿ ಅಲ್ಲಿನ ಶಿವಸ್ವರೂಪಿ ಲಿಂಗವನ್ನು ಪೂಜಿಸುತ್ತಾ ಕುಳಿತಿದ್ದಾನೆ. ಈ ವೀರಗಲ್ಲಿನಲ್ಲಿರುವ ಶಾಸನವು ಮಡಿದ ವ್ಯಕ್ತಿಯ ಹೆಸರು (ಅರವಯ) ಮತ್ತು (ಇರಿದು) ಕೊಂದ ವ್ಯಕ್ತಿಯ ಹೆಸರು ಶ್ರೀ ಬಲರಾಚಪ ಎಂದು ಉಲ್ಲೇಖಿಸಿದೆ. (ಶಾಸನ ಅಧ್ಯಯನ (ಸಂ) ಪರಮಶಿವಮೂರ್ತಿ ಡಿ.ವಿ. ಸಂಪುಟ. ೫. ಸಂಚಿಕೆ.೧-೨., ೨೦೦೮. ಪು.೨೮).

ಐಹೊಳೆಯ ವಸ್ತುಸಂಗ್ರಹಾಲಯದಲ್ಲಿನ ವೀರಗಲ್ಲಿನರುವ ಯುದ್ಧ ದೃಶ್ಯದಲ್ಲಿ ಕುದುರೆ ಸವಾರಿ ಮಾಡುವ ವೀರನು ವೈರಿ ಪಡೆಯನ್ನು ತಡೆದು ನಿಂತಿದ್ದು ಮತ್ತು ಸ್ವರ್ಗಾರೋಹಣದಲ್ಲಿ ಈತನನ್ನು ವಿಮಾನದಲ್ಲಿ ಕೂಡಿಸಿ ಅಪ್ಸರೆಯರು ಇದನ್ನು ಹೊತ್ತು ಬದಿಗೆ ಒಯ್ಯುವುದು ಮೆರವಣಿಗೆಯಲ್ಲಿ ನೃತ್ಯ-ಸಂಗೀತ ಮೇಳದವರು ಪಾಲ್ಗೊಂಡಿರುವುದನ್ನು ವಿಶಿಷ್ಟವಾಗಿ ಚಿತ್ರಿಸಲಾಗಿದೆ. ಮೇಲಿನ ಫಲಕದಲ್ಲಿ ಶಿವಲಿಂಗದ ಮುಂದೆ ವೀರಬಲಕ್ಕೆ ಯತಿ ನಿಂತಿದ್ದು ಪಕ್ಕದಲ್ಲಿ ಕುಳಿತ ನಂದಿಯಿದೆ. ಈ ವೀರಗಲ್ಲು ಕಾಲ ಕ್ರಿ.ಶ.೧೨ನೆಯ ಶತಮಾನವಾಗಿದೆ. (ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ್ ಆರ್., ೨೦೧೧ ಪುಟ-೩೧೮)

ಐಹೊಳೆಯ ಮ್ಯೂಜಿಯಂನ ಮತ್ತೊಂದು ವೀರಗಲ್ಲಿನಲ್ಲಿ ಯತಿ, ಕುಳಿತ ನಂದಿ ಬದಿಗೆ ಶಿವಲಿಂಗಕ್ಕೆ ಮುಖಮಾಡಿ ನಿಂತಿದ್ದಾನೆ. ಸ್ವರ್ಗಾರೋಹಣದಲ್ಲಿ ಮಡಿದ ವೀರ ವಿಮಾನದಲ್ಲಿ ಕುಳಿತಿದ್ದು ಬದಿಗೆ ವಿಮಾನ ಹಿಡಿದು ನಿಂತ ಇಬ್ಬರು ಅಪ್ಸರೆಯರ ಜೊತೆ ಇನ್ನಿಬ್ಬರು ನಿಂತಿರುವರು. ಕೆಳಗಿನ ಯುದ್ಧ ದೃಶ್ಯದಲ್ಲೂ ವೀರನು ವೈರಿಗಳ ಅಶ್ವಪಡೆಯನ್ನು ತನ್ನ ಬಿಲ್ಲನ್ನು ಮುಂಡಕ್ಕಿಟ್ಟು ಅವರನ್ನು ತಡೆದು ನಿಂತಿದ್ದಾನೆ. ಇದು ಕ್ರಿ.ಶ. ೧೨ನೇ ಶತಮಾನದಾಗಿದೆ. (ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ್ ಆರ್., ೨೦೧೧ ಪುಟ-೩೧೮)

ಐಹೊಳೆಯ ತುಂಡಾದ ಮತ್ತೊಂದು ವೀರಗಲ್ಲಿನಲ್ಲಿ ಸ್ವರ್ಗಾರೋಹಣದಲ್ಲಿ ಮಡಿದ ವೀರ ವಿಮಾನದಲ್ಲಿ ಕುಳಿತಿದ್ದು ಅದನ್ನು ಒಯ್ಯುವ ಅಪ್ಸರೆಯರಿದ್ದುದು ಕೆಳಗಡೆ ಮತ್ತು ಬದಿಗಳಲ್ಲಿ ಕಾಣುತ್ತದೆ. ಬಲಗಡೆಗೆ ಒಬ್ಬ ವ್ಯಕ್ತಿ ನೈವೇದ್ಯ ಮಾಡಲು ಎದುರಿಗೆ ನಿಂತಿರುವುದು ಗಮನೀಯ. ಸ್ವರ್ಗ ದೃಶ್ಯದಲ್ಲಿ ಎಡಕ್ಕೆ ಶಿವಲಿಂಗ ಮತ್ತು ಕುಳಿತ ವೀರನ ನಡುವೆ ಆರತಿ ಗಂಟೆ ಹಿಡಿದು ಶಿವಲಿಂಗವನ್ನು ಆರಾಧಿಸುವ ಯತಿ ನಿಂತಿದ್ದಾನೆ. ಶಿವಲಿಂಗದ ಮೇಲೆ ಛತ್ರಿಯಿದೆ. ಬಲಕ್ಕೆ ಕೆಳಗಡೆ ಕುಳಿತ ನಂದಿ ಮತ್ತು ಹಾರ ಹಿಡಿದಿರುವ ಕುಜ್ಜುಗಂಧರ್ವನಿದ್ದಾನೆ. ಇದರ ಮೇಲೆ ದ್ರಾವಿಡ ಮಾದರಿ ಶಿಖರವಿದೆ. ಇದು ಕ್ರಿ.ಶ. ಸುಮಾರು ೧೨ನೇ ಶತಮಾನ (ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ್ ಆರ್., ೨೦೧೧ ಪುಟ-೩೧೮)

ಮುಗದ ಗ್ರಾಮದ ಹೆಗ್ಗೆರೆಯ ಉತ್ತರ ದಿಕ್ಕಿನಲ್ಲಿರುವ ದಿಬ್ಬದ ಮೇಲಿನ ಈಶ್ವರ ಗುಡಿಯಲ್ಲಿ ಈ ಶಾಸನವಿದೆ ಒಡೆದುಹೋದ ವೀರಗಲ್ಲಿನ ಮೇಲ್ಭಾಗವಿದ್ದು, ಇದು ಸುಮಾರು ೧೨ನೆಯ ಶತಮಾನದ್ದಾಗಿದೆ. ಈ ಶಾಸನದಲ್ಲಿ ೧. ಜಿತೇನ ಲಭ್ಯತೇ ಲಕ್ಷ್ಮೀ ಮಿತ್ರೇನಾಪಿ ಸುರಾಗನಾ ಕ್ಷಣ ವಿಧ್ವಂಸಿ. ೨. ನಿಕಾಯೇ ಕಾ ಚಿನ್ತಾ ಮರಣೇ ರಣೇ. ಮುಗುಂದ ಎಂಬ ವಿಷಯದ ಕುರಿತು ಉಲ್ಲೇಖವಿದೆ. (ಧಾರವಾಡ ತಾಲೂಕಿನ ಶಾಸನಗಳು (ಸಂ) ಕಲಬುರ್ಗಿ ಎಂ.ಎಂ., ೧೯೭೬, ಪುಟ-೧೩೭).

ಗರಗ ಗ್ರಾಮದ ಅಗಸಿ ಓಣಿಯ ಗರಡಿ ಮನೆಯ ಹತ್ತಿರವಿರುವ ಈ ವೀರಗಲ್ಲು ಬಹಳ ತ್ರುಟಿತವಾಗಿದೆ. ಗೋವೆಯ ಕದಂಬ ವಂಶದ ಮೂರನೆಯ ಜಯಕೇಶಿಯನ್ನು ಉಲ್ಲೇಖಿಸುವ ಈ ಶಾಸನದಲ್ಲಿ ಬೆಳೂಟ್ಟಿಗೆ (ಗರಗ) ಗ್ರಾಮದ ನಿರ್ದೇಶನವು ಬರುತ್ತದೆ. ಈ ಶಾಸನದ ಕಾಲ ಕ್ರಿ.ಶ. ೧೨೦೪ ಆಗಿದೆ. (ಧಾರವಾಡ ತಾಲೂಕಿನ ಶಾಸನಗಳು, (ಸಂ) ಕಲಬುರ್ಗಿ ಎಂ.ಎಂ., ೧೯೭೬, ಪುಟ-೩೭)

ಅಮೀನಬಾವಿ ಕಲ್ಲೇಶ್ವರ ದೇವಾಲಯದ ಮುಂದೆಯಿದ್ದ ಈ ವೀರಗಲ್ಲಿನ ಎರಡು ಪಟ್ಟಿಗಳ ಮೇಲೆ ಬರೆವಣಿಗೆಯಿದೆ. ಈ ಶಾಸನದಲ್ಲಿ ಅರಸನ ಹೆಸರು "ಶ್ರೀ ಕದಂಬ ಶ್ರೀ ಸಿವಚಿತ್ತ ವೀರ ತ್ರಿಭುವನ ಮಲ್ಲದೇವ" ಎಂದು ಸ್ಪಷ್ಟವಾಗಿ ಬಂದಿದೆ. ಈತನು ಮೂರನೆಯ ಜಯಕೇಶಿಯ

ಎರಡನೆಯ ಮಗ. ಅಸ್ಪಷ್ಟವಾಗಿ ಕಾಣುವ ವೀರನ ಹೆಸರು 'ಮಾಗುಡದ ಹಿಟ್ಟೆಯನಾಯ್ಕ' ನೆಂದಿರಬಹುದು. ಮಹಾಪಸಾಯಿತ ಕಾದಂಬರಿಯ ತ್ರಿಭುವನ ಮಲ್ಲದೇವರಾಜ್ಯಭರಾಭಾರಧವುರೆಯ ದಿಕ್ಕುಂಜರ ತಂತ್ರಾಧಿಷ್ಠಾಯಕ ಮುಂತಾದ ಬಿರುದುಗಳಿದ್ದು, ಇವನ ವೀರಮರಣ ಈ ಶಾಸನದ ವಿಷಯ ಶಾಸನದ ಕಾಲ ಕ್ರಿ.ಶ. ೧೨೪೩. (ಧಾರವಾಡ ತಾಲೂಕಿನ ಶಾಸನಗಳು, (ಸಂ) ಕಲಬುರ್ಗಿ ಎಂ.ಎಂ., ೧೯೭೬, ಪುಟ–೧೬)

೧೨ನೇ ಶತಮಾನದ ಲಕ್ಷ್ಮೇಶ್ವರ ಶಾಸನವು "(ದಿ)ಲ್ಲಿಯ(ಕೆ)ಳಿದಡೆ ಕಂಣಿಕೆ (ಸಿಂಹೇಸಟ) ಬಿತ್ತದೆಂದು ಮಿಕ್ಕೆಲ್ಲನ್ರು ಪಾ(ಲ)ರೆ(೦) ಮೃತಲೆಯಿಂ ನೋರ್ಪ್ಪನು ಸತ್ತುಬೆ(ಂದರಾ) ಬಲಿದ ಕಂಪಿಲಂ ಸಿಡಿಲಬೊ(೦)ಮ್ಮನು ಸತ್ತಡೆ ಅಕ್ಕಟೆಂದಯಿತೆಲ್ಲರು ಚಿಂತಿಸುತ್ತಿಹುದು ಯೇನರಿದೋಧವಳಂಭೀಮನಾ" ಎಂದು ಕಂಪಿಲ ಮತ್ತು ಸಿಡಲ ಬೊಮ್ಮನು ಯುದ್ಧದಲ್ಲಿ ಮಡಿದುದ್ದನ್ನು ಕೇಳಿ ಎಲ್ಲಾ ಜನರು ಚಿಂತಿಸುತ್ತಿದ್ದರು ಎಂಬುದಾಗಿ ಹೇಳಲಾಗಿದೆ. ಮತ್ತೊಂದು ಶಾಸನದಲ್ಲಿ " ಸಸ್ತಿ ಶ್ರೀಮನು ಮಹಾಮಂಡಳೇಶ್ವರ ಹುಲಿಗೆಜೆನಾಡ ಮಂನೆಯ ಬೊಪ್ಪದೇವರ್ಜ್ಣಯ ಕೇಸಿ ದೇವರ್ಸ್ಸರ ಮಗ ನ(ಡ)ಯನಾಯಕನ." ಎಂದಿದೆ. ಇದು ಬಹಳ ತ್ರುಟಿತವಾಗಿದ್ದು ಅಪೂರ್ಣವಾಗಿದೆ. ಜಯಕೇಶಿ ದೇವರ ಮಗ ಮತ್ತು ಬೋಪ್ಪದೇವರ ಎಂಬುವರ ಹೆಸರನ್ನು ಹೇಳುತ್ತದೆ. (ಎಸ್.ಐ.ಐ. ೧೫. ಲಕ್ಷ್ಮೇಶ್ವರ. ಶಾ.ಸಂ. ೨೯೪)

ಕ್ರಿ.ಶ. ೧೨೫೯ರ ಲಕ್ಷ್ಮೇಶ್ವರ ಶಾಸನವು ಯಾದವ ದೊರೆ ಕನ್ನರನ ಕಾಲದ್ದಾಗಿದ್ದು. ಇದು ಚಾಮುಂಡ ದಂಡೇಶ ಸೇವಕನಾದ ಆಚಿದೇವನ ಹೆಂಡತಿ ಲಕ್ಕಿಲೆ ಮತ್ತು ಅವಳ ಮಕ್ಕಳು ವೀರ ಮರಣ ಹೊಂದಿದ ಬಗ್ಗೆ ತಿಳಿಸುತ್ತದೆ. ಇದರಲ್ಲಿ " ಬೈಲನ ಕಲಿತನವತಿ ಚೋದ್ಯಮಾಯ್ತು ಲೋಕಕೆಲ್ಲ". ಎಂದು ಹೇಳುತ್ತದೆ. (ಎಸ್.ಐ.ಐ. ೧೫. ಲಕ್ಷ್ಮೇಶ್ವರ. ಶಾ.ಸಂ. ೨೧೭)

ಕ್ರಿ.ಶ. ೧೨೭೫ರ ಮುಳಗುಂದದ ಶಾಸನವು "ಶ್ರೀ ಮತ್ಸರಟೂರ ತಿಳಕರಸ ಭೂಜಾದೋರ್ಧಂಡನ ಶ್ರೀ ಮನ್ಮಾಹಾಪ್ರಧಾನಂ. ಬಾಹತ್ತರ ನಿಯೋಗಾಧಿಪತಿ ನಿಯೋಗದುರಂದರ ಮಂತ್ರಿಲಲಾ ಮನಪ್ಪ ಹೆಗ್ಗಡೆ ದೇವಂಣ್ಣನ ಮಗ ಅಮಿತ್ರಯ್ಯನು ಸ್ವರ್ಗಕ್ಕೆ ಸಂದನು ಎಂದು ಶಾಸನದಿಂದ ತಿಳಿದು ಬರುತ್ತದೆ.(ಎಸ್.ಐ.ಐ.೧೫.ಮುಳಗುಂದ.ಶಾ.ಸಂ.೬೧೫).

ಕ್ರಿ.ಶ. ೧೨೮೭ರ ಲಕ್ಷ್ಮೇಶ್ವರ ಶಾಸನವು ಯಾದವ ದೊರೆ ರಾಮಚಂದ್ರನ ಕಾಲಕ್ಕೆ ಸೇರಿದ್ದು, ಇದು ತ್ರುಟಿತವಾಗಿದೆ. ತಿಳಿಯುವ ಅಲ್ಪ ವಿಷಯವೆಂದರೆ ಮುಮ್ಮಡಿಸಿಂಗ ನಾಯಕನ ಮೇಲೆ ಯುದ್ದವನ್ನು ಮಾಡಲು ಆಗ ಹುಲಿಗೆರೆಯ ಸೈನ್ಯಾಧಿಪತಿಯಾಗಿ ಹೋಗಿದ್ದ ದಾಮನಾಯಕ ಆ ಹೋರಾಟದಲ್ಲಿ ಮಡಿದ ಸುದ್ದಿಯನ್ನು ಹೇಳುತ್ತದೆ. ಅವನ ನೆನಪಿಗಾಗಿ ಹಾಕಿರುವ ವೀರಗಲ್ಲು ಇದು. (ಎಸ್.ಐ.ಐ. ೨೦. ಲಕ್ಷ್ಮೇಶ್ವರ. ಶಾಸಂ. ೨೨೨)

ಗುಲಬರ್ಗಾ ಜಿಲ್ಲೆಯ ಅಫ್ಜಲಪುರ ತಾಲೂಕಿನ ಆತನೂರು ಗ್ರಾಮದ ವೀರಗಲ್ಲು ತ್ರಿಕೂಟ ಬಸದಿಗೆ ಹೋಗುವ ದಾರಿಯಲ್ಲಿದೆ. ಈ ವೀರಗಲ್ಲು ಮೂರು ಹಂತಗಳಿಂದ ಕೂಡಿದ್ದು

ಕೆಳಹಂತದಲ್ಲಿ ಕುದುರೆ ಮೇಲೆ ಕುಳಿತ ಒಬ್ಬ ವೀರನು ನಾಲ್ಕು ಜನ ಶತ್ರುಗಳೊಂದಿಗೆ ಹೋರಾಡುವಂತೆ ಚಿತ್ರಿಸಲಾಗಿದೆ. ಶತ್ರುಗಳೆಲ್ಲರೂ ಕುದುರೆ ಮೇಲೆ ಕುಳಿತು ಬಿಲ್ಲು ಹಾಗೂ ಬಾಣವನ್ನು ಹಿಡಿದಿದ್ದಾರೆ. ವೀರನು ಬಿಲ್ಲು ಬಾಣವನ್ನು ಹಿಡಿದು ಶತ್ರುಗಳಿಗೆ ಹೊಡೆಯುತ್ತಿದ್ದಾನೆ. ಎರಡನೆಯ ಹಂತದಲ್ಲಿ ಅಪ್ಸರೆಯರು ವೀರನನ್ನು ಒಯ್ಯುವಂತೆ, ಮೂರನೆಯ ಹಂತದಲ್ಲಿ ವೀರನು ಶಿವಲಿಂಗದ ಮುಂದೆ ಕುಳಿತಿರುವಂತೆಯೂ ಚಿತ್ರಿಸಲಾಗಿದೆ. ಈ ವೀರಗಲ್ಲಿನ ತುದಿಯಲ್ಲಿ ಸೂರ್ಯ ಚಂದ್ರರನ್ನು ಬಿಡಿಸಲಾಗಿದೆ. ಇದರ ಕಾಲ ೧೨ನೆಯ ಶತಮಾನದಾಗಿದೆ. (ಗುಲಬರ್ಗಾ ಗ್ಯಾಜೆಟಿಯರ್, (ಸಂ) ಪಾಟೀಲ್ ಎಂ.ಬಿ. ೧೯೯೭. ಪು. ೬೭೫)

ಆಳಂದ ತಾಲೂಕಿನ ಪಡಸಾವಳಗಿ ಗ್ರಾಮದ ಕಲ್ಲೇಶ್ವರ ದೇವಾಲಯದ ಅವರಣದ ಕ್ರಿ.ಶ.೧೨ನೆಯ ಶತಮಾನದ ವೀರಗಲ್ಲು. ಈ ವೀರಗಲ್ಲಿನಲ್ಲಿ ವೀರನು ಆಳೆತ್ತರದ ಬಿಲ್ಲನ್ನು ಹಿಡಿದು ನಿಂತಿದ್ದಾನೆ. ವೀರನು ಮುಡಿ, ಕರ್ಣಕುಂಡಲ, ಸೊಂಟಪಟ್ಟಿ, ಕೆಳ ಉಡುಪು ಧರಿಸಿದ್ದಾನೆ. ವೀರನ ದೇಹವು ಎಡಭಾಗಕ್ಕೆ ವಾಲಿದಂತೆ ಕೆತ್ತಿರುವುದು ಒಂದು ವಿಶೇಷತೆ. (ಗುಲಬರ್ಗಾ ಜಿಲ್ಲೆಯ ಗ್ಯಾಜೆಟಿಯರ್, (ಸಂ) ಪಾಟೀಲ್ ಎಂ.ಬಿ. ೧೯೯೭. ಪು. ೭೪೧)

ಆಳಂದ ತಾಲೂಕಿನ ಬೋಧನ ಗ್ರಾಮದ ಮಲ್ಲಿಕಾರ್ಜುನ ದೇವಾಲಯ ಬಳಿ ಇರುವ ಕ್ರಿ.ಶ. ೧೨ನೇ ಶತಮಾನದ ವೀರಗಲ್ಲು. ಈ ವೀರಗಲ್ಲು ಮೂರು ಹಂತಗಳಲ್ಲಿದ್ದು. ಕೆಳಹಂತದಲ್ಲಿ ವೀರನು ಶತ್ರು ಜೊತೆಗೆ ಹೋರಾಡುತ್ತಿದ್ದಾನೆ. ಇವನು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ಶತ್ರು ಆಕ್ರಮಣ ಮಾಡಲು ಕುದುರೆಯ ಮೇಲೆ ಬಂದಿದ್ದಾನೆ. ಇವನ ಬಲಗೈಯಲ್ಲಿ ಖಡ್ಗವಿದ್ದು, ಎಡಗೈಯಲ್ಲಿ ಕುದುರೆಯ ಲಗಾಮನ್ನು ಹಿಡಿದಿದ್ದಾನೆ. ಎರಡನೇ ಹಂತದಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿದ್ದಾರೆ. ಮೂರನೆಯ ಹಂತದಲ್ಲಿ ವೀರನು ಶಿವಲಿಂಗ, ನಂದಿ, ಮುಂದೆ ಪದ್ಮಾಸನದಲ್ಲಿ ಧ್ಯಾನಾಸಕ್ತನಾಗಿರುವಂತೆ ಚಿತ್ರಿಸಲಾಗಿದೆ. (ಗುಲಬರ್ಗಾ ಜಿಲ್ಲೆಯ ಗ್ಯಾಜೆಟಿಯರ್ (ಸಂ) ಪಾಟೀಲ್ ಎಂ.ಬಿ. ೧೯೯೭. ಪು. ೭೪೬)

ಗುಲ್ಬರ್ಗಾ ತಾಲೂಕಿನ ಹರಸೂರು ಗ್ರಾಮದ ಬೋರಲಿಂಗೇಶ್ವರ ದೇವಾಲಯದ ಆವರಣದಲ್ಲಿನ ಕ್ರಿ.ಶ. ೧೨ನೇ ಶತಮಾನದ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲು ಎರಡು ಹಂತದಲ್ಲಿದೆ. ಇಲ್ಲಿ ವೀರನು ಶವಗಳ ಮೇಲೆ ನಿಂತು ಹೋರಾಡುತ್ತಿದ್ದಾನೆ. ಬಲಗೈಯಲ್ಲಿ ಕತ್ತಿ ಎಡಗೈಯಲ್ಲಿ ಗುರಾಣಿಯಿದೆ. ಶತ್ರು ಆನೆಯ ಮೇಲೆ ಕುಳಿತಿದ್ದಾನೆ. ಇವನ ಹಿಂದೆ ಸ್ತ್ರೀಯೊಬ್ಬಳು ಕುಳಿತಿದ್ದಾಳೆ.

ಶತ್ರು ಸ್ತ್ರೀಯನ್ನು ಅಪಹರಿಸಿಕೊಂಡು ಹೋಗುತ್ತಿದ್ದಂತೆ ಕಾಣುತ್ತದೆ. ಸ್ತ್ರೀಯ ರಕ್ಷಣೆಗಾಗಿ ವೀರನು ಶತ್ರುವಿನ ಆನೆಯ ಸೊಂಡಿಲಿಗೆ ಕತ್ತಿಯಿಂದ ಇರಿಯುತ್ತಿರುವ ದೃಶ್ಯವನ್ನು ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ ವೀರನು ಲಿಂಗದ ಪೀಠದ ಮೇಲೆ ಕುಳಿತಿದ್ದಾನೆ. ಇವು ಈ ವೀರಗಲ್ಲಿನ ಲಕ್ಷಣಗಳಾಗಿವೆ. (ಗುಲಬರ್ಗಾ ಜಿಲ್ಲೆಯ ಗ್ಯಾಜೆಟಿಯರ್. (ಸಂ) ಪಾಟೀಲ್ ಎಂ.ಬಿ. ೧೯೯೭. ಪು-೭೪೯)

ಗುಲ್ಬರ್ಗಾ ತಾಲೂಕಿನ ಹರಸೂರು ಗ್ರಾಮದ ಬೋರಲಿಂಗೇಶ್ವರ ದೇವಾಲಯದ ಅವರಣದಲ್ಲಿನ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಎರಡು ಹಂತದಲ್ಲಿದೆ. ವೀರನು ಶವಗಳ ಮೇಲೆ ನಿಂತು ಹೋರಾಡುತ್ತಿದ್ದಾನೆ. ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ವೈರಿಯ ಬಲಗೈಯಲ್ಲಿ ಬಾಣ, ಎಡಗೈಯಲ್ಲಿ ಧನಸ್ಸು ಇದೆ. ಇಲ್ಲಿ ವೀರನು ಕತ್ತಿಯಿಂದ ವೈರಿಯ ಹೊಟ್ಟೆಗೆ ಇರಿದಿದ್ದಾನೆ. ಮೇಲಿನ ಪಟ್ಟಿಕೆಯಲ್ಲಿ ಅಪ್ಸರೆಯರಿಬ್ಬರು ವೀರನನ್ನು ಸ್ವರ್ಗಲೋಕಕ್ಕೆ ಕರೆದುಕೊಂಡು ಹೋಗುವ ದೃಶ್ಯವಿದೆ. (ಹರಸೂರಿನ ಅಪ್ರಕಟಿತ ವೀರಗಲ್ಲು) ಹರಸೂರು ಗ್ರಾಮದ ಬೋರಲಿಂಗೇಶ್ವರ ದೇವಾಲಯದ ಅವರಣದಲ್ಲಿನ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲು ಮೂರು ಹಂತದಲ್ಲಿದೆ. ಈ ವೀರಗಲ್ಲಿನಲ್ಲಿ ವೀರನು ಯುದ್ಧನಿರತನಾಗಿದ್ದು, ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ವೈರಿಯು ಸಹ ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ವೀರನು ಕತ್ತಿಯಿಂದ ವೈರಿಯ ಹೊಟ್ಟೆಗೆ ಇರಿದಿದ್ದಾನೆ. ಇರಿತದ ನೋವು ತಾಳಲಾರದೆ ವೈರಿಯು ತನ್ನ ದೇಹದ ಮೇಲ್ಭಾಗ ಹಾಗೂ ಕೈಗಳನ್ನು ಸಮೇತವಾಗಿ ಎಡಭಾಗಕ್ಕೆ ವಾಲಿಸಿಕೊಂಡಿದ್ದಾನೆ. ತನ್ನ ಮೊಣಕಾಲನ್ನು ನೆಲಕ್ಕೆ ಊರಿದ್ದಾನೆ, ಮೇಲಿನ ಪಟ್ಟಿಕೆಯಲ್ಲಿ ಅಪ್ಸರೆಯರಿಬ್ಬರು ವೀರನನ್ನು ಸ್ವರ್ಗಲೋಕಕ್ಕೆ ಕರೆದುಕೊಡು ಹೋಗುವ ದೃಶ್ಯವಿದೆ. ವೀರನು ಲಿಂಗದ ಮುಂದೆ ಪದ್ಮಾಸನದಲ್ಲಿ ಕುಳಿತು ಧ್ಯಾನಮಗ್ನನಾಗಿದ್ದಾನೆ.

ಚಿತ್ತಾಪುರ ತಾಲೂಕಿನ ಕಾಳಗಿ ಗ್ರಾಮದ ಕಾಳೇಶ್ವರ ದೇವಾಲಯದ ಮುಂಭಾಗದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ನಾಲ್ಕು ಹಂತಗಳಿಂದ ಕೂಡಿದೆ. ಮೊದಲನೇ ಹಂತದಲ್ಲಿ ವೀರನು ಶತ್ರುಗಳ ಜೊತೆ ಹೋರಾಡುತ್ತಿದ್ದಾನೆ. ವೀರನು ಗುರಾಣಿ, ಕತ್ತಿಯನ್ನು ಹಿಡಿದಿದ್ದಾನೆ. ಇವನ ಕಡೆಯ ನಾಲ್ಕು ಜನರು ಬಿಲ್ಲು ಬಾಣಗಳನ್ನು ಹಿಡಿದಿದಾರೆ. ಶತ್ರುಗಳಲ್ಲಿ ಇಬ್ಬರು ಗುರಾಣಿ ಕತ್ತಿಗಳನ್ನು ಹಿಡಿದರೆ, ಇನ್ನಿಬ್ಬರು ಬಿಲ್ಲು ಬಾಣಗಳನ್ನು ಹಿಡಿದು ವೀರನತ್ತ ನುಗ್ಗುತ್ತಿದ್ದಾರೆ. ವೀರನು ಗುರಾಣಿ ಹಿಡಿದು ಕತ್ತಿಯಿಂದ ಶತ್ರುಗಳಿಗೆ ತಿವಿಯುತ್ತಿದ್ದಾನೆ. ವೀರನ ಕತ್ತಿಯ ತಿವಿತ ತಾಳಲಾರದೆ ಶತ್ರುಪಕ್ಷದ ಒಬ್ಬನು ವೀರನ ಕಾಲಿಗೆ ಬಿದ್ದು ಶರಣಾಗತನಾಗಿ ಬಿಟ್ಟುಬಿಡುವಂತೆ ಗೋಗರೆಯುತ್ತಿದ್ದಾನೆ. ಎರಡನೇ ಹಂತದಲ್ಲಿ ವೀರನು ದೊಡ್ಡ ಕುದುರೆಯ ಮೇಲೆ ಕುಳಿತು ಹೋರಾಡುತ್ತಿದ್ದಾನೆ. ವೀರನ ಕುದುರೆಯು ಮುಂದಿನ ಎರಡು ಕಾಲುಗಳನ್ನು ಮೇಲಕ್ಕೆ ಎತ್ತಿದೆ. ವೀರನು ಉದ್ದವಾದ ಈಟಿಯನ್ನು ಹಿಡಿದು ಶತ್ರುಗಳಿಗೆ ತಿವಿಯುತ್ತಿದ್ದಾನೆ. ಶತ್ರು ಪಕ್ಷದವರು ಆಕ್ರಮಣ ಮಾಡಲು ಕುದುರೆಗಳ ಮೇಲೆ ಬಂದಿದ್ದಾರೆ. ಎಲ್ಲರ ಕೈಯಲ್ಲು ಬಿಲ್ಲು, ಬಾಣಗಳಿವೆ. ಮೂರನೆಯ ಹಂತದಲ್ಲಿ ವಾದ್ಯಗಾರರು, ಅಪ್ಸರೆಯರೊಡನೆ ವೀರನು ಸ್ವರ್ಗಕ್ಕೆ ಹೊರಟಿದ್ದಾನೆ. ನಾಲ್ಕನೇ ಹಂತದಲ್ಲಿ ವೀರ ಶಿವಲಿಂಗದ ಮುಂದೆ ಕುಳಿತಿದ್ದಾನೆ.

ಜೇವರ್ಗಿ ತಾಲೂಕಿನ ನೆಲೋಗಿ ಗ್ರಾಮದ ಊರಿನ ನಡುವೆ ಇರುವ ಕ್ರಿ.ಶ. ೧೨ನೇ ಶತಮಾನದ ವೀರಗಲ್ಲು ಮೂರು ಹಂತದಲ್ಲಿದೆ. ಮೊದಲನೇ ಹಂತದಲ್ಲಿ ವೀರನು ಹೆಂಗಳ

ಮೇಲೆ ನಿಂತು ಹೋರಾಡುತ್ತಿದ್ದಾನೆ. ವೀರನು ಗುರಾಣಿ-ಕತ್ತಿಯನ್ನು ಹಿಡಿದಿದ್ದಾನೆ. ಶತ್ರು ಕುದುರೆಯ ಮೇಲೆ ಕುಳಿತು ಹೋರಾಡುತ್ತಿದ್ದಾನೆ. ವೀರನ ಕತ್ತಿ ಶತ್ರು ಹಾಗೂ ಅವನ ಕುದುರೆಗೆ ತಾಗಿದೆ. ನೋವು ತಾಳಲಾರದೆ ಕುದುರೆಯು ವೀರನ ವಿರುದ್ಧ ದಿಕ್ಕಿನಲ್ಲಿ ತಿರುಗಿ ಮುಂದಿನ ಎರಡು ಕಾಲುಗಳನ್ನು ಮೇಲಕ್ಕೆ ಎತ್ತಿದಂತಿದೆ. ಎರಡನೆಯ ಹಂತದಲ್ಲಿ ವೀರನು ಅಪ್ಸರೆಯರೊಡನೆ ಸ್ವರ್ಗಕ್ಕೆ ಹೊರಟಂತಿದೆ. ಮೂರನೆಯ ಹಂತದಲ್ಲಿ ವೀರನು ಶಿವನಲ್ಲಿ ಸಾನಿಧ್ಯ ಪಡೆದಂತೆ ಚಿತ್ರಿಸಿದೆ. (ಗುಲ್ಬರ್ಗಾ ಜಿಲ್ಲೆಯ ಗ್ಯಾಜೆಟಿಯರ್.(ಸಂ) ಪಾಟೀಲ.ಎಂ.ಬಿ. ೧೯೭೭. ಪು. ೭೪೦)

ಹುಬ್ಬಳ್ಳಿ ತಾಲೂಕಿನ ಬೆಳಗಲಿಯ ಕೆರೆಯ ದಂಡೆಯ ಮೇಲೆ ಇರುವ ಕ್ರಿ.ಶ. ೧೨ನೇ ಶತಮಾನದ ವೀರಗಲ್ಲಿನಲ್ಲಿ ಮೂರು ಭಾಗಗಳಿವೆ. ಕೆಳಗಿನ ಭಾಗದಲ್ಲಿ ಹೋರಾಟದ ಹಾಗೂ ವೈರಿ ಪಡೆಯವರು ಕಾಲಾಳು ದಳದವರಾಗಿದ್ದು, ಕೈಗಳಲ್ಲಿ ಕೆಲವರು ಬಿಲ್ಲುಬಾಣ, ಕೆಲವರು ಕ್ಷತ್ತಿ-ಗುರಾಣಿಯನ್ನು ಹಿಡಿದಿದ್ದಾರೆ. ಎರಡನೆಯ ಭಾಗದಲ್ಲಿ ವಿಮಾನದಲ್ಲಿ ಕುಳಿತ ವೀರನನ್ನು ಅಪ್ಸರೆಯರಿಬ್ಬರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಅಪ್ಸರೆಯರು ಒಂದು ಕೈಯಲ್ಲಿ ವಿಮಾನವನ್ನು ಮತ್ತೊಂದು ಕೈಯಲ್ಲಿ ಚೌರಿಯನ್ನು ಹಿಡಿದಿದ್ದಾರೆ. ಮೇಲಿನ ಭಾಗದ ಚಿತ್ರಗಳು ಸವೆದು ಹೋಗಿವೆ. ವೀರಗಲ್ಲಿನಲ್ಲಿ ಮೊದಲನೆಯ ಮತ್ತು ಎರಡನೇ ಭಾಗದಲ್ಲಿ ಚಿತ್ರಗಳು ಸ್ವಲ್ಪ ಸವೆದು ಹೋಗಿವೆ. ಮೂರನೆಯ ಭಾಗದಲ್ಲಿ ಎಲ್ಲ ಚಿತ್ರಗಳು ಸವೆದು ಹೋಗಿವೆ. ವೀರಗಲ್ಲು ಭಗ್ನಗೊಂಡಿದ್ದು ಮಧ್ಯದಲ್ಲಿ ಮೂರು ಕಡೆ ರಂಧ್ರಗಳನ್ನು ಅಳವಡಿಸಲಾಗಿದೆ.

ಹುಬ್ಬಳ್ಳಿ ತಾಲೂಕಿನ ಅದರಗುಂಚಿಯ ಆಂಜನೇಯ ದೇವಾಲಯ ಬಳಿ ಇರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ನಾಲ್ಕು ಹಂತದಲ್ಲಿದೆ. ಕೆಳಗಿನ ಹಂತದಲ್ಲಿ ಹೋರಾಟದ ಚಿತ್ರಣವಿದೆ. ಇಲ್ಲಿ ಎರಡೂ ಕಡೆಯವರು ಹೋರಾಟದಲ್ಲಿ ನಿರತರಾಗಿದ್ದಾರೆ. ಇಲ್ಲಿ ಕೆಲವರು ಬಿಲ್ಲು, ಬಾಣವನ್ನು, ಕೆಲವರು ಕತ್ತಿ-ಗುರಾಣಿಯನ್ನು ಹಿಡಿದಿದ್ದಾರೆ. ಎರಡನೆಯ ಭಾಗದಲ್ಲಿ ಯುದ್ಧದ ಚಿತ್ರಣವಿದ್ದು ವೀರ ಬಿಲ್ಲುಬಾಣ ಹಿಡಿದು ವೈರಿಗಳೊಡನೆ ಕಾದಾಡುತ್ತಿದ್ದಾನೆ. ವೀರನೊಂದಿಗೆ ಮತ್ತಿಬ್ಬರು ಸಹಚರರಿದ್ದಾರೆ. ವೈರಿದಳದಲ್ಲಿ ನಾಲ್ವರಿದ್ದು ಅವರಲ್ಲಿ ಇಬ್ಬರು ಅಶ್ವಾರೂಢರಾಗಿದ್ದಾರೆ. ಮತ್ತಿಬ್ಬರು ಕಾಲಾಳು ದಳದವರಾಗಿದ್ದಾರೆ. ಮೂರನೇ ಭಾಗದಲ್ಲಿ ಆರು ಜನ ಅಪ್ಸರೆಯರು ವೀರನನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ದೇವಲೋಕಕ್ಕೆ ಕೊಂಡೊಯ್ಯುತ್ತಿರುವರು. ಇವರು ಒಬ್ಬರ ಕೈ ಒಬ್ಬರು ಹಿಡಿದು ಸಾಲಾಗಿ ನಿಂತಿದ್ದಾರೆ. ಮೇಲಿನ ಭಾಗದಲ್ಲಿ ದೇವಲೋಕದ ಚಿತ್ರಣವಿದೆ. ಮಧ್ಯದಲ್ಲಿ ಶಿವಲಿಂಗಕ್ಕೆ ಪೂಜಿಸುತ್ತಿರುವ ನಿಂತ ಯತಿ ಇದ್ದಾನೆ. ಆತನ ಬಲಭಾಗಕ್ಕೆ ವೀರ ಪೀಠದ ಮೇಲೆ ಕುಳಿತಿದ್ದಾನೆ. ಶಿವಲಿಂಗದ ಎಡಗಡೆಗೆ ಕುಳಿತ ನಂದಿ ಇದೆ. ವೀರಗಲ್ಲಿನಲ್ಲಿ ಶಾಸನವಿದ್ದು ತ್ರುಟಿತಗೊಂಡಿದೆ. ವೀರಗಲ್ಲಿನ ಕೆಳಭಾಗ ಮಣ್ಣಿನಲ್ಲಿ ಹೂತಿದೆ.

ಹುಬ್ಬಳ್ಳಿ ತಾಲೂಕಿನ ಕೋಳಿವಾಡದ ಮಹಾಮಾಯಿ ದೇವಾಲಯದ ಬಳಿಯಿರುವ ೧೨ನೇ ಶತಮಾನದ ವೀರಗಲ್ಲನ್ನು ಒಂದೇ ಪಟ್ಟಿಕೆಯಲ್ಲಿದ್ದರೂ ಎರಡು ಭಾಗಗಳಾಗಿ ತೋರಿಸಿದ್ದಾರೆ.

ವೀರ ಬಲಗೈಯಲ್ಲಿ ಕತ್ತಿಯನ್ನು, ಎಡಗೈಯಲ್ಲಿ ಗುರಾಣಿಯನ್ನು ಹಿಡಿದು ನಿಂತಿರುವನು. ಕಿವಿಯಲ್ಲಿ ಕುಂಡಲ, ಕೈಕಡಗ, ಕಾಲ್ಗಡಗ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿರುವನು. ವೀರನ ಕೆಳಭಾಗದಲ್ಲಿ ಆತನ ಕುದುರೆ ಇದೆ. ಶಿಲ್ಪಕ್ಕೆ ಬಣ್ಣ ಬಳಿದಿರುವುದರಿಂದ ವಿವರಣೆ ಅಸ್ಪಷ್ಟವಾಗಿದೆ.

ಇದೇ ದೇವಾಲಯದ ಮತ್ತೊಂದು ವೀರಗಲ್ಲಿನಲ್ಲಿ ವೀರ ಕುದುರೆಯ ಮೇಲೆ ಕುಳಿತಿದ್ದಾನೆ. ಮತ್ತೊಬ್ಬ ಕುದುರೆಗೆ ಅಭಿಮುಖವಾಗಿ ನಿಂತು ಕೈಯಲ್ಲಿ ಹಿಡಿದ ಬಾಣದಿಂದ ಕುದುರೆಗೆ ಚುಚ್ಚುತ್ತಿದ್ದಾನೆ. ಎಡಗೈಯಲ್ಲಿ ಬಿಲ್ಲು ಇದೆ. ಶಿಲ್ಪದಲ್ಲಿ ಇಬ್ಬರೂ ವ್ಯಕ್ತಿಗಳಿಗೆ ಸಮಾನ ಪ್ರಾಮುಖ್ಯತೆ ನೀಡಿರುವುದರಿಂದ ವೀರ ಯಾರೆಂಬುದು ಸರಿಯಾಗಿ ತಿಳಿದು ಬರುತ್ತಿಲ್ಲ. ಪ್ರಾಯಶಃ ಕುದುರೆಯ ಮೇಲೆ ಕುಳಿತವನೇ ವೀರನಾಗಿರಬಹುದು. ಈ ದೃಶ್ಯದ ಮೇಲ್ಪಟ್ಟಿಕೆಯಲ್ಲಿ ಶಿವಲಿಂಗವನ್ನು ತೋರಿಸಲಾಗಿದೆ.

ಕಲಘಟಗಿ ತಾಲೂಕಿನ ತಂಬೂರಿನ ಬಸವಣ್ಣನ ಗುಡಿಗೆ ಹೋಗುವ ದಾರಿಯಲ್ಲಿ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಇದೆ. ಈ ವೀರಗಲ್ಲಿನ ಯುದ್ಧದ ದೃಶ್ಯದಲ್ಲಿ ಮಡಿದ ವೀರನನ್ನು ಭವ್ಯವಾಗಿ ಎತ್ತರವಾಗಿ ಕತ್ತಿಯನ್ನು ತನ್ನ ವೈರಿಯು ಕುದುರೆಗೆ ಇರಿಯುವ ರೀತಿಯಲ್ಲಿ ತನ್ನ ಪರಿವಾರದ ಸಂಗಡ ಎಡಕ್ಕೆ ಮುಖಮಾಡಿ ನಿಂತಿದ್ದಾನೆ. ತನ್ನ ಪರಿವಾರದವರು ವೈರಿ ಪರಿವಾರದವರು ಬಿಲ್ಲುಗಳನ್ನು ಹಿಡಿದು ಯುದ್ಧ ಮಾಡುವ ಭಂಗಿಯಲ್ಲಿ ಹಾಗೂ ವೈರಿಯು ಮಾತ್ರ ಕುದುರೆ ಮೇಲೆ ಕುಳಿತು ಉದ್ದವಾದ ಈಟಿಯನ್ನು ಹಿಡಿದುಕೊಂಡಿದ್ದು ಜೊತೆಯಲ್ಲಿ ತನ್ನ ಪರಿವಾರದ ಕುದುರೆಯೊಂದು ನೆಲಕ್ಕೆ ಬಿದ್ದಿರುವುದನ್ನು ಚಿತ್ರಸಲಾಗಿದೆ. ಹೀಗಾಗಿ ಕಾಲ್ದಳದವರ ಸಂಖ್ಯೆಯೇ ಹೆಚ್ಚು ಇಲ್ಲಿ ಕಾಣುತ್ತದೆ. ಈ ದೃಶ್ಯದ ಬಲಭಾಗದ ಮೂಲೆ ಅಡ್ಡವಾಗಿ ಮುರಿದಿರುವುದರಿಂದ ಈ ಫಲಕದ ಹೆಚ್ಚಿನ ವಿವರಗಳು ಗೋಚರಿಸುವುದಿಲ್ಲ. ಇದರ ಶಾಸನದಲ್ಲಿ ಹೇಳಿದ ಪ್ರಕಾರ ಈ ಸ್ಥಳದ ಹೆಸರು ತಮ್ಮವೂರೆಂದು, ಮಡಿದ ವೀರ ಅಣ್ಣಿಗನೆಂತಲೂ ಕಣ್ನಹ ಮಹಾರಾಜನ ಆಳ್ವಿಕೆಯು ಬಹುತೇಕ ರಾಷ್ಟ್ರಕೂಟ ದೊರೆ ಮುಮ್ಮಡಿ ಕೃಷ್ಣನೆಂತಲೂ (ಈ ಮೊದಲು ಮುಮ್ಮಡಿ ಗೋವಿಂದ) ಕಾಲ ಎಂತಲೂ ಹೇಳಲಾಗಿದೆ. (ಇತಿಹಾಸ ದರ್ಶನ ಸಂ.೧೯. ಪು. ೭೭)

ಕಲಘಟಗಿ ತಾಲೂಕಿನ ದಿಂಬವಳ್ಳಿಯಿಂದ ಕಂದಲಿಗೆ ಹೋಗುವ ದಾರಿಯಲ್ಲಿರುವ ವೀರಗಲ್ಲು ಕ್ರಿ.ಶ. ೧೨ನೆಯ ಶತಮಾನದ್ದಾಗಿದೆ. ಈ ವೀರಗಲ್ಲು ಮೂರು ದೃಶ್ಯಗಳನ್ನು ಹೊಂದಿದೆ. ಶಿಲ್ಪದ ಕೆಳಗಿನ ದೃಶ್ಯದಲ್ಲಿ ಸ್ವಲ್ಪಭಾಗ, ಎರಡನೇ ದೃಶ್ಯದಲ್ಲಿ ಸ್ವಲ್ಪಭಾಗ ಭಗ್ನಗೊಂಡಿದೆ. ಕೆಳಗಿನ ದೃಶ್ಯದಲ್ಲಿ ಗೋವುಗಳು ಮಾತ್ರ ಕಂಡುಬರುತ್ತಿದ್ದು, ಅವು ಚೆಲ್ಲಾಪಿಲ್ಲಿಯಾಗಿ ನಿಂತಂತೆ ಕಂಡುಬರುತ್ತವೆ. ಎರಡನೇ ದೃಶ್ಯದಲ್ಲಿ ವೀರ ವಿಮಾನವೊಂದರಲ್ಲಿ ಸುಖಾಸನದಲ್ಲಿ ಕುಳಿತಿದ್ದಾನೆ. ಬಲಗೈಯಲ್ಲಿ ಏನನ್ನೋ ಹಿಡಿದಿದ್ದಾನೆ. ಎಡ ತೊಡೆಯ ಮೇಲೆ ಯಾರೋ (ಸತಿ?) ಕುಳಿತಂತಿದೆ. ಈ

ವಿಮಾನವನ್ನು ಅಪ್ಸರೆಯರಿಬ್ಬರು ಹಿಡಿದಿದ್ದಾರೆ. ಈ ಅಪ್ಸರೆಯರು ಮತ್ತೊಂದು ಕೈಯಲ್ಲಿ ಚೌರಿಯನ್ನು ಹಿಡಿದಿದ್ದಾರೆ. ಇವರ ಬದಿಗಳಲ್ಲಿ ಮತ್ತೆ ಇಬ್ಬರು ಅಪ್ಸರೆಯರಿದ್ದು, ಅವರು ತಲೆಯ ಮೇಲೆ ಕಲಶವನ್ನು ಹೊತ್ತಿದ್ದಾರೆ. ಇವರುಗಳ ಮೇಲ್ಭಾಗದಲ್ಲಿ ವಾದ್ಯ ಮೇಳದವರಿದ್ದಾರೆ. ಮೇಲಿನ ದೃಶ್ಯದಲ್ಲಿ ಮಂಟಪದಲ್ಲಿರುವ ಶಿವಲಿಂಗವನ್ನು ಯತಿಯೊಬ್ಬ ಪೂಜಿಸುತ್ತಿದ್ದಾನೆ. ಯತಿಯ ಹಿಂಭಾಗದಲ್ಲಿ ವೀರ ಕೈಮುಗಿದು ಕುಳಿತಿದ್ದಾನೆ. ವೀರನ ಬದಿಯಲ್ಲಿ ನಿಂತ ವ್ಯಕ್ತಿಯೊಬ್ಬನಿದ್ದಾನೆ. ವಿಮಾನದ ಇಕ್ಕೆಲಗಳಲ್ಲಿ ಕುಳಿತ ಎರಡು ನಂದಿಗಳಿವೆ ಈ ನಂದಿಗಳ ಮೇಲೆ ಒಂದು ಕಡೆ ಸೂರ್ಯ ಮತ್ತೊಂದು ಕಡೆ ಚಂದ್ರನಿದ್ದಾನೆ. ವೀರಗಲ್ಲಿನ ಈ ಮೇಲಿನ ಭಾಗ ತ್ರಿಕೋನಾಕಾರದಲ್ಲಿದೆ.

ಕಲಘಟಗಿ ತಾಲೂಕಿನ ಕಂದಳಿಯ ರಣದೇವರ ಗುಡಿಯ ಬಳಿ ಇರುವ ವೀರಗಲ್ಲಿನಲ್ಲಿ ಮೂರು ದೃಶ್ಯಗಳಲ್ಲಿದೆ. ಕೆಳಗಿನ ದೃಶ್ಯದಲ್ಲಿ ವೀರ ಬಿಲ್ಲು-ಬಾಣ ಹಿಡಿದು ವೈರಿಗಳೊಡನೆ ಕಾದಾಡುತ್ತಿದ್ದಾನೆ. ಇಲ್ಲಿ ವೀರನನ್ನು ದೊಡ್ಡದಾಗಿ ಚಿತ್ರಿಸಲಾಗಿದೆ ಮತ್ತು ವೀರ ಮೃತ ವ್ಯಕ್ತಿಯ ಮೇಲೆ ನಿಂತಿದ್ದಾನೆ. ವೈರಿ ದಳದಲ್ಲಿ ತುಂಬಾ ಜನರಿದ್ದು, ಕೆಲವರು ಕಾಲಾಳುಗಳು ಮತ್ತು ಕೆಲವರು ಅಶ್ವ ದಳದವರಿದ್ದಾರೆ. ವೀರನ ಹಿಂಭಾಗದಲ್ಲಿ ಗೋವುಗಳನ್ನು ಸಾಲಾಗಿ ತೋರಿಸಲಾಗಿದೆ. ಎರಡನೇ ದೃಶ್ಯದಲ್ಲಿ ಆರು ಜನ ಅಪ್ಸರೆಯರು ವೀರನನ್ನು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ವೀರ ಮಧ್ಯದಲ್ಲಿದ್ದಾನೆ. ಬದಿಯಲ್ಲಿ ಇಬ್ಬರು ಅಪ್ಸರೆಯರು ತಮ್ಮ ಕೈಗಳಿಂದ ವೀರನ ಸೊಂಟವನ್ನು ಹಿಡಿದಿದ್ದಾರೆ. ವೀರ ತನ್ನ ಕೈಗಳನ್ನು ಅಪ್ಸರೆಯರ ಭುಜದ ಮೇಲೆ ಹಾಕಿದ್ದಾನೆ.

ಕಲಘಟಗಿ ತಾಲೂಕಿನ ದ್ಯಾವನಕೊಂಡದ ವೀರಭದ್ರ ದೇವಾಲಯದ ಮುಂಭಾಗದಲ್ಲಿರುವ ವೀರಗಲ್ಲಿನಲ್ಲಿ ಮೂರು ದೃಶ್ಯಗಳಲ್ಲಿದೆ. ಕೆಳಗಿನ ದೃಶ್ಯದಲ್ಲಿ ವೀರ ಕೈಯಲ್ಲಿ ಕತ್ತಿ-ಗುರಾಣಿ ಹಿಡಿದು ವೈರಿಗಳೊಡನೆ ಕಾದಾಡುತ್ತಿದ್ದಾನೆ. ವೈರಿ ದಳದಲ್ಲಿ ಕೆಲವರು ಅಶ್ವ ದಳದವರಾಗಿದ್ದಾರೆ. ಕೆಲವರು ಕಾಲಾಳುಗಳಾಗಿದ್ದಾರೆ. ವೀರನ ಕಾಲ ಬಳಿ ಕೆಲವರು ಮೃತ ವ್ಯಕ್ತಿಗಳಿದ್ದಾರೆ. ವೀರನ ಹಿಂಭಾಗದಲ್ಲಿ ಐದಾರು ಜನ ಸಹಚರರಿದ್ದಾರೆ. ಇವರುಗಳ ಮೇಲ್ಭಾಗದಲ್ಲಿ ಛತ್ರಿಯಿದೆ. ಎರಡನೆಯ ದೃಶ್ಯದಲ್ಲಿ ವಿಮಾನದಲ್ಲಿ ಕುಳಿತ ವೀರನನ್ನು ಅಪ್ಸರೆಯರು ದೇವಲೋಕಕ್ಕೆ ಕೊಂಡೊಯ್ಯುತ್ತಿದ್ದಾರೆ. ಈ ವಿಮಾನ ಸುಂದರವಾದ ಮೂರು ಅಂತಸ್ತುಗಳನ್ನು ಮತ್ತು ಕಲಶವನ್ನು ಹೊಂದಿದೆ. ವೀರನ ತಲೆಯ ಸಮಭಾಗಕ್ಕೆ ಎರಡು ಪುಷ್ಪಗಳಿವೆ. ವಿಮಾನವನ್ನು ಹೊತ್ತ ಅಪ್ಸರೆಯರ ಬದಿಯಲ್ಲಿ ಇಬ್ಬರು ಅಪ್ಸರೆಯರು ಕಲಶವನ್ನು ಹೊತ್ತು ತ್ರಿಭಂಗಿಯಲ್ಲಿ ನಿಂತಿರುವರು. ಇವರ ಮೇಲ್ಭಾಗದಲ್ಲಿ ವಾದ್ಯ ಮೇಳದವರಿದ್ದಾರೆ. ಅವರು ಡೋಲು ತುತ್ತೂರಿಗಳನ್ನು ಬಾರಿಸುತ್ತಿರುವರು. ಇವರನ್ನು ಎರಡು ಸಾಲಿನಲ್ಲಿ ಸಾಲಾಗಿ ತೋರಿಸಲಾಗಿದೆ. ಇಲ್ಲಿ ಮೋಡದ ಅಲಂಕರಣೆ ತೋರಿಸಲಾಗಿದೆ. ಮೇಲಿನ ದೃಶ್ಯದ ವಿಮಾನದಲ್ಲಿ ಶಿವಲಿಂಗವಿದ್ದು, ಅದಕ್ಕೆ ಯತಿಯೊಬ್ಬ ಪೂಜಿಸುತ್ತಿದ್ದಾನೆ. ವಿಮಾನದ ಬಲಬದಿಯಲ್ಲಿ ಕೈಮುಗಿದು ಕುಳಿತ ವೀರನಿದ್ದಾನೆ. ಎಡ ಭಾಗದಲ್ಲಿ ಕುಳಿತ ನಂದಿಯುಂಟು. ಮೇಲಿನ ದೃಶ್ಯದ ಸುತ್ತಲೂ ಸುಂದರವಾದ ಮಕರ ತೋರಣದ ಅಲಂಕಾರವಿದೆ.

ವೀರಗಲ್ಲಿನ ಸುತ್ತಲೂ ಪುಷ್ಪದಳಗಳಿವೆ. ಈ ವೀರಗಲ್ಲಿನಲ್ಲಿ ಸೂಕ್ಷ್ಮ ಕೆತ್ತನೆ ಕಾಣಬಹುದು. ಇದು ಕ್ರಿ.ಶ. ೧೨ನೆಯ ಶತಮಾನದ್ದಾಗಿದೆ.

ಕಲಘಟಗಿ ತಾಲೂಕಿನ ತಂಬೂರಿನಲ್ಲಿ ಮೂಲತಃ ಇದ್ದ ವೀರಗಲ್ಲು ಈಗ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯಲ್ಲಿದೆ. ಇದರ ಕಾಲಮಾನ ಕ್ರಿ.ಶ. ೧೨ನೆಯ ಶತಮಾನ. ಈ ವೀರಗಲ್ಲು ಶಿಲ್ಪದಲ್ಲಿ ಮೂರು ಹಂತದ ದೃಶ್ಯಗಳನ್ನು ಕಾಣಬಹುದಾಗಿದೆ. ಕೆಳಗಿನ ಭಾಗದಲ್ಲಿ ಒಬ್ಬ ವೀರನು ಕುದುರೆ ಸವಾರರ ವಿರುದ್ಧ ಹೋರಾಡುತ್ತ ನಿಂತಿರುವುದನ್ನು ದೊಡ್ಡದಾಗಿ ಚಿತ್ರಿಸಲಾಗಿದೆ.

ಈತ ಕೈಯಲ್ಲಿ ದುಂಡಾದ ಗುರಾಣಿ ಮತ್ತು ಕತ್ತಿಯನ್ನು ಹಿಡಿದು ಎದುರಿಗೆ ತೋರಿಸಿದ ಕುದುರೆಗಳ ವಿರುದ್ಧವಾಗಿ ನಿಂತಿದ್ದಾನೆ. ಆ ಕುದುರೆಗಳ ಹಿಂಭಾಗದಲ್ಲಿ ಒಂದು ಭವ್ಯವಾದ ಆನೆಯ ಮೇಲೆ ಒಬ್ಬನು ಈಟಿಯನ್ನು ಹಿಡಿದು ಎತ್ತರವಾದ ಪೀಠದ ಮೇಲೆ ಕುಳಿತ ಆ ಈಟಿಯನ್ನು ಯುದ್ಧ ಮಾಡುವ ರೀತಿಯಲ್ಲಿ ಮುಂದಕ್ಕೆ ಚಾಚಿದ್ದಾನೆ. ಆನೆಯ ಮೇಲೆ ಮಾವುತನು ಕುಳಿತಿರುವವನು. ಈ ಇಬ್ಬರ ನಡುವೆ ತೋರಿಸಿದ ಕುದುರೆ ಸವಾರರಲ್ಲಿ ಕೆಲವರು ನೆಲಕ್ಕೆ ಬಿದ್ದಿರುವುದನ್ನು ಚಿತ್ರಿಸಲಾಗಿದೆ. ಈ ದೃಶ್ಯದಲ್ಲಿ ಕತ್ತಿ ಹಿಡಿದು ನಿಂತವನು ಮಡಿದ ವೀರ ಕೇತಯ್ಯನಾಯಕನೆಂದು ಮತ್ತು ಕುದುರೆ ಸವಾರ ಬಿಜ್ಜಳನೆಂದು ಗುರುತಿಸಲಾಗಿದೆ. ಅದರ ಎರಡನೆಯ ದೃಶ್ಯದಲ್ಲಿ ಮಡಿದ ವೀರ ವಿಮಾನ ಮಂಟಪದಲ್ಲಿ ಕುಳಿತಿದ್ದು, ಈ ವಿಮಾನವನ್ನು ಅಪ್ಸರೆಯರಿಬ್ಬರು ಒಯ್ಯುತ್ತಿರುವುದನ್ನು ಪ್ರಮಾಣಬದ್ಧವಾಗಿ ಚಿತ್ರಿಸಲಾಗಿದೆ. ಈ ಅಪ್ಸರೆಯರು ಒಂದು ಕೈಯಲ್ಲಿ ವಿಮಾನವನ್ನು, ಇನ್ನೊಂದು ಕೈಯಲ್ಲಿ ಚೌರಿಯನ್ನು ಹಿಡಿದಿರುವರು. ಈ ವಿಮಾನದ ಶಿಖರದ ಬದಿಗಳಲ್ಲಿ ನೃತ್ಯಗಾರರು ಮತ್ತು ವಾದ್ಯಮೇಳದವರಿದ್ದಾರೆ. ಒಬ್ಬನು ಕೈಮುಗಿದು ನಿಂತಿರುವವನು, ಜೊತೆಯಲ್ಲಿ ತಲೆಯ ಮೇಲೆ ಕುಂಭ ಹೊತ್ತು ನಿಂತ ಇಬ್ಬರು ಮಹಿಳೆಯರಿದ್ದಾರೆ. ಈ ದೃಶ್ಯವು ಮೆರವಣಿಗೆಯನ್ನು ಪ್ರತಿನಿಧಿಸುತ್ತದೆ. ಮೇಲಿನ ಮೂರನೇ ಫಲಕದಲ್ಲಿ ದೊಡ್ಡಗಾತ್ರದಲ್ಲಿ ವಿಮಾನವನ್ನು ಚಿತ್ರಿಸಿದ್ದು ಅದರ ಮಧ್ಯೆ ಶಿವಲಿಂಗವಿದೆ. ಆ ಶಿವಲಿಂಗದ ಬಲಗಡೆ ಮಡಿದ ವೀರ ಕೈಮುಗಿದು ಕುಳಿತಿದ್ದಾನೆ. ಅವನ ಮುಂದೆ ಯತಿಯೊಬ್ಬ ನಿಂತು ಶಿವಲಿಂಗವನ್ನು ಪೂಜಿಸುತ್ತಿರುವನು. ಮತ್ತೊಂದು ಕುತೂಹಲದ ಸಂಗತಿ ಎಂದರೆ ಈ ವಿಮಾನದ ಬಲಗಡೆಗೆ ನಂದಿಯು ಮತ್ತು ಎಡಗಡೆ ಆಕಳು-ಕರು ಶಿವಲಿಂಗದ ಕಡೆ ಮುಖಮಾಡಿ ಕುಳಿತಿವೆ. ಈ ವಿಮಾನದ ಶಿಖರದ ಬದಿಗಳಲ್ಲಿ ಸೂರ್ಯ-ಚಂದ್ರರ ಚಿನ್ಹೆಗಳಿವೆ.

ಕಲಘಟಗಿ ತಾಲೂಕಿನ ತಂಬೂರಿನ ಹಾಳು ಬಸವಣ್ಣಗುಡಿಯ ಸ್ವಲ್ಪ ಮುಂದಿನ ಹೊಲದಲ್ಲಿ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಇದೆ. ಈ ವೀರಗಲ್ಲಿನಲ್ಲಿ ಮೂರು ದೃಶ್ಯಗಳಲ್ಲಿದೆ. ಕೆಳಗಿನ ದೃಶ್ಯದಲ್ಲಿ ವೀರ ಬಿಲ್ಲು-ಬಾಣ ಹಿಡಿದು ವೈರಿಗಳೊಡನೆ ಕಾದಾಡುತ್ತಿದ್ದಾನೆ. ವೈರಿ ದಳದಲ್ಲಿ ಕೆಲವರು ಕಾಲಾಳುಗಳಾಗಿದ್ದರೆ ಕೆಲವರು ಅಶ್ವದಳದವರಾಗಿದ್ದಾರೆ. ಇದರಲ್ಲಿ ಕೆಲವರು

ಕತ್ತಿ–ಗುರಾಣಿ, ಕೆಲವರು ಬಿಲ್ಲು–ಬಾಣ ಹಿಡಿದಿದ್ದಾರೆ. ವೀರನ ಸಂಗಡಿಗರಲ್ಲಿ ಕೆಲವರು ಅಶ್ವದಳ, ಕೆಲವರು ಕಾಲಾಳುಗಳಾಗಿದ್ದಾರೆ. ಸುತ್ತಲೂ ಹೋರಾಟಗಾರರನ್ನು ತೋರಿಸಿದ್ದಾರೆ. ಎರಡನೇ ದೃಶ್ಯದಲ್ಲಿ ದೊಡ್ಡದಾದ ವಿಮಾನ ಮಂಟಪವಿದ್ದು, ಅದರಲ್ಲಿ ಮೂರು ಭಾಗಗಳಿವೆ. ಮಧ್ಯದಲ್ಲಿ ವೀರ ಕುಳಿತಿದ್ದಾನೆ. ಬದಿಗಳಲ್ಲಿ ಚೌರಿ ಹಿಡಿದು ಅಪ್ಸರೆಯರು ತ್ರಿಭಂಗಿಯಲ್ಲಿ ನಿಂತಿದ್ದಾರೆ.

ಮೂರುಜನ ಇರುವ ವಿಮಾನವನ್ನು ಅಪ್ಸರೆಯರಿಬ್ಬರು ದೇವಲೋಕಕ್ಕೆ ಒಯ್ಯುತ್ತಿದ್ದಾರೆ. ವಿಮಾನದ ಮೇಲ್ಭಾಗದಲ್ಲಿ ವಾದ್ಯಮೇಳದವರಿದ್ದಾರೆ. ವಾದ್ಯಮೇಳದವರ ಇಕ್ಕೆಲಗಳಲ್ಲಿ ಇಬ್ಬರು ಅಪ್ಸರೆಯರಿದ್ದಾರೆ. ವಿಮಾನದ ಪ್ರವೇಶದ್ವಾರ ಅಲಂಕಾರದಿಂದ ಕೂಡಿದೆ. ಮೇಲಿನ ದೃಶ್ಯದಲ್ಲಿಯೂ ವಿಮಾನ ಮೂರು ಭಾಗದಲ್ಲಿದೆ. ಮಧ್ಯದಲ್ಲಿ ಶಿವಲಿಂಗಕ್ಕೆ ಪೂಜಿಸುತ್ತಿರುವ ಯತಿ, ಬಲಕ್ಕೆ ಕೈಮುಗಿದು ಕುಳಿತ ವೀರ, ಎಡಬದಿಯಲ್ಲಿ ಕುಳಿತ ನಂದಿಯ ಚಿತ್ರಗಳಿವೆ. ವೀರಗಲ್ಲಿನ ಪಟ್ಟಿಗಳ ಸುತ್ತಲೂ ಪುಷ್ಪಗಳ ಅಲಂಕರಣೆಯಿದೆ. ವೀರಗಲ್ಲಿನಲ್ಲಿ ವಿಮಾನ ಮತ್ತು ವಿಮಾನದ ಅಲಂಕಾರ ಗಮನ ಸೆಳೆಯುತ್ತದೆ.

ಕಲಘಟಗಿ ತಾಲೂಕಿನ ತಂಬೂರಿನ ಹಾಳು ಬಸವಣ್ಣ ಗುಡಿಯ ಮುಂದಿನ ಹೊಲದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ೨ನೆಯ ವೀರಗಲ್ಲಿನಲ್ಲಿ ಈ ವೀರಗಲ್ಲು ಮೂರು ದೃಶ್ಯಗಳಲ್ಲಿದೆ. ಕೆಳಗಿನ ದೃಶ್ಯದಲ್ಲಿ ವೀರ ವೈರಿಗಳೊಡನೆ ಕಾದಾಡುತ್ತಿದ್ದಾನೆ. ವೀರನು ತನ್ನ ಎಡಗೈಯಲ್ಲಿ ಬಿಲ್ಲನ್ನು, ಬಲಗೈಯಲ್ಲಿ ಬಾಣವನ್ನು ಹಿಡಿದು ವೈರಿಯ ಹೊಟ್ಟೆಗೆ ತಿವಿದಿದ್ದಾನೆ. ವೈರಿದಳದಲ್ಲಿ ಕೆಲವರು ಅಶ್ವ ದಳವರಾಗಿದ್ದಾರೆ. ಕೆಲವರು ಮೃತಪಟ್ಟು ಕೆಳಗೆ ಬಿದ್ದಿದ್ದಾರೆ. ವೀರನ ಹಿಂಬದಿಯಲ್ಲಿ ಇಬ್ಬರು ಸಹಚರರಿದ್ದಾರೆ. ಅವರು ಕೈಯಲ್ಲಿ ಕತ್ತಿ–ಗುರಾಣಿ ಹಿಡಿದಿದ್ದಾರೆ. ವೀರನ ತಲೆಯ ಮೇಲ್ಭಾಗದಲ್ಲಿ ಛತ್ರಿಯಿದೆ. ವೀರ ಸೊಂಟದಲ್ಲಿ ಕಠಾರಿಯನ್ನು ಸಿಗಿಸಿಕೊಂಡು ವಿವಿಧ ಆಭರಣಗಳಿಂದ ಅಲಂಕೃತಗೊಂಡಿದ್ದಾನೆ. ಎರಡನೆಯ ದೃಶ್ಯದಲ್ಲಿ ಅಪ್ಸರೆಯರು ವೀರನನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ದೇವಲೋಕಕ್ಕೆ ಕೊಂಡೊಯ್ಯುತ್ತಿದ್ದಾರೆ. ಅಪ್ಸರೆಯರು ತಮ್ಮ ಮತ್ತೊಂದು ಕೈಯಲ್ಲಿ ಚೌರಿಯನ್ನು ಹಿಡಿದಿದ್ದಾರೆ. ಮೇಲ್ಭಾಗದಲ್ಲಿ ವಾದ್ಯ ಮೇಳದವರಿದ್ದಾರೆ. ಮೇಲಿನ ದೃಶ್ಯದಲ್ಲಿ ಶಿವಲಿಂಗಕ್ಕೆ ಪೂಜಿಸುತ್ತಿರುವ ಯತಿ ಕೈಮುಗಿದು ಕುಳಿತ ವೀರ ಮತ್ತು ಕುಳಿತ ನಂದಿ ಹಾಗೂ ಸೂರ್ಯ–ಚಂದ್ರರ ಚಿತ್ರಗಳಿವೆ.

ಕಲಘಟಗಿ ತಾಲೂಕಿನ ತಂಬೂರಿನ ಹಾಳು ಬಸವಣ್ಣ ಗುಡಿಯ ಮುಂದಿನ ಹೊಲದಲ್ಲಿರುವ ಕ್ರಿ.ಶ.೧೨ನೆಯ ಶತಮಾನದ ೩ನೆಯ ವೀರಗಲ್ಲಿನ ಕೆಳಗಿನ ಭಾಗ ಭಗ್ನಗೊಂಡಿದೆ. ಉಳಿದ ದೃಶ್ಯಗಳೆಂದರೆ ವೀರನನ್ನು ಅಪ್ಸರೆಯರು ದೇವಲೋಕಕ್ಕೆ ಕೊಂಡೊಯ್ಯುತ್ತಿರುವಾಗ ವಾದ್ಯ ಮೇಳಗಳು ಮೊಳಗುತ್ತಿವೆ. ಇಲ್ಲಿ ವಿವಿಧ ವಾದ್ಯ ಮೇಳದವರಿದ್ದಾರೆ. ಇಲ್ಲಿ ವಿಮಾನದ ಕಲಶಭಾಗ ಮಾತ್ರ ಕಂಡುಬರುತ್ತದೆ. ಮೇಲಿನ ಭಾಗದ ವಿಮಾನದಲ್ಲಿ ಮೂರು ಭಾಗಗಳಿದ್ದು ಮಧ್ಯದಲ್ಲಿ ಶಿವಲಿಂಗ ಮತ್ತು ಪೂಜಿಸುತ್ತಿರುವ ಯತಿ ಇದ್ದಾರೆ. ಬಲಭಾಗದಲ್ಲಿ ಕೈಮುಗಿದು ಕುಳಿತ

ವೀರನಿದ್ದಾನೆ. ಎಡಬದಿಯಲ್ಲಿ ಕುಳಿತ ನಂದಿ ಇದೆ. ಮಧ್ಯಭಾಗದ ವಿಮಾನಕ್ಕೆ ನಾಗರಶೈಲಿಯ ಶಿಖರವಿದೆ. ಮೇಲಿನ ಈ ಭಾಗಕ್ಕೆ ಮಕರ ತೋರಣದ ಅಲಂಕಾರವಿದೆ.

ಕಲಘಟಗಿ ತಾಲೂಕಿನ ಮಸಳೀಕಟ್ಟೆ ಗ್ರಾಮದ ಹೊರಭಾಗದಲ್ಲಿ ಬಸವೇಶ್ವರ ಗುಡಿಯ ಬಳಿ ಒಟ್ಟು ನಾಲ್ಕು ವೀರಗಲ್ಲುಗಳಿವೆ. ಇವುಗಳಲ್ಲಿ ಕೆಲವು ಭಗ್ನಗೊಂಡಿವೆ ಮತ್ತು ಎಲ್ಲಾ ವೀರಗಲ್ಲುಗಳ ಕೆಳಗಿನ ದೃಶ್ಯ ಮಣ್ಣಿನಲ್ಲಿ ಹೂತುಹೋಗಿದೆ. ಇವು ಕ್ರಿ.ಶ. ೧೨ನೆಯ ಶತಮಾನಕ್ಕೆ ಸೇರಿರಬಹುದು. ಮೊದಲನೇ ವೀರಗಲ್ಲಿನ ಕೆಳಗಿನ ದೃಶ್ಯದಲ್ಲಿ ವೀರ ಮತ್ತು ವೈರಿ ಇಬ್ಬರು ಬಿಲ್ಲು-ಬಾಣಗಳನ್ನು ಹಿಡಿದು ಕಾದಾಡುತ್ತಿದ್ದಾರೆ. ವೀರ ತನ್ನ ಬಾಣವನ್ನು ಮತ್ತೊಬ್ಬ ವೈರಿ ಸಹಚರನ ತಲೆಗೆ ತಿವಿದಿದ್ದಾನೆ. ವೀರ ಮತ್ತು ವೈರಿ ಪಡೆಯವನು ಸರ, ಕೈಕಡಗ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿದ್ದಾರೆ. ವೀರನ ಹಿಂಬದಿಯಲ್ಲಿ ಗೋವುಗಳನ್ನು ಸಾಲಾಗಿ ಒಂದರ ಮೇಲೊಂದರಂತೆ ತೋರಿಸಿದ್ದಾರೆ. ಎರಡನೇ ದೃಶ್ಯದಲ್ಲಿ ಅಪ್ಸರೆಯರಿಬ್ಬರು ಮಡಿದ ವೀರನನ್ನು ತಮ್ಮ ಭುಜದ ಮೇಲೆ ಹಾಕಿಕೊಂಡು ದೇವಲೋಕಕ್ಕೆ ಕೊಂಡೊಯ್ಯುತ್ತಿದ್ದಾರೆ. ಶಿಲ್ಪ ಭಗ್ನಗೊಂಡಿರುವುದರಿಂದ ಮುಖಭಾಗ ಮತ್ತು ಮೇಲಿನ ದೃಶ್ಯಗಳು ಕಂಡುಬರುವುದಿಲ್ಲ. (ಧಾರವಾಡ ಜಿಲ್ಲೆಯ ಪುರಾತತ್ವ, ಜಯಮ್ಮ ಬಿ. ೨೦೧೦, ಪು-೨೫೭). ಎರಡನೇ ವೀರಗಲ್ಲಿನ ಕೆಳಗಿನ ಭಾಗ ಮಣ್ಣಲ್ಲಿ ಹೂತುಹೋಗಿದೆ. ಕಂಡುಬರುತ್ತಿರುವ ದೃಶ್ಯ ದೇವಾಲೋಕದ ಚಿತ್ರಣವಾಗಿದ್ದು, ಅಲ್ಲಿ ಶಿವಲಿಂಗ ಕೈ ಮುಗಿದು ಕುಳಿತ ಮೂರು ಜನ ವ್ಯಕ್ತಿಗಳ ನಂದಿಯ ಚಿತ್ರಗಳಿವೆ. ಮೇಲಿನ ಭಾಗದಲ್ಲಿ ಪೂರ್ಣ ಕಲಶ ಅದರ ಬದಿಯಲ್ಲಿ ಸೂರ್ಯಚಂದ್ರರ ಚಿತ್ರಗಳಿವೆ. ವೀರಗಲ್ಲಿನ ಮೇಲ್ಭಾಗದಲ್ಲಿ ಈ ರೀತಿ ಕಲಶವಿರುವುದು ಅಪರೂಪವಾಗಿದೆ.

ಕಲಘಟಗಿ ತಾಲೂಕಿನ ಬೇಗೂರಿನ ಈಶ್ವರ ದೇವಾಲಯ ಬಳಿ ಇರುವ ಕ್ರಿ.ಶ.೧೨ನೆಯ ಶತಮಾನದ ವೀರಗಲ್ಲು ಮೂರು ದೃಶ್ಯಗಳಿಂದ ಕೂಡಿದೆ. ಕೆಳಗಿನ ದೃಶ್ಯದಲ್ಲಿ ವೀರನನ್ನು ದೊಡ್ಡದಾಗಿ ಚಿತ್ರಿಸಲಾಗಿದೆ. ವೀರ ಬಿಲ್ಲು-ಬಾಣವನ್ನು ಹಿಡಿದು ವೈರಿಗಳೊಡನೆ. ಕಾದಾಡುತ್ತಿದ್ದಾನೆ. ವೀರನ ಹಿಂಬದಿಯಲ್ಲಿ ಮತ್ತೊಬ್ಬ ಸಹಚರನಿದ್ದು, ಅವನು ಕತ್ತಿಯನ್ನಿಡಿದು ನಿಂತಿದ್ದಾನೆ. ವೀರನ ವೈರಿ ಪಡೆಯಲ್ಲಿ ನಾಲ್ವರಿದ್ದು ಮೂರು ಜನ ಕತ್ತಿ-ಗುರಾಣಿಗಳನ್ನು ಹಿಡಿದು ಪ್ರಯೋಗ ಹಸ್ತದಲ್ಲಿದ್ದಾರೆ. ಎರಡನೇ ದೃಶ್ಯದಲ್ಲಿ ತ್ರಿತಲ ವಿಮಾನದಲ್ಲಿ ವೀರ ಕೈಮುಗಿದು ಕುಳಿತಿದ್ದಾನೆ. ಈ ವಿಮಾನವನ್ನು ಅಪ್ಸರೆಯರಿಬ್ಬರು ಹೊತ್ತು ನಿಂತಿದ್ದಾರೆ. ಇವರು ತಮ್ಮ ಮತ್ತೊಂದು ಕೈಯಲ್ಲಿ ಚೌರಿಯನ್ನು ಹಿಡಿದಿದ್ದಾರೆ. ಈ ಅಪ್ಸರೆಯರ ಬಳಿಯಲ್ಲಿ ಮತ್ತಿಬ್ಬರು ಅಪ್ಸರೆಯರಿದ್ದು ಅವರು ತಲೆಯ ಮೇಲೆ ಕಲಶವನ್ನು ಹೊತ್ತು ನಿಂತಿದ್ದಾರೆ. ಈ ಅಪ್ಸರೆಯರ ಮೇಲ್ಭಾಗದಲ್ಲಿ ವಾದ್ಯ ಮೇಳದವರಿದ್ದಾರೆ. ವಾದ್ಯ ಮೇಳದವರೊಟ್ಟಿಗೆ ಮೋಡದ ಚಿತ್ರಣವನ್ನು ಸೊಗಸಾಗಿ ಚಿತ್ರಿಸಲಾಗಿದೆ. ಮೇಲಿನ ದೃಶ್ಯದಲ್ಲಿ ಪಂಚತಲ ವಿಮಾನದ ಇಕ್ಕೆಲಗಳಲ್ಲಿ ಎರಡು ತ್ರಿತಲ ವಿಮಾನಗಳಿದ್ದು ಒಂದರಲ್ಲಿ ವೀರ ಕೈಮುಗಿದು ಕುಳಿತಿದ್ದಾನೆ. ಮತ್ತೊಂದರಲ್ಲಿ ಕುಳಿತ ನಂದಿ ಇದೆ.

ಕಲಘಟಗಿ ತಾಲೂಕಿನ ಬೇಗೂರು ಗ್ರಾಮದಿಂದ ಸ್ವಲ್ಪ ಮುಂದಕ್ಕೆ ಹೋದರೆ ಕಂಡುಬರುತ್ತದೆ. ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಎರಡು ಹಂತಗಳಲ್ಲಿದೆ. ಕೆಳಗಿನ ಭಾಗದಲ್ಲಿ ವೀರನು ಬಿಲ್ಲು-ಬಾಣ ಹಿಡಿದು ಪ್ರಯೋಗ ಹಸ್ತದಲ್ಲಿದ್ದಾನೆ. ಸೊಂಟದಲ್ಲಿ ಕಠಾರಿಯನ್ನು ಸಿಗಿಸಿರುವನು. ತನ್ನ ಕೇಶವನ್ನು ತಲೆಯ ಬಲಕ್ಕೆ ಕಟ್ಟಿರುವನು ಕೊರಳಲ್ಲಿ ಹಾರ, ಕೈಕಾಲ್ಗಡಗ ಕಂಡುಬರುವುವು. ಬಾಣಗಳನ್ನು ಬತ್ತಳಿಕೆಯಲ್ಲಿಟ್ಟು ಹಿಂದಕ್ಕೆ ಕಟ್ಟಿರುವನು. ಮುಖದಲ್ಲಿ ಮೀಸೆಯನ್ನು ತೋರಿಸಲಾಗಿದೆ. ಎರಡನೇ ಭಾಗದಲ್ಲಿ ವೀರ ಅರ್ಧ ಪದ್ಮಾಸನದಲ್ಲಿ ಕುಳಿತಿದ್ದಾನೆ. ಬಲಗೈಯಲ್ಲಿ ಏನನ್ನೋ (ಕಮಂಡಲ?) ಹಿಡಿದಿರುವಂತಿದೆ. ಎಡಗೈಯನ್ನು ತೊಡೆಯ ಮೇಲಿಟ್ಟುಕೊಂಡಿದ್ದಾನೆ. ಬಲಭುಜದ ಮೇಲೆ ಗಿಣಿ ಕುಳಿತಿರುವುದು ಅಪರೂಪವೆನಿಸಿದೆ.

ಕಲಘಟಗಿ ತಾಲೂಕಿನ ಹಿರೇಹೊನ್ನಿಹಳ್ಳಿ ಊರಿನ ಕೆರೆಯ ಬಳಿಯಿರುವ ವೀರಗಲ್ಲು ಒಂದೇ ಪಟ್ಟಿಕೆಯಲ್ಲಿದ್ದು ವೀರನನ್ನು ಮಾತ್ರ ತೋರಿಸಲಾಗಿದೆ. ವೀರ ಬಲಗೈಯಲ್ಲಿ ಕಠಾರಿಯನ್ನು, ಬಿಲ್ಲನ್ನು ಹಿಡಿದು ನಿಂತಿರುವನು. ಬೆನ್ನಹಿಂದೆ ಬತ್ತಳಿಕೆ ಇದೆ. ವೀರ ಕಟೀವಸ್ತ್ರ ಧರಿಸಿದ್ದು. ಸೊಂಟದಲ್ಲಿಯೂ ಕಠಾರಿಯನ್ನು ಸಿಗಿಸಿದ್ದಾನೆ. ಕೇಶವನ್ನು ತುರುಬಿನಂತೆ ಕಟ್ಟಿ ತುರುಬಿನ ಸುತ್ತಮುತ್ತನ ಸರವನ್ನು ಕಟ್ಟಿಕೊಂಡಿರುವನು. ಕಿವಿಯಲ್ಲಿ ಓಲೆ, ಕೈಕಡಗ, ಕಾಲ್ಗಡಗ, ಕೊರಳಲ್ಲಿ ಹಾರ, ಭುಜಬಂಧಿ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿರುವನು. ವೀರನ ಬಲಗೈ ಮೇಲೆ ಕುಳಿತ ಗಿಣಿಯನ್ನು ತೋರಿಸಲಾಗಿದೆ. ವೀರನ ತಲೆಯ ಮೇಲೆ ಪುಷ್ಪದ ಅಲಂಕರಣೆಯಿದೆ. ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ಚಿತ್ರಗಳಿವೆ. ಕೈಮೇಲೆ ಗಿಣಿಯನ್ನು ತೋರಿಸುವುದು ಆಕಾಶದಲ್ಲಿ ಹಾರಾಡುತ್ತಿರುವ ಸಂಕೇತವಿರಬಹುದು. ಈ ವೀರಗಲ್ಲು ಕ್ರಿ.ಶ. ೧೨ನೆಯ ಶತಮಾನದ್ದಾಗಿದೆ.

ಕಲಘಟಗಿ ತಾಲೂಕಿನ ಬೆಳವಟಗಿ ರಾಮಲಿಂಗೇಶ್ವರ ದೇವಾಲಯದ ಮುಂಭಾಗದಲ್ಲಿರುವ ಕ್ರಿ.ಶ. ೧೨ನೇ ಶತಮಾನದ ವೀರಗಲ್ಲು ಮೂರು ದೃಶ್ಯಗಳಿಂದ ಕೂಡಿದೆ. ಕೆಳಗಿನ ದೃಶ್ಯ ಯುದ್ಧದ ಚಿತ್ರಣವನ್ನು ನಿರೂಪಿಸುತ್ತವೆ. ವೀರ ಕೈಯಲ್ಲಿ ಬಿಲ್ಲು-ಬಾಣವನ್ನು ಹಿಡಿದು ವೈರಿಯೊಡನೆ ಕಾದಾಡುತ್ತಿದ್ದಾನೆ. ವೈರಿ ಪಡೆಯವನು ಸಹ ಕೈಯಲ್ಲಿ ಬಿಲ್ಲು-ಬಾಣವನ್ನು ಹಿಡಿದಿದ್ದಾನೆ. ವೀರ ಮತ್ತು ವೈರಿಯ ಕಾಲಕೆಳಗೆ ಮೃತ ವ್ಯಕ್ತಿಗಳಿದ್ದಾರೆ. ವೀರನ ಹಿಂಬದಿಯಲ್ಲಿ ಗೋವುಗಳನ್ನು ಚಿತ್ರಿಸಲಾಗಿದೆ. ಎರಡನೆಯ ದೃಶ್ಯದಲ್ಲಿ ಮಡಿದ ವೀರನ ಕೈಗಳನ್ನು ಅಪ್ಸರೆಯರು ಹಿಡಿದುಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಆ ಅಪ್ಸರೆಯರು ಚೌರಿಧಾರಿಯಾಗಿದ್ದಾರೆ. ಮೇಲಿನ ದೃಶ್ಯದಲ್ಲಿ ವೀರ ಪೀಠದ ಮೇಲೆ ಅರ್ಧ ಪದ್ಮಾಸನದಲ್ಲಿ ಕುಳಿತಿದ್ದಾನೆ. ಬಲಗೈಯಲ್ಲಿ ಭುಜಕ್ಕೆ ಸಮಾನಾಂತರವಾಗಿ ಹಿಡಿದಿದ್ದಾನೆ. ಎಡಗೈಯನ್ನು ತೊಡೆಯ ಮೇಲಿಟ್ಟುಕೊಂಡಿದ್ದಾನೆ. ಬದಿಗಳಲ್ಲಿ ಅಪ್ಸರೆಯರಿದ್ದಾರೆ. ಇವರು ವೀರನ ಕಡೆ ಮುಖ ತಿರುಗಿಸಿದ್ದು, ಒಂದು ಕೈಯಲ್ಲಿ ಚೌರಿಯನ್ನು ಹಿಡಿದು ಭುಜಕ್ಕೆ ತಾಗಿಸಿಕೊಂಡಿದ್ದಾರೆ. ವೀರನ ಕಡೆ ಇರುವ ಕೈಗಳಲ್ಲಿ ಏನನ್ನೋ ಹಿಡಿದು ಮೇಲಕ್ಕೆತ್ತಿದ್ದಾರೆ. ಕೇಶವನ್ನು ತಲೆಯ ಹಿಂಭಾಗಕ್ಕೆ ಕಟ್ಟಿದ್ದಾರೆ. ವೀರ ಇಲ್ಲಿ ಕಿರೀಟಧಾರಿಯಾಗಿದ್ದಾನೆ.

ಮತ್ತು ವಸ್ತ್ರಾಭರಣಗಳಿಂದ ಭೂಷಿತನಾಗಿದ್ದಾನೆ. ಈ ಫಲಕದ ಮೇಲ್ಭಾಗದಲ್ಲಿ ವಿಮಾನದಂತಹ ಅಲಂಕಾರ ಕಂಡುಬರುತ್ತದೆ.

ಕಲಘಟಗಿ ತಾಲೂಕಿನ ಸಂಗಮೇಶ್ವರದ ಕಲ್ಮೇಶ್ವರ ದೇವಾಲಯದ ಹಿಂಭಾಗದಲ್ಲಿರುವ ವೀರಗಲ್ಲು ಮೂರು ಹಂತಗಳಿಂದ ಕೂಡಿದೆ. ಕೆಳಗಿನ ದೃಶ್ಯ ಮಣ್ಣಿನಲ್ಲಿ ಹೂತು ಹೋಗಿದ್ದು, ಅಲ್ಪಸ್ವಲ್ಪ ಮಾತ್ರ ಕಂಡುಬರುವುದು. ಕಂಡುಬರುವ ದೃಶ್ಯದಲ್ಲಿ ಯುದ್ಧದ ಚಿತ್ರಣವಿದೆ. ಹೋರಾಡುತ್ತಿರುವ ವೀರರು ಕತ್ತಿ–ಗುರಾಣಿ, ಬಿಲ್ಲು–ಬಾಣಗಳನ್ನು ಹಿಡಿದಿದ್ದಾರೆ. ಎರಡನೇ ದೃಶ್ಯದಲ್ಲಿ ಮೂರು ಜನ ವೀರರನ್ನು ನಾಲ್ವರು ಅಪ್ಸರೆಯರು ತಮ್ಮ ಭುಜದ ಮೇಲೆ ಹಾಕಿಕೊಂಡು ದೇವಲೋಕಕ್ಕೆ ಕೊಂಡೊಯ್ಯುತ್ತಿದ್ದಾರೆ. ಇಲ್ಲಿ ಇವರನ್ನು ಒಬ್ಬ ಅಪ್ಸರೆ ಒಬ್ಬ ವೀರನಂತೆ ತೋರಿಸಲಾಗಿದೆ. ಮೇಲಿನ ಭಾಗದಲ್ಲಿ ಶಿವಲಿಂಗವನ್ನು ಪೂಜಿಸುತ್ತಿರುವ ಯತಿ, ಶಿವಲಿಂಗದ ಕಡೆ ಮುಖ ಮಾಡಿ ಕೈ ಮುಗಿದು ಕುಳಿತಿರುವ ವೀರ ಮತ್ತು ಇಕ್ಕೆಲಗಳಲ್ಲಿ ಇಬ್ಬರು ವೀರರು ಸುಖಾಸನದಲ್ಲಿ ಕುಳಿತಿದ್ದಾರೆ. ಇದು ಕ್ರಿ.ಶ. ೧೨ನೆಯ ಶತಮಾನದ್ದಾಗಿದೆ.

ಕಲಘಟಗಿ ತಾಲೂಕಿನ ಅಳ್ನಾವರದ ಕಲ್ಮೇಶ್ವರ ಗುಡಿ ಆವರಣದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲಿನಲ್ಲಿ ಮೂರು ದೃಶ್ಯಗಳಿವೆ. ಕೆಳಗಿನ ದೃಶ್ಯದಲ್ಲಿ ವೀರ ಉದ್ದನೆಯ ಬಿಲ್ಲು–ಬಾಣವನ್ನಿಡಿದು ಪ್ರಯೋಗ ಭಂಗಿಯಲ್ಲಿದ್ದಾನೆ. ಸೊಂಟದಲ್ಲಿ ಕಟಾರಿ ಸಿಗಿಸಿದ್ದಾನೆ. ಕೊರಳಲ್ಲಿ ದಪ್ಪನೆಯ ಸರವಿದೆ. ಹೋರಾಟದ ಈ ಚಿತ್ರಣವನ್ನು ಎರಡು ಹಂತಗಳಲ್ಲಿ ತೋರಿಸಿದ್ದರೂ ಮಧ್ಯದಲ್ಲಿ ವೀರ ಎರಡೂ ಹಂತಗಳಿಗೂ ಸೇರಿಕೊಂಡಿದ್ದಾನೆ. ಈತನ ಸಹಚರರಲ್ಲಿ ಕೆಳಗಿನ ವ್ಯಕ್ತಿ ಕೈಯಲ್ಲಿ ಕತ್ತಿ–ಗುರಾಣಿ ಹಿಡಿದಿದ್ದಾನೆ. ಮೇಲಿನ ವ್ಯಕ್ತಿ ಉದ್ದವಾದ ಭರ್ಚಿಯನ್ನು ವೈರಿಗಳಡೆಗೆ ಹಿಡಿದು ಕುಳಿತಿದ್ದಾನೆ. ಈತನೂ ಸಹ ಸೊಂಟದಲ್ಲಿ ಕಟಾರಿ ಸಿಗಿಸಿದ್ದಾನೆ. ವೈರಿದಳದಲ್ಲಿ ಕೆಳಹಂತದಲ್ಲಿ ಇಬ್ಬರು ಅಶ್ವ ದಳದವರಿದ್ದಾರೆ. ಅಶ್ವಗಳು ತಮ್ಮ ಮುಂದಿನ ಕಾಲುಗಳನ್ನು ಎತ್ತಿ ನೆಗೆಯುತ್ತಿರುವಂತಿವೆ. ಈ ವ್ಯಕ್ತಿಗಳು ಕೈಯಲ್ಲಿ ಭರ್ಚಿಯನ್ನಿಡಿದಿದ್ದಾರೆ. ಮೇಲಿನ ಹಂತದಲ್ಲಿ ನಾಲ್ವರು ಬಲಗೈಯಲ್ಲಿ ಕತ್ತಿ ಎಡಗೈಯಲ್ಲಿ ದೊಡ್ಡದಾದ ಗುರಾಣಿಯನ್ನಿಡಿದು ಒಬ್ಬರ ಹಿಂದೆ ಒಬ್ಬರು ಸಾಲಾಗಿ ನಿಂತಂತೆ ತೋರಿಸಲಾಗಿದೆ. ಗಮನಿಸಬೇಕಾದ ಅಂಶವೆಂದರೆ ಈ ಹೋರಾಟದ ಚಿತ್ರಣದಲ್ಲಿ ಆಯುಧಗಳಿಗೆ ಪ್ರಾಮುಖ್ಯತೆ ನೀಡಿದಂತೆ ಕಾಣುತ್ತದೆ. ಏಕೆಂದರೆ ಪ್ರತಿಯೊಬ್ಬರ ಆಯುಧಗಳನ್ನು ಸ್ವಲ್ಪ ದೊಡ್ಡದಾಗಿಯೇ ತೋರಿಸಲಾಗಿದೆ. ಎರಡನೆಯ ದೃಶ್ಯದಲ್ಲಿ ಇಬ್ಬರು ವೀರರು ತಳಿರು ತೋರಣದ ಅಲಂಕಾರ ಹೊಂದಿದ ವಿಮಾನದಲ್ಲಿ ಕೈ ಮುಗಿದು ಕುಳಿತಿದ್ದಾರೆ.

ಈ ವಿಮಾನವನ್ನು ಇಬ್ಬರು ಅಪ್ಸರೆಯರು ಹಿಡಿದಿದ್ದಾರೆ. ಬದಿಯಲ್ಲಿಯ ಮತ್ತಿಬ್ಬರು ಅಪ್ಸರೆಯರು ಕೈಯನ್ನು ಮೇಲಕ್ಕೆ ಎತ್ತಿ ಚೌರಿಯನ್ನು ಬೀಸುತ್ತಿದ್ದಾರೆ. ಚೌರಿಯು ಹಾರಿದಂತೆ ಕಾಣುತ್ತಿದೆ. ಈ ಅಪ್ಸರೆಯರ ಮೇಲ್ಭಾಗದಲ್ಲಿಯೂ ತಳಿರು–ತೋರಣದ ಅಲಂಕಾರವಿದೆ. ಇದೊಂದು ಸುಂದರ

ಸುಸಂದರ್ಭವಾಗಿದ್ದನ್ನು ನಿರೂಪಿಸುತ್ತಿದೆ. ಮೇಲಿನ ದೃಶ್ಯದಲ್ಲಿ ಶಿವಲಿಂಗ, ಶಿವಲಿಂಗಕ್ಕೆ ಗಡ್ಡಧಾರಿ ಯತಿಯೊಬ್ಬ ಕೈಯಲ್ಲಿ ಗಂಟೆಯನ್ನು ಹಿಡಿದು ಪೂಜಿಸುತ್ತಿದ್ದಾನೆ. ಲಿಂಗದ ಮೇಲೆ ಪುಷ್ಪಾಲಂಕಾರ ಇದೆ. ಮೇಲ್ಭಾಗದಲ್ಲಿಯೂ ತೋರಣದ ಅಲಂಕರಣೆಯಿದೆ. ಯತಿಯ ಹಿಂಭಾಗದ ಕೆಳಭಾಗದಲ್ಲಿ ಮೇಲ್ಭಾಗದಲ್ಲಿ ನಿಂತ ಹಸು ಇದೆ. ಶಿವಲಿಂಗದ ಎಡಕ್ಕೆ ನಂದಿಯು ಕುಳಿತಿದೆ. ನಂದಿಯು ಮೇಲ್ಭಾಗದಲ್ಲಿ ಮತ್ತೊಬ್ಬ ವೀರ ಕೈಮುಗಿದು ಕುಳಿತಿದ್ದಾನೆ. ಒಬ್ಬ ವೀರ ಕೈ ಮುಗಿದು ಕುಳಿತಿದ್ದಾನೆ. ಶಿವಲಿಂಗ ಮತ್ತು ನಂದಿಯ ಮಧ್ಯಭಾಗದಲ್ಲಿ ಮತ್ತೊಬ್ಬ ಕೈಮುಗಿದು ಕುಳಿತ ವೀರನನ್ನು ಚಿಕ್ಕದಾಗಿ ತೋರಿಸಲಾಗಿದೆ. ಶಿಲ್ಪದ ಮೇಲ್ಭಾಗದಲ್ಲಿ ವಿಮಾನ ಬದಿಯಲ್ಲಿ ಸೂರ್ಯ-ಚಂದ್ರರ ಚಿತ್ರಗಳಿವೆ.

ನವಲಗುಂದ ತಾಲೂಕಿನ ಶಿಶುವಿನ ಹಳ್ಳಿಯಲ್ಲಿರುವ ೧೨ನೆಯ ಶತಮಾನದ ವೀರಗಲ್ಲು ನಾಲ್ಕು ಭಾಗಗಳಲ್ಲಿದೆ. ಕೆಳಗಿನ ಭಾಗದಲ್ಲಿ ಹೋರಾಟದ ದೃಶ್ಯವಿದೆ. ವೀರನು ಬಿಲ್ಲು-ಬಾಣಗಳನ್ನು ಹಿಡಿದು ವೈರಿಯ ಸಂಗಡ ಕಾದಾಡುತ್ತಿದ್ದಾನೆ. ವೀರನ ಹಿಂಬದಿಯಲ್ಲಿ ಗೋವುಗಳನ್ನು ತೋರಿಸಲಾಗಿದೆ. ಎರಡನೇ ಭಾಗದಲ್ಲಿ ಮಡಿದ ವೀರ ಮತ್ತು ಇಕ್ಕೆಲಗಳಲ್ಲಿ ಅಪ್ಸರೆಯರಿಬ್ಬರು ನಿಂತಿದ್ದಾರೆ. ಅಪ್ಸರೆಯರು ಒಂದು ಕೈಯಿಂದ ವೀರನನ್ನು ಹಿಡಿದು ಮತ್ತೊಂದು ಕೈಯಲ್ಲಿ ಕುಂಬಗಳನ್ನು ಹಿಡಿದಿದ್ದಾರೆ. ಮೂರನೇ ಭಾಗದಲ್ಲಿ ವೀರ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿದ್ದಾನೆ. ತನ್ನ ಎರಡೂ ಕೈಗಳನ್ನೂ ತೊಡೆಯ ಮೇಲಿಟ್ಟುಕೊಂಡಿದ್ದಾನೆ. ವೀರನ ಇಕ್ಕೆಲ್ಲಗಳಲ್ಲಿ ಇಬ್ಬರು ಅಪ್ಸರೆಯರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಇವರು ತಮ್ಮ ಒಂದು ಕೈಯಲ್ಲಿ ಚೌರಿಯನ್ನು ಹಿಡಿದು ಮತ್ತೊಂದು ಕೈಯನ್ನು ಸೊಂಟದ ಮೇಲಿಟ್ಟುಕೊಂಡಿದ್ದಾರೆ.

ನವಲಗುಂದ ತಾಲೂಕಿನ ಶಲವಾಡಿಯ ಕಪಿಲೇಶ್ವರ ದೇವಾಲಯದ ಮುಂಭಾಗದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ನಾಲ್ಕು ಭಾಗಗಳಲ್ಲಿದೆ. ಕೆಳಗಿನ ಭಾಗದಲ್ಲಿ ವೀರ ವೈರಿಗಳೊಡನೆ ಕಾದಾಡುತ್ತಿದ್ದಾನೆ. ವೀರನೊಂದಿಗೆ ಮತ್ತೊಬ್ಬ ಸಹಚರನಿದ್ದಾನೆ. ವೈರಿ ಪಡೆಯಲ್ಲಿ ಇಬ್ಬರು ವ್ಯಕ್ತಿಗಳಿದ್ದಾರೆ. ಇವರ ಕಾಲಬಳಿ ಒಬ್ಬ ಮೃತ ವ್ಯಕ್ತಿ ಇದ್ದಾನೆ. ವೀರ ಕೈಯಲ್ಲಿ ಕತ್ತಿ-ಗುರಾಣಿ ಹಿಡಿದಿದ್ದಾನೆ. ಕೇಶವನ್ನು ಮೇಲೆಕ್ಕೆತ್ತಿ ತುರುಬಿನಂತೆ ಕಟ್ಟಿದ್ದಾನೆ. ಎರಡನೇ ಭಾಗದಲ್ಲಿ ಮಡಿದ ವೀರನನ್ನು ಅಪ್ಸರೆಯರು ಭುಜದ ಮೇಲಿಟ್ಟುಕೊಂಡು ದೇವಲೋಕಕ್ಕೆ ಕೊಂಡೊಯ್ಯುತ್ತಿದ್ದಾರೆ. ಇವರುಗಳ ಬದಿಗಳಲ್ಲಿ ಇಬ್ಬರು ಕಹಳೆಯನ್ನು ಊದುವವರಿದ್ದಾರೆ. ಮೇಲ್ಭಾಗದಲ್ಲಿ ಮೂವರು ಕೈಯಲ್ಲಿ ವಾದ್ಯಗಳನ್ನು ಹಿಡಿದಿದ್ದಾರೆ. ಮತ್ತೊಬ್ಬ ಕಹಳೆಯನ್ನು ಊದುತ್ತಿದ್ದಾನೆ. ಈ ಭಾಗದಲ್ಲಿರುವ ಇವರೆಲ್ಲರೂ ಹಾರುವ ಭಂಗಿಯಲ್ಲಿದ್ದಾರೆ. ಮೇಲಿನ ಭಾಗದಲ್ಲಿ ವಿಮಾನದಲ್ಲಿ ವೀರ ಪೀಠದ ಮೇಲೆ ರಾಜ ಕುಳಿತಿದ್ದಾನೆ. ಬದಿಗಳಲ್ಲಿ ಅಪ್ಸರೆಯರಿಬ್ಬರು ಒಂದು ಕೈಯಲ್ಲಿ ಕಲಶ ಮತ್ತೊಂದು ಕೈಯಲ್ಲಿ ಚೌರಿಯನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿದ್ದಾರೆ. ವೀರ ಕಿರೀಟ, ಮುಕುಟ, ಕರ್ಣಕುಂಡಲ, ಕೈಕಡಗ, ಸರ ಮುಂತಾದ ಆಭರಣಗಳನ್ನು ಧರಿಸಿದ್ದಾನೆ. ಅಪ್ಸರೆಯರೂ ಆಭರಣ

ಭೂಷಿತರಾಗಿದ್ದಾರೆ. ಮೇಲಿನ ಭಾಗದಲ್ಲಿ ಅಂದರೆ ವಿಮಾನದ ಮೊದಲನೇ ಅಂತಸ್ತಿನಲ್ಲಿ ಶಿವಲಿಂಗಕ್ಕೆ ಕೈ ಮುಗಿದು ಕುಳಿತ ವೀರ, ಕುಳಿತ ನಂದಿಯ ಕಿರು ಚಿತ್ರಗಳಿವೆ. ವಿಮಾನವನ್ನು ದೊಡ್ಡದಾಗಿ ತೋರಿಸಲಾಗಿದ್ದು, ವಿಮಾನಕ್ಕೆ ಎರಡು ಅಂತಸ್ತುಗಳಿರುವುದು ಅಪರೂಪವಾಗಿದೆ.

ಕುಂದಗೋಳ ತಾಲೂಕಿನ ಮತ್ತೀಗಟ್ಟಿಯಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ನಾಲ್ಕು ದೃಶ್ಯಗಳಲ್ಲಿದೆ. ಕೆಳಗಿನ ದೃಶ್ಯದಲ್ಲಿ ವೀರ ವೈರಿಗಳ ವಿರುದ್ಧ ಕಾದಾಡುತ್ತಿದ್ದಾನೆ. ವೀರ ಮತ್ತು ವೀರನ ಸಂಗಡಿಗರು ಕಾಲ್ದಳದವರಾಗಿದ್ದಾರೆ. ವೈರಿ ಕಡೆಯಲ್ಲಿ ಕೆಲವರು ಅಶ್ವಾರೂಢರು; ಕೆಲವರು ಕಾಲಾಳುಗಳಾಗಿದ್ದಾರೆ. ಇವರೆಲ್ಲ ಕೈಯಲ್ಲಿ ಕತ್ತಿ–ಗುರಾಣಿ, ಈಟಿ, ಬಿಲ್ಲು, ಬಾಣಗಳನ್ನು ಹಿಡಿದಿದ್ದಾರೆ. ವೀರನ ಕಾಲ ಬಳಿ ಮೃತ ದೇಹಗಳಿವೆ. ಎರಡನೆಯ ದೃಶ್ಯವೂ ಸಹ ಹೋರಾಟದ ಚಿತ್ರಣವೇ ಆಗಿದೆ. ಇಲ್ಲಿ ವೀರ ವೈರಿಗೆ ಈಟಿಯಿಂದ ತಿವಿಯುತ್ತಿದ್ದಾನೆ. ಈ ದೃಶ್ಯದಲ್ಲಿರುವ ವೀರರು ಹೆಚ್ಚಾಗಿ ಕತ್ತಿ–ಗುರಾಣಿಯನ್ನು ಹಿಡಿದಿದ್ದಾರೆ ಮತ್ತು ಕಾಲಾಳುಗಳಾಗಿದ್ದಾರೆ. ಒಬ್ಬನು ಮಾತ್ರ ಅಶ್ವಾರೂಢನಾಗಿ ಕೈಯಲ್ಲಿ ಈಟಿಯನ್ನು ಹಿಡಿದಿದ್ದಾನೆ. ಇಲ್ಲಿಯೂ ಸಹ ಕೆಲ ಮೃತದೇಹಗಳು ವೀರನ ಕಾಲಬಳಿ ಬಿದ್ದಿದ್ದಾವೆ.

ಮೂರನೆಯ ದೃಶ್ಯದಲ್ಲಿ ವಿಮಾನದಲ್ಲಿ ಕುಳಿತ ವೀರರನ್ನು ಇಬ್ಬರು ಅಪ್ಸರೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಅಪ್ಸರೆಯರು ಒಂದು ಕೈಯಲ್ಲಿ ವಿಮಾನವನ್ನು ಮತ್ತೊಂದು ಕೈಯಲ್ಲಿ ಚೌರಿಯನ್ನು ಹಿಡಿದು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಮೇಲಿನ ದೃಶ್ಯದಲ್ಲಿ ಶಿವಲಿಂಗಕ್ಕೆ ಪೂಜಿಸುತ್ತಿರುವ ಯತಿ, ಬಲಭಾಗದಲ್ಲಿ ಕೈಮುಗಿದು ಕುಳಿತ ವೀರ ಎಡ ಭಾಗದಲ್ಲಿ ಕುಳಿತ ನಂದಿ ಮೇಲೆ ಸೂರ್ಯ–ಚಂದ್ರರ ಚಿತ್ರಗಳಿವೆ. ಈ ದೃಶ್ಯಗಳ ಮೇಲ್ಭಾಗದಲ್ಲಿ ಛತ್ರಿ ಆಕಾರದ ರೇಖೆಗಳಿವೆ.

ಕುಂದಗೋಳ ತಾಲೂಕಿನ ಹಿರೇಗುಂಜಾಳ ಗ್ರಾಮದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಮೂರು ಹಂತದಿಂದ ಕೂಡಿದೆ. ಕೆಳಗಿನ ಭಾಗದಲ್ಲಿ ವೀರ ಬಿಲ್ಲು–ಬಾಣವನ್ನು ಹಿಡಿದು ವೈರಿ ದಳದವರೊಡನೆ ಕಾದಾಡುತ್ತಿದ್ದಾನೆ. ವೀರನ ಜೊತೆ ಮತ್ತಿಬ್ಬರು ಸಹಚರರಿದ್ದು ಅವರೂ ಸಹ ಕೈಯಲ್ಲಿ ಬಿಲ್ಲು ಬಾಣಗಳನ್ನು ಹಿಡಿದಿದ್ದಾರೆ. ವೈರಿ ದಳದವರೆಲ್ಲ ಅಶ್ವಾರೂಢರಾಗಿದ್ದು ಕೈಯಲ್ಲಿ ಈಟಿಗಳನ್ನು ಹಿಡಿದಿದ್ದಾರೆ. ಎರಡನೇ ದೃಶ್ಯದಲ್ಲಿ ವೀರ ವಿಮಾನದಲ್ಲಿ ಕುಳಿತಿದ್ದಾನೆ. ಈ ವಿಮಾನವನ್ನು ಕೆಳಗೆ ಇಬ್ಬರು ಅಪ್ಸರೆಯರು ಮೇಲೆ ಇಬ್ಬರು ಅಪ್ಸರೆಯರು ಹಿಡಿದು ಸ್ವರ್ಗಕ್ಕೆ ವೀರನನ್ನು ಕರೆದೊಯ್ಯುತ್ತಿದ್ದಾರೆ. ಮೇಲಿನ ದೃಶ್ಯದಲ್ಲಿ ಸ್ವಲ್ಪ ದೊಡ್ಡದಾದ ಶಿವಲಿಂಗ, ಶಿವಲಿಂಗವನ್ನು ಪೂಜಿಸುತ್ತಿರುವ ಯತಿ, ಕೈಮುಗಿದು ಕುಳಿತ ವೀರ, ನಿಂತ ಮತ್ತೊಬ್ಬ ವ್ಯಕ್ತಿ ಮತ್ತು ಕುಳಿತ ನಂದಿಯ ಚಿತ್ರಗಳಿವೆ. ಸ್ವರ್ಗಾರೋಹಣದ ಈ ದೃಶ್ಯದಲ್ಲಿ ಕುಳಿತ ವೀರನೊಂದಿಗೆ ನಿಂತ ಮತ್ತೊಬ್ಬ ವ್ಯಕ್ತಿಯನ್ನು ತೋರಿಸಿರುವುದು ವಿಶೇಷವೆನಿಸಿದೆ.

ಕುಂದಗೋಳ ತಾಲೂಕಿನ ಕಮಡೊಳ್ಳಿ ಗ್ರಾಮದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ನಾಲ್ಕು ದೃಶ್ಯಗಳಲ್ಲಿದೆ. ಕೆಳಗಿನ ದೃಶ್ಯದಲ್ಲಿ ಹೋರಾಟದ ಚಿತ್ರಣವಿದೆ. ವೀರ

ಕುದುರೆಯ ಮೇಲೆ ಕುಳಿತು ಕೈಯಲ್ಲಿ ಈಟಿಯನ್ನು ಹಿಡಿದುಕೊಂಡು ವೈರಿಗಳೊಡನೆ ಕಾದಾಡುತ್ತಿದ್ದಾನೆ. ವೀರನ ಸಹಚರರಲ್ಲಿ ಕೆಲವರು ಬಿಲ್ಲು-ಬಾಣವನ್ನು ಹಿಡಿದಿದ್ದಾರೆ. ಕೆಲವರು ಕಹಳೆ ಊದುತ್ತಿದ್ದಾರೆ. ಎದುರಾಳಿ ಕಡೆಯವರು ಕತ್ತಿ-ಗುರಾಣಿ ಹಿಡಿದಿದ್ದಾರೆ. ಅವರಲ್ಲಿ ಕೆಲವರು ಬಿಲ್ಲು-ಬಾಣಗಳನ್ನು ಹಿಡಿದಿದ್ದಾರೆ. ಇವರುಗಳ ಹಿಂಭಾಗದಲ್ಲಿ ಗೋವುಗಳನ್ನು ಸಾಲಾಗಿ ತೋರಿಸಲಾಗಿದೆ. ಎರಡನೇ ದೃಶ್ಯದಲ್ಲಿ ವಾದ್ಯ ಮೇಳದವರನ್ನು ಸಾಲಾಗಿ ತೋರಿಸಲಾಗಿದೆ. ಇವರಲ್ಲಿ ಡೋಲು ಬಾರಿಸುವವರು ವೀಣೆ ಹಿಡಿದಿರುವವರು ತಾಳ ಹಾಕುತ್ತಿರುವವರಿದ್ದಾರೆ. ಮೂರನೆಯ ದೃಶ್ಯದಲ್ಲಿ ವಿಮಾನದಲ್ಲಿ ಕುಳಿತ ವೀರನನ್ನು ಇಬ್ಬರು ಅಪ್ಸರೆಯರು ದೇವಲೋಕಕ್ಕೆ ಕೊಂಡೊಯ್ಯುತ್ತಿದ್ದಾರೆ. ಅಪ್ಸರೆಯರು ತಮ್ಮ ಮತ್ತೊಂದು ಕೈಯಲ್ಲಿ ಚೌರಿಯನ್ನು ಹಿಡಿದಿದ್ದಾರೆ. ವಿಮಾನದ ಬದಿಯಲ್ಲಿ ಮತ್ತಿಬ್ಬರು ಅಪ್ಸರೆಯರು ಕೈಮುಗಿದು ನಿಂತಿದ್ದಾರೆ. ಅವರನ್ನು ಕಿರುಗಾತ್ರದಲ್ಲಿ ತೋರಿಸಲಾಗಿದೆ. ಈ ಅಪ್ಸರೆಯರ ಮೇಲ್ಭಾಗದಲ್ಲಿ ಮತ್ತಿಬ್ಬರು ಅಪ್ಸರೆಯರಿದ್ದು ಅವರು ಕೈಯಲ್ಲಿ ಬಾಳೆದಿಂಡನ್ನು ಹಿಡಿದು ಕೊಂಡಿದ್ದಾರೆ. ಮೇಲಿನ ಭಾಗದಲ್ಲಿ ಶಿವಲಿಂಗವನ್ನು ಪೂಜಿಸುತ್ತಿದ್ದರುವ ಯತಿ, ಕೈಮುಗಿದು ಕುಳಿತ, ವೀರ, ಕುಳಿತ ನಂದಿ ಮತ್ತು ಸೂರ್ಯ-ಚಂದ್ರರ ಚಿತ್ರಗಳಿವೆ.

ಕುಂದಗೋಳ ತಾಲೂಕಿನ ವರೂರಿನ ವೀರಬದ್ರ ಗುಡಿಯ ಮುಂಭಾಗದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಮೂರು ಹಂತದಿಂದ ಕೂಡಿದೆ. ಕೆಳಗಿನ ಹಂತದಲ್ಲಿ ಯುದ್ಧದ ಚಿತ್ರಣವಿದೆ. ಹೋರಾಟದ ಈ ಚಿತ್ರದಲ್ಲಿ ವೀರ ಮತ್ತು ವೈರಿ ದಳದವರಲ್ಲಿ ಕೆಲವರು ಬಿಲ್ಲು-ಬಾಣ ಮತ್ತೆ ಕೆಲವರು ಕತ್ತಿ-ಗುರಾಣಿಗಳನ್ನು ಹಿಡಿದಿದ್ದಾರೆ. ಇಲ್ಲಿ ಕೆಲವರು ಕಾಲಾಳುಗಳು ಮತ್ತು ಕೆಲವರು ಅಶ್ವ ದಳದವರಿದ್ದಾರೆ. ಎರಡನೇ ದೃಶ್ಯದಲ್ಲಿ ವಿಮಾನದಲ್ಲಿ ಕುಳಿತ ವೀರನನ್ನು ಅಪ್ಸರೆಯರಿಬ್ಬರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಅಪ್ಸರೆಯರು ಒಂದು ಕೈಯಲ್ಲಿ ವಿಮಾನವನ್ನು ಮತ್ತೊಂದು ಕೈಯಲ್ಲಿ ಚೌರಿಯನ್ನು ಹಿಡಿದಿದ್ದಾರೆ. ವಿಮಾನವನ್ನು ವೀರ ಅರ್ಧ ಪದ್ಮಾಸನದಲ್ಲಿ ಕೈಮುಗಿದು ಕುಳಿತಿದ್ದಾನೆ. ಮೇಲಿನ ಭಾಗದಲ್ಲಿ ಶಿವಲಿಂಗಕ್ಕೆ ನಿಂತ ಯತಿ ಪೂಜಿಸುತ್ತಿದ್ದಾನೆ. ಯತಿ ಬಲಭಾಗದಲ್ಲಿ ಮಡಿದ ವೀರ ಕೈಮುಗಿದು ಕುಳಿತಿದ್ದಾನೆ. ಶಿವಲಿಂಗದ ಎಡಬದಿಯಲ್ಲಿ ಕುಳಿತ ನಂದಿ ಇದೆ. ಶಿವಲಿಂಗಕ್ಕೆ ಕಿರೀಟ ಮುಕುಟವಿದೆ. ವೀರಗಲ್ಲಿನಲ್ಲಿಯ ಕೆಳಗಿನ ಚಿತ್ರಣ ಯುದ್ಧದ ಸ್ವಲ್ಪಭಾಗ ಮಣ್ಣಿನಲ್ಲಿ ಹೂತು ಹೋಗಿದೆ.

ಕುಂದಗೋಳ ತಾಲೂಕಿನ ನರೇಂದ್ರದ ವೀರಭದ್ರ ದೇವಾಲಯದ ಮುಂದೆ ಇರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಮೂರು ದೃಶ್ಯಗಳಲ್ಲಿದೆ. ಕೆಳಗಿನ ದೃಶ್ಯದಲ್ಲಿ ಒಂದು ಕಲ್ಲಿನ ಮಂಟಪವಿದ್ದು, ಅದರಲ್ಲಿ ಒಂದು ವಿಮಾನವಿದೆ. ಅದು ನೋಡಲು ಉಯ್ಯಾಲೆಯಂತೆ ಕಂಡುಬರುತ್ತದೆ. ಈ ಉಯ್ಯಾಲೆಯಲ್ಲಿ ವೀರ ತ್ರಿಭಂಗಿಯಲ್ಲಿ ನಿಂತಿದ್ದಾನೆ. ಎರಡನೇ ಭಾಗದಲ್ಲಿ ಇಬ್ಬರು ಅಪ್ಸರೆಯರು ವೀರನನ್ನು ತಮ್ಮ ಭುಜದ ಮೇಲೆ ಹಾಕಿಕೊಂಡು ಸ್ವರ್ಗಲೋಕಕ್ಕೆ ಹೋಗುತ್ತಿದ್ದಾರೆ. ಈ ಅಪ್ಸರೆಯರು ಮತ್ತೊಂದು ಕೈಯಲ್ಲಿ ಚೌರಿಯನ್ನು ಹಿಡಿದಿದ್ದಾರೆ. ಮೇಲಿನ

ಭಾಗದಲ್ಲಿ ಶಿವಲಿಂಗವಿದೆ. ಅದಕ್ಕೆ ವೀರ ಮೊಣಕಾಲೂರಿ ಕೈಮುಗಿದು ಕುಳಿತಿದ್ದಾನೆ. ಶಿವಲಿಂಗದ ಎಡಭಾಗದಲ್ಲಿ ಕುಳಿತ ನಂದಿಯಿದೆ. ವೀರಗಲ್ಲಿನ ಮೇಲ್ಭಾಗದಲ್ಲಿ ಸೂರ್ಯ–ಚಂದ್ರರ ಚಿತ್ರಗಳಿವೆ.

ಧಾರವಾಡ ತಾಲೂಕಿನ ಅಂಬೊಳ್ಳಿಯ ಪರಸಪ್ಪ ತಾಂಬೆ ಅವರ ಹೊಲದಲ್ಲಿರುವ ವೀರಗಲ್ಲು ನಾಲ್ಕು ಪಟ್ಟಿಕೆಯಲ್ಲಿದೆ. ಕೆಳಗಿನ ಪಟ್ಟಿಕೆಯಲ್ಲಿ ವೀರನು ಕೈಯಲ್ಲಿ ಬಿಲ್ಲು–ಬಾಣ ಹಿಡಿದು ವೈರಿಗಳೊಂದಿಗೆ ಹೋರಾಡುತ್ತಿದ್ದಾನೆ. ವೈರಿ ದಳವರು ಅಶ್ವಾರೂಢರಾಗಿದ್ದಾರೆ. ವೀರನ ಹಿಂಬದಿಯಲ್ಲಿ ಗೋವುಗಳನ್ನು ಕೆಳಗಿನಿಂದ ಮೇಲಕ್ಕೆ ಸಾಲಾಗಿ ತೋರಿಸಲಾಗಿದೆ. ಎರಡನೇ ಪಟ್ಟಿಕೆಯಲ್ಲಿ ಅಪ್ಸರೆಯರಿಬ್ಬರೂ ತಮ್ಮ ಭುಜಗಳಲ್ಲಿವೀರನನ್ನು ಕುಳ್ಳರಿಸಿಕೊಂಡು ದೇವಲೋಕಕ್ಕೆ ಕೊಂಡೊಯ್ಯುತ್ತಿದ್ದಾರೆ. ಇವರನ್ನು ಹಾರುತ್ತಿರುವಂತೆ ಚಿತ್ರಸಲಾಗಿದೆ. ಮೂರನೆ ಪಟ್ಟಿಕೆಯಲ್ಲಿ ವೀರ ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿದ್ದಾನೆ. ಬಲಗೈಯಲ್ಲಿ ಪುಷ್ಪವನ್ನು ಹಿಡಿದು ಭುಜಕ್ಕೆ ಹಿಡಿದುಕೊಂಡಿದ್ದಾನೆ. ಎಡಗೈಯನ್ನು ತಲೆಯ ಮೇಲಿಟ್ಟುಕೊಂಡಿದ್ದಾನೆ. ಈತ ಕಿರೀಟ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿದ್ದಾನೆ. ಇಕ್ಕೆಲಗಳಲ್ಲಿ ಚೌರಿಧಾರಿಯರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಇವರುಗಳು ಸಹ ಆಭರಣಗಳನ್ನು ಧರಿಸಿ ಸುಂದರವಾಗಿ ಕೇಶಾಲಂಕಾರ ಮಾಡಿಕೊಂಡಿದ್ದಾರೆ. ಮೇಲಿನ ಪಟ್ಟಿಕೆಯ ಚಿಕ್ಕದಾಗಿದ್ದು ಚಿಕ್ಕ ಮಂಟಪದಲ್ಲಿ ಶಿವಲಿಂಗವನ್ನು ತೋರಿಸಿದ್ದಾರೆ. ಬದಿಗಳಲ್ಲಿ ಸೂರ್ಯ–ಚಂದ್ರರಿದ್ದಾರೆ. ಈ ವೀರಗಲ್ಲು ಕ್ರಿ.ಶ.೧೨ನೆಯ ಶತಮಾನದ್ದಾಗಿದೆ.

ಧಾರವಾಡ ಅಳ್ನಾವರದ ಕಲ್ಮೇಶ್ವರ ಗುಡಿ ಅವರಣದಲ್ಲಿ ವೀರಗಲ್ಲಿದೆ. ಈ ವೀರಗಲ್ಲು ವಿಶೇಷವಾಗಿದೆ. ಸ್ತ್ರೀ ಹೋರಾಟದ ವಿವರವುಳ್ಳ ವೀರಗಲ್ಲಿನ ಎರಡು ಭಾಗಗಳು ಮಾತ್ರ ಕಂಡುಬರುತ್ತವೆ. ಮುಖ್ಯ ವಿಷಯವನ್ನು ತಿಳಿಸುವ ಕೆಳಗಿನ ಭಾಗವೇ ಕಾಣುತ್ತಿಲ್ಲ. ಸದ್ಯ ಕಾಣುತ್ತಿರುವ ಕೆಳಗಿನ ದೃಶ್ಯದಲ್ಲಿ ಮಡಿದ ಸ್ತ್ರೀಯನ್ನು ಇಬ್ಬರು ಅಪ್ಸರೆಯರು ಭುಜದ ಮೇಲೆ ಹಾಕಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಇವರು ತಮ್ಮ ಕೇಶವನ್ನು ತಲೆಯ ಮೇಲೆ ಕಟ್ಟಿದ್ದಾರೆ. ಇದರ ಎಡಬದಿಯಲ್ಲಿ ಒಂದರ ಮೇಲೆ ಒಂದರರಂತೆ ಆರು ಕುಂಭಗಳನ್ನು ತೋರಿಸಲಾಗಿದೆ, ಇವು ಕೆಳಗಿನಿಂದ ಮೇಲಕ್ಕೆ ಕಿರಿದಾಗುತ್ತಾ ಹೋಗಿವೆ. ಮೇಲಿನ ದೃಶ್ಯದಲ್ಲಿ ಮಡಿದ ಸ್ತ್ರೀಯು ಸುಖಾಸನದಲ್ಲಿ ಕುಳಿತಿದ್ದಾಳೆ. ಬಲಗೈಯಲ್ಲಿ ಪದ್ಮವನ್ನಿಡಿದು ಎಡಗೈಯನ್ನು ತೊಡೆಯ ಮೇಲಿಟ್ಟಿದ್ದಾಳೆ. ಸ್ತ್ರೀಯು ಇಲ್ಲಿ ಕೇಶವನ್ನು ಇಳಿಬಿಟ್ಟಂತಿದೆ. ಬದಿಗಳಲ್ಲಿ ಚೌರಿಧಾರಿಯರು ಒಂದು ಕೈಯಲ್ಲಿ ಚೌರಿಯನ್ನು ಮತ್ತೊಂದು ಕೈಯನ್ನು ತೊಡೆಯ ಮೇಲಿಟ್ಟುಕೊಂಡು ನಿಂತಿದ್ದಾರೆ. ಅಪ್ಸರೆಯರು ಕೇಶವನ್ನು ತಲೆಯ ಮೇಲೆ ಕಟ್ಟಿದ್ದಾರೆ. ಮಡಿದ ಸ್ತ್ರೀ ಮತ್ತು ಅಪ್ಸರೆಯರು ಅಭರಣ ಭೂಷಿತರಾಗಿದ್ದರೆ. ಈ ವೀರಗಲ್ಲು ಕ್ರಿ.ಶ. ೧೨ನೆಯ ಶತಮಾನದ್ದಾಗಿದೆ.

ಧಾರವಾಡ ತಾಲೂಕಿನ ತಂಬೂರಿನ ಬಸವಣ್ಣ ಗುಡಿ ಅವರಣದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ಐದು ವೀರಗಲ್ಲುಗಳಿವೆ. ಅವುಗಳ ವಿವರ ಈ ಕೆಳಗಿನಂತಿದೆ.

ಒಂದನೆಯ ವೀರಗಲ್ಲಿನಲ್ಲಿ ಕೆಳಗಿನ ಮತ್ತು ಮೇಲಿನ ಭಾಗ ಒಡೆದು ಹೋಗಿದ್ದು, ಅದರ ಮಧ್ಯಭಾಗ ಮಾತ್ರ ಕಂಡುಬರುತ್ತದೆ. ಈ ಫಲಕದ ದೃಶ್ಯದಲ್ಲಿ ಅಲಂಕಾರವುಳ್ಳ ವಿಮಾನಮಂಟಪದಲ್ಲಿ ವೀರ ಕೈಮುಗಿದು ಪದ್ಮಾಸನದಲ್ಲಿ ಕುಳಿತಿರುವನು. ಅಪ್ಸರೆಯರು ಒಂದು ಕೈಯಲ್ಲಿ ವಿಮಾನವನ್ನು ಮತ್ತೊಂದು ಕೈಯಲ್ಲಿ ಚೌರಿಯನ್ನು ಹಿಡಿದು ಮೇಲಕ್ಕೆ ಹಾರುತ್ತಿರುವಂತೆ ಚಿತ್ರಿಸಲಾಗಿದೆ. ಈ ಅಪ್ಸರೆಯರ ಬದಿಯಲ್ಲಿ ಸೇವಕಿಯರು ಕಳಸ ಹೊತ್ತಿದ್ದಾರೆ. ಈ ಅಪ್ಸರೆಯರು ಮತ್ತು ವಿಮಾನದ ಮೇಲ್ಭಾಗದಲ್ಲಿ ಮೋಡಗಳ ಚಿನ್ಹೆಗಳನ್ನು ರೂಪಿಸಲಾಗಿದೆ. ಈ ಮಂಟಪದ ಬಲಬದಿಗೆ ಮತ್ತು ಎಡಬದಿಗೆ ವಾದ್ಯ ಮತ್ತು ನೃತ್ಯ ಮೇಳದವರು ಇದ್ದಾರೆ. ಈ ಮಂಟಪದ ಶಿಖರ ನಾಗರ ಶೈಲಿಯಲ್ಲಿದೆ.

ಎರಡನೆಯ ವೀರಗಲ್ಲಿನಲ್ಲಿ ಮೂರು ಪಟ್ಟಿಕೆಗಳಿವೆ. ಈ ಪಟ್ಟಿಕೆಗಳ ಮಧ್ಯ ಭಾಗದಲ್ಲಿ ಎರಡು ಪಟ್ಟಿಕೆಗಳಲ್ಲಿ ಶಾಸನವಿದೆ. ಮೊದಲನೆಯ ಫಲಕದ ಎಡಭಾಗದ ಅಲ್ಪಭಾಗ ಮುರಿದು ಹೋಗಿದೆ. ಉಳಿದ ಭಾಗದಲ್ಲಿ ವೀರನು ಬಿಲ್ಲು ಮತ್ತು ಕತ್ತಿಯನ್ನು ಹಿಡಿದು ವೈರಿಗಳ ವಿರುದ್ಧ ಮುಂದಕ್ಕೆ ಚಾಚಿ ನಿಂತಿದ್ದಾನೆ. ಈತನನ್ನು ದೊಡ್ಡದಾಗಿ ಚಿತ್ರಿಸಲಾಗಿದೆ. ಈತನ ಕಣ್ಣುಗಳನ್ನು ಸೂಕ್ಷ್ಮದಿಂದ ನೈಜವಾಗಿ ಚಿತ್ರಿಸಲಾಗಿದೆ. ಈತನ ತಲೆಯ ಬಲಭಾಗಕ್ಕೆ ಮೂರು ಗೋವುಗಳ ಚಿತ್ರಗಳಿವೆ. ಈ ಗೋವುಗಳ ಕೆಳಗಡೆ ಇಬ್ಬರ ಸೈನಿಕರ ಮುರಿದ ಚಿತ್ರಗಳಿವೆ. ಎಡಗಡೆ ಮುರಿದು ಭಾಗದಲ್ಲಿ ಒಬ್ಬ ಯೋಧನು ವೀರನ ಬಿಲ್ಲಿಗೆ ಈಟಿಯಿಂದ ಚುಚ್ಚಿರುವುದನ್ನು ಕಾಣಬಹುದು. ಇದರ ಮೇಲಿನ ಫಲಕದ ದೃಶ್ಯದಲ್ಲಿ ಮಡಿದ ವೀರನನ್ನು ವಿಮಾನ ಮಂಟಪದಲ್ಲಿ ಕೈಮುಗಿಸಿ ಕೂಡಿಸಲಾಗಿದೆ. ಈ ವಿಮಾನವನ್ನು ಬಲಗಡೆ ಅಪ್ಸರೆಯೊಬ್ಬಳು ಒಂದು ಕೈಯಿಂದ ಹಿಡಿದು ಮತ್ತೊಂದು ಕೈಯಲ್ಲಿ ಚೌರಿಯನ್ನಿಡಿದು ನಿಂತಿದ್ದಾಳೆ. ಆಕೆಯು ತನ್ನ ಎಡಗಾಲನ್ನು ವಿಮಾನ ಮಂಟಪದ ಬುಡದಲ್ಲಿಟ್ಟು ನಿಂತಿದ್ದಾಳೆ. ಈ ಮಂಟಪದ ಎಡಗಡೆಯಲ್ಲಿ ಮಹಿಳೆಯೊಬ್ಬಳು ನೃತ್ಯ ಮಾಡುತ್ತಿರುವಳು. ಈ ವಿಮಾನದ ಶಿಖರದ ಬದಿಗಳಲ್ಲಿ ವಾದ್ಯ ಮೇಳದವರು ತಾಳ, ಮದ್ದಳೆ, ತುತ್ತೂರಿ ಹಿಡಿದಿದ್ದಾರೆ. ಮೇಲಿನ ಫಲಕದಲ್ಲಿ ವಿಮಾನ ಮಂಟಪವಿದ್ದು. ಅದರಲ್ಲಿ ಯತಿ ಶಿವಲಿಂಗಕ್ಕೆ ಪೂಜಿಸುತ್ತಾ ನಿಂತಿರುವನು. ಬಲಗಡೆ ಮಡಿದ ವೀರ ಕೈಮುಗಿದು ಕುಳಿತಿರುವನು. ಎಡಗಡೆ ನಂದಿ ಕುಳಿತಿದೆ. ವಿಮಾನದ ಶಿಖರ ಮಾದರಿ ಮತ್ತು ಮಧ್ಯ ಫಲಕದಲ್ಲಿ ಚಿತ್ರಿಸಿದೆ ವಿಮಾನದ ಶಿಖರ ಭಿನ್ನವಾಗಿವೆ. ಮೇಲಿನ ವಿಮಾನದ ಮಧ್ಯಭಾಗದಲ್ಲಿ ಕೈಚಾಚಿ ನಿಂತ ವೀರನ ಚಿತ್ರವನ್ನು ಕೊರೆಯಲಾಗಿದೆ. ಈ ವಿಮಾನದ ಎಡ-ಬಲಗಳಲ್ಲಿ ಸೂರ್ಯ-ಚಂದ್ರ ಚಿತ್ರಗಳಿವೆ.

ಮೂರನೆಯ ವೀರಗಲ್ಲಿನ ಮೂರು ಹಂತದಿಂದ ಕೂಡಿದ್ದು, ಫಲಕದ ದೃಶ್ಯದ ಮಧ್ಯೆ ವೀರನ ಚಿತ್ರವನ್ನು ದೊಡ್ಡದಾಗಿ ಚಿತ್ರಿಸಲಾಗಿದೆ. ಬಿಲ್ಲನ್ನು ಎಡಗೈಯಲ್ಲಿ ಹಿಡಿದು ವೈರಿಗಳ ಕಡೆ ಅಡ್ಡವಾಗಿ ಹಿಡಿದು ಬಲಗೈಯಲ್ಲಿ ಬಾಣವನ್ನು ಹಿಡಿದು ಯುದ್ಧದಲ್ಲಿ ಮಡಿದ ಒಬ್ಬ ವ್ಯಕ್ತಿಯ ಮೇಲೆ ನಿಂತಿದ್ದಾನೆ. ಆ ವ್ಯಕ್ತಿ ನೆಲದ ಮೇಲೆ ಮಲಗಿರುವನು. ಸೊಂಟಕ್ಕೆ ಡ್ಯಾಗರನ್ನು ಜೊತೆಗೆ ವಸ್ತ್ರವನ್ನು

ಕಟ್ಟಿದ್ದಾನೆ. ಅವನ ಬಲಗಡೆಗೆ ಅವನ ಅನುಯಾಯಿ ಮೂವರು ಸೈನಿಕರು ಬಿಲ್ಲು, ಬಾಣ, ಈಟಿ, ಕತ್ತಿ, ಆಯುಧಗಳನ್ನು ಹಿಡಿದು ನಿಂತಿರುವರು ಮತ್ತು ಅವರ ಬಲಬದಿಗೆ ಕೆಳಗಿನಿಂದ ಮೇಲಕ್ಕೆ ಮೂರು ಆಕಳುಗಳ ಚಿತ್ತಗಳಿವೆ. ಈ ವೀರನ ಬಿಲ್ಲಿನ ಎದುರಿಗೆ ವೈರಿ ದಳದಲ್ಲಿ ಇಬ್ಬರು ಬಾಣ, ಈಟಿ, ಗುರಾಣಿಗಳನ್ನು ಹಿಡಿದು ನಿಂತಿದ್ದು. ಬಿಲ್ಲಿನ ಕೆಳಗೆ ಮತ್ತು ಮುಂದೆ ನಿಂತ ವೈರಿಯ ಪಾದದ ಕೆಳಗಡೆ ಕೇವಲ ರುಂಡದ ಚಿತ್ರವನ್ನು ಚಿತ್ರಿಸಲಾಗಿದೆ. ಇಬ್ಬರು ಕಾಲ್ದಳ ವೈರಿಗಳ ಹಿಂಬದಿಯಲ್ಲಿ ಇಬ್ಬರು ಕುದುರೆದಳ ಸೈನಿಕರು ಈಟಿ, ಕಠೋರಿಗಳನ್ನು ಹಿಡಿದು ಕುದುರೆ ಸವಾರ ಮಾಡುತ್ತಿರುವರು. ಎರಡನೇ ಫಲಕದ ದೃಶ್ಯದ ಮಧ್ಯದಲ್ಲಿ ವಿಮಾನದಲ್ಲಿ ಮಡಿದ ವೀರ ಕೈಮುಗಿದು ಕುಳಿತಿದ್ದು, ಆತನ ತುರುಬನ್ನು ಇಲ್ಲಿ ತಲೆಯ ಎಡಗಡೆ ಚಿತ್ರಿಸಿರುವುದು ಗಮನೀಯ. ಈ ವಿಮಾನ ಮಂಟಪವನ್ನು ತಲಾ ಒಂದು ಕಡೆ ಇಬ್ಬರು ಅಪ್ಸರೆಯರು ಹಿಡಿದುಕೊಂಡು ನಿಂತಿದ್ದಾರೆ. ಅಪ್ಸರೆಯರ ಮತ್ತೊಂದು ಕೈಯಲ್ಲಿ ಇಬ್ಬರು ಫಲಕಗಳನ್ನು ಹಿಡಿದಿದ್ದಾರೆ. ಉಳಿದಿಬ್ಬರು ಫಲ ಮತ್ತು ಚೌರಿಯನ್ನು ಹಿಡಿದಿದ್ದಾರೆ. ಮೂರನೇ ಫಲಕದಲ್ಲಿ ಯತಿಯೊಬ್ಬ ಘಂಟೆ ಮತ್ತು ಆರತಿಯನ್ನು ಹಿಡಿದು ಶಿವಲಿಂಗಕ್ಕೆ ಪೂಜಿಸುತ್ತಿರುವನು. ಆತನ ಬಲಬದಿಗೆ ವೀರನು ಕೈಮುಗಿದು ಕುಳಿತ್ತಿದ್ದಾನೆ. ತನ್ನ ಬಲಗಡೆಗೆ ತನ್ನ ತಲೆಯ ತುರುಬನ್ನು ತೋರಿಸುವುದು ಗಮನೀಯ, ಶಿವಲಿಂಗ ಎಡಗಡೆಗೆ ಕುಳಿತು ನಂದಿ ತನ್ನ ಬಲಗಾಲನ್ನು ಮುಂದಕ್ಕೆ ಚಾಚಿ ಕುಳಿತಿದೆ. ಈ ಶಿಲ್ಪದಲ್ಲಿ ವಿಮಾನದ ಭಾಗ ಶಿವಲಿಂಗದ ಭಾಗ ಮತ್ತು ಮೇಲಿನ ಪಟ್ಟಿಕೆಯ ಭಾಗ ಒಡೆದು ಹೋಗಿದೆ. ಈ ವೀರಗಲ್ಲು ಕ್ರಿ.ಶ. ೧೨ನೆಯ ಶತಮಾನದ್ದಾಗಿದೆ.

ನಾಲ್ಕನೆಯ ವೀರಗಲ್ಲು ಶಿಲ್ಪದಲ್ಲಿ ಮೂರು ದೃಶ್ಯಗಳಿವೆ. ಈ ದೃಶ್ಯಗಳ ಮಧ್ಯೆ ಎರಡು ಹಂತಗಳಲ್ಲಿ ಐದ್ಯೆದು ಸಾಲಿನ ಶಾಸನವಿದೆ. ಮೂರು ದೃಶ್ಯಗಳಿರುವ ಈ ವೀರಗಲ್ಲಿನ ಕೆಳಗಿನ ಫಲಕದ ದೃಶ್ಯದಲ್ಲಿ ವೀರನ ಚಿತ್ರವನ್ನು ಮಧ್ಯ ದೊಡ್ಡದಾಗಿ ಚಿತ್ರಿಸಲಾಗಿದೆ. ವೀರನು ಎದುರು ನಿಂತ ವೈರಿಯ ಕೂದಲನ್ನು ಎಡಗೈಯಲ್ಲಿ ಹಿಡಿದು ಬಲಗೈಯಲ್ಲಿ ಹಿಡಿದ ಕತ್ತಿಯಿಂದ ಹೊಟ್ಟೆಯ ಒಳಗೆ ತಿವಿದು ನೆಲದ ಮೇಲೆ ಸತ್ತ ವ್ಯಕ್ತಿಯ ಮೇಲೆ ತನ್ನ ಕಾಲುಗಳನ್ನು ಮೆಟ್ಟಿ ನಿಂತಿದ್ದಾನೆ. ತಾನು ಮೆಟ್ಟಿದ ಸತ್ತ ಸೈನಿಕರ ಹೊಟ್ಟೆಯಿಂದ ಚಿಮ್ಮಿದ ರಕ್ತ ಮತ್ತು ಇಳಿಬಿದ್ದ ಉದರ ಭಾಗವನ್ನು ನಾಯಿಯೊಂದು ತಿನ್ನುತ್ತಿರುವಂತೆ ಚಿತ್ರಿಸಿರುವುದು ತುಂಬಾ ಮಾರ್ಮಿಕವಾಗಿದೆ. ತನ್ನ ಎಡ ತೋಳಿನಲ್ಲಿ ಕಟ್ಟಿದ ಗುರಾಣಿಯನ್ನು ವೈರಿಯು ಅರ್ಧ ತಲೆ, ತನ್ನ ಎಡಗೈ ಮತ್ತು ಸ್ವಲ್ಪ ದೇಹಾಂಗದ ಹಿಂಬದಿಯಲ್ಲಿ ವೃತಾಕಾರವಾಗಿ ಚಿತ್ರಿಸಲಾಗಿದೆ. ಸೊಂಟದಲ್ಲಿ ವಸ್ತ್ರವನ್ನಲ್ಲದೆ, ಗುರಾಣಿಯನ್ನು ಕಟ್ಟಿದ್ದಾನೆ. ತನ್ನ ತಲೆಯ ಕೇಶದ ತುರುಬು ತಲೆಯ ಬಲಭಾಗದಲ್ಲಿದ್ದು ಅದನ್ನು ಗಂಟು ಹಾಕಿದೆ ತುರುಬು ಕೆಳಗಡೆ ಇಳಿದಿದೆ ಮತ್ತು ಗಂಟು ಮೇಲಕ್ಕಿದೆ. ತನ್ನ ತಲೆಯ ಮೇಲೆ ಅಲಂಕಾರ ಮಾಡಿದ ಛತ್ರಿಯನ್ನು ಕಂಡರಿಸಲಾಗಿದೆ.

ವೈರಿ ತನ್ನ ಎಡಗೈಯಲ್ಲಿ ಹಿಡಿದ ವೃತ್ತಾಕಾರದ ಗುರಾಣಿಯನ್ನು ತನ್ನ ಬೆನ್ನ ಹಿಂದಕ್ಕೆ ಒಡಿದಿದ್ದಾನೆ. ಈ ವೀರನ ಬಲಭಾಗದಲ್ಲಿ ಆತನ ಸೈನಿಕ ಪರಿವಾರದವರನ್ನು ಹೋರಾಟ

ದೃಶ್ಯದಲ್ಲಿ ಚಿತ್ರಿಸಲಾಗಿದೆ. ತನ್ನ ಪರಿವಾರದವರಲ್ಲಿ ಒಬ್ಬ ಕಾಲಾಳು, ನಾಲ್ವರು ಅಶ್ವ ದಳದವರಿದ್ದಾರೆ. ಕಾಲ್ದಳದವನು ಬಿಲ್ಲನ್ನು ಮುಂದಕ್ಕೆ ಚಾಚಿ ಬಾಣವನ್ನು ಹೊಡೆಯುತ್ತಿರುವಂತೆ ನಿಂತಿದ್ದಾನೆ. ಅಶ್ವದಳದಲ್ಲಿ ಒಬ್ಬನು ಒಂದು ಕುದುರೆಯ ಲಗಾಮನ್ನು ಮತ್ತೊಂದು ಕೈಯಲ್ಲಿ ಕತ್ತಿಯನ್ನು ಹಿಡಿದಿದ್ದಾನೆ. ಮತ್ತೊಬ್ಬನು ಕುದುರೆಯ ಮೇಲೆ ಕುಳಿತು ನಗಾರಿಯನ್ನು ಬಾರಿಸುತ್ತಿರುವನು. ಮತ್ತೊಬ್ಬನು ಒಂದು ಕೈಯಲ್ಲಿ ಕುದುರೆ ಲಗಾಮನ್ನು ಮತ್ತೊಂದು ಕೈಯಲ್ಲಿ ಧ್ವಜದ ಕೋಲನ್ನು ಹಿಡಿದುಕೊಂಡು ಕುದುರೆಯ ಮೇಲೆ ಕುಳಿತಿದ್ದಾನೆ. ಮಗದೊಬ್ಬನು ಒಂದು ಕೈಯಲ್ಲಿ ಕುದುರೆಯ ಲಗಾಮನ್ನು ಮತ್ತೊಂದು ಕೈಯಲ್ಲಿ ಉದ್ದವಾದ ಭರ್ಜಿಯನ್ನು ಹಿಡಿದುಕೊಂಡು ಕುಳಿತಿರುವನು. ವೈರಿಗಳ ಗುಂಪಿನಲ್ಲಿ ಒಬ್ಬ ಕಾಲ್ದಳದವನು. ಮೂವರು ಕುದುರೆ ದಳದವರು ಮತ್ತೊಬ್ಬನು ವಾದ್ಯ ಬಾರಿಸುತ್ತಿರುವವನ್ನು ಚಿತ್ರಿಸಲಾಗಿದೆ. ಕಾಲ್ದಳದವನು ಒಂದು ಕೈಯಲ್ಲಿ ಕತ್ತಿ ಮತ್ತೊಂದು ಕೈಯಲ್ಲಿ ಆಯತಕಾರಾದ ಗುರಾಣಿಯನ್ನು ಹಿಡಿದಿದ್ದಾನೆ. ಈ ಆಯತಕಾರದ ಗುರಾಣಿಯ ಮುಂಭಾಗ ಸ್ವಲ್ಪ ಚೂಪಾಗಿರುವುದು. ಕುದುರೆ ದಳದಲ್ಲಿ ಒಬ್ಬ ಕುದುರೆಯ ಕುತ್ತಿಗೆಗೆ ಅಲಂಕಾರಯುಕ್ತ ಬಾಣ ನೆಟ್ಟಿದೆ. ಕುದುರೆ ಸವಾರಿ ಮಾಡುವವ ಒಂದು ಕೈಯಲ್ಲಿ ಕುದುರೆ ಲಗಾಮು ಮತ್ತೊಂದು ಕೈಯಲ್ಲಿ ಕತ್ತಿಯನ್ನು ಮೇಲಕ್ಕೆತ್ತಿ ಹಿಡಿದಿದ್ದಾನೆ. ಇನ್ನೊಬ್ಬ ಕುದುರೆ ಸವಾರನ್ನು ನಗಾರಿಯನ್ನು ಬಾರಿಸುತ್ತಿರುವನು. ಮತ್ತೊಬ್ಬ ಕುದುರೆ ಸವಾರನು ಒಂದು ಕೈಯಲ್ಲಿ ಲಗಾಮನ್ನು ಹಿಡಿದು ಕುಳಿತಿದ್ದಾನೆ. ತನ್ನ ಬಲಗೈಯಲ್ಲಿ ಈಟಿಯನ್ನು ಮುಂದಕ್ಕೆ ಚಾಚಿ ಹಿಡಿದಿದ್ದಾನೆ. ಕುತೂಹಲವೆಂದರೆ ಈ ಯೋಧ ತಲೆಯಿಂದ ಕುತ್ತಿಗೆಯವರೆಗೆ ಮುಖಭಾಗ ಬಿಟ್ಟು ಶಿರಸ್ತ್ರಾಣವನ್ನು ಧರಿಸಿದ್ದಾನೆ. ದೇಹಕ್ಕೆ ಕವಚವನ್ನು ಹಾಕಿಕೊಂಡಿದ್ದಾನೆ. ಕುದುರೆಯ ದೇಹದ ಮೇಲೆ ಜೂಲನ್ನು ಹಾಕಲಾಗಿದ್ದು. ತನ್ನ ಕಾಲನ್ನು ಜೂಲಿನ ಕೆಳಗಿನ ರಂಧ್ರದಲ್ಲಿ ಇಟ್ಟಿದ್ದಾನೆ. ಅವನ ಹಿಂದೆ ಒಬ್ಬ ವ್ಯಕ್ತಿ ಒಂದು ಕೈಯಲ್ಲಿ ತುತ್ತೂರಿಯನ್ನು ಊದುತ್ತಿರುವನು. ಮತ್ತೊಂದು ಕೈಯಲ್ಲಿ ಇನ್ನೊಂದು ವಾದ್ಯ ಹಿಡಿದಿರುವನು. ಈ ಚಿತ್ರಗಳ ಕೆಳಗೆ ಒಂದೇ ಸಾಲಿನಲ್ಲಿ ನಾಲ್ಕು ಗೋವುಗಳಿವೆ. ಎರಡನೆಯ ಫಲಕ ದೃಶ್ಯದಲ್ಲಿ ವಿಮಾನ ಮಂಟಪದ ಮಧ್ಯೆ ವೀರನು ಕೈಮುಗಿದು ಕುಳಿತಿದ್ದಾನೆ. ಆ ವಿಮಾನದ ಕೆಳಗಡೆ ಸಾಲಾಗಿ ಐದು ಮಂದಿ ವಾದ್ಯ, ನೃತ್ಯದವರು ನಿಂತಿದ್ದಾರೆ. ಇಬ್ಬರು ತಾಳವನ್ನು ಹಾಕುತ್ತಾ ನಿಂತಿದ್ದರೆ, ಇನ್ನಿಬ್ಬರು ನಗಾರಿಯನ್ನು ಬಾರಿಸುತ್ತಾ ನಿಂತಿರುವರು. ಮಧ್ಯದಲ್ಲಿ ಒಬ್ಬ ವ್ಯಕ್ತಿ ಬಲಗೈಯಲ್ಲಿ ಒಂದು ವಸ್ತುವನ್ನು ಹಿಡಿದು ಎಡಗೈಯಲ್ಲಿ ವಾದ್ಯದ ವಸ್ತು ಹಿಡಿದು ಬಲಗಾಲು ಮೇಲೆಕ್ಕೆತ್ತಿ ನೃತ್ಯ ಮಾಡುತ್ತಿರುವಂತೆ ಕಾಣುತ್ತಿದೆ. ನಗಾರಿಯವರು ತಮ್ಮ ತೊಡೆಯ ಮೇಲೆ ನಗಾರಿಗಳನ್ನಿಟ್ಟುಕೊಂಡು ಬಾರಿಸುತ್ತಿರುವರು. ಈ ವಿಮಾನವನ್ನು ಅಪ್ಸರೆಯರಿಬ್ಬರು ಒಂದು ಕೈಯಲ್ಲಿ ವಿಮಾನವನ್ನು ಮತ್ತೊಂದು ಕೈಯಲ್ಲಿ ಚೌರಿ ಹಿಡಿದು ಒಂದು ಕಾಲನ್ನು ವಿಮಾನದ ಮಂಟಪಕ್ಕೆ ಮೆಟ್ಟಿ ಆಕಾಶದಲ್ಲಿ ಹಾರುವಂತೆ ಚಿತ್ರಿಸಲಾಗಿದೆ. ವಿಮಾನ ಮತ್ತು ಈ ಅಪ್ಸರೆಯರ ಮೇಲ್ಭಾಗದಲ್ಲಿ ಮೋಡಗಳ ತೆರೆಗಳನ್ನು ಕಂಡರಿಸಲಾಗಿದೆ.

ಈ ವಿಮಾನದ ಕಳಸದ ಬದಿಗಳಲ್ಲಿ ತುತ್ತೂರಿ ಊದುವ ವಾದ್ಯಗಾರರಿದ್ದಾರೆ. ಆಕಾಶದಲ್ಲಿ ಹಾರುವ ಮೆರವಣಿಗೆಯ ಈ ದೃಶ್ಯ ಮನಮೋಹಕವೆನಿಸಿದೆ.

ಮೂರನೆಯ ಫಲಕದ ದೃಶ್ಯದಲ್ಲಿ ಮಧ್ಯದಲ್ಲಿ ಅಲಂಕಾರಯುತ ವಿಮಾನವಿದೆ. ಅದರ ಒಳಗಡೆ ಮಧ್ಯೆ ಶಿವಲಿಂಗವನ್ನು ಉದ್ದ ಜಡೆಯ ಯತಿಯೊಬ್ಬ ಒಂದು ಕೈಯಲ್ಲಿ ಗಂಟೆ ಮತ್ತೊಂದು ಕೈಯಲ್ಲಿ ಆರತಿ ಹಿಡಿದು ಪೂಜಿಸುತ್ತಾ ನಿಂತಿರುವನು. ವಿಮಾನದ ಬಲಗಡೆಗೆ ಮಡಿದ ವೀರ ಕೈಮುಗಿದು ಪೀಠದ ಮೇಲೆ ಕುಳಿತಿರುವನು. ಬಲಗಡೆಗೆ ನಂದಿಯು ತನ್ನ ಬಲಗಾಲನ್ನು ಮುಂದೆ ಚಾಚಿಕೊಂಡು ಪೀಠದ ಮೇಲೆ ಕುಳಿತಿರುವನು. ಈ ವಿಮಾನಕ್ಕೆ ಮೂರು ಮುಂಚಾಚಿದ ಪಟ್ಟಿಕೆಗಳಿದ್ದು, ಅದರ ಮೇಲೆ ಕಳಸವಿದೆ. ಈ ಕಳಸದ ಬದಿಗಳಲ್ಲಿ ಸೂರ್ಯ–ಚಂದ್ರರ ಚಿನ್ಹೆಗಳಿವೆ. ಈ ಶಿಲ್ಪದ ಮೇಲಿನ ಭಾಗ ಸುಮಾರಾಗಿ ಅರ್ಧ ವೃತ್ತಾಕಾರದಲ್ಲಿದೆ. ಈ ಶಿಲ್ಪದ ಸುತ್ತಲಿನ ಅರ್ಧವೃತ್ತಾಕಾರ ಮತ್ತು ಮೇಲೆ–ಕೆಳಗಿನ ಪಟ್ಟಿಕೆಯಲ್ಲಿ ರತ್ನಗಳನ್ನು ಕಂಡರಿಸಲಾಗಿದೆ.

ಐದನೆಯ ವೀರಗಲ್ಲು ಸಹ ಮೂರು ಹಂತಗಳಲ್ಲಿದೆ. ಮೊದಲನೆಯ ಹಂತದ ದೃಶ್ಯದಲ್ಲಿ ವೀರನನ್ನು ದೊಡ್ಡದಾಗಿ ಚಿತ್ರಸಲಾಗಿದೆ. ಆತ ಒಂದು ಕೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ಇನ್ನೊಂದು ಕೈಯಲ್ಲಿ ಕತ್ತಿಯನ್ನು ಹಿಡಿದು ವೈರಿಯ ಹೊಟ್ಟೆಗೆ ಇರಿದಿದ್ದಾನೆ. ವೈರಿಯು ಹೊಟ್ಟೆಯ ಕರುಳಿನ ಭಾಗವು ಹೊಟ್ಟೆಯಿಂದ ಹೊರಗಡೆ ಚಿಮ್ಮಿದೆ. ಸೊಂಟದಲ್ಲಿ ಕಠಾರಿಯನ್ನು ವಸ್ತ್ರದೊಂದಿಗೆ ಕಟ್ಟಿದ್ದಾನೆ. ನೆಲದ ಮೇಲೆ ಬಿದ್ದ ಸತ್ತ ಶವದ ತಲೆಯ ಮೇಲೆ ಮುಂದಿನ ಕಾಲಿನಿಂದ ಮೆಟ್ಟಿದ್ದಾನೆ. ತಲೆಯ ಎಡಗಡೆಗೆ ಕೇಶದಿಂದ ಕಟ್ಟಿದ ತುರುಬಿನ ಅಲಂಕಾರವಿದೆ. ತಲೆಯ ಮೇಲೆ ಒಂದು ಛತ್ರಿ ಇದೆ. ಆತನ ಹಿಂಬದಿಗೆ ಕೆಳಗಿನಿಂದ ಮೇಲಕ್ಕೆ ಒಂದೇ ಸಾಲಿನಲ್ಲಿ ಐದು ಹಸುಗಳಿವೆ. ವೈರಿಯು ಒಂದು ಕೈಯಲ್ಲಿ ಕತ್ತಿ, ಮತ್ತೊಂದು ಕೈಯಲ್ಲಿ ಗುರಾಣಿಯನ್ನು ಹಿಡಿದುಕೊಂಡು ತನ್ನ ದೇಹ ಮತ್ತು ತಲೆಯನ್ನು ಹಿಂದಕ್ಕೆ ಬಾಗಿಸಿ ನಿಂತಿದ್ದಾನೆ. ವೀರನ ಕತ್ತಿಯಿಂದ ಹೊಟ್ಟೆಗೆ ಇರಿದ ನಿಮಿತ್ತ ತನ್ನ ಶಕ್ತಿ ಕುಂದಿದ್ದರಿಂದ ಹಾಗೂ ಅದಕ್ಕೆ ತತ್ತರಿಸಿದ್ದರಿಂದ ತನ್ನ ದೇಹದ ಭಾಗವನ್ನು ಹಿಂದಕ್ಕೆ ಬಗ್ಗಿಸಿರುವುದನ್ನು ಶಿಲ್ಪಿಯು ಕಲಾತ್ಮಕವಾಗಿ ಚಿತ್ರಿಸಿದ್ದಾನೆ. ವೀರನು ಮೆಟ್ಟಿ ನಿಂತ ಶವದ ಕೆಳಗಡೆ ನಾಯಿ ಒಂದು ಅದರ ರಕ್ತವನ್ನು ಕುಡಿಯುವಂತೆ ಚಿತ್ರಿಸಲಾಗಿದೆ. ವೈರಿಯ ಎಡಬದಿಯಲ್ಲಿ ಅವನ ಪರಿವಾರದೊಬ್ಬನು ಬಿಲ್ಲನ್ನು ಹೊಡೆಯುವಂತೆ ನಿಂತಿದ್ದಾನೆ. ವೈರಿಯ ತಲೆಯ ಮೇಲ್ಭಾಗದಲ್ಲಿ ನಾಲ್ಕು ಮಂದಿ ಅವನ ಪರಿವಾರದವರು ಕತ್ತಿಯನ್ನು ಮೇಲಕ್ಕೆತ್ತಿ ಗುರಾಣಿಯನ್ನು ಮುಂದಕ್ಕೆ ಹಿಡಿದು ಶಿರಸ್ತ್ರಾಣವನ್ನು ಧರಿಸಿ ನಿಂತಿದ್ದಾರೆ. ಇಲ್ಲಿ ದುಂಡಾದ ಗುರಾಣಿಗಳನ್ನು ಒಂದೇ ಸಾಲಿನಲ್ಲಿ ದೊಡ್ಡದಾಗಿ ಚಿತ್ರಿಸಿರುವುದರಿಂದ ಕೇವಲ ನಾಲ್ಕು ತಲೆಗಳು ಮತ್ತು ಅವರು ಮೇಲಕ್ಕೆತ್ತಿ ಹಿಡಿದ ನಾಲ್ಕು ಕತ್ತಿಗಳು ಮಾತ್ರ ಕಂಡುಬರುತ್ತಿದ್ದು. ಅವುಗಳನ್ನು ಸಮಾನಾಂತರವಾಗಿ ಚಿತ್ರಿಸಲಾಗಿದೆ.

ಎರಡನೆಯ ಫಲಕದ ದೃಶ್ಯದಲ್ಲಿ ಮಧ್ಯದಲ್ಲಿ ವಿಮಾನ, ಅದರ ಒಳಗೆ ಮಧ್ಯ ಪೀಠದ ಮೇಲೆ ವೀರ ಕೈಮುಗಿದು ಕುಳಿತಿದ್ದಾನೆ. ಈ ವಿಮಾನವನ್ನು ಅಪ್ಸರೆಯರಿಬ್ಬರು ಒಂದು ಕೈಯಲ್ಲಿ ಹಿಡಿದು ಮತ್ತೊಂದು ಕೈಯಲ್ಲಿ ಚೌರಿಗಳನ್ನು ಹಿಡಿದು ಹಾರುತ್ತಿರುವಂತೆ ಚಿತ್ರಿಸಲಾಗಿದೆ. ಅವರ ತಲೆಯ ಮೇಲ್ಭಾಗದಲ್ಲಿ ಮೋಡದ ಚಿತ್ರವಿದೆ. ಈ ವಿಮಾನ ಮಂಟಪದ ಶಿಖರದ ಬದಿಗಳಲ್ಲಿ ವಾದ್ಯ ಮೇಳದವರಿದ್ದಾರೆ. ಇಬ್ಬರು ಮದ್ದಳೆ ಬಾರಿಸುತ್ತಿರುವರು.

ಮೂರನೆಯ ಫಲಕದ ದೃಶ್ಯದಲ್ಲಿ ಸರಳ ಸುಂದರ ವಿಮಾನವಿದ್ದು, ಅದರ ಒಳಗಡೆ ಯತಿಯೊಬ್ಬ ಘಂಟೆ, ಆರತಿ ಹಿಡಿದು ನಿಂತು ಶಿವಲಿಂಗವನ್ನು ಪೂಜಿಸುತ್ತಾ ನಿಂತಿರುವನು. ಈ ವಿಮಾನದ ಬಲಗಡೆಗೆ ಕುಳಿತ ನಂದಿಯನ್ನು ತೋರಿಸಿರುವುದು ವಿಶೇಷ. ಮಡಿದ ವೀರನನ್ನು ಎಡಗಡೆಗೆ ಚಿತ್ರಿಸಲಾಗಿದೆ. ಆತ ಕೈಮುಗಿಯುತ್ತ ಪದ್ಮಾಸನದಲ್ಲಿದ್ದಾನೆ. ಬದಿಗಳಲ್ಲಿ ಸೂರ್ಯ–ಚಂದ್ರರ ಚಿತ್ರಗಳಿವೆ.

**೪.೨. ಕಲ್ಯಾಣ ಚಾಲುಕ್ಯರ ವೀರಗಲ್ಲುಗಳು– ಶಾಸನ ರಹಿತ :**

ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ಬಳಗಾನೂರು ದಿದ್ದಿಗಿ ಕ್ಯಾತನಹಟ್ಟಿ ಗ್ರಾಮಗಳಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲುಗಳು ಕಂಡುಬಂದಿವೆ. ಇವುಗಳ ಶಿಲೆ ಮತ್ತು ಚಿತ್ರವನ್ನಾಧರಿಸಿ ಈ ವೀರಗಲ್ಲುಗಳ ಕಾಲವನ್ನು ಕ್ರಿ.ಶ ೧೧–೧೨ನೇ ಶತಮಾನದವುಗಳೆಂದು ಹೇಳಬಹುದು. ಬಳಗಾನೂರು ಗ್ರಾಮದಲ್ಲಿ ಆದಯ್ಯ–ಅಮರಯ್ಯ ವೀರಭದ್ರೇಶ್ವರ ಮತ್ತು ಹನುಮಂತ ದೇವಾಲಯದ ಮುಂಭಾಗದಲ್ಲಿ ಸುಮಾರು ಎರಡು ಅಡಿ ಎತ್ತರದ ವೀರಗಲ್ಲುಗಳಿವೆ. ಅದಯ್ಯ–ಅಮರಯ್ಯ ದೇವಾಲಯದ ಮುಂಭಾಗದಲ್ಲಿ ಮೂರು ಹಂತದ ವೀರಗಲ್ಲು ಇದೆ. ಮೊದಲ ಹಂತದಲ್ಲಿ ಖಡ್ಗ–ಗುರಾಣಿ ಹಿಡಿದಿರುವ ವೀರನ ದೃಶ್ಯ ಮತ್ತು ಎರಡನೇ ಹಂತದಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೂರನೇ ಹಂತದಲ್ಲಿ ವೀರನು ಅಂಜಲಿ ಮುದ್ರೆಯಲ್ಲಿ ಶಿವಲಿಂಗದ ಎದುರು ಕೈಮುಗಿದು ಕುಳಿತಿದ್ದಾನೆ; ಯತಿ ಲಿಂಗಕ್ಕೆ ಪೂಜೆ ಸಲ್ಲಿಸುತ್ತಿದ್ದಾನೆ.

ವೀರಭದ್ರೇಶ್ವರ ದೇವಾಲಯದ ಮುಂಭಾಗದಲ್ಲಿನ ವೀರಗಲ್ಲು ಎರಡು ಹಂತಗಳನ್ನು ಹೊಂದಿದೆ. ಮೊದಲ ಹಂತದಲ್ಲಿ ಕುದುರೆಯ ಮೇಲೆ ಕುಳಿತ ವೀರರು ತಮ್ಮ ಒಂದು ಕೈಯಲ್ಲಿ ಖಡ್ಗ, ಇನ್ನೊಂದು ಕೈಯಲ್ಲಿ ಕುದುರೆಯ ಲಗಾಮು ಹಿಡಿದಿದ್ದಾರೆ. ಕುದುರೆಗಳು ತಮ್ಮ ಎರಡು ಕಾಲುಗಳನ್ನು ಮೇಲೆತ್ತಿವೆ. ಕುದುರೆಯ ಮುಂಭಾಗದಲ್ಲಿ ಖಡ್ಗ–ಗುರಾಣಿಹಿಡಿದಿರುವ ಇಬ್ಬರು ವೀರರ ಶಿಲ್ಪಗಳಿವೆ. ಕುದುರೆ ಕಾಲ ಬಳಿ ಸತ್ತ ಸೈನಿಕನ ಚಿತ್ರವಿದೆ. ಎರಡನೇ ಹಂತದಲ್ಲಿ ವೀರರು ಅಂಜಲಿ ಮುದ್ರೆಯಲ್ಲಿ ಶಿವಲಿಂಗದ ಎದುರು ಕೈಮುಗಿದು ಕುಳಿತಿದ್ದಾರೆ. ಯತಿ ಲಿಂಗಕ್ಕೆ ಪೂಜೆ ಮಾಡುವ ಚಿತ್ರಣವಿದೆ. ಇದರ ಪಕ್ಕದಲ್ಲಿರುವ ಮತ್ತೊಂದು ವೀರಗಲ್ಲಿನಲ್ಲಿ ಗೋವುಗಳನ್ನು ಚಿತ್ರಿಸಲಾಗಿದೆ. ಹನುಮಂತ ದೇವಾಲಯದ ಮುಂಭಾಗದಲ್ಲಿರುವ ವೀರಗಲ್ಲು ಮೂರು ಹಂತಗಳನ್ನು ಹೊಂದಿದೆ. ಮೊದಲ ಹಂತದಲ್ಲಿ ವೀಣಾವಾದಕ ಮತ್ತು ನೃತ್ಯಗಾರ್ತಿಯರ ಚಿತ್ರಣವಿದೆ; ಎರಡನೇ

ಹಂತದಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವುದನ್ನು ಮತ್ತು ಮೂರನೇ ಹಂತದಲ್ಲಿ ಸ್ವರ್ಗದಲ್ಲಿರುವ ವೀರನ ಚಿತ್ರಣವಿದೆ.

ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ದಿದ್ದಿಗಿ ಗ್ರಾಮದಲ್ಲಿನ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲುಗಳು ಉಳಿದ ಪ್ರದೇಶಗಳಿಗಿಂತ ಭನ್ನವಾಗಿವೆ. ಇಲ್ಲಿನ ಸೋಮನಾಥೇಶ್ವರ ದೇವಾಲಯದ ಗರ್ಭಗೃಹದಲ್ಲಿರುವ ವೀರಗಲ್ಲೊಂದು ನಾಲ್ಕು ಹಂತಗಳನ್ನು ಹೊಂದಿದೆ. ಈ ವೀರಗಲ್ಲು ಸುಮಾರು ೨ ಅಡಿ ಎತ್ತರವಿದೆ. ಮೊದಲ ಹಂತದಲ್ಲಿ ವೀರನನ್ನು ದೊಡ್ಡ ಗಾತ್ರದಲ್ಲಿ ಚಿತ್ರಿಸಿದ್ದು, ಬಲಗೈಯಲ್ಲಿ ಬಿಲ್ಲು, ಎಡಗೈಯಲ್ಲಿ ಬಾಣಗಳಿವೆ. ಸೊಂಟದಲ್ಲಿ ಖಡ್ಗವಿಡುವ ಸಾಧನವಿದೆ. ವೀರನ ಬದಿಯಲ್ಲಿರುವ ಬಿಲ್ಲು ಬಾಣಗಳನ್ನು ಹಿಡಿದಿರುವ ಹಾಗೂ ಸತ್ತ ಸೈನಿಕರ ದೇಹಗಳಿಗಿವೆ. ಎರಡನೇ ಹಂತದಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ಚಿತ್ರಣವಿದೆ. ಮೂರನೇ ಹಂತದಲ್ಲಿ ಶಿವಲಿಂಗದ ಎದುರು ವೀರನು ಅಂಜಲಿ ಮುದ್ರೆಯಲ್ಲಿ ಕೈಮುಗಿದು ಕುಳಿತಿದ್ದಾನೆ. ಯತಿ ಲಿಂಗಕ್ಕೆ ಪೂಜೆ ಸಲ್ಲಿಸುವ ದೃಶ್ಯವಿದೆ. ನಾಲ್ಕನೇ ಹಂತದಲ್ಲಿ ಶಿವಲಿಂಗ ಮತ್ತು ಚಂದ್ರನ ಉಬ್ಬುಶಿಲ್ಪವನ್ನು ಕಾಣಬಹುದು.

ಇದರ ಪಕ್ಕದಲ್ಲಿ ಮೂರು ಹಂತಗಳ ವೀರಗಲ್ಲು ಇದೆ. ಮೊದಲ ಹಂತದಲ್ಲಿ ವೀರನು ಬಿಲ್ಲು-ಬಾಣ ಹಿಡಿದಿದ್ದು, ವೀರನ ಎದುರಿಗೆ ಕುದುರೆ ಸವಾರಿ ನಿರತ ವೀರನ ದೃಶ್ಯವಿದೆ. ಇವೆರಡೂ ಪರಸ್ಪರ ಮುನ್ನುಗ್ಗುತ್ತಿರುವಂತೆ ಚಿತ್ರಿಸಲಾಗಿದೆ. ಎರಡನೇ ಹಂತದಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೂರನೇ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿರುವ ವೀರನ ದೃಶ್ಯ ಮತ್ತು ಶಿವಲಿಂಗಕ್ಕೆ ಪೂಜೆ ಮಾಡುವ ಯತಿಯ ಚಿತ್ರಣವಿದೆ.

ಗರ್ಭಗೃಹದಲ್ಲಿರುವ ಎರಡು ಹಂತದ ವೀರಗಲ್ಲು ಆಕರ್ಷಕವಾಗಿದೆ. ಇದು ಎರಡು ಅಡಿ ಎತ್ತರವಿದೆ. ಮೊದಲ ಹಂತದಲ್ಲಿ ಖಡ್ಗ, ಗುರಾಣಿ, ಭರ್ಜಿ ಮುಂತಾದ ಆಯುಧಗಳನ್ನು ಹಿಡಿದಿರುವ ಹಾಗೆಯೇ ಪಲ್ಲಕ್ಕಿ, ಛತ್ರಿ ಹಿಡಿದಿರುವ ಸೈನಿಕರ ಚಿತ್ರಣವಿದೆ. ಎರಡನೇ ಹಂತದಲ್ಲಿ ಕುದುರೆಯ ಮೇಲೆ ಕುಳಿತಿರುವ ವೀರನನ್ನು ದೊಡ್ಡ ಗಾತ್ರದಲ್ಲಿ ಚಿತ್ರಿಸಲಾಗಿದೆ. ವೀರನ ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಕುದುರೆಯ ಲಗಾಮವನ್ನು ಹಿಡಿದಿದ್ದಾನೆ. ಈ ವೀರನ ಸುತ್ತ ಖಡ್ಗ, ಗುರಾಣಿ, ಬಿಲ್ಲು, ಬಾಣ, ಭರ್ಜಿ ಮುಂತಾದ ಆಯುಧಗಳನ್ನು ಹಿಡಿದಿರುವ ಸೈನಿಕರ ಚಿತ್ರಣಗಳಿವೆ. ಹಾಗೆಯೇ ಕುದುರೆ, ನಾಯಿ ಮುಂತಾದ ಪ್ರಾಣಿಗಳನ್ನು ಇಲ್ಲಿ ಚಿತ್ರಿಸಲಾಗಿದೆ.

ದೇವಾಲಯದ ಮುಂಭಾಗದಲ್ಲಿ ಒಂದು ಹಂತದ ವೀರಗಲ್ಲಿನಲ್ಲಿ ವೀರನನ್ನು ದೊಡ್ಡ ಗಾತ್ರದಲ್ಲಿ ಚಿತ್ರಿಸಲಾಗಿದೆ. ವೀರನು ಬಿಲ್ಲು ಬಾಣಗಳನ್ನು ಹಿಡಿದಿದ್ದು ತಲೆಯ ಮೇಲೆ ಪೇಟ ಸುತ್ತಿರುವ ದೃಶ್ಯವಿದೆ. ವೀರನ ಮೇಲ್ಭಾಗದಲ್ಲಿ ಅಪ್ಸರೆಯರು ವೀರನನ್ನು ಕೊಂಡೊಯ್ಯುತ್ತಿರುವ ಚಿತ್ರಣವಿದೆ.

ಇದೇ ಗ್ರಾಮದ ಬಸವಲಿಂಗೇಶ್ವರ ಗದ್ದುಗೆಯ ಹತ್ತಿರ ಕಲ್ಯಾಣ ಚಾಲುಕ್ಯರ ಕಾಲದ ಮೂರು ವೀರಗಲ್ಲುಗಳಿವೆ. ಈ ವೀರಗಲ್ಲುಗಳು ಮೂರು ಹಂತಗಳನ್ನು ಹೊಂದಿವೆ. ಮೊದಲ ಹಂತದಲ್ಲಿ ಬಿಲ್ಲು ಬಾಣಗಳನ್ನು ಹಿಡಿದಿರುವ ವೀರನ ಚಿತ್ರಣವಿದ್ದರೆ, ಎರಡನೇ ಹಂತದಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೂರನೇ ಹಂತದಲ್ಲಿ ಶಿವಲಿಂಗದ ಎದುರು ಅಂಜಲಿ ಮುದ್ರೆಯಲ್ಲಿ ಕೈಮುಗಿದು ಕುಳಿತ ವೀರನ ಹಾಗೂ ಯತಿ ಶಿವಲಿಂಗಕ್ಕೆ ಪೂಜೆ ಮಾಡುವ ಚಿತ್ರಣವಿದೆ.

ಸಿಂಧನೂರು ತಾಲೂಕಿನ ಕ್ಯಾತನಹಟ್ಟಿ ಗ್ರಾಮದ ಹನುಮಂತನ ಗುಡಿಯ ಮುಂಭಾಗದಲ್ಲಿರುವ ಒಂದು ಹಂತದ ಐದು ವೀರಗಲ್ಲುಗಳಿವೆ. ಇಲ್ಲಿನ ವೀರರು ಕೈಯಲ್ಲಿ ಖಡ್ಗ, ಗುರಾಣಿ, ಬಿಲ್ಲು, ಬಾಣ ಹಿಡಿದು ತಲೆಗೆ ಪೇಟವನ್ನು ಸುತ್ತಿದ್ದಾರೆ. ರಾಯಚೂರು ತಾಲೂಕಿನ ಗುಂಜಳ್ಳಿ ಗ್ರಾಮದ ಈಶ್ವರ ದೇವಾಲಯದ ಮುಂದೆ ಇರುವ ಕ್ರಿ.ಶ ೧೨ನೆಯ ಶತಮಾನದ ವೀರಗಲ್ಲು ಇದ್ದು, ಶಿಲ್ಪದಲ್ಲಿ ವೀರನೊಬ್ಬ ಕುದುರೆ ಸವಾರಿ ಮಾಡುತ್ತಿರುವನು. ಎಡಗೈಯಲ್ಲಿ ಕುದುರೆಯ ಮೂಗುದಾರವನ್ನು ಹಿಡಿದಿದ್ದಾನೆ. ಬಲಗೈಯಲ್ಲಿ ಉದ್ದವಾದ ಕತ್ತಿಯನ್ನು ತನ್ನ ಮುಂದಿನ ಬಲಗಡೆ ತೋರಿಸುತ್ತ, ಓಡುವ ಕುದುರೆಯ ಮುಂದಿನ ಕಾಲುಗಳ ಮೇಲೆ ಬಿದ್ದಿವೆ. ಕುದುರೆಯ ಮುಂದೆ ಒಬ್ಬ ಸೇವಕ ನಿಂತಿದ್ದಾನೆ. ಆತನು ವೇಷಭೂಷಣ ಧರಿಸಿದ್ದು ತನ್ನ ತಲೆಯ ಮೇಲೆ ತುರುಬು ಕಟ್ಟಿಕೊಂಡಿದ್ದಾನೆ. ಈ ಮಾದರಿಯ ಇನ್ನೊಂದು ಶಿಲ್ಪದಲ್ಲಿ ಬಲಗೈಯಿಂದ ಮೇಲ್ಭಾಗಕ್ಕೆ ಎತ್ತಿ ಹಿಡಿದ ಈಟಿಯುಳ್ಳ ಕುದುರೆ ಸವಾರನಿಗೆ ಸೇವಕನೊಬ್ಬ ಎತ್ತರದ ಛತ್ರಿಯನ್ನು ಹಿಡಿದು ಇನ್ನೊಬ್ಬನ ಸಂಗಡ ಕುದುರೆಯ ಬಾಲದ ಬದಿಗೆ ನಿಂತಿದ್ದಾನೆ. ಈತನೂ ರಾಜಪರಿವಾರದವನಾಗಿರಬೇಕು. ಈ ವೀರಗಲ್ಲಿನ ಮೇಲ್ಭಾಗ ಅರ್ಧವೃತ್ತಾಕಾರದಲ್ಲಿದೆ. ಒಂದು ಶಿಲ್ಪದಲ್ಲಿ ಕೇವಲ ಕುದುರೆ ಸವಾರನ ಚಿತ್ರವಿದೆ. ಸವಾರ ಈಟಿಯನ್ನು ಮುಂದೆ ಹಿಡಿದು ಕುದುರೆಯನ್ನು ಓಡಿಸಿಕೊಂಡು ಹೋಗುವ ಭಂಗಿಯಲ್ಲಿದ್ದಾನೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲಿನ ಕೆಳಭಾಗದ ಪಟ್ಟಿಕೆಯಲ್ಲಿ ವೀರನು ವೀರಗಾಸೆ ತೊಟ್ಟು, ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಅಗಲವಾದ ಗುರಾಣಿ ಹಿಡಿದುಕೊಂಡು ಶತ್ರುಗಳ ಜೊತೆಗೆ ಹೋರಾಡುತ್ತಿದ್ದಾನೆ. ಸೈನಿಕರ ಮಧ್ಯ ಪಟ್ಟಿಕೆಯಲ್ಲಿ ಅಪ್ಸರೆಯರು ಅಲಂಕೃತ ಮಂಟಪದ ಪಲ್ಲಕ್ಕಿ ಒಳಗೆ ಕುಳ್ಳಿರಿಸಿ ಛತ್ರಿ ಧ್ವಜ ಚಾಮರಗಳ ಸೇವಕರ ಮೂಲಕ ಕರೆದುಕೊಂಡು ಹೋಗುತ್ತಿರುವುದು; ಮೂರನೇ ಮೇಲ್ಭಾಗದ ಪಟ್ಟಿಕೆಯಲ್ಲಿ ಶಿವ ಧ್ಯಾನಾಸಕ್ತನಾಗಿರುವುದು ಬಿಂಬಿತವಾಗಿದೆ. ಇಲ್ಲಿ ನಂದಿ ಮತ್ತು ಭಕ್ತನ ಶಿಲ್ಪಗಳು ಕೆತ್ತಲ್ಪಟ್ಟಿವೆ. ಇಲ್ಲಿನ ಧ್ವಜ ದಿಗ್ವಿಜಯ ಸಂಕೇತವೂ ಆಗಿದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿರುವ ಕ್ರಿ.ಶ ೧೨ನೆಯ ಶತಮಾನದ ವೀರಗಲ್ಲಿನ ಕೆಳಭಾಗ ಪಟ್ಟಿಕೆಯ ಅರ್ಧಭಾಗ ನಾಶವಾಗಿದೆ. ವೀರ ಬಲಗೈಯಲ್ಲಿ

ಕತ್ತಿಯನ್ನು (ಖಡ್ಗ) ಹಿಡಿದು ನಿಂತಿರುವ ದೃಶ್ಯ, ಎರಡನೆಯ ಪಟ್ಟಿಕೆಯಲ್ಲಿ ವೀರನನ್ನು ದೇವಲೋಕದ ಅಪ್ಸರೆಯರು ಕರೆದುಕೊಂಡು ಹೋಗುತ್ತಿರುವ ದೃಶ್ಯ ಮತ್ತು ಮೂರನೇ ಪಟ್ಟಿಕೆಯಲ್ಲಿ ವೀರ ಮಂಟಪದೊಳಗೆ ಪದ್ಮಾಸನದಲ್ಲಿ ಕುಳಿತುಕೊಂಡಿರುವುದು ಹಾಗೆಯೇ ಯಕ್ಷ-ಯಕ್ಷಿಯರು ಚಾಮರ ಹಿಡಿದು ನಿಂತಿದ್ದಾರೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿರುವ ಕ್ರಿ.ಶ ೧೨ನೆಯ ಶತಮಾನದ ವೀರಗಲ್ಲಿನಲ್ಲಿ ವೀರ ಮತ್ತು ಸೈನಿಕರು ಕುದುರೆಯ ಮೇಲೆ ಈಟಿ, ಭರ್ಜಿ, ಬಾಣಗಳನ್ನು ಎಸೆಯುತ್ತಿರುವ ದೃಶ್ಯವಿದೆ. ಎರಡನೆಯ ಪಟ್ಟಿಕೆಯಲ್ಲಿ ವೀರನನ್ನು ಅಪ್ಸರೆಯರು ಮತ್ತು ಯಕ್ಷ-ಯಕ್ಷಿಯರು ದೇವಲೋಕಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೂರನೇ ಪಟ್ಟಿಕೆಯಲ್ಲಿ ವೀರನು ದೇವರ ಸಾನಿಧ್ಯದಲ್ಲಿ ಭಕ್ತಿ ನಿರತನಾಗಿದ್ದಾನೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿರುವ ಕ್ರಿ.ಶ ೧೨ನೆಯ ಶತಮಾನದ ವೀರಗಲ್ಲು. ಮೂರು ಹಂತಗಳಿಂದ ಕೂಡಿದೆ. ಕೆಳಭಾಗದ ಪಟ್ಟಿಕೆಯಲ್ಲಿ ವೀರನು ಮತ್ತು ಸೈನಿಕರು ಯುದ್ಧದಲ್ಲಿ ಬಿಲ್ಲು-ಬಾಣಗಳನ್ನು ಹಿಡಿದು ವೈರಿಗಳೊಡನೆ ಹೋರಾಡುತ್ತಿದ್ದಾರೆ. ಮಧ್ಯಭಾಗದ ಪಟ್ಟಿಕೆಯಲ್ಲಿ ವೀರ ಮತ್ತು ಅಪ್ಸರೆಯರು ಮಂಟಪದ ಒಳಗಡೆ ಕೂಡಿಸಿ ಧ್ಯಾನಾಸಕ್ತನಾಗಿರುವರು. ಮೂರನೇ ಪಟ್ಟಿಕೆಯಲ್ಲಿ ವೀರನು ಶಿವನ ಸಾನಿಧ್ಯದಲ್ಲಿ ಭಕ್ತಿಯಿಂದ ವಂದಿಸುತ್ತಿರುವ ದೃಶ್ಯ ನೈಜವಾಘಿ ಕಂಡುಬರುತ್ತದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲಿನ ಕೆಳಭಾಗದ ಪಟ್ಟಿಕೆಯಲ್ಲಿ ವೀರ ಗುರಾಣಿ, ಕತ್ತಿ ಮತ್ತು ಸೈನಿಕರು ಬಿಲ್ಲು-ಬಾಣಗಳನ್ನು ಹಿಡಿದು ವೀರಗಾಸೆ ಧರಿಸಿ ಶತ್ರುಸೈನ್ಯದ ಜೊತೆಗೆ ಯುದ್ಧದಲ್ಲಿ ನಿರತರಾಗಿರುವ ದೃಶ್ಯವಿದೆ. ಮಧ್ಯ ಪಟ್ಟಿಕೆಯಲ್ಲಿ ವೀರನು ಮಂಟಪದೊಳಗೆ ಅಂಜಲಿ ಮುದ್ರೆಯಲ್ಲಿ ಪದ್ಮಾಸನದಲ್ಲಿ ಕುಳಿತುಕೊಂಡಿದ್ದಾನೆ. ವೀರನ ಎರಡೂ ಬದಿಯಲ್ಲಿ ಅಂಗರಕ್ಷಕರು ಶ್ವೇತಛತ್ರಿ ಹಿಡಿದು ನಿಂತಿರುವುದು ಮೇಲ್ಭಾಗದ ಪಟ್ಟಿಕೆಯಲ್ಲಿ ಅಂಜಲಿ ಮುದ್ರೆಯಲ್ಲಿ ವೀರ ಶಿವಲಿಂಗಕ್ಕೆ ವಂದಿಸುತ್ತಿರುವ ಶೈಲಿ ಈ ಶಿಲ್ಪದ ವೈಶಿಷ್ಟ್ಯತೆಯಾಗಿದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲಿನ ಕೆಳಭಾಗದ ಪಟ್ಟಿಯಲ್ಲಿ ಬಿಲ್ಲು-ಬಾಣಗಳನ್ನು ಹಿಡಿದು ವೀರ ಮತ್ತು ಸೈನಿಕರು ಶತ್ರುಗಳೊಡನೆ ಹೋರಾಡುತ್ತಿದ್ದಾರೆ. ಮಧ್ಯಭಾಗದಲ್ಲಿ ವೀರ ಮಂಟಪದ ಒಳಗೆ ಅಂಜಲಿ ಮುದ್ರೆಯಲ್ಲಿ ಪದ್ಮಾಸನದಲ್ಲಿ ಆಸೀನನಾಗಿದ್ದಾನೆ. ಮಂಟಪದ ಎರಡೂ ಬದಿಯಲ್ಲೂ ಯಕ್ಷಿಯರು ಚಾಮರಗಳನ್ನು ಹಿಡಿದು ನಿಂತಿದ್ದಾರೆ. ಮೇಲ್ಭಾಗದ ಪಟ್ಟಿಕೆಯಲ್ಲಿ ಗುರು ಶಿವಲಿಂಗಕ್ಕೆ ಪೂಜೆ ಮಾಡುತ್ತಿದ್ದರೆ, ವೀರ ಪದ್ಮಾಸನದಲ್ಲಿ ಆಸೀನನಾಗಿರುವ ದೃಶ್ಯ ಹಾಗೂ ನಂದಿಯ ಉಬ್ಬು ಶಿಲ್ಪವನ್ನು ಇಲ್ಲಿ ಚಿತ್ರಿಸಲಾಗಿದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ನಾಲ್ಕು ಹಂತಗಳಿಂದ ಕೂಡಿದೆ. ಕೆಳಭಾಗದ ಪಟ್ಟಿಕೆಯಲ್ಲಿ ವೀರರು ಈಟಿ ಹಿಡಿದು ಕುದುರೆಯ ಸವಾರರಾಗಿ ಸೈನಿಕರ ಜೊತೆಗೆ ಹೋರಾಡುತ್ತಿದ್ದಾನೆ. ಎರಡನೆ ಪಟ್ಟಿಕೆಯಲ್ಲಿ ವೀರರು ಕುದುರೆಯ ಮೂಗುದಾರ ಹಿಡಿದು ಈಟಿ ಭರ್ಜಿಗಳಿಂದ ಶತ್ರುಗಳ ವಿರುದ್ಧ ಹೋರಾಡುತ್ತಿದ್ದಾರೆ. ಮೂರನೇ ಪಟ್ಟಿಕೆಯಲ್ಲಿ ಯಕ್ಷ-ಯಕ್ಷಿಯರು ಅಲಂಕೃತ ಮಂಟಪದಲ್ಲಿ ವೀರನನ್ನು ಕರೆದ್ದೊಯ್ಯುತ್ತಿರುವುದು ಕಂಡುಬರುತ್ತದೆ. ನಾಲ್ಕನೇ ಪಟ್ಟಿಕೆಯಲ್ಲಿ ವೀರನು ಲಿಂಗದ ಸಾನಿಧ್ಯದಲ್ಲಿ ಕುಳಿತು ಅಂಜಲಿ ಮುದ್ರೆಯಲ್ಲಿರುವ ಚಿತ್ರಣವಿದೆ. ಅಕ್ಕಪಕ್ಕ ಶೈವ ದ್ವಾರಪಾಲಕರು ಸ್ಥಾನಿಕ ಭಂಗಿಯಲ್ಲಿದ್ದಾರೆ.

ಬಳ್ಳಾರಿ ತಾಲೂಕಿನ ಕುಡಿತಿನಿ ಗ್ರಾಮದ ಹಾಲುಬಾವಿಯ ಪಕ್ಕದಲ್ಲಿ ದೊರೆತ ಕಲ್ಯಾಣ ಚಾಲುಕ್ಯರ ವೀರಗಲ್ಲು ಶಾಸನರಹಿತವಾಗಿದೆ. ಶಾಸನವು ತ್ರುಟಿತವಾಗಿದೆ. ಆ ಶಾಸನದಲ್ಲಿ ದಾಳಿ ನಡೆದ ಬಗ್ಗೆ ಹಾಗೂ ದಾಳಿಯಲ್ಲಿ ಹೋರಾಡಿ ಮಡಿದ ಒಬ್ಬ ವೀರನ ಸ್ಮರಣೆಗಾಗಿ ಈ ವೀರಗಲ್ಲು ಶಾಸನ ನಿಲ್ಲಿಸಿದಂತೆ ತಿಳಿದು ಬರುತ್ತದೆ. ಇದು ಸ್ಮಾರಕ ಶಾಸನವಾಗಿದೆ. ಈ ವೀರಗಲ್ಲು ಶಾಸನವು ಮೂರು ಹಂತಗಳ ಶಾಸನವಾಗಿದೆ. ಮೊದಲನೆಯ ಹಂತದಲ್ಲಿ ವೀರ ಹೋರಾಡುತ್ತಿರುವ ದೃಶ್ಯವಿದೆ. ಎರಡನೇ ಹಂತದಲ್ಲಿ ವೀರನನ್ನು ಇಬ್ಬರು ಸುರಾಂಗನೆಯರು ಹಿಡಿದುಕೊಂಡು ಹಾರುವ ದೃಶ್ಯವಿದ್ದರೆ, ಮೂರನೇ ಹಂತದಲ್ಲಿ ಶಿವಲಿಂಗದ ಸಾನಿಧ್ಯದಲ್ಲಿ ಕುಳಿತು ವೀರನು ಪೂಜಿಸುತ್ತಿರುವ ದೃಶ್ಯವಿದೆ. ಹಾಗೂ ಸೂರ್ಯನ ಚಿತ್ರವಿದೆ. ಚಂದ್ರನಿರುವ ಭಾಗ ತುಂಡಾಗಿದೆ. ಮಧ್ಯದಲ್ಲಿ ಬರುವ ಪಟ್ಟಿಗಳಲ್ಲಿ ಶಾಸನ ಕೆತ್ತಲಾಗಿದೆ. ಮೇಲಿನ ಶಾಸನ ಸಹಿತವಾದ ಪಟ್ಟಿ ಸ್ವಲ್ಪ ತುಂಡಾಗಿದ್ದು, ಶಿವಲಿಂಗದ ಮುಂದೆ ವೀರನು ಕುಳಿತಿರುವ ವ್ಯಕ್ತಿಯ ಶಿಲ್ಪದ ಅರ್ಧಭಾಗ ತುಂಡಾಗಿದೆ.

ಇದೇ ತಾಲೂಕಿನ ಕುಡಿತಿನಿಯ ಕಲ್ಲೂರು ಅಗಸೆಯ ಆಂಜನೇಯ ದೇವಸ್ಥಾನದ ಪಕ್ಕದಲ್ಲಿ ವೀರಗಲ್ಲು ದೊರೆತಿದೆ. ವೀರಗಲ್ಲು ಎರಡು ಹಂತಗಳನ್ನು ಮಾತ್ರ ಹೊಂದಿದೆ. ಕೆಳಭಾಗದ ಹಂತದಲ್ಲಿ ವೀರನು ಬಿಲ್ಲು-ಬಾಣಗಳನ್ನು ಹಿಡಿದುಕೊಂಡು ಕುದುರೆ ಮೇಲೆ ಕತ್ತಿಯನ್ನು ಹಿಡಿದುಕೊಂಡು ವೀರನೊಂದಿಗೆ ಹೋರಾಡುವ ದೃಶ್ಯವನ್ನು ಮತ್ತು ಯುದ್ಧದಲ್ಲಿ ಹೋರಾಡುವಾಗ ಮಡಿದ ವೀರನ ಚಿತ್ರಣವನ್ನು ಕಾಣಬಹುದು. ಮೇಲ್ಭಾಗದ ಹಂತದಲ್ಲಿ ವೀರನನ್ನು ಸುರಾಂಗನೆಯರಿಬ್ಬರು ಹಿಡಿದುಕೊಂಡು ಹಾರುವ ದೃಶ್ಯವಿದ್ದು, ಪಕ್ಕದಲ್ಲಿ ಸೂರ್ಯನ ಚಿತ್ರವಿರುವುದನ್ನು ಕಾಣಬಹುದು. ಕೆಳಗಿನ ಭಾಗದಲ್ಲಿ ವೀರನು ಹೋರಾಡುವ ದೃಶ್ಯದಲ್ಲಿ ಕಾಲುಗಳು ಇರುವ ಭಾಗ ತ್ರುಟಿತವಾಗಿದೆ.

ಇದೇ ತಾಲೂಕಿನ ಕುಡಿತಿನಿ ಗ್ರಾಮದ ಕಲ್ಲೂರು ಅಗಸೆ ಮುಂದೆ ದೊರೆತಿರುವ ವೀರಗಲ್ಲು ಶಾಸನ ರಹಿತವಾಗಿದೆ. ಈ ವೀರಗಲ್ಲಿನಲ್ಲಿ ವೀರನೊಬ್ಬನು ಬಿಲ್ವಿದ್ಯೆಯಲ್ಲಿ ಪರಿಣಿತನಾಗುವ ಅಭ್ಯಾಸದಲ್ಲಿ ನಿರತನಾಗಿ ಹೋರಾಟಕ್ಕೆ ಸಿದ್ಧನಾಗುವ ಹಾಗೆ ಶಿಲ್ಪಿಯು ಚಿತ್ರಿಸಿದ್ದಾನೆ. ವೀರನು

ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಬಾಣವನ್ನು ಹಿಡಿದುಕೊಂಡು ಮುನ್ನುಗ್ಗುವ ದೃಶ್ಯವನ್ನು ಸ್ಪಷ್ಟವಾಗಿ ಕಾಣಬಹುದು. ಕೂಡ್ಲಿಗಿ ತಾಲೂಕಿನ ಕಾಟ್ರಹಳ್ಳಿ ಗ್ರಾಮದ ಬಾವಿಯ ದಂಡೆಯ ಮೇಲೆ ಇರುವಂತಹ ವೀರಗಲ್ಲಿನ ಮೊದಲನೆ ಹಂತದಲ್ಲಿ ವೀರರು ಬಿಲ್ಲು-ಬಾಣಗಳನ್ನು ಹಿಡಿದು ಹೋರಾಡುವ ಚಿತ್ರಣವಿದೆ. ಎರಡನೆ ಹಂತದಲ್ಲಿ ಕುದುರೆಯ ಮೇಲೆ ಕುಳಿತು ವೀರ ಭರ್ಚಿಯನ್ನು ಹಿಡಿದು ಶತ್ರುಗಳೊಡನೆ ಹೋರಾಡುವಂಥ ಚಿತ್ರವಿದೆ. ಮೇಲ್ಭಾಗದಲ್ಲಿ ಶಿವಲಿಂಗ ಮತ್ತು ಸೂರ್ಯ, ಚಂದ್ರರ ಚಿತ್ರಗಳಿವೆ.

ಇದೇ ತಾಲೂಕಿನ ಗಜಾಪುರದ ಊರ ಮಧ್ಯೆ ಕಟ್ಟೆಯ ಮೇಲೆ ಇರಿಸಿರುವ ವೀರಗಲ್ಲಿನಲ್ಲಿ ವೀರ ಕುದುರೆಯ ಮೇಲೆ ಕುಳಿತು ಕತ್ತಿಯನ್ನು ಹಿಡಿದು ಯುದ್ಧಕ್ಕೆ ಹೊರಟ ಚಿತ್ರ ನೋಡಬಹುದು. ಮತ್ತು ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ಚಿತ್ರಗಳಿವೆ. ಇದು ೧೨ನೇ ಶತಮಾನಕ್ಕೆ ಸೇರಿದೆ.

ಇದೇ ತಾಲೂಕಿನ ಗುಡೇಕೋಟೆಯ ಊರ ಹೊರಗೆ ಹೆಬ್ಬಂಡೆಯ ಮೇಲೆ ವೀರಗಲ್ಲೊಂದನ್ನು ಸುಂದರವಾಗಿ ಕೆತ್ತಲಾಗಿದೆ. ಕುದುರೆಯ ಮೇಲೆ ಕತ್ತಿಯನ್ನು ಹಿಡಿದು ಯುದ್ಧಕ್ಕೆ ಹೊರಟ ವೀರರು ಮತ್ತು ಹೆಂಗಳೆಯರು ಬೀಳ್ಕೊಡುವ ಚಿತ್ರವಿದೆ. ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ಚಿತ್ರವಿದೆ. ಇದು ೧೨ನೆಯ ಶತಮಾನದ್ದಾಗಿದೆ.

ಹಡಗಲಿ ತಾಲೂಕಿನ ವಸ್ತುಸಂಗ್ರಹಾಲಯದಲ್ಲಿರುವ ವೀರಗಲ್ಲು ಕ್ರಿ.ಶ. ೧೧ನೆಯ ಶತಮಾನದ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದುದಾಗಿದೆ. ಮೂರು ಪಟ್ಟಿಕೆಗಳನ್ನು ಹೊಂದಿದೆ. ಕೆಳಗಿನ ಹಂತದಲ್ಲಿ ವೀರರು ಬಿಲ್ಲು, ಬಾಣ, ಭರ್ಚಿ, ಗುರಾಣಿಗಳಿಂದ ಪರಸ್ಪರ ಹೋರಾಡುತ್ತಿರುವ ದೃಶ್ಯವಿದೆ. ಕಾಲ ಕೆಳಗೆ ವೈರಿಗಳ ಮೃತ ದೇಹಗಳಿವೆ. ಎರಡನೆಯ ಹಂತದಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತದಲ್ಲಿ ವೀರನು ಅಂಜಲಿ ಮುದ್ರೆಯಲ್ಲಿ ಕುಳಿತಿರುವನು. ಶಿವಲಿಂಗವನ್ನು ಪೂಜಿಸುತ್ತಿರುವ ಮುನಿ ಮತ್ತು ಸೂರ್ಯ-ಚಂದ್ರರ ಚಿತ್ರಣವಿದೆ.

ಇದೇ ತಾಲೂಕಿನ ಮಾಗಳ ಸೂರ್ಯನಾರಾಯಣ ದೇವಾಲಯದ ಆವರಣದಲ್ಲಿರುವ ಕಲ್ಯಾಣ ಚಾಲುಕ್ಯರ ಕಾಲದ ಮೂರು ಹಂತಗಳಿಂದ ಕೂಡಿದ ವೀರಗಲ್ಲು ತುಂಬಾ ಸುಂದರವಾಗಿದೆ. ಕೆಳಭಾಗದ ಹಂತದಲ್ಲಿ ವೀರನು ಯುದ್ಧದಲ್ಲಿ ಶತ್ರುಗಳೊಂದಿಗೆ ಭರ್ಚಿ, ಗುರಾಣಿ ಆಯುಧಗಳಿಂದ ಹೋರಾಡುತ್ತಿದ್ದಾನೆ. ಅವನ ಕೆಳಗೆ ವೈರಿಗಳು ಸತ್ತು ಬಿದ್ದಿರುವ ಚಿತ್ರಣವಿದೆ. ಮಧ್ಯದ ಹಂತವು ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೃಶ್ಯವಿದೆ. ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ಚಿತ್ರಣವಿದೆ. ಲಿಂಗವನ್ನು ಪೂಜಿಸುತ್ತಿರುವ ಯತಿ, ಯತಿಯ ಹಿಂದೆ ನಂದಿ, ಅಂಜಲಿ ಮುದ್ರೆಯಲ್ಲಿ ಕುಳಿತ ವೀರನ ತಲೆಯ ಹಿಂಭಾಗದಲ್ಲಿ ಹಾವಿನ ಚಿತ್ರಣವಿದೆ.

ಇದೇ ತಾಲೂಕಿನ ತಿಪ್ಪಾಪುರದ ಕಲ್ಲೇಶ್ವರ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲಿನಲ್ಲಿ ಕುದುರೆಯನ್ನು ಪಳಗಿಸುತ್ತಿರುವ ಯೋಧನನ್ನು ಕೆತ್ತಲಾಗಿದೆ. ಇವನ ಹಿಂಬದಿಯಲ್ಲಿ ಕೈಮುಗಿದು ನಿಂತ ವ್ಯಕ್ತಿಯನ್ನು ಚಿತ್ರಿಸಲಾಗಿದೆ.

ಇದೇ ತಾಲೂಕಿನ ಹಾಳೂರು ಶಿವಲಿಂಗನಹಳ್ಳಿಯ ಕಲ್ಯಾಣ ಚಾಲುಕ್ಯರ ಕಾಲದ ಮೂರು ಹಂತಗಳನ್ನುಳ್ಳ ಶಿಲೆಯು ಎರಡು ಭಾಗವಾಗಿ ತುಂಡಾಗಿದೆ. ಕೆಳಭಾಗದ ಹಂತದಲ್ಲಿ ವೀರನು ಶತ್ರುಗಳೊಂದಿಗೆ ಯುದ್ಧದಲ್ಲಿ ಹೋರಾಡುತ್ತಿರುವುದು ಮತ್ತು ಅವನ ಕೆಳಗೆ ನಾಲ್ಕು ಜನ ಸತ್ತು ಬಿದ್ದಿರುವ ಚಿತ್ರಣವಿದೆ. ಮಧ್ಯದ ಹಂತವು ಸತ್ತ ವೀರನನ್ನು ಮಂಗಳವಾದ್ಯಗಳ ಮೂಲಕ ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ಚಿತ್ರಣವನ್ನು ಹೊಂದಿದೆ. ಮೇಲ್ಭಾಗದಲ್ಲಿ ಲಿಂಗವನ್ನು ಪೂಜಿಸುತ್ತಿರುವ ವೀರ ಹಾಗೂ ಲಿಂಗ ಮುನಿ ನಂದಿಯ ಚಿತ್ರಗಳನ್ನು ಕೆತ್ತಲಾಗಿದೆ. ಈ ವೀರಗಲ್ಲು ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ಹಡಗಲಿ ತಾಲೂಕಿನ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ಈ ವೀರಗಲ್ಲಿನಲ್ಲಿ ವೀರ ಯೋಧನು ನೇರವಾಗಿ ನಿಂತಿದ್ದು ತನ್ನ ಎರಡು ಕೈಗಳಿಂದ ಖಡ್ಗವೊಂದನ್ನು ಹಿಡಿದಿದ್ದಾನೆ. ಸೊಂಟದಲ್ಲಿ ವಿಶಾಲವಾಗಿ ಧರಿಸಿದ ವಸ್ತ್ರವಿದೆ. ತಲೆಗೂದಲನ್ನು ಮುಡಿ ಕಟ್ಟಿದ್ದಾನೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದಲ್ಲಿದೆ.

ಹಡಗಲಿ ವಸ್ತುಸಂಗ್ರಹಾಲಯದಲ್ಲಿರುವ ಅಲ್ಲಿಯೇ ದೊರೆತ ಇನ್ನೊಂದು ವೀರಗಲ್ಲು ಕ್ರಿ.ಶ. ೧೨ನೆಯ ಶತಮಾನದ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದುದ್ದಾಗಿದೆ. ಮೂರು ಪಟ್ಟಿಕೆಗಳನ್ನು ಹೊಂದಿದೆ. ತ್ರುಟಿತಗೊಂಡಿದೆ. ಮೇಲಿನ ಹಂತದಲ್ಲಿ ಶಿವಲಿಂಗ, ನಂದಿ ಮತ್ತು ಸೂರ್ಯರ ಶಿಲ್ಪಗಳಿವೆ. ಮಧ್ಯದ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರನನ್ನು ಅಪ್ಸರೆಯರು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಕೆಳಗಿನ ಹಂತದಲ್ಲಿ ಕುದುರೆ ಮೇಲೆ ಕುಳಿತು ವೀರರು ಭರ್ಚಿಯಿಂದ ವೈರಿಯನ್ನು ಎದುರಿಸುತ್ತಿರುವ ದೃಶ್ಯವಿದೆ.

ಇದೇ ತಾಲೂಕಿನ ಬೂದನೂರಿನ ವೀರಭದ್ರ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ಬಳಪದ ಕಲ್ಲಿನ ವೀರಗಲ್ಲು ಮೂರು ಹಂತಗಳಿಂದ ಕೂಡಿದೆ. ಕೆಳಹಂತದಲ್ಲಿ ಸೈನಿಕರ ಜೊತೆಗೂಡಿ ಶತ್ರುಗಳ ವಿರುದ್ಧ ಹೋರಾಡುತ್ತಿರುವ ವೀರನ ಚಿತ್ರಣ ಕೆಳಗಿನ ಪಟ್ಟಿಕೆಯಲ್ಲಿದೆ. ಮಧ್ಯಭಾಗದಲ್ಲಿ ವೀರನನ್ನು ನಾಲ್ಕು ಜನ ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವುದನ್ನು ಹಾಗೂ ಮೇಲ್ಭಾಗದ ಹಂತದಲ್ಲಿ ವೀರನು ಲಿಂಗವನ್ನು ಆರಾಧಿಸುತ್ತಿರುವ ವೀರ ಹಾಗೂ ಅವನ ಪಕ್ಕದಲ್ಲಿ ಅಂಜಲಿ ಮುದ್ರೆಯಲ್ಲಿರುವ ವ್ಯಕ್ತಿ ಮತ್ತು ನಂದಿಯ ಉಬ್ಬುಗೆತ್ತನೆಗಳಿವೆ. ಈ ವೀರಗಲ್ಲು ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಆವರಣದದಲ್ಲಿದೆ.

ಇದೇ ತಾಲೂಕಿನ ಬನ್ನಿಮಟ್ಟಿ ಮತ್ತು ನಂದಿಗಾವಿ ಮಾರ್ಗದ ಮಧ್ಯದಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲಿದೆ. ಮೂರು ಹಂತಗಳಿಂದ ಕೂಡಿದೆ. ಕೆಳಗಿನ ಹಂತದಲ್ಲಿ ಸೈನಿಕರು ಗುರಾಣಿ, ಭರ್ಚಿಗಳನ್ನು ಹಿಡಿದು ಹೋರಾಡುತ್ತಿರುವ ದೃಶ್ಯ ಮಧ್ಯದ ಹಂತದಲ್ಲಿ ಕೈಮುಗಿದು ಕುಳಿತ ವೀರರಿಬ್ಬರನ್ನು ಅಪ್ಸರೆಯರಿಬ್ಬರು ಪಲ್ಲಕ್ಕಿಯಲ್ಲಿ ದೇವರ ಸನ್ನಿಧಿಗೆ ಕೊಂಡೊಯ್ಯುತ್ತಿರುವ ದೃಶ್ಯ

ಮತ್ತು ಮೇಲಿನ ಹಂತದಲ್ಲಿ ನಂದಿ, ಸೂರ್ಯ, ಚಂದ್ರ, ಕೈಮುಗಿದು ಕುಳಿತ ವೀರರಿಬ್ಬರು ಹಾಗೂ ಶಿವಲಿಂಗವನ್ನು ಹೂವಿನಿಂದ ಅಲಂಕರಿಸಿ ಪೂಜಿಸುತ್ತಿರುವ ಮುನಿಯ ಚಿತ್ರಣವಿದೆ.

ಇದೇ ತಾಲೂಕಿನ ಮಾನ್ಯರ ಮಸಲವಾಡದ ಮುಕ್ತೇಶ್ವರ ದೇವಾಲಯದಲ್ಲಿರುವ ವೀರಗಲ್ಲು ತ್ರುಟಿತವಾಗಿದೆ. ವೀರಗಲ್ಲು ಮೂರು ಹಂತಗಳಿಂದ ಕೂಡಿದ್ದು, ಪ್ರಸ್ತುತ ಎಡರು ಹಂತಗಳು ಮಾತ್ರ ಉಳಿದಿದೆ. ಕೆಳಗಿನ ಹಂತದಲ್ಲಿ ಕುದುರೆಗಳ ಮೇಲೆ ಕುಳಿತು ವೀರರು ಬಿಲ್ಲು, ಬಾಣ, ಭರ್ಚಿಗಳನ್ನು ಹಿಡಿದು ಹೋರಾಡುತ್ತಿರುವ ಚಿತ್ರಣ ಅದರ ಮೇಲ್ಭಾಗದಲ್ಲಿ ವೀರನ ಕಾಲಡಿ ಸತ್ತ ವೈರಿಯನ್ನು ಹಾಗೂ ಅದರ ಮೇಲ್ಭಾಗದಲ್ಲಿ ವೀರನು ಕುದುರೆಯ ಮೇಲೆ ಕುಳಿತ ವೈರಿಯನ್ನು ಎದುರಿಸುತ್ತಿರುವ ದೃಶ್ಯವಿದೆ.

ಇದೇ ತಾಲೂಕಿನ ಕೊಂಬಳಿಯ ಆಂಜನೇಯ ದೇವಾಲಯದ ಮುಖಮಂಟಪದಲ್ಲಿ ಎರಡು ವೀರಗಲ್ಲುಗಳಿವೆ. ಕೆಳಭಾಗ ದೇವಾಲಯ ನೆಲಹಾಸುವಿನಲ್ಲಿ ಹೂತಿದೆ. ಮೂರು ಹಂತಗಳು ಕಾಣುತ್ತಿದ್ದು, ಕೆಳಗಿನ ಹಂತ ಅಸ್ಪಷ್ಟವಾಗಿದೆ. ಮಧ್ಯದ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರನನ್ನು ಅಪ್ಸರೆಯರು ಪಲ್ಲಕಿಯಲ್ಲಿ ದೇವರ ಸನ್ನಿಧಿಗೆ ಕೊಂಡೊಯ್ಯುತ್ತಿರುವ ದೃಶ್ಯ ಮತ್ತು ಮೇಲಿನ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರ ಶಿವಲಿಂಗವನ್ನು ಪೂಜಿಸುತ್ತಿರುವ ಯತಿಯ ಚಿತ್ರಣವಿದೆ.

ಇನ್ನೊಂದು ವೀರಗಲ್ಲು ತ್ರುಟಿತಗೊಂಡಿದ್ದು, ಅಸ್ಪಷ್ಟವಾಗಿದೆ. ಕೆಳಹಂತದಲ್ಲಿ ವೀರನು ವೈರಿಗಳೊಡನೆ ಹೋರಾಡುತ್ತಿರುವ ದೃಶ್ಯ ಎರಡನೆ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯ ಹಾಗೂ ಮೂರನೆ ಮೊದಲ ಹಂತದಲ್ಲಿ ನಂದಿ ಶಿವಲಿಂಗವನ್ನು ಪೂಜಿಸುತ್ತಿರುವ ಯತಿಯ ಚಿತ್ರಣವಿದೆ.

ಇದೇ ತಾಲೂಕಿನ ಹಿರೇಹಡಗಲಿಯ ಈಶ್ವರ ದೇವಾಲಯದ ಆವರಣದಲ್ಲಿರುವ ವೀರಗಲ್ಲು ತುಟ್ರಿತಗೊಂಡಿದ್ದು, ಎರಡು ಹಂತಗಳ ಮಾತ್ರ ಕಾಣಸಿಗುತ್ತವೆ. ಮೊದಲ ಹಂತದಲ್ಲಿ ಕತ್ತಿ, ಗುರಾಣಿಗಳನ್ನು ಹಿಡಿದು ಸೈನಿಕರು ಹೋರಾಡುತ್ತಿರುವ ದೃಶ್ಯ ವೀರರಿಬ್ಬರು ವೈರಿಯನ್ನು ತಮ್ಮ ಕಾಲಡಿಯಲ್ಲಿ ತುಳಿಯುತ್ತಿರುವ ದೃಶ್ಯ ಮೇಲಿನ ಹಂತದಲ್ಲಿ ವೀರರಿಬ್ಬರನ್ನು ಅಪ್ಸರೆಯರು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತ ತ್ರುಟಿತಗೊಂಡಿದೆ.

ಸಂಡೂರು ತಾಲೂಕಿನ ಹಳೆದರೋಜಿ ಗ್ರಾಮದ ಹೊರಗಿನ ಆಂಜನೇಯ ದೇವಾಲಯದ ಬಳಿಯಿರುವ ವೀರಗಲ್ಲು ಶಿಲ್ಪವು ಕಲ್ಯಾಣ ಚಾಲುಕ್ಯರ ಅವಧಿಯದ್ದಾಗಿದೆ. ಇದು ಮೂರು ಹಂತದ್ದಾಗಿದ್ದು, ಕೆಳಗಿನ ಹೋರಾಟದ ಹಂತ ಸವೆದಿದೆ. ಎರಡನೆಯ ಹಂತದಲ್ಲಿ ಮಂಟಪವಿದ್ದು ಅದರಲ್ಲಿ ಲಿಂಗದಂತೆ ಕಾಣಿಸುವ ಶಿಲ್ಪವಿದ್ದು, ಚಾಮರ ಬೀಸುತ್ತಿರುವ ಇಬ್ಬರು ಅಪ್ಸರೆಯರು ಮಂಟಪವನ್ನು ಹಿಡಿದಿದ್ದಾರೆ. ಮಂಟಪದ ಮೇಲೆ ಬಲಕ್ಕೆ ಮರ ಹಾಗೂ ಹಾವಿನ ಶಿಲ್ಪವನ್ನು ಕಂಡರಿಸಲಾಗಿದೆ. ಮೇಲಿನ ಹಂತದಲ್ಲಿ ವೀರನ ಜೊತೆಗೆ ಮತ್ತಿಬ್ಬರು ವ್ಯಕ್ತಿಗಳು ಅಂಜಲಿ

ಮುದ್ರೆಯಲ್ಲಿ ಕುಳಿತಿದ್ದಾರೆ. ನಿಂತಿರುವ ಒಬ್ಬ ವ್ಯಕ್ತಿ ಲಿಂಗ ಮತ್ತು ನಂದಿಗೆ ಪೂಜೆಯನ್ನು ಸಲ್ಲಿಸುತ್ತಿದ್ದಾನೆ. ಇದರ ಅಕ್ಕ ಪಕ್ಕದಲ್ಲಿ ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ.

ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ ಮೋರಿಗೆರೆ ಗ್ರಾಮದ ಬ್ರಹ್ಮ ದೇವಾಲಯದ ಬಳಿ ದೊರೆತ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಶಾಸನರಹಿತವಾಗಿದೆ. ಶಾಸನವು ತ್ರುಟಿತವಾಗಿದೆ. ಯುದ್ಧದಲ್ಲಿ ಹೋರಾಡಿ ಮಡಿದ ಒಬ್ಬ ವೀರನ ಸ್ಮರಣೆಗಾಗಿ ಈ ವೀರಗಲ್ಲು ಶಾಸನ ನಿಲ್ಲಿಸಿದಂತೆ ತಿಳಿದು ಬರುತ್ತದೆ. ಇದು ಸ್ಮಾರಕ ಶಾಸನವಾಗಿದೆ. ಈ ವೀರಗಲ್ಲು ಶಾಸನವು ಮೂರು ಹಂತಗಳ ಶಾಸನವಾಗಿದೆ. ಮೊದಲನೆಯ ಹಂತದಲ್ಲಿ ವೀರ ಹೋರಾಡುತ್ತಿರುವ ದೃಶ್ಯವಿದೆ. ಎರಡನೇ ಹಂತದಲ್ಲಿ ವೀರನನ್ನು ಇಬ್ಬರು ಸುರಾಂಗನೆಯರು ಹಿಡಿದುಕೊಂಡು ಹಾರುವ ದೃಶ್ಯವಿದೆ. ಮೂರನೇ ಹಂತದಲ್ಲಿ ಶಿವಲಿಂಗದ ಸಾನಿಧ್ಯದಲ್ಲಿ ಕುಳಿತು ವೀರನು ಪೂಜಿಸುತ್ತಿರುವ ದೃಶ್ಯವಿದೆ. ಹ್ಹಾಗೆಯೇ ಸೂರ್ಯ ಚಿತ್ರವಿದ್ದು, ಚಂದ್ರನಿರುವ ಭಾಗ ತುಂಡಾಗಿದೆ. ಈ ಶಾಸನದ ಮಧ್ಯದಲ್ಲಿ ಬರುವ ಪಟ್ಟಿಗಳಲ್ಲಿ ಶಾಸನ ಕೆತ್ತಲಾಗಿದೆ. ಮೇಲಿನ ಶಾಸನ ರಹಿತವಾದ ಪಟ್ಟಿ ಸ್ವಲ್ಪ ತುಂಡಾಗಿದ್ದು, ಶಿವಲಿಂಗದ ಮುಂದೆ ವೀರನು ಕುಳಿತಿರುವ ವ್ಯಕ್ತಿಯ ಶಿಲ್ಪದ ಅರ್ಧಭಾಗ ತುಂಡಾಗಿದೆ.

ಇದೇ ಗ್ರಾಮದಲ್ಲಿ ಬ್ರಹ್ಮ ದೇವಾಲಯದ ಬಳಿ ದೊರೆತ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಶಾಸನ ರಹಿತವಾಗಿದ್ದು ಈ ವೀರಗಲ್ಲು ಮೂರು ಹಂತಗಳಿಂದ ಕೂಡಿದೆ. ಕೆಳಭಾಗದ ಹಂತದಲ್ಲಿ ವೀರನು ಬಿಲ್ಲು-ಬಾಣಗಳನ್ನು ಹಿಡಿದುಕೊಂಡು ಕುದುರೆ ಮೇಲೆ ಕುಳಿತು ಕತ್ತಿಯನ್ನು ಹಿಡಿದುಕೊಂಡ ವೀರನೊಂದಿಗೆ ಹೋರಾಡುವ ದೃಶ್ಯವನ್ನು ಮತ್ತು ಯುದ್ಧದಲ್ಲಿ ಹೋರಾಡುವಾಗ ಮಡಿದ ವೀರನ ಚಿತ್ರಣವನ್ನು ಕಾಣಬಹುದು. ಮೇಲ್ಭಾಗದ ಎರಡನೇ ಹಂತದಲ್ಲಿ ವೀರನನ್ನು ಸುರಾಂಗನೆಯರಿಬ್ಬರು ಹಿಡಿದುಕೊಂಡು ಹಾರುವ ದೃಶ್ಯವನ್ನು ಕಾಣಬಹುದು. ಮೂರನೇ ಹಂತದಲ್ಲಿ ವೀರನು ಶಿವಲಿಂಗದ ಸಾನಿಧ್ಯದಲ್ಲಿ ಕುಳಿತು ಪೂಜಿಸುತ್ತಿರುವ ದೃಶ್ಯವಿದೆ.

ಇದೇ ಗ್ರಾಮದಲ್ಲಿ ಬ್ರಹ್ಮ ದೇವಾಲಯದ ಬಳಿ ದೊರೆತ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಶಾಸನ ರಹಿತವಾಗಿದ್ದು, ಈ ವೀರಗಲ್ಲು ಶಿಲ್ಪವು ಮೂರು ಹಂತಗಳಿಂದ ಕೂಡಿದೆ. ಮೊದಲನೆಯ ಹಂತದಲ್ಲಿ ಇಬ್ಬರು ವೀರ ಶತ್ರುಗಳೊಂದಿಗೆ ಹೋರಾಡುತ್ತಿರುವಂತೆ ಅವರ ಕಾಲ ಬಳಿ ಕುದುರೆಗಳು ಹಾಗೂ ಬಿದ್ದಿರುವ ಹೆಣದ ದೃಶ್ಯವನ್ನು ಕಾಣಬಹುದು. ಎರಡನೆಯ ಹಂತದಲ್ಲಿ ವೀರನು ಧ್ಯಾನಮಗ್ನನಾಗಿ ಕುಳಿತಿರುವ ದೃಶ್ಯ ಹಾಗೂ ಅಕ್ಕಪಕ್ಕದಲ್ಲಿ ಸುರಾಂಗನೆಯರಿದ್ದಾರೆ. ಮೂರನೇ ಹಂತದಲ್ಲಿ ಶಿವಲಿಂಗ ಬಳಿ ವೀರನು ನಿಂತಿರುವ ದೃಶ್ಯವನ್ನು ಕಾಣಬಹುದು.

ಚಿಂಚೋಳಿ ತಾಲೂಕಿನ ಚಿಕ್ಕನಿಂಗದಹಳ್ಳಿಯ ಹನುಮಾನ್ ಗುಡಿ ಊರು ಪ್ರವೇಶದಲ್ಲಿ ೧೧ನೇ ಶತಮಾನದ ವೀರಗಲ್ಲು ಇದೆ. ವೀರಗಲ್ಲು ಶಿಲ್ಪದ ಕೆಳಸ್ತರದಲ್ಲಿ ಹೋರಾಡುತ್ತಿರುವ ವೀರನ ದೃಶ್ಯಾವಳಿಯದೆ. ಚಾಮರಧಾರಿ ಸುರಾಂಗನೆಯರು ದೇವಲೋಕಕ್ಕೆ ಒಯ್ಯುವ ದೃಶ್ಯ ಎರಡನೇ ಸ್ತರದಲ್ಲಿದೆ.

ಅದೇ ತಾಲೂಕಿನ ಚಿಮ್ಮಾ ಇದಲಾಯಿ ಗ್ರಾಮದ ಬಸವನ ಕಟ್ಟೆ ಬಳಿ ಇರುವ ೧೧ನೆಯ ಶತಮಾನದ ವೀರಗಲ್ಲು ಇದೆ. ಎರಡು ಸ್ತರದ ಈ ವೀರಗಲ್ಲಿನ ಮೊದಲನೇ ಸ್ತರದಲ್ಲಿ ಯೋಧನು ಕುದುರೆಯ ಮೇಲೆ ಕುಳಿತು ಯುದ್ಧ ಮಾಡುವುದನ್ನು ಬಿಂಬಿಸಲಾಗಿದೆ. ಸುರಾಂಗನೆಯರು ಚಾಮರ ಹಿಡಿದು ದೇವಲೋಕಕ್ಕೆ ವಿಮಾನದಲ್ಲಿ ವೀರನನ್ನು ಒಯ್ಯುವ ದೃಶ್ಯಾವಳಿ ಮೇಲಿನ ಸ್ತರದಲ್ಲಿದೆ.

ಅದೇ ತಾಲೂಕಿನ ಹಲಚೇರಾ ಗ್ರಾಮದ ಈಶ್ವರ ಗುಡಿಯ ಮುಂದೆ ಇರುವ ೧೧ನೇ ಶತಮಾನದ ವೀರಗಲ್ಲಿನಲ್ಲಿ ವೀರ ಗುರಾಣಿ, ಭರ್ಚಿ ಹಿಡಿದಂತೆ ಬಿಂಬಿಸಲಾಗಿದೆ. ವೀರ ಭರ್ಚಿಯಿಂದ ಕುದುರೆಯನ್ನು ತಿವಿಯುತ್ತಿರುವ ಶಿಲ್ಪಾವಳಿಯನ್ನೊಳಗೊಂಡಿದೆ. ವೀರನು ಯಜ್ಞೋಪವೀತ ಕಿರೀಟ ಧರಿಸಿರುವ ಮತ್ತು ಕುದುರೆ ಮೇಲೆ ಕುಳಿತು ಹೋರಾಡುತ್ತಿರುವ ಶಿಲ್ಪಾವಳಿಯಿದೆ. ನಂತರದ ಸ್ತರದಲ್ಲಿ ಚಾಮರಧಾರಿ ದೇವಕನ್ಯೆಯರು ವೀರನನ್ನು ದೇವಲೋಕಕ್ಕೆ ಒಯ್ಯುವ ದೃಶ್ಯ ಮತ್ತು ಮೂರನೇ ಸ್ತರ ಲಿಂಗೈಕ್ಯದ ಶಿಲ್ಪಾವಳಿಯನ್ನೊಳಗೊಂಡಿದೆ.

ಚಿಂಚೋಳಿ ತಾಲೂಕಿನ ಸುಲೇಪೇಟೆ ಗ್ರಾಮದ ಪೋಚಮ್ಮನ ಗುಡಿಯ ಪಕ್ಕದಲ್ಲಿರುವ ೧೧ನೇ ಶತಮಾನದ ವೀರಗಲ್ಲು ಮೂರು ಸ್ತರಗಳನು ಹೊಂದಿದೆ. ವೀರಗಲ್ಲು ಶಿಲ್ಪದ ಮೊದಲ ಸ್ತರದಲ್ಲಿ ಶತ್ರುವಿನೊಂದಿಗೆ ಹೋರಾಡುವ ದೃಶ್ಯವಿದ್ದು, ಎರಡನೆಯ ಸ್ತರದಲ್ಲಿ ಸುರಾಂಗನೆಯರು ವೀರನನ್ನು ವಿಮಾನದಲ್ಲಿ ದೇವಲೋಕಕ್ಕೆ ಒಯ್ಯುವ ಶಿಲ್ಪವಿದೆ. ಮೂರನೆಯ ಸ್ತರದಲ್ಲಿ ಲಿಂಗದ ಮುಂದೆ ನಮಸ್ಕರಿಸುತ್ತ ಕುಳಿತ ವೀರನ ಶಿಲ್ಪವಿದ್ದು, ಇದು ಲಿಂಗೈಕ್ಯವನ್ನು ಸೂಚಿಸುತ್ತದೆ.

ಅದೇ ತಾಲೂಕಿನ ಶಿರೋಳ್ಳಿ ಗ್ರಾಮದ ಅಗಸಿಯ ಮರಗಮ್ಮನ ಗುಡಿ ಬಲಗಡೆಯಿರುವ ೧೧ನೆಯ ಶತಮಾನದ ವೀರಗಲ್ಲು ಎರಡು ಸ್ತರಗಳನ್ನು ಹೊಂದಿದೆ. ವೀರಗಲ್ಲಿನಲ್ಲಿ ವೀರ ಹೋರಾಡುತ್ತಿರುವ ದೃಶ್ಯ ಮೊದಲ ಸ್ತರದಲ್ಲಿದೆ. ಎರಡನೆಯ ಸ್ತರದಲ್ಲಿ ಸುರಾಂಗನೆಯರು ದೇವಲೋಕಕ್ಕೆ ಒಯ್ಯುವ ದೃಶ್ಯವಿದೆ.

ಅದೇ ತಾಲೂಕಿನ ರಟಕಲ್ ಗ್ರಾಮದ ಅಗಸಿಕಟ್ಟೆಯ ಬಳಿ ಇರುವ ೧೧ನೆಯ ಶತಮಾನದ ವೀರಗಲ್ಲು ಶಿಲ್ಪದ ಕೆಳಸ್ತರ ತುಟ್ರಿತವಾಗಿದ್ದು, ಎರಡನೆಯ ಸ್ತರದಲ್ಲಿ ಚಾಮರಧಾರಿ ಸುರಾಂಗನೆಯರು ವೀರನನ್ನು ದೇವಲೋಕಕ್ಕೆ ಒಯ್ಯುತ್ತಿರುವ ದೃಶ್ಯ ಇದೆ. ಮೂರನೆಯ ಸ್ತರದಲ್ಲಿ ಲಿಂಗದ ಮುಂದೆ ನಮಸ್ಕರಿಸುತ್ತ ಕುಳಿತಿರುವ ವೀರನ ದೃಶ್ಯ ಇದೆ.

ಚಿಂಚೋಳಿ ತಾಲೂಕಿನ ಭಕ್ತಂಪಳ್ಳಿ ಗ್ರಾಮದ ಅಗಸಿ ಕಟ್ಟೆಯ ಬಳಿ ಇರುವ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲು ಕಪ್ಪು ಶಿಲೆಯಲ್ಲಿದ್ದು ಮೂರು ಸ್ತರಗಳಲ್ಲಿದೆ. ಕೆಳಸ್ತರದಲ್ಲಿ ಕುದುರೆ ಮೇಲೆ ಖಡ್ಗ ಹಿಡಿದು ಶತ್ರುವಿನ ವಿರುದ್ಧ ಹೋರಾಡುತ್ತಿರುವ ವೀರನು ಭರ್ಚಿ ಹಿಡಿದು ಹೋರಾಡುವಂತೆ ಮತ್ತು ಒಬ್ಬ ಶತ್ರುವನ್ನು ನೆಲಸಮಗೊಳಿಸಿದಂತೆ ಶಿಲ್ಪಾವಳಿಯಲ್ಲಿದೆ. ಈ

ಶಿಲ್ಪದಲ್ಲಿ ಚಾಕು ಸೊಂಟಕ್ಕ ಕಟ್ಟಿಕೊಂಡಂತೆ ಕೊರಳಲ್ಲಿ ಹಾರ ಮತ್ತು ವೀರ ಮುಡಿ ಕಟ್ಟಿರುವನು. ಇದರ ನಂತರ ಸ್ತರದಲ್ಲಿ ದೇವಕನ್ನೆಯರು ವೀರನನ್ನು ದೇವಲೋಕಕ್ಕೆ ಒಯ್ಯುತ್ತಿರುವ ದೃಶ್ಯಾವಳಿಯಿದೆ. ಮೇಲಿನ ಸ್ತರದಲ್ಲಿ ಲಿಂಗೈಕ್ಯನಾದ ವೀರ ಲಿಂಗದ ಮುಂದೆ ಅಂಜಲಿ ಹಸ್ತದೊಂದಿಗೆ ಕುಳಿತಿರುವ ಶಿಲ್ಪವಿದೆ.

ಚಿಂಚೋಳಿ ತಾಲೂಕಿನ ನೀಡಗುಂದ ಗ್ರಾಮದ ನವಕೋಟಿ ನಾರಾಯಣ ಗುಡಿಯ ಬಳಿ ಇದೆ. ೧೧ನೆಯ ಶತಮಾನದ ವೀರಗಲ್ಲು. ಈ ವೀರಗಲ್ಲು ಎರಡು ಸ್ತರಗಳಿಂದ ಕೂಡಿದ್ದು ಮೊದಲನೆಯ ಸ್ತರದಲ್ಲಿ ಕುದುರೆಯ ಮೇಲೆ ಕುಳಿತು ಆಕ್ರಮಣ ಮಾಡುತ್ತಿರುವ ಶತ್ರುವಿನ ವಿರುದ್ಧ ನೆಲದ ಮೇಲೆ ನಿಂತ ಭರ್ಚಿ ಹಿಡಿದು ಹೋರಾಡುತ್ತಿರುವ ವೀರನ ಶಿಲ್ಪವಿದೆ. ಎರಡನೆಯ ಸ್ತರದಲ್ಲಿ ಸುರಾಂಗನೆಯರು ವೀರನನ್ನು ವಿಮಾನದಲ್ಲಿ ದೇವಲೋಕಕ್ಕೆ ಒಯ್ಯುವ ಶಿಲ್ಪವಿದೆ. ಅದರ ಮೇಲ್ಭಾಗದಲ್ಲಿ ಲಿಂಗದ ಮುಂದೆ ನಮಸ್ಕರಿಸುತ್ತಾ ಕುಳಿತ ವೀರನ ಶಿಲ್ಪವಿದೆ.

ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರದ ಜೋಡು ಕಪಿಲೆ ಬಾವಿಯ ಬಳಿ ಇರುವ ವೀರಗಲ್ಲಿನಲ್ಲಿ ವೀರನು ಕತ್ತಿಯನ್ನು ಬೀಸುತ್ತಿರುವ ದೃಶ್ಯ ಮನಮೋಹಕವಾಗಿದೆ. ತನ್ನ ರಕ್ಷಣೆಗಾಗಿ ಗುರಾಣಿಯನ್ನು ಹಿಡಿದು ವೈರಿಗಳೊಂದಿಗೆ ಹೋರಾಡುತ್ತಿದ್ದಾನೆ. ಮಧ್ಯದಲ್ಲಿ ಅಪ್ಸರೆಯರು ಅವನನ್ನು ಪುಷ್ಪಕ ವಿಮಾನದಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿದ್ದಾರೆ. ಮೂರನೇ ಹಂತದಲ್ಲಿ ವೀರನು ಶಿವಲಿಂಗದ ಮುಂದೆ ಧ್ಯಾನಾಸಕ್ತನಾಗಿ ಕುಳಿತಿದ್ದಾನೆ.

ಗದಗ ತಾಲೂಕಿನ ಸೊರಟೂರಿನ ಆಂಜನೇಯ ದೇವಸ್ಥಾನದ ಪಕ್ಕದಲ್ಲಿರುವ ವೀರಗಲ್ಲಿನಲ್ಲಿ ಅಳೆತ್ತರದ ಬಿಲ್ಲುಗಳನ್ನು ಹಿಡಿದು ವೈರಿಗಳ ವಿರುದ್ಧ ಹೋರಾಡುತ್ತಿರುವ ದೃಶ್ಯ ಸೊಗಸಾಗಿದೆ. ಇದೇ ಸೊರಟೂರಿನಲ್ಲಿ ಮತ್ತೊಂದು ವೀರಗಲ್ಲಿದ್ದು, ಇದು ಮೇಲ್ಭಾಗದಲ್ಲಿ ಹುಲಿ ಮುಖವನ್ನು ಹೊಂದಿ ಕುದುರೆ ಕಾಳಗವನ್ನು ಬಿಂಬಿಸುತ್ತದೆ. ಕುದುರೆಯ ಮೇಲಿರುವ ವೀರನು ಈಟಿಯಿಂದ ಕೆಳಭಾಗದಲ್ಲಿರುವ ವೈರಿಗೆ ತಿವಿಯುತ್ತಿದ್ದರೆ ಎದುರಿಗಿರುವ ವೀರನು ಬಿಲ್ಲನ್ನು ಹಿಡಿದು ಬೆನ್ನಿಗೆ ಬತ್ತಳಿಕೆಯನ್ನು ಬಿಗಿದು ಕುದುರೆಯ ಮೇಲಿರುವ ವೀರನಿಗೆ ಬಾಣವನ್ನು ಬಿಡುತ್ತಿರುವುದನ್ನು ಕಾಣಬಹುದು.

ಗದಗ ತಾಲೂಕಿನ ಎಲೆ ಶಿರುಂಜದ ಚಾವಡಿಯ ಬಳಿ ಇರುವ ವೀರಗಲ್ಲು ಕುದುರೆ ಕಾಳಗವನ್ನು ಸೊಗಸಾಗಿ ಬಿಂಬಿಸುತ್ತದೆ. ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರದ ಲಕ್ಷ್ಮಣೇಶ್ವರ ದೇವಾಲಯದ ಚಾವಣಿಯಲ್ಲಿರುವ ವೀರಗಲ್ಲೊಂದು ಬಿಲ್ಲು-ಬಾಣಗಳನ್ನು ಹಿಡಿದು ಯುದ್ಧಕ್ಕೆ ಹೊರಟಿರುವ ಸಾಲು ವೀರರ ಚಿತ್ರವನ್ನು ಚಿತ್ರಿಸುತ್ತದೆ. ವಿಶೇಷವೆಂದರೆ ಎರಡೂ ಪಡೆಯ ವೀರರು ಯುದ್ಧಕ್ಕೆ ಬಿಲ್ಲು-ಬಾಣಗಳನ್ನು ಬಳಸಿರುವುದು ಅಂದಿನ ಹೋರಾಟದ ಚಿತ್ರಣವನ್ನು ಬಿಂಬಿಸುತ್ತದೆ.

ರೋಣ ತಾಲೂಕಿನ ಹುನಗುಂಡಿಯ ತುಂಡು ವೀರಗಲ್ಲೊಂದರಲ್ಲಿ ಐದು ಸ್ತರಗಳುಳ್ಳ ವಿಮಾನವಿದೆ. ಬದಿಗಳಲ್ಲಿ ಆಕಾಶದಲ್ಲಿ ಹಾರುವ ವಾದ್ಯಮೇಳದವರಿದ್ದಾರೆ. ಮೇಲಿನ ದೃಶ್ಯದಲ್ಲಿ ಎಂಟು ಹಂತಗಳುಳ್ಳ ವಿಮಾನದ ಶಿಖರವಿದೆ. ನಡುವೆ ಶಿವಲಿಂಗವಿದೆ. ಬಲಗಡೆ ಮಡಿದ ವೀರನಿದ್ದಾನೆ. ಅಲ್ಲಿಯ ಮತ್ತೊಂದು ಶಿಲ್ಪದಲ್ಲಿ ವೀರನು ಶಿಲ್ಪದ ಎಡಭಾಗದಲ್ಲಿ ನಿಂತಿರುವುದು ಗಮನೀಯ. ಆತನ ಬಲಭಾಗದಲ್ಲಿ ಕುದುರೆ ದಳ ಮತ್ತು ಕಾಲ್ದಳದವರು ಯುದ್ಧ ಮಾಡುತ್ತಿರುವುದನ್ನು ಚಿತ್ರಿಸಲಾಗಿದೆ.

ಗದಗ ತಾಲೂಕಿನ ಲಕ್ಕುಂಡಿಯ ವಸ್ತುಸಂಗ್ರಹಾಲಯದ ವೀರಗಲ್ಲಿನ ಕೆಳಹಂತದಲ್ಲಿ ಯುದ್ಧ ದೃಶ್ಯವಿದೆ. ವೈರಿಪಡೆಯಲ್ಲಿ ವೈರಿಯು ವೀರನ ಪಾದಕ್ಕೆ ಬಿದ್ದು ನಮಸ್ಕರಿಸುತ್ತಿರುವನು. ವೀರನ ಪಡೆಯವರು ಈಟಿ ಹಿಡಿದಿದ್ದರೆ ವೈರಿ ಪಡೆಯವರು ಕತ್ತಿ ಮತ್ತು ದುಂಡಾದ ಗುರಾಣಿಗಳನ್ನು ಹಿಡಿದು ಹೋರಾಡುತ್ತಿದ್ದಾರೆ. ಸ್ವರ್ಗಾರೋಹಣ ದೃಶ್ಯದಲ್ಲಿ ವೀರನು ತನ್ನಿಬ್ಬರು ಪತ್ನಿಯರ ಜೊತೆ ವಿಮಾನದಲ್ಲಿ ಕುಳಿತಿರುವುದು ವಿಶೇಷವಾಗಿದೆ. ವಿಮಾನಕ್ಕೆ ಕದಂಬ ಮಾದರಿಯ ಶಿಖರವಿದೆ. ಅದಕ್ಕೆ ಮೂರು ಸ್ತರಗಳಿವೆ. ಅದನ್ನು ಅಪ್ಸರೆಯರು ಒಯ್ಯುತ್ತಿರುವರು. ವಿಮಾನದ ಶಿಖರ ಬದಿಗಳಲ್ಲಿ ವಾದ್ಯ ಮತ್ತು ನೃತ್ಯ ಮೇಳದಿಂದ ಆತನಿಗೆ ಶುಭ ಕೋರುತ್ತಿರುವರು. ಮೂರನೆಯ ಹಂತದಲ್ಲಿ ಎರಡು ಅರೆಗಂಬಗಳ ನಡುವೆ ಶಿವಲಿಂಗವಿದೆ. ಅದರ ತಲೆಗೆ ರುದ್ರಾಕ್ಷಿ ಸರಗಳಿಂದ ಸುತ್ತಲಾಗಿದೆ. ಶಿಖರಕ್ಕೆ ನಾಲ್ಕು ಸ್ತರಗಳಿವೆ. ಇದರಲ್ಲಿಯೂ ವಿಮಾನದ ಎಡಕ್ಕೆ ವೀರ ತನ್ನಿಬ್ಬರು ಪತ್ನಿಯರ ಸಂಗಡ ಕೈಮುಗಿದು ಕುಳಿತಿರುವನು. ಬಲಗಡೆ ಗಡ್ಡಧಾರಿಯತಿ ಕುಳಿತಿರುವನು. ಬದಿಗೆ ನಂದಿ ಕುಳಿತಿದೆ. ಶಿಖರದ ಬದಿಗಳಲ್ಲಿ ವೃತ್ತಾಕಾರದ ಎರಡು ಸೂರ್ಯ ಚಿಹ್ನೆಗಳಿದ್ದು ಒಂದರ ಮೇಲೆ ಚಂದ್ರಾಕೃತಿಯನ್ನು ಕೆತ್ತಲಾಗಿದೆ.

ಗದಗ ತಾಲೂಕಿನ ಹೊಸೂರಿನ ವೀರಗಲ್ಲಿನಲ್ಲಿ ವೀರನು ವೈರಿಯ ಎದೆಗೆ ಕತ್ತಿಯಿಂದ ಇರಿಯುತ್ತಿದ್ದಾನೆ. ಅವನು ನೆಲಕ್ಕೆ ಕುಸಿಯುತ್ತಿರುವಂತೆ ಚಿತ್ರಿಸಲಾಗಿದೆ. ಇದನ್ನು ನೋಡಿದ ವೈರಿಯ ಪರಿವಾರದವರು ಹಿಂದಕ್ಕೆ ಓಡುತ್ತಲಿರುವರು; ಆದರೆ ಇಬ್ಬರು ವೀರನಿಗೆ ಬಿಲ್ಲಿನಿಂದ ಬಾಣ ಪ್ರಯೋಗಿಸುತ್ತಿರುವರು. ಅವರ ಬಾಣಗಳನ್ನು ನಿಯಂತ್ರಿಸಲು ವೀರ ಪರಿವಾರದವನೊಬ್ಬ ತನ್ನ ತಲೆಯನ್ನು ಅಡ್ಡ ಹಿಡಿದಿದ್ದಾನೆ. ವೀರ ತನ್ನ ಬಿಲ್ಲನ್ನು ಎಡಗೈಯಿಂದ ಎದುರು ಎತ್ತಿ ಹಿಡಿದಿರುವನು. ಒಬ್ಬನು ಪ್ರಾಣ ರಕ್ಷಣೆಗಾಗಿ ಕೈಮುಗಿದು ವೀರನ ಮುಂದೆ ನಿಂತಿದ್ದಾನೆ. ವೀರನ ತಲೆಯ ಮೇಲೆ ಛತ್ರಿಯನ್ನು ಹಿಡಿದಿರುವುದರಿಂದ ಅವನೊಬ್ಬ ಅಧಿಕಾರಿ ವರ್ಗದವನೆಂದು ತಿಳಿಯಬಹುದು. ಅವನ ಹಿಂದೆ ಒಬ್ಬ ಕುದುರೆ ಸವಾರ ಮತ್ತು ಇಬ್ಬರು ಕಾಲ್ದಳದವರು ಬಿಲ್ಲನ್ನು ಹಿಡಿದು ನಿಂತಿದ್ದಾರೆ.

ವೀರನು ತನ್ನ ತುರುಬನ್ನು ತಲೆಯ ಹಿಂದಕ್ಕೆ ಕಟ್ಟಿದ್ದಾನೆ. ಕುಂಡಲ, ಸರ, ಬಳೆ, ಕಡಗ ಆಭರಣಗಳನ್ನು ಮತ್ತು ಮುಂಡಿವರೆಗೆ ಇಳಿಬಿಟ್ಟ ಪಂಚೆಯನ್ನು ಸೊಂಟಕ್ಕೆ ಕಟ್ಟಿದ್ದಾನೆ.

ಸ್ವರ್ಗಾರೋಹಣದಲ್ಲಿ ವಿಮಾನದಲ್ಲಿ ಮಡಿದ ವೀರ ಕೈಮುಗಿದು ಕುಳಿತಿದ್ದಾನೆ. ಈ ವಿಮಾನದ ಕಂಬಗಳ ಮಧ್ಯೆ ಪಟ್ಟಿಗಳಿವೆ. ಆ ಪಟ್ಟಿಗಳನ್ನು ಅಪ್ಸರೆಯರಿಬ್ಬರು ಹಿಡಿದು ಒಯ್ಯುತ್ತಿರುವರು. ವಿಮಾನದ ಶಿಖರಕ್ಕೆ ಮೂರು ಸ್ತರಗಳಿವೆ. ಅದರ ಬದಿಗಳಲ್ಲಿ ಎರಡೆರಡು ಕಮಲದ ಹೂವಿನ ಚಿತ್ರಗಳಿವೆ. ಮಡಿದ ವೀರ ಕೈಮುಗಿದು ಸ್ವರ್ಗದಲ್ಲಿ ಕುಳಿತಿರುವನು. ಯತಿಯು ಎಡಗೈಯಲ್ಲಿ ಆರತಿಯನ್ನು ಬಲಗೈಯಲ್ಲಿ ಗಂಟೆ ಹಿಡಿದು ಶಿವಲಿಂಗದ ಮುಂದೆ ನಿಂತು ಆರಾಧಿಸುತ್ತಿರುವನು ಆತನು ತನ್ನ ಜಟೆಯನ್ನು ತಲೆಯ ಮೇಲೆ ರುಮಾಲಿನಂತೆ ಕಟ್ಟಿದ್ದಾನೆ. ಶಿವಲಿಂಗದ ತಲೆಗೆ Dಲ್ಲಿಯೂ ರುದ್ರಾP ಸರಗಳನ್ನು ಸುತ್ತಲಾಗಿದೆ. ಶಿವಲಿಂಗದ ϵeṁ⪯ಗಗಳ ಎಡಗಡೆ ಶಿವಲಿಂಗಕ್ಕೆ ಮುಖಮಾಡಿ ನಂದಿಯು ತನ್ನ ಬಲಗಾಲನ್ನು ಮುಂದೆ Yಾಚಿಕೊಂಡು ಕುಳಿತಿದೆ. ಶಿವಲಿಂಗದ ಮೇಲೆ Dಳಿ⪢ ಗಂಟೆ.ಹೂಗೊಂYಲಿದೆ. ಬದಿಗಳಲ್ಲಿ ಸೂರ್ಯ ಮತ್ತು Yಂದ್ರರಿದ್ದಾರೆ. ಮೇಳಾಗ ಅರ್ಧ ವತ್ತಾಕಾರದಲ್ಲಿದೆ.

ಗದಗ ತಾಲೂPನ ಕಣವಿ ವೀರಗಲ್ಲಿನಲ್ಲಿ ವೀರನು ಕುದುರೆ ಸವಾರಿ ಮಾಡುತ್ತ ಎದುರಿಗೆ ನಿಂತ ಮೂವರು ವೈರಿಗಳಿಗೆ ಈಟಿJಂದ ತಿವಿಯಲು ಮೇಲೆತ್ತಿ ಹಿಡಿದಿದ್ದಾನೆ. ಈ ವೀರಗಲ್ಲಿನಲ್ಲಿರುವ ಶಿವಲಿಂಗದ ತಳ ಮತ್ತು ಮೇಲಿನ ಪಾಣ˘ϵeṁ ⪯ಗವ—ವತ್ತಾಕಾರವಾಗಿದೆ. ಎಡಕ್ಕೆ ಜಲಧಾರಿJದೆ. ವಿಮಾನದಲ್ಲಿ ಕುಳಿತ ಮಡಿದ ವೀರನನ್ನು ಅಪ್ಸರೆಯರು ಒಯ್ಯುವಊ ಮತ್ತು ಮಡಿದ ವೀರ+ ಯತಿ ಶಿವಲಿಂಗ ಆರಾಧಿಸುತ್ತಿರುವಊ ಮತ್ತು ಕುಳಿತ ನಂದಿ Dವ— ಸಾಮಾನ್ಯ ಲಕಣವಾಗಿದೆ.

Dದೇ ತಾಲೂPನ ಮೇವಊಡಿಯ ವೀರಗಲ್ಲಿನಲ್ಲಿ ವೀರನನ್ನು ಬಲಗಡೆಗೆ ಸರಳ ಪಟ್ಟಿಕೆಯಲ್ಲಿ ಚಿತ್ರಿ™ಟುವಊ ವಿ˴ೀ'ïವಾಗಿದೆ. ಒಂದು ಕೈಯಲ್ಲಿ ಈ ಪಟ್ಟಿಕೆಯ ಅಂYನ್ನು ಹಿಡಿದಿದ್ದರೆ+ ಬಲಗೈಯಲ್ಲಿ Yಾಕು ಹಿಡಿದು ಮೇಲಕ್ಕೆತ್ತಿ ಹಿಡಿದು ನಿಂತಿದ್ದಾನೆ. ಎದುರಿಗೆ ವೈರಿ ಪಡೆಯಲ್ಲಿ ಕುದುರೆ ಮತ್ತು ಕಾಲ್ದಳದವರಿದ್ದಾರೆ. ಸ್ವರ್ಗಾರೋಹಣದಲ್ಲಿ ಮಡಿದ ವೀರ ವಿಮಾನದಲ್ಲಿ ಯೋಗಾಸನದಲ್ಲಿ ಕುಳಿತಿರುವನು. ಈ ವಿಮಾನವನ್ನು ಕೆಳಗಡೆ Dಬ್ಬರು ಮತ್ತು ಬದಿಗಳಲ್ಲಿಬ್ಬರು ಹೊತ್ತು ಒಯ್ಯುವಊನ್ನು ತೋರಿ™ಟುವಊ ವಿ˴ೀ'ïವಾಗಿದೆ.

ಶಿರಹಟ್ಟಿ ತಾಲೂPನ ಸುಗನಹಳಿಯ ಶಿಲದಲ್ಲಿ ಯುದ ದ˹ೄ ವಿಶಿ'ï್ಟ ರೀತಿಯಾಗಿದೆ. ಒಂದೇ ಸಾಲಿನಲ್ಲಿ ಒJ ್ಪ Kವರು ಆಯುಧ ಹಿಡಿದು ನಿಂತಿದ್ದರೆ+ ವೀರ ನಡುವೆ ನಿಂತಿದ್ದಾನೆ. ವೈರಿಗಳ ಕಡೆ ಮುಖಮಾಡಿ ಹೋರಾಡುತ್ತಿದ್ದಾನೆ. ಆತನ ಬದಿಗಳಲ್ಲಿಬ್ಬರು ಅಂಚಿನಲ್ಲಿದ್ದು ಅವರ ದೇಹಾಂಗವ— ಒಂದಕ್ಕೆ ಜಗಿದ ⪢ಲ್ಲಿನ ನಡುವೆ ಒಂದೇ ಪ್ರಮಾಣದಲ್ಲಿ ತೋರಿ™ಟುವಊ ವಿ˴ೀ'ïವೆನಿ™ಟಿ. ಅವರು ⪯ಣ ಪ್ರಯೋಗಿಸುವ ರೀತಿಯಲ್ಲಿದ್ದಾರೆ.

ಕ•ಜಗೇರಿ ಶಿಲದಲ್ಲಿ ವೀರನು ವೈರಿಗಳ ವಿರುದ ತನ್ನ ⪢ಲ್ಲನ್ನು ಮುಂದೆ Yಾಚಿ ಹಿಡಿದು ನಿಂತಿದ್ದಾನೆ. ಬಲಗೈಯಲ್ಲಿ Yಾಕು ಹಿಡಿದಿದ್ದಾನೆ. ವೈರಿ ಪಡೆಗಳಲ್ಲಿ ನಾಲ್ವರಿದ್ದು ಅವರು ಎರಡು

ಸಾಲುಗಳಲ್ಲಿ ನಿಂತು ಬಿಲ್ಲಿನಿಂದ ಬಾಣ ಪ್ರಯೋಗಿಸಿ ಯುದ್ಧ ಮಾಡುವಂತೆ ಚಿತ್ರಿಸಿರುವುದು ವಿಶೇಷವೆನ್ನಬಹುದು.

ಐಹೊಳೆ ವಸ್ತುಸಂಗ್ರಹಾಲಯದಲ್ಲಿ ೧೨ನೇ ಶತಮಾನದ ಸುಂದರವಾದ ವೀರಗಲ್ಲಿದೆ. ಇದು ಮೂರು ಹಂತಗಳಿಂದ ಕೂಡಿದ್ದು, ಕೆಳಹಂತದಲ್ಲಿ ವೀರನು ಅನೇಕ ಶತ್ರುಗಳ ಜೊತೆ ಬಿಲ್ಲು-ಬಾಣ, ಈಟಿಗಳೊಂದಿಗೆ ಹೋರಾಡುತ್ತಿರುವನು. ಅನೇಕರು ಮರಣ ಹೊಂದಿದ್ದಾರೆ. ಎರಡನೇ ಹಂತದಲ್ಲಿ ಇಬ್ಬರು ವ್ಯಕ್ತಿಗಳು ವಿಮಾನವನ್ನು ಹೊತ್ತಿರುವಂತೆಯೂ ಅಕ್ಕಪಕ್ಕ ಅಪ್ಸರೆಯರು ನಿಂತಂತೆಯೂ ಚಿತ್ರಿಸಲಾಗಿದೆ. ಇವರ ಮೇಲೆ ಎರಡೂ ಬದಿಗಳಲ್ಲಿ ನಾಲ್ಕು ಜನ ವಾದ್ಯಕಾರರು ವಿವಿಧ ವಾದ್ಯಗಳನ್ನು ನುಡಿಸುತ್ತಿದ್ದಾರೆ. ಮೇಲಿನ ಸ್ವರ್ಗ ಪ್ರಾಪ್ತಿ ಹಂತದಲ್ಲಿ ವೀರನು ಎತ್ತರವಾದ ವೇದಿಕೆಯ ಮೇಲೆ ಕುಳಿತಿದ್ದು ಯತಿಯೊಬ್ಬನು ಶಿವಲಿಂಗವನ್ನು ಪೂಜಿಸುತ್ತಿದ್ದಾನೆ. ಲಿಂಗಕ್ಕೆ ಛತ್ರಿಯನ್ನು ಚಿತ್ರಿಸಲಾಗಿದೆ. ಶಿವಲಿಂಗದ ಮುಂದೆ ನಂದಿ ಕುಳಿತಿದೆ. ವೀರಗಲ್ಲಿನ ಲಲಾಟ ಭಾಗವನ್ನು ಮೂರು ಹಂತದಲ್ಲಿ ದೇವಾಲಯದ ಶಿಖರದಂತೆ ನಿರ್ಮಿಸಲಾಗಿದೆ. ಇದರ ಶಾಸನ ಪಾಠವೂ ಪೂರ್ತಿ ಸವೆದಿದೆ.

ಇದರ ಪಕ್ಕವೇ ಮತ್ತೊಂದು ವೀರಗಲ್ಲಿದ್ದು, ಇದು ನಾಲ್ಕು ಹಂತಗಳಿಂದ ಕೂಡಿದೆ. ಮೊದಲ ಹಂತದಲ್ಲಿ ವೀರನೂ ತನಗಿಂತಲೂ ಎತ್ತರವಾದ ಬಿಲ್ಲನ್ನು ಹಿಡಿದಿರುವನು. ಇವನ ಎದುರು ಶತ್ರು ಕುದುರೆಯ ಮೇಲೆ ಕುಳಿತಿದ್ದು ತನ್ನ ಕೈಯಲ್ಲಿನ ಭರ್ಚಿಯಿಂದ ವೀರನಿಗೆ ತಿವಿಯುತ್ತಿದ್ದಾನೆ. ಶತ್ರುವಿನ ಉಡುಪು ಆಭರಣ ಅವನ ಕುದುರೆಯ ಅಲಂಕಾರಗಳನ್ನು ಗಮನಿಸಿದರೆ ಅವನೊಬ್ಬ ಉನ್ನತ ಅಧಿಕಾರಿಯೆಂದು ಊಹಿಸಬಹುದು. ಎರಡನೆಯ ಹಂತದಲ್ಲಿ ವೀರನು ಶತ್ರುಗಳೊಂದಿಗೆ ಹೋರಾಡುತ್ತಿದ್ದು ಅವನ ಹಿಂಬದಿಯಲ್ಲಿ ದನಗಳನ್ನು ಚಿತ್ರಿಸಿದೆ. ಮೂರನೇ ಹಂತದಲ್ಲಿ ನಾಲ್ಕು ಜನ ಅಪ್ಸರೆಯರೊಂದಿಗೆ ವೀರನು ಮಂಟಪದಲ್ಲಿ (ವಿಮಾನ) ಕುಳಿತು ಸ್ವರ್ಗಕ್ಕೆ ಹೊರಟಿದ್ದಾನೆ. ಮೇಲಿನ ಭಾಗದಲ್ಲಿ ವೀರನು ಶಿವಲಿಂಗದ ಮುಂದೆ ಕುಳಿತಿದ್ದು, ಶಿವಲಿಂಗವನ್ನು ಯತಿಯು ಪೂಜಿಸುತ್ತಿರುವಂತೆ ಚಿತ್ರಿಸಲಾಗಿದೆ.

ಇದೇ ಸ್ಥಳದ ಬಲಪಕ್ಕದಲ್ಲಿ ಮತ್ತೊಂದು ವೀರಗಲ್ಲಿದ್ದು ಕೆಳಹಂತದಲ್ಲಿ ವೀರನನ್ನು ಬಹಳ ದೊಡ್ಡದಾಗಿ ಚಿತ್ರಿಸಲಾಗಿದೆ. ಶತ್ರುಗಳು ಹೋರಾಡುತ್ತಿದ್ದು ಕೆಲವರು ಹೆದರಿ ಓಡುತ್ತಿದ್ದಾರೆ. ಎರಡನೆಯ ಹಂತದಲ್ಲಿ ಸ್ವರ್ಗ ಪ್ರಯಾಣ, ಮೇಲಿನ ಹಂತದಲ್ಲಿ ಸ್ವರ್ಗಪ್ರಾಪ್ತಿ ಇದೆ. ಇಲ್ಲಿನ ಆಕೃತಿಗಳು ಪ್ರಮಾಣ ಬದ್ಧವಾಗಿಲ್ಲ. ವೀರನ ಕೈಗಳನ್ನು ಕಾಲುಗಳಿಗಿಂತ ದಪ್ಪವಾಗಿ ಚಿತ್ರಿಸಿದ್ದು ಅಸಹಜವಾಗಿದೆ. ಇದು ೧೨ನೇ ಶತಮಾನದ್ದಾಗಿದೆ.

ಲಕ್ಷ್ಮೇಶ್ವರದಲ್ಲಿರುವ ಸೋಮೇಶ್ವರ ದೇವಾಲಯದ ಉತ್ತರ ಪ್ರವೇಶದ್ವಾರದ ಬಳಿ ನಿಲ್ಲಿಸಿರುವ ಮೂರು ವೀರಗಲ್ಲುಗಳು ಶಾಸನವಿಲ್ಲ. ಶಿಲ್ಪ ಮತ್ತು ಬಳಸಿರುವ ಕಲ್ಲಿನ ಆಧಾರದ ಮೇಲೆ ಈ ವೀರಗಲ್ಲುಗಳು ಬಹುಶಃ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದವು. ಇಲ್ಲಿನ ಮೂರು ವೀರಗಲ್ಲುಗಳಲ್ಲಿ

ಒಂದು ಕೋಟೆ ಕಾಳಗಕ್ಕೆ ಸಂಬಂಧಿಸಿದ್ದು, ಉಳಿದ ವೀರಗಲ್ಲುಗಳು ಕೋಟೆ ಕಾಳಗಕ್ಕೆ ಸೇರಿದ ವೀರಗಲ್ಲು ಐದು ಹಂತಗಳಲ್ಲಿದೆ. ಮೊದಲ ಹಂತದಲ್ಲಿ ನಾಲ್ವರು ವೀರರು ವೀರಗಲ್ಲಿನ ಎಡಭಾಗದಿಂದ ಬಲಭಾಗದ ಕಡೆ ಹೋಗುತ್ತಿದ್ದಾರೆ. ವೀರರ ಕೈಗಳಲ್ಲಿ ಕೋಟೆ ಕಾಳಗದಲ್ಲಿ ಬಳಸಬಹುದಾದ ಈಟಿಯಂತಿರುವ ಉದ್ದವಾದ ಆಯುಧವಿದೆ. ಇವುಗಳನ್ನು ಸಬಳ ಎಂದು ಗುರುತಿಸಬಹುದು. ಇದು ಮನುಷ್ಯನ ಎತ್ತರಕ್ಕಿಂತ ಉದ್ದವಾಗಿದ್ದು ಕೋಟೆಯ ಮೇಲಿರುವ ವ್ಯಕ್ತಿಗಳನ್ನು ತಿವಿಯಲು ಬಳಸಲಾಗುತ್ತಿತ್ತು. ಸಬಳಗಳ ತುದಿ ಮೊನಚಾಗಿ ತಳಭಾಗ ತ್ರಿಕೋಣಕಾರವಾಗಿದೆ. ಅದರ ಕೆಳಭಾಗ ಒಂದು ಕಡೆ ಹರಿತವಾದ ಆಯುಧ ಸೇರಿಸಿದಂತೆ ಇದೆ. ವೀರರು ಎರಡೂ ಕಾಲುಗಳಲ್ಲಿ ಕಾಲಂದಿಗೆಗಳನ್ನು ಕೈಗಳಲ್ಲಿ ಕೈಗಡಗ ತೋಳಬಂಧಿ ಮತ್ತು ಕೊರಳಿನಲ್ಲಿ ವಿವಿಧ ರೀತಿಯ ಕಂಠಾಭರಣಗಳನ್ನು ಮತ್ತು ಕಿವಿಗಳಲ್ಲಿ ಆಭರಣಗಳನ್ನು ಧರಿಸಿದ್ದಾರೆ. ತಲೆಯ ಕೂದಲನ್ನು ಗಂಟು ಹಾಕಿದ್ದಾರೆ. ಕಾಲಾಳು ವೀರರ ಹಿಂಭಾಗದಲ್ಲಿ ಕುದುರೆಗಳ ಮೇಲೆ ಕುಳಿತ ವೀರರು ಆಯುಧಗಳನ್ನು ಹಿಡಿದು ಬರುತ್ತಿದ್ದಾರೆ. ಈ ಹಂತದಲ್ಲಿ ಕೋಟೆ ಕಾಳಗಕ್ಕೆ ಸಿದ್ಧರಾಗಿ ಬರುತ್ತಿರುವಂತೆ ಚಿತ್ರಿಸಲಾಗಿದೆ.

ಎರಡನೆಯ ಹಂತದಲ್ಲಿ ನಾಲ್ವರು ವೀರರು ಕೋಟೆಯ ಸಮೀಪಕ್ಕೆ ಬಂದು ಕೋಟೆಯನ್ನು ರಕ್ಷಣೆ ಮಾಡುತ್ತಿರುವ ಶತ್ರು ಪಕ್ಷದವರನ್ನು ಸಬಳದಿಂದ ಚುಚ್ಚಿ ತಿವಿಯುತ್ತಿದ್ದಾರೆ. ಕೋಟೆಯ ಬುಡದ ಕಲ್ಲನ್ನು ಕೀಳುತ್ತಿರುವ ವೀರ ಎಡಗಾಲು ಮಂಡಿಯನ್ನು ಭೂಮಿಯ ಮೇಲಿಟ್ಟು ಬಲಗಾಲನ್ನು ಮುಂದಿಟ್ಟು ಎಡಗೈಲಿ ಗುರಾಣಿ ಆಸರೆಯಲ್ಲಿ ಕೋಟೆಯ ಕಲ್ಲನ್ನು ಕೀಳುವ ಭಂಗಿಯಲ್ಲಿದ್ದಾನೆ. ಕೋಟೆಯ ಮೇಲಿರುವ ಶತ್ರು ಸೈನಿಕರು ಎದುರಾಳಿಗಳ ಮೇಲೆ ಕೆಲವು ವಸ್ತುಗಳನ್ನು ಹಾಕುತ್ತಿರುವಂತೆ ಬಿಡಿಸಲಾಗಿದೆ. ಕೆಳಗೆ ಒಬ್ಬ ಸತ್ತ ವೀರನ ತಲೆ ಕಾಣುತ್ತದೆ. ಕೋಟೆಯ ಬುಡದಲ್ಲಿ ಕುಳಿತಿರುವ ವೀರನ ಬಗ್ಗೆ ಡಾ. ಶೇಷಶಾಸ್ತ್ರೀಯವರು ಅಲ್ಲಿ ಸತ್ತು ಬಿದ್ದಿರುವ ವ್ಯಕ್ತಿಯ ಶವದ ಕಾಲನ್ನು ಎಳೆಯುತ್ತಿದ್ದಾನೆ ಎಂಬ ಅಭಿಪ್ರಾಯಪಟ್ಟಿದ್ದಾರೆ. ಇದೇ ಚಿತ್ರವನ್ನು ಹಲವು ಛಾಯಾಚಿತ್ರಗಳ ಜೊತೆಯಲ್ಲಿ ಡಾ.ಎಂ. ಚಿದಾನಂದಮೂರ್ತಿ ಅವರು ತಮ್ಮ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಕೃತಿಯಲ್ಲಿ ನೀಡಿದ್ದಾರೆ.

ಮೂರನೆಯ ಹಂತದಲ್ಲಿ ನಾಲ್ಕು ಜನ ಅಲಂಕೃತ ಅಪ್ಸರೆಯರು ವಾದ್ಯಗಳ ಸಹಿತ ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿದ್ದಾರೆ. ಎಡಭಾಗದ ಕಡೆಯಲ್ಲಿರುವ ಅಪ್ಸರೆ ಕೈಯಲ್ಲಿ ಜಾಗಟೆಯನ್ನು ಮತ್ತು ಬಲಭಾಗದ ಕಡೆಯ ಅಪ್ಸರೆ ಕೈಯಲ್ಲಿ ಮೃದಂಗ ಹಿಡಿದು ಬಾರಿಸುತ್ತಿರುವಂತೆಯೂ ನಡುವಿರುವ ಇಬ್ಬರು ಅಪ್ಸರೆಯರು ಸತ್ತ ವೀರನನ್ನು ಆಕಾಶ ಮಾರ್ಗವಾಗಿ ಎತ್ತಿಕೊಂಡು ಹೋಗುತ್ತಿರುವಂತೆ ಬಿಡಿಸಲಾಗಿದೆ.

ನಾಲ್ಕನೆಯ ಹಂತದಲ್ಲಿ ವೀರನನ್ನು ವಿಮಾನದಲ್ಲಿ ಕುಳ್ಳರಿಸಿದ್ದಾರೆ. ವೀರ ಕೈಮುಗಿದು ಪದ್ಮಾಸನದಲ್ಲಿ ಆಸೀನನಾಗಿದ್ದಾನೆ. ಅಪ್ಸರೆಯರ ಆಚೆ ಈಚೆ ಒಬ್ಬ ಉದ್ದನೆಯ ತುತ್ತೂರಿಯನ್ನು ಊದುತ್ತಿದ್ದಾರೆ. ಇನ್ನಿಬ್ಬರು ಚಾಮರಧಾರಿ ಅಪ್ಸರೆಯರು ವೀರ ಕುತಿರುವ ಪುಷ್ಪಕ ವಿಮಾನವನ್ನು ಹೊತ್ತೊಯ್ಯುತ್ತಿದ್ದಾರೆ.

ಕಡೆಯ ಹಂತದಲ್ಲಿ ವೀರನು ಸ್ವರ್ಗಾರೋಹಣ ಮಾಡಿದ್ದಾನೆ. ಕೈಲಾಸದಲ್ಲಿರುವಂತೆ ದೇವಾಲಯದಲ್ಲಿ ಶಿವಲಿಂಗವನ್ನು ಪೂಜಿಸುತ್ತಿರುವ ವ್ಯಕ್ತಿ ಯೋಗಿಯಂತಿದ್ದಾನೆ. ಶಿವಲಿಂಗವಿರುವ ಆಲಯದ ಹೊರಭಾಗದಲ್ಲಿ ಭಕ್ತ ಪದ್ಮಾಸನದಲ್ಲಿ ಕೈಮುಗಿದು ಕುಳಿತಿದ್ದಾನೆ. ಅವನ ತಲೆ ಮತ್ತು ಕಿವಿಗಳಲ್ಲಿ ಆಭರಣದಂತಿರುವ ವಸ್ತು ಧರಿಸಿದ್ದಾನೆ. ಒಂದು ಪಕ್ಷದಲ್ಲಿ ಗಗ್ಗರ ಸರವನ್ನು ಧರಿಸಿದ ಹಿಂಗಾಲುಗಳ ಮೇಲೆ ಕುಳಿತು ಮುಂಗಾಲುಗಳನ್ನು ಮಡಚಿ ಕುಳಿತಿರುವ ನಂದಿ ಇದೆ. ಹಿಂದೆ ಮೇಲ್ಭಾಗದಲ್ಲಿ ಒಂದು ಕಡೆ ಸೂರ್ಯ ಮತ್ತೊಂದು ಕಡೆ ಚಂದ್ರನ ಶಿಲ್ಪವಿದೆ. ರುದ್ರಕಾಂತದ ಕಂಬಗಳ ಮೇಲೆ ಬೋದಿಗೆ ಇದೆ. ಅದರ ಮೇಲೆ ಅಲಂಕೃತ ಮುಚ್ಚಿಗೆ ಇದೆ. ಮುಚ್ಚಿಗೆಯ ಮೇಲ್ಭಾಗ ಒಡೆದಿದೆ.

ಅಲ್ಲಿರುವ ಎರಡನೆಯ ವೀರಗಲ್ಲು ಸಹ ಕೋಟೆ ಕಾಳಗಕ್ಕೆ ಸಂಬಂಧಿಸಿರುವಂತೆ ತಿಳಿಯಬಹುದು. ಮೂರು ಹಂತಗಳಲ್ಲಿರುವ ಈ ವೀರಗಲ್ಲಿನಲ್ಲಿ ಮುಖಾಮುಖಿಯಾಗಿ ಕುದುರೆಯ ಮೇಲೆ ಕುಳಿತ ವೀರರು ಹಿಡಿದಿರುವ ಉದ್ದನೆಯ ಆಯುಧ ಈಟಿಯಂತೆ ಕಂಡರೂ ಸಬಳದಂತಿರುವ ಆಯುಧವನ್ನು ಪ್ರಯೋಗಿಸುತ್ತಿದ್ದಾರೆ. ಎಡಭಾಗದ ವೀರ ಎಡಗೈಲಿ ಹಾಗೂ ಬಲಗೈಲಿ ಕುದುರೆಯ ಲಗಾಮು ಹಿಡಿದಂತೆ ಆಯುಧವನ್ನು ಹಿಡಿದು ಶತ್ರುವಿನ ಮೇಲೆ ಆಕ್ರಮಣ ಮಾಡುತ್ತಿರುವಂತೆ ಬಿಡಿಸಲಾಗಿದೆ. ಈ ವೀರನ ತಲೆಯ ಮೇಲೆ ಛತ್ರಿಯನ್ನು ಹಾಗೂ ಬಲಭಾಗದ ವೀರ ಎಡಗೈಲಿ ಲಗಾಮು ಹಿಡಿದು ಬಲಗೈ ಒಂದರಿಂದಲೇ ಆಯುಧವನ್ನು ಹಿಡಿದು ಹೋರಾಡುತ್ತಿರುವಂತೆ ಚಿತ್ರಿತವಾಗಿದೆ. ಇಬ್ಬರೂ ವೀರರು ಕಡಗ, ತೋಳಬಂಧಿ, ಕಂಠಾಭರಣ ಮೊದಲಾದ ಆಭರಣಗಳಿಂದ ಅಲಂಕೃತರಾಗಿದ್ದಾರೆ. ತಲೆಗೆ ಶಿರಸ್ತ್ರಾಣದಂತೆ ಕಾಣುವ ಕಿರೀಟವಿದೆ ಅಥವಾ ರಕ್ಷಾ ಕವಚವಾಗಿರಲೂಬಹುದು. ಕುದುರೆಗಳೆರಡು ಮುಖಾಮುಖಿಯಾಗಿ ನಿಂತು ಹೋರಾಟದಲ್ಲಿ ಭಾಗಿಯಾಗಿವೆ. ಯುದ್ಧದಲ್ಲಿ ಪಾಲ್ಗೊಂಡು ಭೂಮಿಯ ಮೇಲೆ ಸತ್ತು ಬಿದ್ದಿರುವ ವೀರನನ್ನು ಕಾಣಬಹುದು.

ಎರಡನೆಯ ಹಂತದಲ್ಲಿ ವೀರನನ್ನು ಅಲಂಕೃತ ಚಾಮರಧಾರಿಣಿಯರಾದ ಅಪ್ಸರೆಯರು ಕೈಲಾಸಕ್ಕೆ ಕರೆದೊಯ್ಯುತ್ತಿದ್ದಾರೆ. ವೀರನ ತಲೆಯ ಮೇಲೆ ಗುಂಪಗೆ ಕಿರೀಟದಾಲೆರುವ ಶಿರಸ್ತ್ರಾಣವಿದೆ. ಕೊರಳಲ್ಲಿ ಹಲವು ಬಗೆಯ ಕಂಠಾಭರಣಗಳಿವೆ. ನಡುವಿನಲ್ಲಿ ವೀರಗಚ್ಚೆಯ ಮೇಲೆ ಸೊಂಟಕ್ಕೆ ಅಂಗವಸ್ತ್ರ ಬಿಗಿದಿರುವಂತೆ ಬಿಡಿಸಲಾಗಿದೆ. ಮೂರನೆಯ ಹಂತದಲ್ಲಿ ಶಿವಲಿಂಗವಿದೆ. ಮುಂಭಾಗದಲ್ಲಿ ಭಕ್ತ ಪದ್ಮಾಸನದಲ್ಲಿ ಕೈಮುಗಿದು ಕುಳಿತದ್ದಾನೆ.

ಅದೇ ಸ್ಥಳದಲ್ಲಿ ಮತ್ತೊಂದು ವೀರಗಲ್ಲಿದೆ. ಇದು ಮೂರು ಹಂತಗಳಲ್ಲಿದ್ದು ಮೊದಲ ಹಂತದಲ್ಲಿ ತೀವ್ರ ಬಿರುಸಾದ ಕಾಳಗ ನಡೆಯುತ್ತಿರುವ ದೃಶ್ಯವೆಂದು ಊಹಿಸಬಹುದಾಗಿದೆ. ಶತ್ರುಗಳು ಮುಖಾಮುಖಿಯಾಗಿದ್ದಾರೆ. ವೀರಗಲ್ಲಿನ ಎಡಭಾಗದಲ್ಲಿ ಕುದುರೆಯ ಮೇಲೆ ಕುಳಿತ ವೀರನ ಕೈಯಲ್ಲಿ ಕತ್ತಿ-ಗುರಾಣಿ ಇದೆ. ಅವನ ಜೊತೆ ಕುದುರೆ ರಾಹುತರು ಇದ್ದಾರೆ. ಅವರ ಮುಂದಿರುವ ಕಾಲಾಳು ಬಲಗೈಲಿ ಕತ್ತಿ, ಎಡಗೈಲಿ ಗುರಾಣಿ ಹಿಡಿದು ಬಲಭಾಗದಲ್ಲಿ ಕುದುರೆಯ

ಮೇಲೆ ಕುಳಿತಿರುವ ಎದುರು ಪಕ್ಷದ ಶತ್ರುವಿನ ಮೇಲೆ ತನ್ನ ಕತ್ತಿಯಿಂದ ಆಕ್ರಮಣ ಮಾಡುತ್ತಿದ್ದಾನೆ. ಶತ್ರುವಿನ ಪಕ್ಕದಲ್ಲಿ ಬಿಲ್ಲು-ಬಾಣ ಹಿಡಿದಿರುವ ಮತ್ತೊಬ್ಬ ವ್ಯಕ್ತಿ ಹೋರಾಟಕ್ಕೆ ಮುನ್ನುಗ್ಗುತ್ತಿದ್ದಾನೆ. ಕುದುರೆಯ ಮೇಲಿರುವ ಶತ್ರು ಎಡಗೈಲಿ ಲಗಾಮು ಹಿಡಿದು ಬಲಗೈಲಿರುವ ಕತ್ತಿಯನ್ನು ಪ್ರಯೋಗಿಸಲು ಸಿದ್ಧನಾಗಿದ್ದಾನೆ. ಸತ್ತು ಬಿದ್ದ ಸೈನಿಕರ ಹೆಣಗಳನ್ನು ಕಾಣಬಹುದು. ಇದರಿಂದ ತೀವ್ರ ಕಾಳಗ ನಡೆದಿರುವುದನ್ನು ತಿಳಿಯಬಹುದು.

ಎರಡನೆಯ ಹಂತದಲ್ಲಿ ಇಬ್ಬರು ಚಾಮರಧಾರಿ ಅಲಂಕೃತ ಅಪ್ಸರೆಯರು ವೀರನು ಕುಳಿತ ವಿಮಾನವನ್ನು ಕೈಲಾಸಕ್ಕೆ ಕೊಂಡೊಯ್ಯುತ್ತಿದ್ದಾರೆ. ವಿಮಾನದಲ್ಲಿ ವೀರ ಪದ್ಮಾಸನದಲ್ಲಿ ಕೈಮುಗಿದು ಕುಳಿತಿದ್ದಾನೆ. ಕಡೆಯ ಹಂತದಲ್ಲಿ ಶಿವಲಿಂಗವನ್ನು ಯೋಗಿಯೊಬ್ಬ ಪೂಜಿಸುತ್ತಿರುವಂತೆಯೂ ಆತನ ಹಿಂಭಾಗದಲ್ಲಿ ಕೈಮುಗಿದು ಕುಳಿತ ಭಕ್ತ ಹಾಗೂ ಮುಂಭಾಗದಲ್ಲಿ ನಂದಿ ಶಿವಲಿಂಗವನ್ನು ನೋಡುತ್ತಾ ಕುಳಿತಿರುವಂತೆ ಶಿಲ್ಪಿ ಬಿಡಿಸಿದ್ದಾನೆ.

ಮೇಲಿನ ಈ ಮೂರು ವೀರಗಲ್ಲುಗಳನ್ನು ಗಮನಿಸಿದಾಗ ಕೋಟೆಯ ಚಿತ್ರಣವಿರುವ ವೀರಗಲ್ಲು ಕೋಟೆಯ ಅವರೋಹಣ ಮತ್ತು ಕೋಟೆಯ ಕಲ್ಲು ಕೀಳುವ ಅಪರೂಪದ ವಿವರಗಳನ್ನು ನಮಗೆ ನೀಡುತ್ತವೆ. ಕೆಲವು ಸಾಹಿತ್ಯ ಗ್ರಂಥಗಳಲ್ಲಿ ಕೋಟೆ ಕಾಳಗದ ವಿವರ ಬಂದಿದ್ದರೂ ಇಲ್ಲಿ ಕೋಟೆ ಕಾಳಗದ ದೃಶ್ಯ ಕಾವ್ಯವನ್ನು ಶಿಲ್ಪಿ ಕಣ್ಣಿಗೆ ಕಟ್ಟುವಂತೆ ಬಿಡಿಸಿದ್ದಾನೆ. ಶಿಲ್ಪಿ ತಾನು ವೀರಗಲ್ಲಿನ ಶಿಲ್ಪದ ಚೌಕಟ್ಟನ್ನು ವಿನ್ಯಾಸ ಮಾಡಿ ತಾನು ಬಿಡಿಸುವ ಪ್ರತಿಯೊಂದು ವಿವರಗಳು ನೈಜತೆಯಿಂದ ಇರುವಂತೆ ಬಿಡಿಸಿದ್ದಾನೆ. ಹೀಗಾಗಿ ಹನ್ನೊಂದನೇ ಅಥವಾ ಹನ್ನೆರಡನೆಯ ಶತಮಾನದಲ್ಲಿ ನಡೆದಿರಬಹುದಾದ ಕೋಟೆ ಕಾಳಗದ ವಿವರವನ್ನು ಇದರಲ್ಲಿ ನೋಡಬಹುದಾಗಿದೆ.

ಎರಡನೆಯ ವೀರಗಲ್ಲಿನಲ್ಲಿಯೂ ವೀರರು ಸಬಳವನ್ನು ಹಿಡಿದು ಕುದುರೆಯ ಮೇಲೇರಿ ಎದುರಾಳಿಯೊಡನೆ ಯುದ್ಧ ಮಾಡುತ್ತಿರುವಂತೆ ಬಿಡಿಸಲಾಗಿದೆ. ಹೀಗಾಗಿ ಸಬಳದ ಪ್ರಯೋಗ ಹಿಂದಿನ ಕೋಟೆ ಕಾಳಗದ ಶಿಲ್ಪದಲ್ಲಿಯೂ ಬಂದಿದೆ. ಈ ವೀರಗಲ್ಲಿನ ಕಾಲ ಕೂಡ ಹನ್ನೊಂದನೇ ಶತಮಾನ. ಈ ವೀರಗಲ್ಲಿನ ವೈಶಿಷ್ಟ್ಯವೆಂದರೆ ಮೊದಲ ಹಂತದಲ್ಲಿ ಮುಖಾಮುಖಿಯಾಗಿ ನಿಂತು ಕುದುರೆಗಳ ಮೇಲೆ ಕುಳಿತ ಯೋಧರ ನಡುವೆ ಯುದ್ಧಕ್ಕೆ ಸಾಮಗ್ರಿಗಳನ್ನು ಒಯ್ಯುತ್ತಿರುವ ವ್ಯಕ್ತಿಯನ್ನು ಚಿಕ್ಕದಾಗಿ ಬಿಡಿಸಿರುವುದನ್ನು ಕಂಡುಬರುತ್ತದೆ. ಸಬಳವನ್ನು ಹಿಡಿದಿರುವ ವೀರನ ತಲೆಯ ಮೇಲೆ ಛತ್ರಿ ಇರುವುದರಿಂದ ಆತ ಯಾವುದೋ ರಾಜ ವಂಶದವನಾಗಿರುವ ಸಾಧ್ಯತೆ ಇದೆ.

ಮೂರನೆಯ ವೀರಗಲ್ಲು ಶಿಲ್ಪದಲ್ಲಿ ಅಶ್ವಸೇನೆ ಮತ್ತು ಕಾಲ್ದಳಗಳ ಬಳಕೆ ಇದ್ದು, ತೀವ್ರವಾದಂತಹ ಹೋರಾಟ ನಡೆಯುತ್ತಿರುವಂತೆ ಬಿಡಿಸಲಾಗಿದೆ. ಈ ವೀರಗಲ್ಲಿನಲ್ಲಿ ಯುದ್ಧಕ್ಕೆ ಕಾರಣವನ್ನು ಶಿಲ್ಪದ ಮೂಲಕವಾಗಲಿ, ಬರವಣಿಗೆಯ ಮೂಲಕವಾಗಲಿ ತಿಳಿಸಿಲ್ಲ. ಖಡ್ಗ, ಬಿಲ್ಲು-ಬಾಣ ಇವುಗಳ ಪ್ರಯೋಗ ಇಲ್ಲಿನ ಯುದ್ಧ ಶಿಲ್ಪದಲ್ಲಿ ಯಥೇಚ್ಛವಾಗಿದೆ. ಎರಡೂ ಕಡೆಯ ಸೈನಿಕರು ಸತ್ತಿರುವುದನ್ನು

ಗಮನಿಸಿದಾಗ ಯುದ್ಧವು ತೀವ್ರವಾಗಿ ನಡೆದಿರಬಹುದೆಂದು ಊಹಿಸಬಹುದಾಗಿದೆ. ಹೀಗಾಗಿ ಲಕ್ಷ್ಮೇಶ್ವರದಲ್ಲಿರುವ ಈ ವೀರಗಲ್ಲುಗಳ ಪ್ರಕಾರ ನಡೆದಿರಬಹುದಾದಂತಹ ಬೇರೆ ಬೇರೆ ಕಾಲದ ಯುದ್ಧಗಳಲ್ಲಿ ಭಾಗವಹಿಸಿ ವೀರರು ತಮ್ಮ ಶೌರ್ಯವನ್ನು ಮೆರೆದಿರುವುದನ್ನು ಗುರುತಿಸಬಹುದಾಗಿದೆ.

ಬೆಳಗಾವಿ ತಾಲೂಕಿನ ಉಚಗಾಂವ ಗ್ರಾಮದಲ್ಲಿ ಶೂರರ ಪರಂಪರೆಯಿರುವ ಸಂಗತಿ ವೀರಶೂರ ದೇವಾಲಯದಿಂದ ಉದಿತವಾಗುತ್ತದೆ. ಇದು ಈ ಗ್ರಾಮದ ಮಹತ್ವವಾದ ಸ್ಮಾರಕ; ಈ ದೇವಾಲಯ ಮೊದಲಿದ್ದ ಪ್ರಾಚೀನ ದೇವಾಲಯದ ಅವಶೇಷಗಳ ಮೇಲೆ ನಿರ್ಮಾಣಗೊಂಡಿದೆ (ನವೀಕರಣಗೊಂಡು). ವಿಶೇಷವೆಂದರೆ ಈ ದೇವಾಲಯದ ಸುತ್ತ ಮುತ್ತಲೂ ಹಲವು ಹತ್ತು ವೀರ ಮಾಸ್ತಿ ಶಿಲ್ಪಗಳಿವೆ. ಬಹುಶಃ ಈ ದೇವಾಲಯವಿದ್ದ ಪ್ರದೇಶ ರಣಾಂಗಣವಾಗಿದ್ದು ಯುದ್ಧದಲ್ಲಿ ಮಡಿದ ವೀರರ ವೀರತ್ವದ ದ್ಯೋತಕವಾಗಿ ನಿರ್ಮಾಣಗೊಂಡಿರಬಹುದು. ಗರ್ಭಗೃಹ ಶುಕನಾಸಿ, ಮುಂಮಂಟಪ ಮತ್ತು ಶಿಖರಗಳನ್ನು ಹೊಂದಿದ ಈ ದೇವಾಲಯ ಶಿವನಿಗೆ ಸಮರ್ಪಿತವಾಗಿದೆ. ಶತ್ರುಗಳು ದನಕರುಗಳನ್ನು ಅಪಹರಿಸಿದಾಗ ಅವುಗಳನ್ನು ರಕ್ಷಿಸಲು ನಡೆದ ಹೋರಾಟವನ್ನು ಬಿಂಬಿಸುವ ತುರುಗೋಳ್ ಪ್ರಕಾರದ ವೀರಗಲ್ಲುಗಳು ಮತ್ತು ದೊರೆತ ವೀರಮಾಸ್ತಿ ಶಿಲ್ಪಗಳಲ್ಲಿ ಕೆಲವು ವೀರಗಲ್ಲುಗಳು. ಕೆಲವು ಮಾಸ್ತಿಕಲ್ಲುಗಳು ಮತ್ತು ಇನ್ನಿತರವು ವೀರ ಮಾಸ್ತಿಗಲ್ಲುಗಳು. ಈ ಪ್ರದೇಶದಲ್ಲಿ ದೊರೆತ ಮಾಸ್ತಿಕಲ್ಲುಗಳಲ್ಲಿ ಕೆಲವು ಪೂರ್ಣಸತಿ ಶಿಲ್ಪ ಹಂತಗಳಿರುವ ವೀರಮಾಸ್ತಿ ಶಿಲ್ಪ ಮತ್ತು ಒಕ್ಕೈ, ಇಕ್ಕೈ, ಮಾಸ್ತಿ ಶಿಲ್ಪಗಳೆಂದು ವಿಂಗಡಿಸಬಹುದು.

ವೀರ ಶೂರ ದೇಗುಲದ ಹಿಂಭಾಗದಲ್ಲಿ ವೀರ ಮಾಸ್ತಿಗಲ್ಲುಗಳಲ್ಲಿ ಆರು ವೀರಗಲ್ಲುಗಳು ಮೂರು ಹಂತಗಳನ್ನು ಹೊಂದಿದೆ. ಕೆಳಗಿನ ಹಂತದಲ್ಲಿ ಎರಡು ಸಾಲುಗಳಲ್ಲಿ ಎದುರು ಬದುರಾಗಿ ನಿಂತು ವೀರನು ವೈರಿಗಳೊಂದಿಗೆ ಕಾದಾಡುವ ದೃಶ್ಯವಿದೆ. ಕಾಲೆತ್ತಿ ಕೆನೆಯುವ ಕುದುರೆಯ ಮೇಲೆ ಕುಳಿತಿರುವ ಯೋಧನ ಶಿಲ್ಪ ವೀರರಸವನ್ನು ಬಿಂಬಿಸುತ್ತದೆ. ಖಡ್ಗ, ಭರ್ಚಿ, ಬಿಲ್ಲು, ಬಾಣ ಉಪಯೋಗಿಸಿ ವೈರಿಗಳೊಡನೆ ಕಾದಾಟ ನಡೆದಿದೆ. ಇಲ್ಲಿರುವ ವೀರ ಮಾಸ್ತಿಶಿಲ್ಪಗಳಲ್ಲಿ ವೀರನ ಹಿಂಬದಿಗೆ ಇಲ್ಲವೆ ಕಾಲ ಕೆಳಗೆ ಅಥವಾ ಪಕ್ಕದಲ್ಲಿ ಆಕಳುಗಳನ್ನು ಚಿತ್ರಿಸಲಾಗಿದೆ. ದುಂಡಾಗಿ ತುರುಬಿನಂತೆ ಗಂಟು ಹಾಕಿದ ತಲೆ ಕೂದಲು, ವೀರಗಚ್ಚೆ ಹಾಕಿ ಹೋರಾಡುವ ವೈಖರಿ ಗಮನ ಸೆಳೆಯುತ್ತದೆ. ಇನ್ನು ಕೆಲವು ಶಿಲ್ಪಗಳಲ್ಲಿ ದನಗಳನ್ನು ಅಪಹರಿಸುವ ಚಿತ್ರಣವಿದೆ. ಎರಡನೆಯ ಹಂತದಲ್ಲಿ ವೀರ ಮತ್ತು ಮಾಸ್ತಿಯರನ್ನು ಪಕ್ಕದಲ್ಲಿ ಕುಳ್ಳಿರಿಸಿ ಕಿನ್ನರಿಯರು ಸ್ವರ್ಗ ಲೋಕಕ್ಕೆ ಕರೆದೊಯ್ಯುವ ದೃಶ್ಯವಿದೆ. ಮೇಲಿನ ಹಂತದಲ್ಲಿ ಸತಿ ಪತಿಯರಿಬ್ಬರು ಶಿವಲಿಂಗದ ಬಳಿ ಕುಳಿತಿದ್ದಾರೆ. ಇಲ್ಲಿ ದೊರೆತ ವೀರಮಾಸ್ತಿ ಶಿಲ್ಪಗಳು ಹೊರನೋಟಕ್ಕೆ ಒಂದೇ ತರಹ ಕಂಡುಬಂದರೂ ವೀರನ ಉಡುಗೆ-ತೊಡುಗೆಗಳಲ್ಲಿ ಬಳಸಿದ ಆಯುಧಗಳಲ್ಲಿ ಶಿವಲಿಂಗದಲ್ಲಿ ಕಿನ್ನರಿಯರ ವೇಷಭೂಷಣಗಳಲ್ಲಿ ವೈವಿಧ್ಯವಿದೆ. ವೀರಶೂರ ದೇವಾಲಯ ಪಕ್ಕದಲ್ಲಿ ೬ ವೀರ ಮಾಸ್ತಿಗಲ್ಲುಗಳು ಮೂರು ಹಂತಗಳಲ್ಲಿದ್ದು ವೀರ ವೈರಿಗಳೊಂದಿಗೆ ಹೋರಾಡುವ ದೃಶ್ಯ ಮತ್ತು

ಮೇಲಿನ ಹಂತದಲ್ಲಿ ವೀರ ಸತಿಯೊಡನೆ ಶಿವಲೋಕ ಸೇರಿದ ಚಿತ್ರಣವಿದೆ. ವೀರರನ್ನು ಮಂಟಪದ ಒಳಗಿರುವಂತೆ ಚಿತ್ರಿಸಲಾಗಿದೆ. ಇವುಗಳು ಎರಡು ಅಡಿ ಅಗಲ ಮತ್ತು ಸುಮಾರು ೪-೫ ಅಡಿ ಉದ್ದ ೧ ಅಡಿ ದಪ್ಪವಾಗಿದ್ದು ಕೆಂಪು ಮಿಶ್ರಿತ ಬೆಣಚುಗಲ್ಲಿನಿಂದ ನಿರ್ಮಿತವಾಗಿದೆ. ಹೋರಾಟದ ಹಂತದಲ್ಲಿ ಕುದುರೆಗಳು ಕಾಲಾಳುಗಳು ಹೆಚ್ಚು ಸಂಖ್ಯೆಯಲ್ಲಿಲ್ಲ. ನಡುವಿನ ಹಂತದಲ್ಲಿ ವೀರನೊಂದಿಗೆ ಆತನ ಪತ್ನಿಯೂ ಮಂಟಪದಲ್ಲಿರುವ ಚಿತ್ರಣವಿದೆ.

ಒಂದು ವೀರಗಲ್ಲಿನಲ್ಲಿ ಹೆದರಿರುವ ದನಗಳು ಸಾಲಾಗಿ ನಿಂತಿರುವ ದೃಶ್ಯವಿದೆ. ಚೌಕಟ್ಟಿನಲ್ಲಿ ವೀರನ ಪಕ್ಕದಲ್ಲಿ ಹೆದರಿ ಕಂಗಲಾದ ದನಗಳನ್ನು ಚಿತ್ರಿಸಿದ್ದಲ್ಲದೆ, ಅನೇಕ ದನಗಳನ್ನು ಚೌಕಟ್ಟಿನ ಹೊರಗೆ ಮತ್ತು ಕಾಲಾಳುಗಳ ಕಾಲ ಕೆಳಗೆ ಚಿತ್ರಿಸಲಾಗಿದೆ. ವೀರನ ಒಂದು ಕೈಯಲ್ಲಿ ಬಿಲ್ಲು, ಮತ್ತೊಂದು ಕೈಯಲ್ಲಿ ಬಾಣವಿದೆ. ಈ ಚಿತ್ರಣದಿಂದ ಶತ್ರುಗಳು ದನಕರುಗಳನ್ನು ಅಪಹರಿಸಿದ್ದಕ್ಕಾಗಿ ಹೋರಾಟ ನಡೆದ ಅಂಶ ತಿಳಿದು ಬರುತ್ತದೆ. ಇನ್ನೊಂದು ವೀರಗಲ್ಲಿನಲ್ಲಿ ವೀರನೊಬ್ಬನು ಭರ್ಚಿಯಿಂದ ಕುದುರೆಯ ಮೇಲೆ ಕುಳಿತಿರುವ ವೈರಿಯೊಡನೆ ಕಾದಾಡುತ್ತಿದ್ದು, ದನಗಳು ಕುದುರೆಯ ಮೇಲೆ ಕುಳಿತ ವೈರಿಗಳ ಹಿಂಭಾಗದಲ್ಲಿ ತಮ್ಮ ಬಾಲ ಮೇಲಕ್ಕೆತ್ತಿ ಹೆದರಿಕೆ ಮತ್ತು ಕುತೂಹಲದಿಂದ ಹೋರಾಟ ಗಮನಿಸುತ್ತಿರುವಂತಿದೆ. ಮತ್ತೊಂದರಲ್ಲಿ ಕುದುರೆಯನ್ನು ದನಗಳ ಮೇಲಿನಿಂದ ಛಂಗನೆ ಹಾರಿಸಿ ಹೋರಾಡುವ ದೃಶ್ಯವಿದ್ದು ದನಗಳು ಕಕ್ಕಾಬಿಕ್ಕಿಯಾಗಿ ಓಡುತ್ತಿವೆ. ವೀರ ವೈರಿಯನ್ನು ಭರ್ಜಿಯಿಂದ ಚುಚ್ಚಿ ಕೆಳಗೆ ಕೆಡವಿದ್ದಾನೆ. ಆತನ ತಲೆಯ ಮೇಲೆ ಬಿಲ್ಲಿನಿಂದ ಹೊಡೆಯುತ್ತಿರುವಂತಿದೆ. ವೀರ ಹಾಗೂ ಆತನ ಕಡೆಯವನೊಬ್ಬ ಬಿಲ್ಲು-ಬಾಣಗಳನ್ನು ಹಿಡಿದಿದ್ದಾರೆ. ಈ ತುರುಗೋಳ್ ಶಿಲ್ಪ ಬಹಳ ಸುಂದರವಾಗಿದೆ. ದನಕರುಗಳು ಈ ಪ್ರದೇಶದ ಪ್ರಮುಖ ಸಂಪತ್ತು ಎಂಬುದು ಇಲ್ಲಿ ಉಲ್ಲೇಖಿಸಬಹುದು. ಈ ವೀರಗಲ್ಲಿನಲ್ಲಿ ಚಿತ್ರಿಸಲಾದ ವ್ಯಕ್ತಿಗಳ ವೇಷ-ಭೂಷಣ, ಆಭರಣ, ಆಯುಧ, ಕೇಶಾಲಂಕಾರ ಮತ್ತು ಅವರ ಹೋರಾಟದ ಭಂಗಿ ಬಹಳ ಆಕರ್ಷಕವಾಗಿ ಮೂಡಿ ಬಂದಿದೆ. ಇನ್ನೊಂದರಲ್ಲಿ ದೊಡ್ಡ ದೊಡ್ಡ ಗುರಾಣಿಗಳನ್ನು ಹಿಡಿದು ವೈರಿಗಳೊಡನೆ ವೀರ ಭರ್ಜಿಯಿಂದ ಹೋರಾಡುತ್ತಿದ್ದಾನೆ. ಇನ್ನೊಂದು ವೀರಗಲ್ಲಿನಲ್ಲಿ ವೀರ ಈಟಿ ಮತ್ತು ಭರ್ಚಿಯಿಂದ ದನಗಳ್ಳರಾದ ವೈರಿಗಳನ್ನು ತಿವಿಯುತ್ತಿದ್ದಾನೆ. ಕಾಲಡಿ ಯುದ್ಧ ಗೈಯತ್ತಿವೆ. ಬಹುತೇಕ ವೀರಗಲ್ಲುಗಳಲ್ಲಿ (ಒಂದನ್ನು ಹೊರತುಪಡಿಸಿ) ಮೂರು ಹಂತಗಳಲ್ಲವೆ. ವೀರನನ್ನು ಅಪ್ಸರೆಯರು ಕೈಹಿಡಿದು ಕರೆದೊಯ್ಯುವ ದೃಶ್ಯ ಅಪ್ಸರೆಯರು ಅಮೋಘವಾಗಿ ನೃತ್ಯ ಗೈಯುವ ದೃಶ್ಯ ವಿವಿಧ ನಾಟ್ಯ ಭಂಗಿಗಳಲ್ಲಿ ಆಚರಣಾಭಾವದಿಂದ ವೀರನನ್ನು ಕರೆದೊಯ್ಯುತ್ತಿರುವ ದೃಶ್ಯ, ವೀರನನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ, ಮಂಟಪದಲ್ಲಿ ಕುಳ್ಳಿರಿಸಿ ಕರೆದೊಯ್ಯುವ ದೃಶ್ಯ ಇವೇ ಮುಂತಾದವುಗಳು ಬಹಳ ಆಕರ್ಷಕವಾಗಿವೆ. ಇಲ್ಲಿರುವ ಒಂದೇ ಹಂತದ ವೀರ ಮಾಸ್ತಿಶಿಲ್ಪದಲ್ಲಿ ವೀರ ಮಾಸ್ತಿಯರಿಬ್ಬರು ಪದ್ಮಾಸನದಲ್ಲಿ ಕೈಮುಗಿದು ಕುಳಿತಿದ್ದಾರೆ. ಅಜಾನುಬಾಹು ವೀರನನ್ನು ಮುಖ್ಯವಾಗಿ ಚಿತ್ರಿಸಿ ಸತಿಯನ್ನು ಸಣ್ಣದಾಗಿ ಚಿತ್ರಿಸಲಾಗಿದೆ.

ಇಲ್ಲಿ ದೊರೆತ ಮಾಸ್ತಿಗಲ್ಲುಗಳಲ್ಲಿ ಸಹಗಮನವನ್ನು ಸೂಚಿಸುವ ಶಾಸನವಾಗಲೀ, ಶಿಲ್ಪವಾಗಲೀ ಇರದೇ ಇರುವುದರಿಂದ ಇವು ಸಹಗಮನ ಶಿಲ್ಪಗಳಿಲ್ಲ. ಇವುಗಳು ಪೂರ್ಣಸತಿ ಶಿಲ್ಪ ವೀರನ ಇಬ್ಬದಿಯಲ್ಲಿ ಸತಿಯರ ಶಿಲ್ಪ ವೀರ ಮಾಸ್ತಿಶಿಲ್ಪ ಒಕ್ಕೈ ಮತ್ತು ಇಕ್ಕೈ ಮಾಸ್ತಿಶಿಲ್ಪಗಳು ಎಂದು ವಿಭಾಗಿಸಬಹುದು. ಹರಸುವ ಭಂಗಿಯ ಎತ್ತಿದ ಬಲಗೈ ಹೂವಿನ ಅಲಂಕಾರದ ಕೂದಲಗಂಟು ಹಂತ ಹಂತವಾಗಿರುವ ಸೀರೆಯ ನೆರಿಗೆಗಳು ಆಕರ್ಷಕವಾಗಿದೆ. ಕೂದಲನ್ನು ಹಿಂದೆ ಚಾಚಿ ಹಾಕಿದ ಗಂಟು ಕಿರಿದಾಡ ನಡು ಮತ್ತು ಎದ್ದು ಕಾಣುವ ಕುಚ, ಕಾಲುಂಗರ, ಬಳೆ, ಕಡಗ, ಕೊರಳ ಸರಗಳ ಚಿತ್ರಣ ಮೋಹಕವಾಗಿದೆ. ಇನ್ನು ಕೆಲವು ವೀರ ಮಾಸ್ತಿ ಶಿಲ್ಪಗಳಲ್ಲಿ ವೀರ ಮತ್ತು ಮಾಸ್ತಿಯರು ಪದ್ಮಾಸನದಲ್ಲಿ ಕುಳಿತಿದ್ದಾರೆ. ವೀರರ ಮೀಸೆಯನ್ನು ಎದ್ದು ಕಾಣುವಂತೆ ಚಿತ್ರಿಸಲಾಗಿದೆ. ಹೋರಾಡುವಾಗ ಮಡಿದ ಯೋಧನ ಇಬ್ಬರು ಸತಿಯರನ್ನು ಆತನ ಇಕ್ಕೆಲಗಳಲ್ಲಿ ಚಿತ್ರಿಸಿರುವುದರಿಂದ ಆತನ ಇಬ್ಬರು ಪತ್ನಿಯರು ಅನುಗಮನ ಕೈಗೊಂಡದ್ದನ್ನು ಸೂಚಿಸುತ್ತದೆ. ಒಕ್ಕೈ ಮಾಸ್ತಿಕಲ್ಲಿನಲ್ಲಿ ಕಂಬದಿಂದ ಹೊರಟ ಕೈಯನ್ನು ಬಲಭಾಗದಲ್ಲಿ ಚಿತ್ರಿಸಲಾಗಿದೆ. ತೋಳಿಗೂ ಕಂಬಕ್ಕೂ ಮಧ್ಯೆ ಇರುವ ಜಾಗದಲ್ಲಿ ವೀರ ಸತಿಯೊಡನೆ ಕುಳಿತಿದ್ದಾನೆ. ತೋಳಿನ ಮುಂಭಾಗದಲ್ಲಿ ವೀರನೊಬ್ಬನನ್ನೇ ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವುದು ಗಮನಾರ್ಹ. ಇನ್ನೊಂದು ವೀರ ಮಾಸ್ತಿಶಿಲ್ಪದಲ್ಲಿ ಕಂಬದಿಂದ ಹೊರಚಾಚಿದ ತೋಳು ಎಡಭಾಗದಲ್ಲಿದ್ದು, ಕೇವಲ ವೀರನನ್ನು ಮಾತ್ರ ನಾಲ್ವರು ಅಪ್ಸರೆಯರು ಕರೆದೊಯ್ಯುತ್ತಿದ್ದಾರೆ. ಸುಮಾರು ನಾಲ್ಕು ಅಡಿ ಎತ್ತರ, ಏಳು ಅಡಿ ಅಗಲವಿರುವ ಈ ವೀರ ಮಾಸ್ತಿಶಿಲ್ಪಗಳಲ್ಲಿ ತೋಳು ಹೊರಚಾಚಿರುವ ಕಂಬಗಳ ಮೇಲ್ಭಾಗ ಕಳಸದ ಆಕಾರದಲ್ಲಿದೆ. ಚಿತ್ರಿಸಿದ ತೋಳು, ಮುಂಗೈ ಮತ್ತು ಬೆರಳುಗಳು ಪ್ರಮಾಣ ಬದ್ಧವಾಗಿವೆ.

ಉಚಗಾಂವದಲ್ಲಿ ಎರಡು ಇಕ್ಕೈ ವೀರ ಮಾಸ್ತಿಶಿಲ್ಪಗಳು ದೊರೆತಿವೆ. ಮೂರು ಹಂತಗಳಿರುವ ಎರಡು ತೋಳುಗಳು ಹೊರಚಾಚಿದಂತೆ ಚಿತ್ರಿತವಾಗಿದೆ. ತೋಳುಗಳ ಮುಂಭಾಗದಲ್ಲಿ ವೀರ ತನ್ನ ಇಕ್ಕೆಲಗಳಲ್ಲಿರುವ ಈರ್ವರು ಸತಿಯರು ತೋಳು ಬಳಸಿ ಸ್ವರ್ಗಯಾನಕ್ಕೆ ಹೊರಟಿದ್ದಾನೆ. ಇಕ್ಕೈ ಮಾಸ್ತಿ ಶಿಲ್ಪಗಳು ಅಪರೂಪವೆನಿಸಿದ್ದರಿಂದ ಇಲ್ಲಿ ದೊರೆತ ಇಕ್ಕೈ ಮಾಸ್ತಿಶಿಲ್ಪಗಳು ಗಮನಾರ್ಹವೆನಿಸಿವೆ. ಎಲ್ಲಕ್ಕಿಂತ ಅತಿ ಮಹತ್ವದ ಅಂಶವೆಂದರೆ ಪ್ರಪ್ರಥಮ ಬಾರಿಗೆ ಈ ವೀರಗಲ್ಲುಗಳ ಜೊತೆಗೆ ಮೂರು ಭರ್ಚಿ-ಬಾಕುಗಳು ದೊರೆತಿವೆ. ಮೂರು ಹಂತಗಳ ವೀರಗಲ್ಲುಗಳ ಕೆಳಗೆ ಅಡ್ಡವಾಗಿ ಇಡಲಾದ ಈ ಆಯುಧಗಳು ಭೂಮಿಯಿಂದ ಸುಮಾರು ನಾಲ್ಕು ಅಡಿಗಳಷ್ಟು ಒಳಗೆ ಇದ್ದಿರಬಹುದು. ಇಲ್ಲಿ ದೊರೆತ ಈ ಭರ್ಚಿ-ಚಾಕುಗಳು ಶಿಲ್ಪದಲ್ಲಿ ವೀರ ಹೋರಟಕ್ಕೆ ಬಳಸಿದ ಆಯುಧಗಳನ್ನು ಹೋಲುತ್ತಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಈ ಚಾಕು/ಕೈಗತ್ತಿ ಸುಮಾರು ಒಂದುವರೆ ಗೇಣಿನಷ್ಟು ಉದ್ದವಾಗಿದ್ದು, ಬಹಳ ಹರಿತವಾಗಿದೆ. ಚೂಪಾದ ಮುಂಭಾಗ ಹೊಂದಿರುವ ಇದನ್ನು ವೈರಿಗಳ ಮೇಲೆ ಸುಲಭವಾಗಿ ಪ್ರಯೋಗಿಸಬಹುದಾಗಿದೆ. ಇದನ್ನು

ವೀರರು ಸೊಂಟದಲ್ಲಿ ಸಿಕ್ಕಿಸಿಕೊಂಡು ಅಥವಾ ಕೈಯಲ್ಲಿ ಹಿಡಿದು ಹೋರಾಡುತ್ತಿರುವುದನ್ನು ಶಿಲ್ಪಗಳಲ್ಲಿ ನೋಡಬಹುದು. ಈ ಚಾಕುಗಳನ್ನು ಕೈಗತ್ತಿ ಅಥವಾ ಕಿರುಗತ್ತಿ ಎಂದೂ ಕರೆಯುತ್ತಾರೆ. ಇಲ್ಲಿ ದೊರೆತ ಚಾಕು-ಭರ್ಚಿಗಳನ್ನು ಹೋಲುವ ಆಯುಧಗಳು ವೀರಗಲ್ಲು ಶಿಲ್ಪಗಳಲ್ಲಿ ವೀರನ ಕೈಯಲ್ಲಿ, ಸೊಂಟದಲ್ಲಿ ಕಂಗೊಳಿಸುತ್ತಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಇದರಿಂದ ವೀರರ ಸ್ಮರಣಾರ್ಥ ಸ್ಮಾರಕಗಳನ್ನು ಇಡಿಸುವಾಗ ವೀರರು ಬಳಸಿದ ಆಯುಧಗಳನ್ನು ಅವುಗಳ ಜೊತೆಗೆ ಹೂಳಿದ ಅಂಶವನ್ನು ಸ್ಪಷ್ಟಪಡಿಸುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ ಉಚಗಾಂವ ಗ್ರಾಮದಲ್ಲಿ ದೊರೆತ ವೀರ ಮಾಸ್ತಿಶಿಲ್ಪಗಳು ಕಲ್ಯಾಣ ಚಾಲುಕ್ಯರ ಶೈಲಿಯನ್ನು ಹೋಲುತ್ತಿದ್ದರೂ, ಸ್ಥಳೀಯ ಪ್ರಭಾವವನ್ನು ಬಿಂಬಿಸುತ್ತವೆ. ಕೆಲವು ಶಿಲ್ಪಗಳು ಶಾಸ್ತ್ರೀಯ ಶೈಲಿಯಲ್ಲಿದ್ದಾರೆ. ಇನ್ನು ಕೆಲವು ಪ್ರಾದೇಶಿಕ ಸಂಪ್ರದಾಯದ ಅನುಕರಣೆಗಳಾಗಿವೆ. ಮಧ್ಯಮ ಶರೀರ, ಗಿಡ್ಡ ಗಾತ್ರದ ಕಾಲುಗಳು ಚಪ್ಪಟೆ ಮೂಗು, ದಪ್ಪತುಟಿ ಮುಂತಾದ ಪ್ರಾದೇಶಿಕ ಲಕ್ಷಣಗಳು ಕೆಲವು ಶಿಲ್ಪಗಳಲ್ಲಿ ಕಾಣಸಿಕ್ಕರೆ ಇನ್ನು ಕೆಲವು ಪ್ರಮಾಣಬದ್ಧ ಮೈಮಾಟ, ನೇರ ಮೂಗು, ದುಂಡುಮುಖ, ವೀರಗಳೇ ಮುಂತಾದ ರೂಢಿಬದ್ಧ ಮಾದರಿಯನ್ನು ಅನುಕರಿಸಿದಂತೆ ಕಾಣುತ್ತದೆ. ಈ ಶಾಸನ ಶಿಲ್ಪಗಳಲ್ಲಿ ಬಹುತೇಕ ಶಿವಲಿಂಗ ಚಿತ್ರಿತವಾಗಿದ್ದು, ಎರಡರಲ್ಲಿ ಮಾತ್ರ ಪದ್ಮಾಸನದಲ್ಲಿರುವ ತೀರ್ಥಂಕರರ ಶಿಲ್ಪವಿದೆ. ಇದು ವಿರಳವೆನಿಸಿದ್ದು ಹೋರಾಡಿ ಮಡಿದ ವೀರರು ಜೈನಮತೀಯರಾಗಿದ್ದ ಅಂಶ ಸ್ಪಷ್ಟವಾಗುತ್ತದೆ. ಇದಲ್ಲದೆ ಕೆಲವು ಸ್ಮಾರಕ ಶಿಲ್ಪಗಳು ಸ್ತಂಭ, ಛಾವಣಿ ಮತ್ತು ಗೋಪುರವನ್ನು ಹೊಂದಿದೆ.

ಪ್ರಾದೇಶಿಕ ಪರಿಸರದ ಮಾದರಿಯಿಂದ ಸಮಕಾಲೀನ ಸಾಮಾಜಿಕ ಜೀವನವನ್ನು ಪ್ರತಿಬಿಂಬಿಸುವ ಅನೇಕ ಕೇಶವಿನ್ಯಾಸಗಳು, ಆಭರಣ, ಉಡುಗೆ, ತೊಡುಗೆಗಳನ್ನು, ಆಯುಧಗಳನ್ನು ಶಿಲ್ಪದಲ್ಲಿ ಆಕರ್ಷಕವಾಗಿ ಚಿತ್ರಿಸಲಾಗಿದೆ. ಅಪ್ಸರೆಯರು ಕಿನ್ನರಿಯರು ಸತಿಯರ ಶಿಲ್ಪಗಳಲ್ಲಿರುವ ತೋಳಬಂಧಿಗಳನ್ನು ಶಿಲ್ಪಗಳಲ್ಲಿ ಚಿತ್ರಿಸಿದ್ದು ಸಮಕಾಲೀನ ಸಾಮಾಜಿಕ ಅಂಶಗಳನ್ನು ವ್ಯಕ್ತಪಡಿಸುತ್ತದೆ.

ಉಚಗಾಂವ ಗ್ರಾಮದಲ್ಲಿ ದೊರೆತ ಅನೇಕ ತುರುಗೋಳ್ ಶಿಲ್ಪಗಳು ಈ ಪ್ರದೇಶದಲ್ಲಿ ಪಶುಸಂಗೋಪನೆ ಪ್ರಧಾನ ವ್ಯವಸಾಯವಾಗಿದ್ದು ದನಕರುಗಳು ಈ ಪ್ರದೇಶದ ಆರ್ಥಿಕ ವ್ಯವಸ್ಥೆಯ ಮುಖ್ಯ ಸಂಪತ್ತು ಎಂಬುದನ್ನು ದೃಢೀಕರಿಸುತ್ತದೆ. ವಿಷಯ ನಿರೂಪಣೆ ಮತ್ತು ಸಾಮಾಜಿಕ ಅಂಶಗಳನ್ನು ಕಲಾ ಮಾಧ್ಯಮದಲ್ಲಿ ಸಾಧಿಸಿ ಜನಸಾಮಾನ್ಯರನ್ನು ಶಿಲ್ಪಗಳಲ್ಲಿ ಸೆರೆಹಿಡಿದ ವೀರತ್ವ ಪ್ರಧಾನ ಸಮಾಜ ವ್ಯವಸ್ಥೆಯನ್ನು ಪ್ರತಿಬಿಂಬಿಸಲಾಗಿದೆ.

ಒಂದೇ ಪ್ರದೇಶದಲ್ಲಿ ಹಲವಾರು ವೀರಗಲ್ಲುಗಳು ದೊರೆತಿದ್ದರಿಂದ ಈ ಪ್ರದೇಶದ ಶೌರ್ಯ ಸಾಹಸ, ವೀರತ್ವ, ಶೌರ್ಯ ಪ್ರಧಾನ ಸಮಾಜ ವ್ಯವಸ್ಥೆ ಸಾಮಾಜಿಕ ಕರ್ತವ್ಯನಿಷ್ಠೆ ಅನಿವಾರ್ಯ ಮತ್ತು ಅನಿಶ್ಚಿತತೆಯ ಹೋರಾಟ ಮತ್ತು ಸರ್ವಸಾಮಾನ್ಯ ಜನತೆ ಎದುರಿಸಿದ ಅಸುರಕ್ಷತೆಯನ್ನು ಅವು ಸಾರಿ ಹೇಳುವಂತಿವೆ.

## ಅಧ್ಯಾಯ : ೫

# ಹೊಯ್ಸಳರ ಕಾಲದ ವೀರಗಲ್ಲುಗಳು

---

೫.೧. ಹೊಯ್ಸಳರ ಕಾಲದ ಶಾಸನಸಹಿತ ವೀರಗಲ್ಲುಗಳು

೫.೨. ಹೊಯ್ಸಳರ ಕಾಲದ ಶಾಸನರಹಿತ ವೀರಗಲ್ಲುಗಳು

## ಅಧ್ಯಾಯ : ಐದು

# ಹೊಯ್ಸಳರ ಕಾಲದ ವೀರಗಲ್ಲುಗಳು

ಪ್ರಸ್ತಾವನೆ :

ಕಲ್ಯಾಣ ಚಾಲುಕ್ಯರ ಕಾಲದ ನಂತರ ಕಂಡುಬರುವ ವೀರಗಲ್ಲುಗಳೆಂದರೆ ಹೊಯ್ಸಳರ ಕಾಲದ ವೀರಗಲ್ಲುಗಳು. ಇವರ ಕಾಲಕ್ಕೆ ಸಂಬಂಧಿಸಿದ ವೀರಗಲ್ಲುಗಳು ಬಿಳಿ ಮತ್ತು ಕೆಂಪು ಶಿಲೆಯಲ್ಲಿ ಕಂಡುಬರುತ್ತವೆ. ಹೊಯ್ಸಳರ ಕಾಲದ ವೀರಗಲ್ಲುಗಳು ಉತ್ತರ ಕರ್ನಾಟಕದ ಭಾಗದಲ್ಲಿ ಕಡಿಮೆ ಪ್ರಮಾಣದಲ್ಲಿ ದೊರೆತಿದ್ದು, ಒಂದು ಹಂತದಿಂದ ಕೂಡಿದ ವೀರಗಲ್ಲುಗಳನ್ನು ಹೆಚ್ಚಾಗಿ ಈ ಭಾಗದಲ್ಲಿ ಕಾಣುತ್ತೇವೆ.

ಡೋಣೂರು ಹನುಮಾನ್ ದೇವಾಲಯದಲ್ಲಿ ನೆಟ್ಟ ಒಂದು ವೀರಗಲ್ಲಿನ ಮೇಲೆ ಶಾಸನ ತ್ರುಟಿತಗೊಂಡಿದ್ದು, ವ್ಯಕ್ತಿಯೊಬ್ಬನ ಗುಣಗಳ ವರ್ಣನೆಯಿದೆ. ಇದರ ಕಾಲ ಕ್ರಿ.ಶ.ಸುಮಾರು ೧೩ನೆಯ ಶತಮಾನದ ಲಿಪಿ. (ಕವಿಹಂ. ಶಾ.ಸಂ ೧೦, ಬಾಗೇವಾಡಿ-೨೮)

ಬೆಳಗಲಿ ಚಿಕ್ಕಮಠದ ಹತ್ತಿರವಿರುವ ವೀರಗಲ್ಲು ತ್ರುಟಿತವಾಗಿದೆ. ವ್ಯಕ್ತಿಯೊಬ್ಬನ ವೀರ ಮರಣವನ್ನು ದಾಖಲಿಸುತ್ತಿದ್ದು, ಕೆಳಭಾಗ ಸಂಪೂರ್ಣ ಸವೆದಿದೆ. ಸುಮಾರು ೧೩ನೆಯ ಶತಮಾನದ ಲಿಪಿ. (ಹುಬ್ಬಳ್ಳಿ ತಾಲೂಕಿನ ಶಾಸನಗಳು (ಸಂ), ಹನುಮಾಕ್ಷಿ ಗೋಗಿ, ೨೦೦೪, ಪುಟ-೧೩೪)

ಹಗರಟಗಿ ಭೀಮನ ಗುಡಿಯ ಮುಂದೆ ಬಿದ್ದಿರುವ ವೀರಗಲ್ಲಿನಲ್ಲಿ ಶಾಸನವಿದೆ. ಮೇಲ್ಭಾಗದಲ್ಲಿ ವೀರ ಬಿದ್ದಿರುವ ೨ನೆಯ ಹಂತದಲ್ಲಿ ವೀರರಿಬ್ಬರಿರುವ ೩ನೆಯ ಹಂತದ ಕೆಳಭಾಗ ಸವೆದಿದೆ. ಯುದ್ಧದಲ್ಲಿ ಮರಣ ಹೊಂದಿದ ವೀರನ ಬಗ್ಗೆ ಹೇಳುತ್ತ, ಬಹುಶಃ ಆತನ ತಮ್ಮ ರೇವಯ್ಯ

ಈ ವೀರಗಲ್ಲನ್ನು ಮಾಡಿಸಿದನೆಂದು ಹೇಳುವಂತಿದೆ. ಈ ವೀರಗಲ್ಲು ಸುಮಾರು ೧೩ನೆಯ ಶತಮಾನದ ಸುಂದರವಾದ ಅಕ್ಷರಗಳನ್ನು ಹೊಂದಿದೆ. (ಸುರಪುರ ತಾಲೂಕಿನ ಶಾಸನಗಳು (ಸಂ), ಹನುಮಾಕ್ಷಿ ಗೋಗಿ, ೧೯೯೫, ಪು-೧೯೨)

ಕುಮ್ಮಟದುರ್ಗ ದಕ್ಷಿಣ ಕಣಿವೆಯಲ್ಲಿ ಬೈಚಪ್ಪನ ಅರಮನೆ ಮುಂದೆ ವೀರಗಲ್ಲು ಶಾಸನವಿದೆ. ವೀರಕಂಪಿಲದೇವನು ಕುಮ್ಮಟದಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ಸುರತ್ರಣನ (ಸುಲ್ತಾನನು) ದಳವು ನೇಮಿಯ ನೇತೃತ್ವದಲ್ಲಿ ಬಂದು ಯುದ್ಧ ಮಾಡಿದಾಗ ಕಾಳಗದಲ್ಲಿ ಗಡೆಸಿಂಗನಾಯ್ಕನ ತಂಮ ಕಾಮಿನಾಯ್ಕನು ಹೋರಾಡಿ ಸಾಯುತ್ತಾನೆ. ಅವನ ಅಕ್ಕ ಮತ್ತು ಅಳಿಯ ಸೇರಿ ವೀರಗಲ್ಲು ಹಾಕಿಸುತ್ತಾರೆ. ಈ ಶಾಸನವನ್ನು ರಚಿಸಿದವನು ಮೈದುನ ಮಾದೆಯ ಹೆಗಡೆ. (ಕವಿಹಂ. ಶಾ.ಸಂ. ೨ ಕೊಪ್ಪಳ, ೧೬೪)

೧೩ನೆಯ ಶತಮಾನದ ಸೊರಟೂರಿನ ವೀರಗಲ್ಲೊಂದು ಮಹಾಮಂಡಲೇಶ್ವರ ತಿಳಿಕರ್ರ್ಸರ ಕುಮಾರರ್ಸರು ನಾಲ್ಕು ದುರ್ಗಗಳನ್ನು ಗೆದ್ದು ನಿಡುಗಲ್ಲಿಗೆ ದಾಳಿಯನ್ನು ಮಾಡಿದಾಗ ಬಿಲ್ಲಾಳು ಹರಿಪೆಯ ನಾಯ್ಕನು ಮರಣ ಹೊಂದಿದ ವಿಚಾರವನ್ನು ಹೇಳುತ್ತದೆ. (ಎಸ್.ಐ.ಐ. ೧೫. ಸೊರಟೂರು ಶಾ.ಸಂ. ೬೨೨) ಇಲ್ಲಿನ ನಾಲ್ಕು ಕೋಟೆಗಳು ಯಾವುವು ಎಂಬುದನ್ನು ತಿಳಿಯಲು ಈ ಶಾಸನವು ತ್ರುಟಿತವಾಗಿದೆ.

ನಿಟ್ಟೂರು ಕಲ್ಲೇಶ್ವರ ದೇವಸ್ಥಾನದ ಬಲಭಾಗದಲ್ಲಿ ಕ್ರಿ.ಶ. ೧೩ನೆಯ ಶತಮಾನದ ವೀರಗಲ್ಲು ಶಾಸನ ಇದೆ. ಈ ವೀರಗಲ್ಲಿನಲ್ಲಿ ಹಲುವಾಗಿಲ ಬಡಗಮಟ್ಟಿ ಪುಣೋಜಣನು ಕದಿರೆ ಮಿಡಿಯ ಕಾಳಗದಲ್ಲಿ ಸತ್ತ ಉಲ್ಲೇಖವಿದೆ. ಶಿವಕುಮಾರ ಚಿಕ್ಕೇಶನು ವೀರಗಲ್ಲನ್ನು ಹಾಕಿಸಿದ. ಕಲ್ಲೋಜನು ಈ ವೀರಗಲ್ಲನ್ನು ಕೆತ್ತಿದ. (ಕವಿಹಂ. ಶಾ.ಸಂ. ೧ ಹರಪನಹಳ್ಳಿ-೬೩)

ಹುಬ್ಬಳ್ಳಿ ತಾಲೂಕಿನ ಛಬ್ಬಿ ಗ್ರಾಮದ ಕರಿಮಲ್ಲೇಶ್ವರ ದೇವಾಲಯದ ಗೋಡೆಯಲ್ಲಿರುವ ಕ್ರಿ.ಶ. ೧೩ನೇ ಶತಮಾನದ ವೀರಗಲ್ಲು ಶಾಸನ ತ್ರುಟಿತವಾಗಿದೆ. ತಳವರ ಸಾಸಣಿಗೆ ಮಲ್ಲನಾಯಕನ ಉಲ್ಲೇಖವಿದೆ. (ಧಾರವಾಡ ಜಿಲ್ಲೆಯ ಶಾಸನ ಸೂಚಿ (ಸಂ), ಕಲಬುರ್ಗಿ ಎಂ.ಎಂ., ೧೯೭೫, ಶಾ.ಸಂ-೧೯)

ಹುಬ್ಬಳ್ಳಿ ತಾಲೂಕಿನ ಬೆಳಗಲಿ ಗ್ರಾಮದ ಚಿಕ್ಕಮಠದ ಹತ್ತಿರವಿರುವ ಕ್ರಿ.ಶ.೧೩ನೇ ಶತಮಾನದ ವೀರಗಲ್ಲು ಸಂಪೂರ್ಣವಾಗಿ ಹಾಳಾಗಿದೆ. ವ್ಯಕ್ತಿಯೊಬ್ಬನ ವೀರ ಮರಣದ ದಾಖಲಾತಿ ಶಾಸನದಲ್ಲಿದೆ. (ಧಾರವಾಡ ಜಿಲ್ಲೆಯ ಶಾಸನ ಸೂಚಿ (ಸಂ), ಕಲಬುರ್ಗಿ ಎಂ.ಎಂ., ೧೯೭೫, ಶಾ.ಸಂ-೮)

ಕುಂದಗೋಳ ತಾಲೂಕಿನ ಕುಯಿಬಾಳ ಗ್ರಾಮದ ಮಸೀದಿಯ ಹತ್ತಿರವಿರುವ ವೀರಗಲ್ಲು ಶಾಸನದಲ್ಲಿ ವೈಸಾಂಕ ಸು ೧೦ ಸೋಮವಾರಲು ಎಂದು ಇದ್ದು, ಶಕವರ್ಷದ ಉಲ್ಲೇಖವಿರುವುದಿಲ್ಲ.

ಲಿಪಿಯ ದೃಷ್ಟಿಯಿಂದ ಇದನ್ನು ೧೩-೧೪ನೆಯ ಶತಮಾನವೆನ್ನಬಹುದು. ಯುದ್ಧದಲ್ಲಿ ಹೋರಾಡಿ ಮಡಿದ ವಿಷಯವನ್ನು ಶಾಸನ ತಿಳಿಸುತ್ತದೆ. (ಎಸ್.ಐ.ಐ. ೨೦ ಶಾ.ಸಂ. ೩೬೨)

ಸಂಡೂರು ತಾಲ್ಲೂಕಿನ ರಾಮಘಡದಲ್ಲಿಯ ಕ್ರಿ.ಶ. ೧೩೨೩ರ ವೀರಗಲ್ಲು ಶಾಸನವು ಹೊಸಮಲೆದುರ್ಗದ ಅರಸರಿಗೆ ಸಂಬಂಧಿಸಿದ್ದಾಗಿದೆ. ಈ ವೀರಗಲ್ಲು ಶಾಸನವು ಹೊಯ್ಸಳ ವೀರ ಬಲ್ಲಾಳನು ತಾನೇ ಸೈನ್ಯ ಸಮೇತವಾಗಿ ಮತ್ತೊಮ್ಮೆ ದೊರವಡಿಗೆ ಬಂದು ಕಂಪಿಲರಾಯನೊಂದಿಗೆ ಯುದ್ಧ ಮಾಡುತ್ತಾನೆ. ಈ ಯುದ್ಧದಲ್ಲಿ ಇವರೀರ್ವರು ನೇರವಾಗಿ ಭಾಗವಹಿಸಿದುದನ್ನು ಈ ಶಾಸನ ತಿಳಿಸುತ್ತದೆ. (ಕವಿಹಂ. ಶಾ.ಸಂ.೧. ಸಂಡೂರು. ೧೩) ಈ ಯುದ್ಧದ ವಿವರವನ್ನು "ಶ್ರೀಮತಾದುನ್ದುಬಿ ಸಂವತ್ಸರದ ಫಾಲ್ಗುಣ ಸುದ್ಧ ೧೫ ಸೋಮವಾರದಲು ಶ್ರೀ ವೀರ ಕಂಪಿಲ ದೇವನ ಮೇಲೆ ಬಲ್ಲಾಳರಾಯನು ದಂಡೆತ್ತಿ ಬಂದಲಿ]ಯಿಬ್ಬರು ದಾಯದ ದಂಡಿಯೊಳಗೆ ದಿಂಡಿನ ಬಯಿಚ್ಚಯ್ಯನು. ಆ ಸಮರಂಗದ ಕಟ್ಟೆನಲ್ಲಿ ಹೊಕ್ಕು ಆ ಕಂಪಿಲದೇವನು ಬಯಿಚ ಬೋವನ ಕುದುರೆಯನು ಯೇರಿದಡೆ ಆ ಬಯಿಚ ಬೋವನು ಸಮರಂಗದ ಕಟ್ಟಿನಲ್ಲಿ ತಿರಿಗಿ ಹಾರಿ ಹೋಯಿದಾಡಿ ಬಿದ್ದನು". ಎಂದು ತಿಳಿಸುತ್ತದೆ. (ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ನಾಗಯ್ಯ ಜೆ.ಎಂ., ೨೦೦೨. ಪು. ೧೨೫)

ಇಲ್ಲಿಯ ವೀರಗಲ್ಲು ಮೂರು ಹಂತದ್ದಾಗಿದ್ದು, ತುಂಡಾಗಿದೆ. ಕೆಳಗಿನ ಹಂತದಲ್ಲಿ ಹೋರಾಡುತ್ತಿರುವ ದೃಶ್ಯ . ಎರಡನೆಯ ಹಂತದಲ್ಲಿ ವೀರನನ್ನು ಪಲ್ಲಕ್ಕಿಯಲ್ಲಿ ಅಪ್ಸರೆಯರು ಕರೆದೊಯ್ಯುತ್ತಿರುವಂತೆಯೂ, ಮೂರನೆಯ ಹಂತದಲ್ಲಿ ಶಿವಲಿಂಗದ ಬಳಿ ಧ್ಯಾನಾಸಕ್ತನಾದ ವೀರ, ಕುಳಿತ ನಂದಿ ಮತ್ತು ಸೂರ್ಯ ಚಂದ್ರರ ಶಿಲ್ಪಗಳಿವೆ. ಅಷ್ಟೇ ಅಲ್ಲದೆ ಈ ವೀರಗಲ್ಲಿನ ಅಕ್ಕಪಕ್ಕದಲ್ಲಿ ಅನೇಕ ನಾಗಶಿಲ್ಪಗಳು ಮತ್ತು ಭಗ್ನಗೊಂಡ ಇತರ ದೇವತಾಮೂರ್ತಿ ಶಿಲ್ಪಗಳಿವೆ.

ಕ್ರಿ.ಶ. ೧೩೭೭ರ ವೀರಗಲ್ಲೊಂದರಲ್ಲಿ ಬುಕ್ಕರಾಯನ ಆಳ್ವಿಕೆಯಲ್ಲಿ ಪ್ರಧಾನಿ ಕೇಚರಿದೇವನು ನಡೆಸಿದ ಕಾಳಗದಲ್ಲಿ ಚಂದಪ್ಪನೆಂಬುವನು ಮರಣವಾದುದು ತಿಳಿಯುತ್ತದೆ. (ಕವಿಹಂ. ಶಾ.ಸಂ. ೧. ಹಡಗಲಿ-೬೩)

ಹಡಗಲಿಯ ಬಸರಕೋಡು ಗ್ರಾಮದ ಕ್ರಿ.ಶ. ೧೩೭೭ರ ಲಿಪಿಸಹಿತ ವೀರಗಲ್ಲಿನಲ್ಲಿ ಬುಕ್ಕರಾಯನ ಆಳ್ವಿಕೆಯಲ್ಲಿ ಪ್ರಧಾನಿ ಕೇಚರಿದೇವನು ನಡೆಸಿದ ಕಾಳಗದಲ್ಲಿ ಚಂದಪ್ಪನೆಂಬುವನು ಮರಣ ಹೊಂದಿರುವುದು ತಿಳಿಯುತ್ತದೆ. (ಕವಿಹಂ. ಶಾ.ಸಂ. ೧ ಹಡಗಲಿ-೬೩)

ತಿಪ್ಪಾಪುರದ ಕಲ್ಲೇಶ್ವರ ದೇವಾಲಯದ ವೀರಗಲ್ಲು ವಿಜಯನಗರ ಕಾಲಕ್ಕೆ ಸಂಬಂಧಿಸಿದುದಾಗಿದೆ. ಕುದುರೆ ಸವಾರಿಯಲ್ಲಿರುವ ವೀರಯೋಧನ ಕೈಯಲ್ಲಿ ಖಡ್ಗವಿದೆ. ಕುದುರೆಯ ಕಡಿವಾಣವನ್ನು ಹಿಡಿದಿರುವನು. ಹಿಂಬದಿಯಲ್ಲಿ ಕೀರ್ತಿ ಮುಖದ ಅಲಂಕಾರವಿದೆ. ಯೋಧನ ಹಿಂಬದಿಯಲ್ಲಿ ಛತ್ರಿ-ಛಾಮರ ಹಿಡಿದು ಪರಿಚಾರಕರು. ಮುಂಭಾಗದಲ್ಲಿ ವೀರನ ಪತ್ನಿ ಹಾಗೂ ಬಾವುಟವಿಡಿದು ಯೋಧನನ್ನು ಯುದ್ಧಕ್ಕೆ ಬೀಳ್ಕೊಡುತ್ತಿರುವ ದೃಶ್ಯವಿದೆ.

ಹುಬ್ಬಳ್ಳಿ ತಾಲೂಕಿನ ಅದರಗುಂಚಿ ಗ್ರಾಮದ ಹನುಮಂತ ದೇವಾಲಯದ ಬಳಿ ಕ್ರಿ.ಶ. ೧೪ನೇ ಶತಮಾನದ ವೀರಗಲ್ಲು ಇದ್ದು, ಈ ಶಾಸನ ಸಂಪೂರ್ಣ ತ್ರುಟಿತಗೊಂಡಿದೆ. ಗಾವುಂಡನೊಬ್ಬನ ಉಲ್ಲೇಖವಿದೆ. (ಧಾರವಾಡ ಜಿಲ್ಲೆಯ ಶಾಸನ ಸೂಚಿ (ಸಂ), ಕಲಬುರ್ಗಿ ಎಂ.ಎಂ., ೧೯೭೫, ಶಾ.ಸಂ–೨)

ಧಾರವಾಡ ತಾಲೂಕಿನ ಧಾರವಾಡ ಗ್ರಾಮದ ವಿದ್ಯಾರಣ್ಯ ಪ್ರೌಢಶಾಲೆ ಬಳಿಯಿರುವ ಕ್ರಿ.ಶ. ೧೪ನೇ ಶತಮಾನದ ವೀರಗಲು ಶಾಸನ. ತ್ರುಟಿತಗೊಂಡಿದ್ದು, ಕಾಲದ ಉಲ್ಲೇಖವಿಲ್ಲ. ಆದರೆ ಲಿಪಿಯ ದೃಷ್ಟಿಯಿಂದ ೧೪ನೆಯ ಶತಮಾನವೆಂದು ಊಹಿಸಬಹುದು. ಮಲ್ಲಿದೇವನ ಉಲ್ಲೇಖವಿದೆ. (ಧಾರವಾಡ ಜಿಲ್ಲೆಯ ಶಾಸನ ಸೂಚಿ (ಸಂ), ಕಲಬುರ್ಗಿ ಎಂ.ಎಂ., ೧೯೭೫, ಶಾ.ಸಂ–೩೬)

ಧಾರವಾಡ ತಾಲೂಕಿನ ಮನಗುಂಡ ಗ್ರಾಮದ ಸಿದ್ದಲಿಂಗನ ಹಿತ್ತಲು ಬಳಿಯಿರುವ ವೀರಗಲ್ಲು, ಶಾಸನದಲ್ಲಿ ಕಾಲಯುಕ್ತಾಕ್ಷಿ ಸಂವತ್ಸರದ ಶ್ರಾವಣ ಬಹುಳಮಾವಾಸ್ಯ ಬುಧವಾರದಲು ಎಂದಿದ್ದು, ಶಕವರ್ಷವನ್ನು ಉಲ್ಲೇಖಿಸಿಲ್ಲ. ಬರವಣಿಗೆಯ ದೃಷ್ಟಿಯಿಂದ ಕ್ರಿ.ಶ. ೧೪ನೆಯ ಶತಮಾನದ್ದಾಗಿರುವ ಸಾಧ್ಯತೆ ಇದೆ. ಪೂರ್ವೋಕ್ತ ದಿನದಂದು ನಾಡಪ್ರಭು ಹಳಗೆರೆ ಮಲ್ಲಪ್ಪನು ಸ್ವರ್ಗಸ್ಥನಾಗಿದ್ದು, ಆತನ ನೆನಪಿಗಾಗಿ ಈ ವೀರಗಲ್ಲು ಶಾಸನವನ್ನು ನಿಲ್ಲಿಸಲಾಗಿದೆ. (ಎಸ್.ಐ.ಐ. ೧೫. ಶಾ.ಸಂ. ೬೫೧)

ಪ್ರಸ್ತುತ ವೀರಗಲ್ಲು ಧಾರವಾಡದ ವಿದ್ಯಾರಣ್ಯ ಪ್ರೌಢಶಾಲೆಯಲ್ಲಿದೆ. ಅರಸನ ಆಳಿಕೆಯ ಉಲ್ಲೇಖವಿರದ ಈ ಶಾಸನ ಮಲ್ಲಿದೇವನ ವೀರಮರಣವನ್ನು ತಿಳಿಸುತ್ತದೆ. ಅಕ್ಷರಗಳ ಸ್ವರೂಪದಿಂದ ಇದರ ಕಾಲ ೧೪ನೆಯ ಶತಮಾನವೆಂದು ನಿರ್ಧರಿಸಬಹುದು. (ಧಾರವಾಡ ಜಿಲ್ಲೆಯ ಶಾಸನ ಸೂಚಿ (ಸಂ), ಕಲಬುರ್ಗಿ ಎಂ.ಎಂ., ೧೯೭೬, ಶಾ.ಸಂ–೧೯)

ಕುಮ್ಮಟದುರ್ಗ ದಕ್ಷಿಣ ಕಣಿವೆಯಲ್ಲಿ ಬೈಚಪ್ಪನ ಅರಮನೆ ಮುಂದೆ ಇರುವ ಎರಡನೆಯ ವೀರಗಲ್ಲು ನಾಯಕಾಚಾರ್ಯ ಕಂಪಿಲದೇವನು ಸುರತ್ರಾಣನ(ಸಲ್ತಾನ) ಮೇಲೆ ಯುದ್ಧ ಮಾಡಿದಾಗ ಗಡೆಸಿಂಗನು ಹೋರಾಡಿ ರಣದಲ್ಲಿ ಸಾಯುತ್ತಾನೆ. ಕ್ರಿ.ಶ. ೧೪ನೆಯ ಶತಮಾನದ ಲಿಪಿ. (ಕವಿಹಂ. ಶಾ.ಸಂ. ೨. ಕೊಪ್ಪಳ–೧೬೫)

ಬೈರೀದೇವಕೊಪ್ಪ ಶಿವಾನಂದ ಮಠದ ಗೋಡೆಯಲ್ಲಿರುವ ಕ್ರಿ.ಶ.ಸುಮಾರು ೧೪೩೮ರ ವೀರಗಲ್ಲು ವೀರಮಾಸ್ತಿಕಲ್ಲಾಗಿದೆ. ೨ ಮತ್ತು ೩ನೆಯ ಹಂತಗಳು ಮಾತ್ರ ಕಾಣುತ್ತಿದ್ದು, ಉಳಿದ ಭಾಗ ನೆಲದಲ್ಲಿ ಮುಚ್ಚಿಕೊಂಡಿದ್ದು, ಇದನ್ನು ಶಿವಾನಂದ ಮಠದ ಗೋಡೆಯಲ್ಲಿ ಸೇರಿಸಿ ಕಟ್ಟಲಾಗಿದ್ದು, ಪೂಜೆ ಮಾಡುತ್ತಾರೆ. ಮೇಲಿನ ಸ್ತರದಲ್ಲಿ ಇಬ್ಬರು ಮಾಸ್ತಿಯರು ಸರ್ವಾಲಂಕಾರ ಭೂಷಿತರಾಗಿ ಮುಡಿಗೆ ಕೇದಿಗೆ ಮುಡಿದುಕೊಂಡು ಬಲಗೈ ಎತ್ತಿ ನಿಂತಿದ್ದಾರೆ. ಕೆಳಭಾಗ ಹಾಗೂ

ಶಾಸನದ ಮುಂದಿನ ಭಾಗವು ನೆಲದಲ್ಲಿ ಮುಚ್ಚಿಕೊಂಡಿದೆ. (ಹುಬ್ಬಳ್ಳಿ ತಾಲೂಕಿನ ಶಾಸನಗಳು (ಸಂ), ಹನುಮಾಕ್ಷಿ ಗೋಗಿ, ೨೦೦೪, ಪು-೮೬)

ಕ್ರಿ.ಶ. ೧೪೨೧ರ ಮುಳಗುಂದದ ಚಂದ್ರನಾಥ ಬಸದಿಯಲ್ಲಿರುವ ಶಾಸನವು ಶ್ರೀ ಮತ್ಸರಟೂರ ತಿಳಿಕರಸರ ಭೂಜಾದೊರ್ದ್ದಂಡ ಸನ್ಮದನ ಶ್ರೀಮನ್ಮಾಹಾ ಪ್ರಧಾನ ಬಹತ್ತರ ನಿಯೋಗಾಧಿಪತಿ ನಿಯೋಗಾಯೋಗಂದರಾ ಮಂತ್ರಿ ತಿಲಕನುಮಪ್ಪ ಹೆಗ್ಗಡೆ ಸೇನೆ ಬೋವ ಮಧುವರಸನ ಮಗ ನಾಗರಸನು ಸ್ವರ್ಗಕ್ಕೆ ಸಂದನು. (ಎಸ್.ಐ.ಐ. ೧೫ ಮುಳಗುಂದ ಶಾ.ಸಂ. ೬೬೭)

**ಹೊಯ್ಸಳರ ಕಾಲದ ಶಾಸನರಹಿತ ವೀರಗಲ್ಲು :**

ಸಂಡೂರು ತಾಲೂಕಿನ ರಾಮಘಡದ ರಾಮನಾಥ ದೇವಾಯದ ಸಭಾಮಂಟಪದಲ್ಲಿದೆ. ಒಂದು ಹಂತದ ವೀರಗಲ್ಲು. ವೀರ ಮುಡಿಯನ್ನು ಕಟ್ಟಿದೆ. ಬಲಗೈಯಲ್ಲಿ ಬಿಲ್ಲು, ಎಡಗೈಯಲ್ಲಿ ಬಾಣವನ್ನು ಹಿಡಿದುಕೊಂಡಿದ್ದಾನೆ. ಸೊಂಟದಲ್ಲಿ ಕಿರುಗತ್ತಿಯಿದೆ. ಈ ಶಿಲ್ಪವು ಹೋರಾಟಕ್ಕೆ ಸಿದ್ಧವಾಗಿರುವಂಥ ಶೈಲಿಯಲ್ಲಿದೆ.

ಈ ತಾಲೂಕಿನ ಕುರೆಕುಪ್ಪೆ ಗ್ರಾಮದ ಹನುಮಂತನ ದೇವಾಲಯ ಮುಂಭಾಗದಲ್ಲಿಯ ಕಟ್ಟೆಯ ಮೇಲಿನ ವೀರಗಲ್ಲು ಒಂದು ಹಂತದ್ದಾಗಿದೆ. ವೀರನು ಕುದುರೆಯ ಮೇಲೆ ಕುಳಿತಿದ್ದು, ಕೈಯಲ್ಲಿ ಖಡ್ಗ ಹಿಡಿದು ಎದುರಿಗಿರುವ ಕುದುರೆಯ ಮೇಲೆ ಕುಳಿತು ಹೋರಾಡುತ್ತಿದ್ದಾನೆ; ಶತ್ರುಗಳ ವಿರುದ್ಧ ಹೋರಾಡುತ್ತಿರುವಂತೆ ದೃಶ್ಯವಿದೆ. ಮೇಲೆ ಸೂರ್ಯ ಮತ್ತು ಚಂದ್ರರ ಮಧ್ಯೆ ಶಿವಲಿಂಗವಿರುವ ಚಿತ್ರವಿದೆ.

ಈ ತಾಲೂಕಿನ ಬಂಡ್ರಿ ಗ್ರಾಮದ ಆಂಜನೇಯ ದೇವಾಲಯದ ಹೊರಗೆ ಇರುವ ವೀರಗಲ್ಲು ಶಿಲ್ಪವು ನೆಲದಲ್ಲಿ ಹೂತುಹೋಗಿದೆ. ಇದು ಒಂದು ಹಂತದ ವೀರಗಲ್ಲಾಗಿದ್ದು ಬೆಣಚು ಶಿಲೆಯಲ್ಲಿ ಕಂಡರಿಸಲಾಗಿದೆ. ವೀರನು ಎಡಗೈಯಲ್ಲಿ ಬಿಲ್ಲನ್ನು, ಬಲಗೈಯಲ್ಲಿ ಬಾಣವನ್ನು ಹಿಡಿದಿದ್ದಾನೆ. ಆತನ ಪಕ್ಕದಲ್ಲಿ ಮತ್ತೊಬ್ಬ ವೀರನು ಕಿರುಗತ್ತಿಯನ್ನು ಹಿಡಿದು ನಿಂತಿದ್ದಾನೆ. ಈ ವೀರರು ವೀರ ಮುಡಿಯನ್ನು ಕಟ್ಟಿದ್ದು, ವೀರಗಾಸೆಯನ್ನು ತೊಟ್ಟಿದ್ದಾರೆ. ಕೊರಳಲ್ಲಿ ಸರ, ಕೈಯಲ್ಲಿ ಕಡಗವನ್ನು ಧರಿಸಿದ್ದಾರೆ. ಈ ವೀರಗಲ್ಲು ಶಿಲ್ಪಕ್ಕೆ ಬಳಸಿರುವ ಶಿಲೆ ಹಾಗೂ ಶೈಲಿಯನ್ನು ಗಮನಿಸಿದರೆ ಇದು ಪಾಳೆಗಾರರ ಅವಧಿಯದ್ದಾಗಿದೆ ಎಂದು ತಿಳಿದುಬರುತ್ತದೆ.

ಕಮಲಾಪುರದ ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲಯದ ಹಿಂಬದಿಯಲ್ಲಿ ಕ್ರಿ.ಶ. ೧೪ನೆಯ ಶತಮಾನದ ವೀರಗಲ್ಲು ಇದ್ದು, ವೀರ ಸ್ಥಾನಿಕ ಭಂಗಿಯಲ್ಲಿದ್ದಾನೆ. ಎಡಗಡೆ ಮುಡಿ ಕಟ್ಟಿಕೊಂಡಿದ್ದಾನೆ. ಕಿವಿಯಲ್ಲಿ ರುದ್ರಾಕ್ಷಿ ಮಣಿಯ ಓಲೆ ಧರಿಸಿದ್ದಾನೆ. ವೀರನ ಮೇಲ್ಭಾಗದ ಅಕ್ಕಪಕ್ಕ ಶಿವಲಿಂಗ ಸೂರ್ಯ ಮತ್ತು ಚಂದ್ರನ ಉಬ್ಬು ಶಿಲ್ಪಗಳಿವೆ. ಕೊರಳಲ್ಲಿ ರುದ್ರಾಕ್ಷಿಮಣಿ ಸರ, ವೈಜಯಂತಿಹಾರ, ಶಿವಲಿಂಗಹಾರ, ಕೈಗಳಿಗೆ ತೋಳಬಂಧಿ ಮತ್ತು ಕಡಗ ಧರಿಸಿದ್ದಾನೆ. ಬಲಗೈಯಲ್ಲಿ ಕತ್ತಿಯನ್ನು

ಎತ್ತಿಹಿಡಿದು ಎದೆಯ ಮುಂಭಾಗದವರೆಗೂ ಚಾಚಿದ್ದಾನೆ. ಬಲಗೈ ಎತ್ತಿ ಅಭಯ ಹಸ್ತ ಹಿಡಿದಿದ್ದಾನೆ. ವೀರಗಾಸೆ ಧರಿಸಿ ಬಲಗಡೆ ಸೊಂಟಕ್ಕೆ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಎಡಗಾಲನ್ನು ಮುಂದಕ್ಕೆ ಇಟ್ಟು ನಡೆಯುತ್ತಿರುವಂತೆ ಚಿತ್ರಿಸಲಾಗಿದೆ. ಬಲಗಾಲಲ್ಲಿ ಗೆಜ್ಜೆ ಕಡಗ ಧರಿಸಿದ್ದಾನೆ. ವೀರನ ವೀರತ್ವ ಕೋರೆ ಮೀಸೆಯ ಚಿತ್ರದ ಮೇಲೆ ಬಿಂಬಿತವಾಗಿದೆ.

ಕಮಲಾಪುರದ ಭಾರತೀಯ ಪ್ರಾಚ್ಯವಸ್ತು ಸಂಗ್ರಹಾಲದಲ್ಲಿರುವ ಕ್ರಿ.ಶ. ೧೪ನೆಯ ಶತಮಾನದ ವೀರಗಲ್ಲಿನಲ್ಲಿ ವೀರ ಸ್ಥಾನಿಕ ಭಂಗಿಯಲ್ಲಿದ್ದಾನೆ. ಎಡಗಡೆ ವೀರ ಮುಡಿ ಕಟ್ಟಿದ್ದಾನೆ. ಕಿವಿಯಲ್ಲಿ ವರ್ತುಲಾಕಾರದ ಕುಂಡಲಗಳನ್ನು ಧರಿಸಿದ್ದಾನೆ. ಕೊರಳಲ್ಲಿ ವೈಜಯಂತಿ ಹಾರ ಧರಿಸಿ ಜನಿವಾರವನ್ನು ಧರಿಸಿದ್ದಾನೆ. ಕೈಯಲ್ಲಿ ಕಡಗ ಧರಿಸಿದ್ದಾನೆ. ಎಡಗೈಯಲ್ಲಿ ಬಿಲ್ಲು ಹಿಡಿದು ಬಾಣವನ್ನು ಕಿವಿಯ (ಕರ್ಣದ)ವರೆಗೂ ಎಳೆದು ಬಿರುಸಿನಿಂದ ಬಿಡುತ್ತಿರುವ ದೃಶ್ಯವಿದೆ. ನೆರಿಗೆಯುಳ್ಳ ಧೋತ್ರದ ಕೆತ್ತನೆ ಇದೆ. ಬಲಗಡೆ ಕಿರುಗತ್ತಿ ಸಿಕ್ಕಿಸಿಕೊಂಡಿದ್ದಾನೆ. ವೀರನನ್ನು ಒಂದು ಚೌಕಟ್ಟಿನಲ್ಲಿ ಚಿತ್ರಿಸಿ ವೀರನ ದೇಹದ ಹಿಂದೆ ಸುತ್ತಲೂ ಬಾಣಗಳು ಬಲೆಯಂತೆ ಹಬ್ಬಿಕೊಂಡಿವೆ. ಇದು ವೀರಾವೇಶದಿಂದ ಹೋರಾಡಿದುದನ್ನು ಹಾಗೂ ಶತ್ರುಗಳನ್ನು ನಾಶ ಮಾಡಿದ್ದರ ಸಂಕೇತವಾಗಿ ಚಿತ್ರಿಸಲಾಗಿದೆ.

## ಅಧ್ಯಾಯ : ಆರು

# ವಿಜಯನಗರ ಕಾಲದ ವೀರಗಲ್ಲುಗಳು

ವಿಜಯನಗರ ಕಾಲದ ವೀರಗಲ್ಲುಗಳಲ್ಲಿ ಸ್ಪಷ್ಟವಾಗಿ ಎದ್ದು ಕಾಣುವುದು. ಒರಟಾದ ಬಿಳಿಯ ಕಲ್ಲಿನ ಉಪಯೋಗ ಮತ್ತು ಒರಟಾದ ಶಿಲ್ಪ. ಈ ರೀತಿಯ ವ್ಯತ್ಯಾಸಕ್ಕೆ ಕಾರಣ ಕರಿಯಕಲ್ಲು ದೊರೆಯದಿದ್ದುದೋ ಅಥವಾ ಶಿಲ್ಪಿಗಳು ಉದ್ದೇಶಪೂರ್ವಕವಾಗಿ ಹೀಗೆ ಮಾಡಿದರೋ ಹೇಳುವುದು ಕಷ್ಟ. ಶಿಲೆಯ ಅಭಾವ ಇಂಥ ಬದಲಾವಣೆಗೆ ಕಾರಣ ಎಂಬ ತೀರ್ಮಾನಕ್ಕೆ ಬರುವುದು ಸಮಂಜಸವಲ್ಲವೆಂದು ತೋರುತ್ತದೆ. ಈ ಹಿಂದೆ ಗಮನಿಸಿದಂತೆ ವೀರಗಲ್ಲುಗಳ ಶಿಲ್ಪದ ಎಲ್ಲ ರೀತಿಯ ಬೆಳವಣಿಗೆಯೂ ತನ್ನ ಕಾಲದ ವಾಸ್ತು ಮತ್ತು ಮೂರ್ತಿಶಿಲ್ಪದ ಬೆಳವಣಿಗೆಯನ್ನೇ ಅವಲಂಬಿಸಿತ್ತು. ಮತ್ತು ಈ ವೀರಗಲ್ಲುಗಳು ಆ ಕಲಾ ಪ್ರಕಾರದ ಒಂದು ಅಂಗವಾಗಿ ಹೇಗೆ ಬೆಳೆಯಿತು ಎಂಬುದು ಈಗಾಗಲೇ ಸ್ಪಷ್ಟವಾಗಿದೆ. ಆದ್ದರಿಂದ ಇದಕ್ಕೆ ಕಾರಣ ಶಿಲೆಯ ಅಭಾವವೆಂದಾಗಲೀ, ಪ್ರಾದೇಶಿಕ ಲಕ್ಷಣವೆಂದಾಗಲೀ ಹೇಳುವುದು ಸೂಕ್ತವಲ್ಲ. ವೀರಗಲ್ಲುಗಳು ತಮ್ಮ ಸಮಕಾಲೀನ ವಾಸ್ತವ ಮತ್ತು ಮೂರ್ತಿಶಿಲ್ಪದ ರೀತಿಯನ್ನೇ ಅನುಸರಿಸಿವೆಂದು ಹೇಳಬೇಕು. ಏಕೆಂದರೆ ಇಂಥ ಬದಲಾವಣೆಯನ್ನು ಶಿಲೆಯ ಆಯ್ಕೆಯಲ್ಲಿ ಮಾತ್ರವಲ್ಲದೆ ಶಿಲ್ಪದ ವಿವರಗಳಲ್ಲಿಯೂ ಗಮನಿಸಬಹುದು. ಹಿಂದಿನ ಸಂಪ್ರದಾಯದಂತೆ ಘಟನೆಗಳನ್ನು ಹಂತ ಹಂತಗಳಲ್ಲಿ ನಿರೂಪಿಸುವ ತಂತ್ರವನ್ನು ಅಷ್ಟು ಕಟ್ಟುನಿಟ್ಟಾಗಿ ಪಾಲಿಸಿಲ್ಲ. ಗಂಗರ ಕಾಲದ ಕೆಲವು ವೀರಗಲ್ಲುಗಳ ಹಾಗೆಯೇ ಯುದ್ಧ ಸನ್ನದ್ಧನಾಗಿರುವಂತೆ ವೀರನೊಬ್ಬ ಚಿತ್ರವನ್ನು ಮಾತ್ರ ಬಿಡಿಸಲಾಗಿರುತ್ತದೆ. ಅಲ್ಲಿನ ಹಾಗೆಯೇ ವೀರನ ಚಿತ್ರಕ್ಕೆ ಪ್ರಾಮುಖ್ಯವನ್ನು ನೀಡಲಾಗಿರುತ್ತದೆ. ಈ ಕಾಲದ ಒಂದೇ ವೀರಗಲ್ಲು ಇಬ್ಬರು ಅಥವಾ ಮೂವರ ಸ್ಮಾರಕವಾಗಿರುವುದುಂಟು. ವೀರನ ಶಿಲ್ಪದ ಮೇಲ್ಭಾಗದಲ್ಲಿ ಸೂರ್ಯ, ಚಂದ್ರ, ಶಿವಲಿಂಗವನ್ನು ಸಾಮಾನ್ಯವಾಗಿ ಬಿಡಿಸಿರುತ್ತಾರೆ. ವೀರನೊಂದಿಗೆ ಆತನ ಹೆಂಡತಿಯು

ಸಹಗಮನ ಮಾಡಿದರೆ ಆ ವಿವರಗಳು ಅದೇ ವೀರಗಲ್ಲುಗಳಲ್ಲಿ ದೊರೆಯುತ್ತವೆ. ವೀರನ ಎಡಭಾಗಕ್ಕೆ, ತನ್ನ ಕೈಯೆತ್ತಿ ಮಹಿಳೆ ನಿಂತಿರುತ್ತಾಳೆ. ಕೆಲವು ವೀರಗಲ್ಲುಗಳಲ್ಲಿ ವೀರನು ಆತನ ಹೆಂಡತಿಯೂ ಕೈ ಜೋಡಿಸಿ ನಿಂತಿರುತ್ತಾರೆ. ಇದರ ಪಕ್ಕದಲ್ಲೇ ಒಕ್ಕೈ ಮಾಸ್ತಿಗಲ್ಲುಗಳನ್ನು ಬಿಡಿಸಿರುತ್ತಾರೆ. ಕೆಲವು ವೀರಗಲ್ಲುಗಳು ಬಿಳಿಯ ಕಲ್ಲಿನವೇ ಆಗಿದ್ದರೂ ಹಿಂದಿನ ಹಂತ ಹಂತಗಳಲ್ಲಿ ಶಿಲ್ಪ ಬಿಡಿಸುವ ಸಂಪ್ರದಾಯವನ್ನು ಅನುಸರಿಸಿರುವುದುಂಟು. ಇಂಥ ಕಡೆಗಳಲ್ಲಿ ಹಂತಗಳ ಸೂತ್ರವನ್ನು ಅನುಸರಿಸಿಯೂ ಕೆಲವಾರು ವಿವರಗಳನ್ನು ಹೊಸದಾಗಿ ತರಲು ಮಾಡಿರುವ ಪ್ರಯತ್ನವನ್ನು ಗಮನಿಸಬಹುದು. ಕೆಳಗಿನ ಹಂತದಲ್ಲಿ ಯುದ್ಧದಲ್ಲಿ ಭಾಗವಹಿಸಿದಂತೆಯೋ, ಯುದ್ಧಸನ್ನದ್ಧನಾಗಿರುವಂತೆಯೋ ವೀರನ ಶಿಲ್ಪವನ್ನು ಬಿಡಿಸಲಾಗಿರುತ್ತದೆ. ಎರಡನೇ ಹಂತದಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುವ ವಿವರಗಳನ್ನು ಹೊಂದಿರಬೇಕಾದ ಹಂತದಲ್ಲಿ ವೀರ ಮತ್ತು ಆತನ ಹೆಂಡತಿ ಕೈಮುಗಿದು ಪದ್ಮಾಸನದಲ್ಲಿ ಕುಳಿತಿರುತ್ತಾರೆ. ಅಥವಾ ಕೆಲವೊಮ್ಮೆ ಕೈಮುಗಿದು ನಿಂತಿರುತ್ತಾರೆ. ವಿಜಯನಗರ ಕಾಲದ ಬಹುಪಾಲು ವೀರಗಲ್ಲುಗಳ ಮೇಲೆ ಅಂದರೆ ಶಿಲ್ಪದ ನಡುವೆ ಎರಡು ಕಡೆ ಎರಡು ರಂಧ್ರಗಳನ್ನು ಸುಮಾರು ಒಂದು ಇಂಚು ಅಗಲ ಮತ್ತು ಆಳದಷ್ಟು ಮಾಡಿರುತ್ತಾರೆ. ಇವುಗಳನ್ನು ಉದ್ದೇಶಪೂರ್ವಕವಾಗಿಯೇ ಮಾಡಿರುವರೆಂಬ ಬಗ್ಗೆ ಸಂಶಯವಿಲ್ಲ.

ಈ ಕಾಲದ ಬಹುಪಾಲು ವೀರಗಲ್ಲುಗಳ ಮೇಲೆ ಶಾಸನ ಇರುವುದಿಲ್ಲ. ಕಲ್ಲು ಮತ್ತು ಶಿಲ್ಪದ ಆಧಾರದ ಮೇಲೆಯೇ ಇವುಗಳನ್ನು ಗುರುತಿಸಬೇಕಾಗುತ್ತದೆ. ವಿಜಯನಗರ ಕಾಲದ ಮತ್ತು ಗಂಗರ ಕಾಲದ ವೀರಗಲ್ಲುಗಳು ಮೇಲುನೋಟಕ್ಕೆ ಒಂದೇ ರೀತಿಯಾಗಿ ಕಂಡುಬರುತ್ತವೆ. ಇವುಗಳಿಗಿರುವ ಮುಖ್ಯ ವ್ಯತ್ಯಾಸವೆಂದರೆ ವಿಜಯನಗರ ಕಾಲದ ವೀರಗಲ್ಲುಗಳಲ್ಲಿ ವೀರನನ್ನು ಆಲೀಢಾಸನದಲ್ಲಿ ಬಿಡಿಸಲಾಗಿರುವುದಿಲ್ಲ. ವೀರಗಲ್ಲುಗಳು ಗಿಡ್ಡಾಗಿರುತ್ತವೆ. ಮತ್ತು ಮೇಲ್ಭಾಗದಲ್ಲಿ ಸಾಮಾನ್ಯವಾಗಿ ಧಾರ್ಮಿಕ ಸಂಕೇತಗಳಾದ ಸೂರ್ಯ, ಚಂದ್ರ, ಶಿವಲಿಂಗ, ಬಸವ, ಶಂಖ, ಚಕ್ರ, ಪದ್ಮಗಳನ್ನು ಹೊಂದಿರುತ್ತವೆ. ಮತ್ತೊಂದು ಸೂಕ್ಷ್ಮವಾದ ವ್ಯತ್ಯಾಸವಿರುವುದು ವೀರನ ಉಡುಪುಗಳಲ್ಲಿ; ಗಂಗರ ಕಾಲದ ವಿರಗಲ್ಲುಗಳಲ್ಲಿ ಸರ್ವೇಸಾಮಾನ್ಯವಾಗಿ ಕಂಡುಬರುವ ಬಾಕು ಈ ವೀರಗಲ್ಲುಗಳ ಶಿಲ್ಪದಲ್ಲಿ ಕಂಡು ಬರುವುದಿಲ್ಲ. ಬದಲಾಗಿ ವೀರನ ಸೊಂಟದಲ್ಲಿ ಕಿರುಗತ್ತಿ ಇರುತ್ತದೆ.

ಪ್ರಸ್ತುತ ಅಧ್ಯಯನ ವ್ಯಾಪ್ತಿಯಲ್ಲಿ ಕಂಡುಬರುವ ವಿಜಯನಗರ ಕಾಲದ ವೀರಗಲ್ಲುಗಳು ಶಾಸನಸಹಿತ ಮತ್ತು ಶಾಸನರಹಿತ ವೀರಗಲ್ಲುಗಳು ಎಂದು ವಿಭಾಗಿಸಿ ಅಧ್ಯಯನ ಮಾಡಲಾಗಿದೆ. ಹಡಗಲಿ ಗ್ರಾಮದ ಶಾಲೆಯ ಬಳಿ ಇರುವ ಕ್ರಿ.ಶ. ೧೭-೧೮ನೇ ಶತಮಾನಕ್ಕೆ ಸೇರಬಹುದಾದ ವೀರಗಲ್ಲು ಶಾಸನದಲ್ಲಿ ಚಿಕ್ಕಣನ ಮಗ ಗಂಗಣನ ಉಲ್ಲೇಖವಿದೆ. (ಕವಿಹಂ.ಶಾ.ಸಂ. ೧ ಹಡಗಲಿ ೨೨)

ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಕೋಳೂರ ಗ್ರಾಮದ ಹೊರವಲಯದಲ್ಲಿ ಒಂದು ಅಪರೂಪದ ವೀರಗಲ್ಲು ಪತ್ತೆಯಾಗಿದ್ದು, ವಿಜಯನಗರ ಸಾಮ್ರಾಜ್ಯದ ಅವನತಿಗೆ ಕಾರಣವಾದ (ರಕ್ಕಸ ತಂಗಡಗಿ ಯುದ್ಧ) ಅತ್ಯಂತ ಮಹತ್ವದ ಈ ಯುದ್ಧ ಕೋಳೂರಲ್ಲಿ ನಡೆದಿದೆ ಎಂಬುದಕ್ಕೆ ಈ ವೀರಗಲ್ಲಿನ ಮೇಲೆ ರಾಮರಾಯ ಎಂದು ಲಿಖಿತ ಶಾಸನವಿರುವುದರಿಂದ ಕೋಳೂರಲ್ಲಿ ಯುದ್ಧ ಆಗಿರಬಹುದೆಂದು ತಿಳಿಯಬಹುದಾಗಿದೆ. (ಸಂಯುಕ್ತ ಕರ್ನಾಟಕ, ಸೆಪ್ಟೆಂಬರ್ ೩೦, ೨೦೧೫) ಸಾಮಾನ್ಯವಾಗಿ ವೀರಗಲ್ಲನ್ನು ಕಲ್ಲಿನ ಮೇಲೆ ಉಬ್ಬುಶಿಲ್ಪಗಳಾಗಿ ಬಿಡಿಸಿರುತ್ತಾರೆ. ಆದರೆ ಈ ವೀರಗಲ್ಲನ್ನು ಎರಡು ಹಂತಗಳಲ್ಲಿ ಸುಂದರವಾಗಿದೆ. ಕೆಳಹಂತದಲ್ಲಿ ವೀರನನ್ನು ದೊಡ್ಡದಾಗಿ ಬಿಡಿಸಲಾಗಿದೆ. ವೀರನ ಬಲಗೈಯಲ್ಲಿ ಖಡ್ಗವಿದ್ದು ಹೋರಾಡುವ ಭಂಗಿಯಲ್ಲಿ ನಿಂತಿದ್ದಾನೆ. ಎಡಗೈಯಲ್ಲಿ ಗುರಾಣಿ ಹಿಡಿದಿದ್ದು ಭಗ್ನಗೊಂಡಿದೆ. ವೀರನ ಸೊಂಟದ ಬಲಭಾಗದಲ್ಲಿ ನೇತಾಡುವ ಕತ್ತಿ ಗೋಚರಿಸುತ್ತದೆ. ಕೊರಳಲ್ಲಿ ಉದ್ದನೆಯ ಸರಗಳು ಕಿವಿಗೆ ಓಲೆಗಳು, ಕೈಕಡಗ, ತೋಳ್ಬಂದಿ ಕಾಲ್ಗಡಗಳನ್ನು ಧರಿಸಿದ್ದಾನೆ. ವೀರನು ಕಿರೀಟವನ್ನು ಧರಿಸಿರುವುದರಿಂದ ಇದು ರಾಜನನ್ನು ಸೂಚಿಸುತ್ತದೆ. ಈ ಎಲ್ಲ ಲಕ್ಷಣಗಳು ಯುದ್ಧದಲ್ಲಿ ಮಡಿದ ಅಳಿಯ ರಾಮರಾಯನನ್ನು ಹೋಲುವಂತಿದೆ. ಇದಕ್ಕೆ ಪೂರಕವಾಗಿ ವೀರನ ಹಿಂಭಾಗದ ಪಟ್ಟಿಯಲ್ಲಿ ಬಿಲ್ಲನ್ನು ಹಿಡಿದ ವ್ಯಕ್ತಿ ಹಾಗೂ ಆತನ ಮೇಲ್ಭಾಗದಲ್ಲಿ ಖಡ್ಗ ಹಿಡಿದು ನಿಂತಿರುವ ಮತ್ತೊಬ್ಬನ ಚಿತ್ರಣವಿರುವುದರಿಂದ ವೀರನು ಯುದ್ಧದಲ್ಲಿ ಮಡಿದಿರುವುದು ಸ್ಪಷ್ಟವಾಗುತ್ತದೆ. ಈ ಎಲ್ಲ ಅಂಶಗಳು ರಕ್ಕಸ ತಂಗಡಗಿ ಯುದ್ಧದಲ್ಲಿ ಮಡಿದ ರಾಜನನ್ನು ಸೂಚಿಸುತ್ತದೆ. ವೀರಗಲ್ಲಿನ ಮೇಲ್ಭಾಗದಲ್ಲಿ ವೀರನು ಕೈಮುಗಿದು ಕುಳಿತಿದ್ದು ಆತನ ಎರಡು ಬದಿಗಳಲ್ಲಿ ಪತ್ನಿಯರು ಕೈಮುಗಿದು ಕುಳಿತಿರುವ ದೃಶ್ಯವಿದೆ. ಜೊತೆಗೆ ಚಾಮರಧಾರಿಗಳು ಚಾಮರವನ್ನು ಬೀಸುತ್ತಾ ನಿಂತಿರುವುದು ವೀರನು ಪತ್ನಿಯರೊಂದಿಗೆ ಸ್ವರ್ಗ ಸೇರಿದ ಕುರುಹನ್ನು ಚಿತ್ರಿಸಲಾಗಿದೆ. ಇದು ವೀರನು ಯುದ್ಧದಲ್ಲಿ ಮಡಿದ ಪ್ರಯುಕ್ತ ಆತನ ಪತ್ನಿಯರಿಬ್ಬರೂ ಸಹಗಮನ ಹೊಂದಿರುವುದನ್ನು ಸ್ಪಷ್ಟವಾಗುತ್ತದೆ. ಇವೆಲ್ಲವೂ ಸಹ ಈ ವೀರಗಲ್ಲು ಅಳಿಯ ರಾಮರಾಯನದೇ ಎಂಬುದನ್ನು ದೃಢಪಡಿಸುವುದಕ್ಕೆ ಪೂರಕವಾಗಿದೆ. ಈ ವೀರಗಲ್ಲಿನ ಮೇಲೆ ಮೂಡಿರುವ ಶಾಸನ ಸಹ ಇದನ್ನೇ ದೃಢೀಕರಿಸುತ್ತಿದೆ. ಇದರ ಪಕ್ಕದಲ್ಲಿರುವ ಇನ್ನೊಂದು ಶಿಲ್ಪದಲ್ಲಿಯೂ ಸಹ ಯುದ್ಧದ ಸನ್ನಿವೇಶವೇ ಚಿತ್ರಣಗೊಂಡಿದೆ. ಇದರಲ್ಲಿ ವೀರನು ಬಿಲ್ಲು-ಬಾಣ ಹಿಡಿದು ಶತ್ರುವಿನೊಂದಿಗೆ ಹೋರಾಡುವ ದೃಶ್ಯವಿದೆ. ವೀರನ ಸೊಂಟದಲ್ಲಿ ನೇತಾಡುವ ಕತ್ತಿಯಿದ್ದು ಶತ್ರುವೂ ಸಹ ಕತ್ತಿ ಗುರಾಣಿ ಹಿಡಿದು ಹೋರಾಡುತ್ತಿದ್ದಾನೆ. ಶತ್ರುವು ವೀರನಿಗೆ ಕತ್ತಿಯಿಂದ ಚುಚ್ಚಿದ್ದಾನೆ.

ಕೋಳೂರಿನ ಹನುಮಂತ ದೇವಾಲಯದಲ್ಲಿ ಅನೇಕ ತ್ರುಟಿತ ಶಿಲ್ಪಗಳಿದ್ದು ಬಹುತೇಕ ಶಿಲ್ಪಗಳು ಯುದ್ಧದಲ್ಲಿ ಮರಣಿಸಿದ ವೀರರಿಗಾಗಿಯೇ ನೆನಪಿನ ವೀರಗಲ್ಲುಗಳಾಗಿವೆ. ಇವೆಲ್ಲವೂ ಕ್ರಿ.ಶ. ೧೫೬೫ರಲ್ಲಿ ಜರುಗಿದ ರಕ್ಕಸ ತಂಗಡಗಿ (ತಾಳಿಕೋಟೆ) ಯುದ್ಧದ ಪ್ರಮುಖ ಸ್ಥಳ

ಇದಾಗಿತ್ತು. ವಿಜಯನಗರದ ರಾಜ ರಾಮರಾಯನ ಆಸ್ಥಾನದಲ್ಲಿದ್ದ ರಾಮಾಜಿ ತಿರುಮಲ ಹರಿಕಾರನು ಬರೆದಿರುವ "ರಾಮರಾಯನ ಬಖೈರು"ದಲ್ಲಿ ತಿಳಿಸಿದಂತೆ ವಿಜಯನಗರ ಸಾಮ್ರಾಜ್ಯ ನಾಶವಾಗಲು ಕಾರಣವಾದ ಈ ಯುದ್ಧವು ರಾಕ್ಷಸತಂಗಡಗಿ, ನಾಲತವಾಡ ಈ ಎರಡು ಗ್ರಾಮಗಳ ಮಧ್ಯದಲ್ಲಿದೆ ಎಂದು ಉಲ್ಲೇಖಿಸಿದ್ದಾನೆ. ಕೋಳೂರ ಗ್ರಾಮವು ಸಹ ಇವೆರಡು ಗ್ರಾಮಗಳ ಮಧ್ಯದಲ್ಲಿದೆ. ಇವೆಲ್ಲವುಗಳ ಆಧಾರದಿಂದ ಈಗ ದೊರಕಿರುವ ವೀರಗಲ್ಲು ವಿಜಯನಗರ ಸಾಮ್ರಾಜ್ಯದ ಅರಸ ಅಳಿಯ ರಾಮರಾಯದೇ ಎಂದು ಹೇಳಬಹುದಾಗಿದೆ. (ಸಂಯುಕ್ತ ಕರ್ನಾಟಕ, ಸೆಪ್ಟೆಂಬರ್ ೩೦, ೨೦೧೫)

ಪ್ರಸ್ತುತ ಅಧ್ಯಯನದ ವಸ್ತುವಾಗಿರುವ ರಾಯಚೂರು ವೀರಗಲ್ಲುಗಳು ವಿಜಯನಗರ ಕಾಲದವುಗಳು. ಆ ಕಾಲದಲ್ಲಿ ಬಳಸಲಾದ ಕಣಶಿಲೆಯನ್ನೇ ಈ ವೀರಗಲ್ಲುಗಳಲ್ಲಿ ಉಪಯೋಗಿಸಲಾಗಿದೆ. ಈ ಶಿಲ್ಪದ ಶೈಲಿಯೂ ವಿಜಯನಗರದ ಶೈಲಿಗೆ ಹೊಂದುತ್ತದೆ. ಅರಕೇರಿ ಗ್ರಾಮವು ತಾಲೂಕು ಕೇಂದ್ರವಾದ ದೇವದುರ್ಗದಿಂದ ದಕ್ಷಿಣ ದಿಕ್ಕಿಗೆ ಸುಮಾರು ೨೦ ಕಿ.ಮೀ ದೂರದಲ್ಲಿದೆ. ಈ ಊರು ಪೂರ್ವದಲ್ಲಿ ಪಕ್ಕದಲ್ಲಿರುವ ಕಣಶಿಲೆಯ ಬೆಟ್ಟದ ಮೇಲೆ ನೆಲೆಗೊಂಡಿತು. ಬಹುಶಃ ೧೯ನೇ ಶತಮಾನದ ಅಂತ್ಯ ಅಥವಾ ೨೦ನೇ ಶತಮಾನದ ಆದಿಭಾಗದಲ್ಲಿ ಈ ಊರು ಈಗಿರುವ ನೆಲೆಯಲ್ಲಿ ಸ್ಥಾಪಿತಗೊಂಡಿರಬಹುದೆಂದು ಸ್ಥಳೀಯ ಚರಿತ್ರೆಯಿಂದ ತಿಳಿದುಬರುತ್ತದೆ. ಗುಡ್ಡದ ಮೇಲೆ ಹಾಳು ಬಿದ್ದಿರುವ ಮನೆಗಳ ಅವಶೇಷಗಳನ್ನು, ಕೋಟೆ ಗೋಡೆಯ ಅವಶೇಷಗಳನ್ನು ಸೂಕ್ಷ್ಮವಾಗಿ ನೋಡಿದರೆ ಈ ಮಾತು ಸರಿ ಅನಿಸುತ್ತದೆ.

ಪ್ರಸ್ತುತ ಅಧ್ಯಯನಕ್ಕೆ ಒಳಪಟ್ಟ ೨೩ ವೀರಗಲ್ಲುಗಳಲ್ಲಿ ೧೧ ವೀರಗಲ್ಲುಗಳನ್ನು ಹಳೆಯ ಊರಿನ ನಿವೇಶನದಲ್ಲಿ ಈಗ ನಿರ್ಮಾಣಗೊಂಡಿರುವ ಪವಿತ್ರ ವನದಲ್ಲಿ ಜೋಡಿಸಿ ಇಡಲಾಗಿದೆ. ಉಳಿದ ವೀರಗಲ್ಲುಗಳು ಅರಕೇರಿಯಿಂದ ಈರಲದೊಡ್ಡಿಗೆ ಹೋಗುವ ದಾರಿಯಲ್ಲಿ ಸುಮಾರು ೨ ಕಿ.ಮೀ. ದೂರದಲ್ಲಿರುವ ಲಡಾಯಿ ಹೊಲವೊಂದು ಸ್ಥಳೀಯರು ಕರೆಯುವ ಹೊಲದ ಮಧ್ಯಭಾಗದಲ್ಲಿ ಬಿದ್ದಿವೆ. ಈ ವೀರಗಲ್ಲುಗಳು ಆರು ವೀರರ ಸಮಾಧಿ ಗುಡಿಗಳ ಮುಂಬದಿಯಲ್ಲಿ ಅಸ್ತವ್ಯಸ್ತವಾಗಿ ಬಿದ್ದಿರುವುದನ್ನು ನಾವು ಕಾಣುತ್ತೇವೆ.

**ವೀರಗಲ್ಲುಗಳ ವಿವರಣೆ :**

ಈ ವೀರಗಲ್ಲುಗಳನ್ನು ಕೆತ್ತಲು ಶಿಲ್ಪಿಗಳು ಸ್ಥಳೀಯವಾಗಿ ಲಭ್ಯವಿರುವ ಕಂದು, ಕೆಂಪು ಬಣ್ಣದ ದೊಡ್ಡ ಹರಳುಗಳ ಕಣಶಿಲೆಯನ್ನು ಉಪಯೋಗಿಸಿದ್ದಾರೆ. ಕೆಲವು ಸಲ ಒಂದೇ ಶಿಲಾಫಲಕದಲ್ಲಿ ಬೇರೆ ಬೇರೆ ವರ್ಣದ ಖನಿಜ ವಸ್ತುಗಳಿರುವುದರಿಂದ ಕಲೆಯ ದೃಷ್ಟಿಯಿಂದ ಕೆಳಮಟ್ಟದ ವೀರಗಲ್ಲುಗಳಾಗಿ ಕಾಣುತ್ತವೆ. ಅಳತೆ ದೃಷ್ಟಿಯಿಂದ ಈ ವೀರಗಲ್ಲುಗಳಲ್ಲಿ ತುಂಬಾ ವೈವಿಧ್ಯತೆ ಇದೆ. ಈ ವೀರಗಲ್ಲುಗಳ ಉದ್ದಳತೆ ಸುಮಾರು ೧೪೦ ಸೆಂ.ಮೀ. ೪೭ ಸೆಂ. ಮೀ. ವರೆಗೆ ಇದೆ. ಯಾವ ವೀರಗಲ್ಲಿಗೂ ಹೊಳಪು ನೀಡಿಲ್ಲ. ನೈಸರ್ಗಿಕವಾಗಿ ಸಿಗುವ ಕಣಶಿಲೆಯ ಚಪ್ಪಡಿ

ಕಲ್ಲುಗಳ ಮೇಲೆ ವೀರರ ಪರಿವಾರದವರ ಕುದುರೆ, ನಾಯಿಗಳ, ಧ್ವಜ, ರಾಜಛತ್ರಿ ಇತ್ಯಾದಿ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಕೆಲವು ವೀರಗಲ್ಲುಗಳ ಶಿಲ್ಪಗಳು ತುಂಬಾ ಕಲಾತ್ಮಕವಾಗಿದ್ದು ನೈಜ ಚಿತ್ರಣಗಳನ್ನು ನೀಡುತ್ತದೆ. ಇಂಥ ಉತ್ತಮ ಶಿಲ್ಪಗಳನ್ನು ಬಹುಶಃ ನುರಿತ ಕೈಗಳ ಮತ್ತು ಸೂಕ್ಷ್ಮ ದೃಷ್ಟಿಯ ಕಲಾವಿದರು ಕೆತ್ತಿರುವರೆಂದು ಅನಿಸುತ್ತದೆ. ಎಲ್ಲಾ ವೀರಗಲ್ಲುಗಳ ಮೇಲ್ಭಾಗದಲ್ಲಿ ಸೂರ್ಯ-ಚಂದ್ರ ಶಿಲ್ಪಗಳನ್ನು ಒಂದೆರಡು ಶಿಲ್ಪಗಳಲ್ಲಿ ಇವುಗಳ ಜೊತೆ ಕಮಲಗಳನ್ನು ಕೆತ್ತಲಾಗಿದೆ.

**ವೀರರ ಶಿಲ್ಪ :**

ವೀರರ ಉಬ್ಬುಶಿಲ್ಪಗಳೇ ಈ ವೀರಗಲ್ಲುಗಳ ಕೇಂದ್ರವಸ್ತು. ಎಲ್ಲಾ ವೀರಗಲ್ಲುಗಳಲ್ಲಿಯ ವೀರರು ಉರಿ ಮೀಸೆಯನ್ನು ಹೊಂದಿದವರು. ಕೆಲ ವೀರಗಲ್ಲುಗಳಲ್ಲಿ ಮೀಸೆಯನ್ನು ಸೂಕ್ಷ್ಮವಾಗಿ ಹಾಗೂ ಕಲಾತ್ಮಕವಾಗಿ ಕೆತ್ತಲಾಗಿದೆ. ಇದರಿಂದಾಗಿ ವೀರನ ಮುಖದಲ್ಲಿ ವೀರಕಳೆ ಎದ್ದು ಕಾಣುತ್ತದೆ. ವೀರನು ಕುದುರೆ ಸವಾರನಾಗಿದ್ದರೆ ಎಡಗೈಯಲ್ಲಿ ಕುದುರೆಯ ಲಗಾಮನ್ನು, ಬಲಗೈಯಲ್ಲಿ ಕತ್ತಿಯನ್ನು ಎತ್ತಿಹಿಡಿದಿದ್ದಾನೆ. ಬಲಗೈಯಲ್ಲಿ ಕತ್ತಿಯನ್ನು ಹಿಡಿದಿರುವ ಭಂಗಿಯೇ ಅವನೊಬ್ಬ ವೀರನೆಂದು ಬಿಂಬಿಸುತ್ತದೆ. ಕಾಲ್ದಳಕ್ಕೆ ಸೇರಿದ ಸಾಮಾನ್ಯ ಸೈನಿಕರು ಎಡಗೈಯಲ್ಲಿ ಗುರಾಣಿ ಬಲಗೈಯಲ್ಲಿ ಖಡ್ಗ ಇಲ್ಲವೇ ಬಂದೂಕು ಹಿಡಿದಿದ್ದಾರೆ. ಬೇರೆ ಶಿಲ್ಪಗಳನ್ನು ಎರಡೂ ಕೈಯಲ್ಲಿ ಭರ್ಜಿಯೊಂದನ್ನು ಹಿಡಿದುಕೊಂಡು ವೈರಿಯತ್ತ ತಿವಿಯಲು ಸಿದ್ಧವಾಗಿದ್ದಾನೆ. ಪರಿವಾರದ ಸೈನಿಕನೂ ಸೇರಿ ಕುದುರೆ ಸವಾರ ವೀರನೂ ಟೊಂಕದಿಂದ ಪಾದದವರೆಗೆ ಕಾಲುಗಳಿಂದ ಬಿಗಿಯಾಗಿ ಅಂಟಿಕೊಂಡಿರುವಂಥ ಚಲ್ಲಣ (ಚೂಡಿದಾರು, ಪೈಜಾಮ) ಧರಿಸಿದ್ದಾರೆ. ಟೊಂಕಕ್ಕೆ ಟೊಂಕ ಪಟ್ಟಿಯನ್ನು ಕಟ್ಟಿಕೊಂಡು ಅಲ್ಲಿ ಒಂದು ಜಂಬೆಯನ್ನು (ಕಠಾರಿ) ಇಟ್ಟುಕೊಂಡಿದ್ದಾರೆ ಈ ವೀರರು. ಕುದುರೆ ಸವಾರನೆಂದರೆ ಸೈನ್ಯದಲ್ಲಿ ಪ್ರಮುಖ ವ್ಯಕ್ತಿ ಎಂದರ್ಥ. (ದಳಪತಿ ಇತ್ಯಾದಿ) ಇಂಥ ವ್ಯಕ್ತಿಯ ಶಿಲ್ಪವನ್ನು ಬಿಡಿಸುವಲ್ಲಿ ಶಿಲ್ಪಿಗಳು ತುಂಬಾ ಕಾಳಜಿ ವಹಿಸಿರುವುದು ಕಂಡುಬರುತ್ತದೆ. ಸಾಮಾನ್ಯವಾಗಿ ಎದೆಯಿಂದ ಕೆಳಕ್ಕೆ ವಕ್ಷಸ್ಥಳದವರೆಗೂ ಇಳಿಬಿದ್ದಿರುವ ಕಂಠಿಹಾರವನ್ನು ಧರಿಸಿದ್ದಾನೆ. ಕಿವಿಯಲ್ಲಿ ಕರ್ಣಕುಂಡಲ, ಕೈಗಳಲ್ಲಿ ಕಡಗ, ಕಾಲುಗಳಲ್ಲಿ ಕಡಗ, ರಟ್ಟೆಯಲ್ಲಿ ವಂಕಿಯನ್ನು ಧರಿಸಿದ್ದಾನೆ. ಈ ವೀರ ತಲೆಯ ಕೂದಲನ್ನು ಕಟ್ಟಿಕೊಂಡಿದ್ದರೆ ಶಿಲೆಯನ್ನು (ತುರುಬು) ಕೊಂಚ ಬಲಕ್ಕೆ ವಾಲಿದಂತೆ ಕಲಾತ್ಮಕವಾಗಿ ಕೆತ್ತಲಾಗಿದೆ. ಶಿರಸ್ತ್ರಾಣ ಮತ್ತು ಕಿರೀಟ ಅಥವಾ ವಿಶಿಷ್ಟ ಬಗೆಯ ರುಮಾಲನ್ನು ತಲೆಯ ಮೇಲೆ ಇಟ್ಟುಕೊಂಡಿರುವುದನ್ನು ಕಾಣಬಹುದು. ಪವಿತ್ರ ವನದಲ್ಲಿರುವ ಮೂರು ವೀರಗಲ್ಲಿನ ವೀರರು (ಕುದುರೆ ಸವಾರರು) ಕಂಠಿಹಾರದ ಮೇಲೆ ಇಷ್ಟಲಿಂಗದ ಧ್ವಜವನ್ನು ಹೊತ್ತ ಸೈನಿಕ ನಿಂತಿದ್ದಾನೆ. ವೀರನ ಬಲಗಡೆ ಪಲ್ಲಕ್ಕಿ ಹೊತ್ತವನಿಗಿಂತ ಮುಂಚೆ ಒಬ್ಬ ಸೇವಕಿಯು ತತ್ರಾಣಿಯನ್ನು ಬಲಗೈಯಲ್ಲಿ ಹಿಡಿದುಕೊಂಡು ನಿಂತಿದ್ದಾಳೆ. ಮನೆಯ ಮೇಲೆ ರಾಜಛತ್ರವನ್ನು (ಕೊಡೆ) ಕೆತ್ತಲಾಗಿದೆ. ಈ ಶಿಲಾ ಫಲಕದ ಮೇಲಿನ ತುದಿಯ ಸಾಲಿನಲ್ಲಿ ಎಡದಿಂದ ಬಲಕ್ಕೆ ಸೂರ್ಯ, ಎರಡು ಕಮಲಗಳು ಮತ್ತು ಸಮೂಹದಲ್ಲಿಯೇ ಅತ್ಯಂತ ಕಲಾತ್ಮಕವಾದ ಸುಂದರ ವೀರಗಲ್ಲುಗಳನ್ನು ನಾವು ನೋಡಬಹುದು.

ಈ ವೀರಗಲ್ಲುಗಳಲ್ಲಿ ಆಕರ್ಷಕವಾಗಿ ಕುದುರೆಗಳ ಶಿಲ್ಪಗಳನ್ನು ತುಂಬಾ ಕಾಳಜಿಯಿಂದ ಶಿಲ್ಪಿಗಳು ಕೆತ್ತಿದ್ದಾರೆ. ಇಡೀ ಶಿಲ್ಪಕ್ಕೆ ಕಾರ್ಯದ ಕಳೆಯನ್ನು ಕುದುರೆಯ ಶಿಲ್ಪ ತುಂಬುವಷ್ಟು ಸಜೀವವಾಗಿ ಕೆತ್ತಲಾಗಿದೆ. ಕುದುರೆಯ ಮೇಲೆ ಕುಸುರಿ ಕೆಲಸದ ಮಾಡಲಾಗಿದ್ದು, ಅದು ಸರಿದಾಡದಂತೆ ಕುದುರೆಯ ಬಾಲಕ್ಕೆ ಕಟ್ಟಲಾಗಿದೆ. ಕುದುರೆಯ ಬಾಲ, ಕುದುರೆಯ ಕಿವಿಗಳ ಸುತ್ತಮುತ್ತ ಮತ್ತು ಕೊರಳಿನಲ್ಲಿ ಸಿಂಗರಿಸಿದ ಗೊಂಡೆಗಳ ಸರಗಳು ಕುದುರೆಯ ತಲೆಯ ಮೇಲೆ ತುರಾಯಿ, ನಾಲ್ಕು ಕಾಲುಗಳಿಗೂ ಒಂದೊಂದು ಕಡಗವನ್ನು ಅಂದವಾಗಿ ಕೆತ್ತಲಾಗಿದೆ. ಕುದುರೆಗಳು ಮುಂಗಾಲುಗಳನ್ನು ಎತ್ತಿ ಓಡಲು ಸಿದ್ಧವಾಗಿ ನಿಂತಿರುವ ಭಂಗಿ ಚಿತ್ತಾಕರ್ಷಕವಾಗಿದೆ. ಪವಿತ್ರ ವನದಲ್ಲಿ ಒಂದು ವೀರಗಲ್ಲಿನಲ್ಲಿ ವೀರನು ತನ್ನ ಕುದುರೆಯಿಂದ ಇಳಿದು ತನ್ನ ವೈರಿ ಕುದುರೆಯ ಜುಟ್ಟನ್ನು ಎಡಗೈಯಲ್ಲಿ ಹಿಡಿದು ಬಲಗೈಯಲ್ಲಿರುವ ಕಠಾರಿಯಿಂದ ತಿವಿಯುತ್ತಿರುವ ದೃಶ್ಯ ಅಪರೂಪದ್ದಾಗಿದೆ.

**ನಾಯಿ :** ಲಡಾಯಿ ಹೊಲದಲ್ಲಿರುವ ಐದು ವೀರಗಲ್ಲುಗಳಲ್ಲಿ ಒಂದು ಅಥವಾ ಎರಡು ನಾಯಿಗಳನ್ನು ಕೆತ್ತಲಾಗಿರುವುದರಿಂದ ಇವು ಬೇಟೆಯಲ್ಲಿ ಮಡಿದ ವೀರರ ಅಥವಾ ಬೇಟೆನಾಯಿಗಳ ಸ್ಮಾರಕಗಳೆಂದು ಗುರುತಿಸಲಾಗಿದೆ. ನಾಯಿಯ ಶಿಲ್ಪ ಜೀವಕಳೆಯನ್ನು ಹೊಂದಿಲ್ಲ.

**ಪರಿವಾರದವರು :** ವೀರನ ಪರಿವಾರದಲ್ಲಿ ಧ್ವಜಸ್ತಂಭವನ್ನು ಹೊತ್ತವನು, ರಾಜಛತ್ರಿಯನ್ನು ಹಿಡಿದವನು ಅಲ್ಲದೆ ಪಾನವನ್ನು ಅಥವಾ ನೀರಿನ ತತ್ರಾಣಿಯನ್ನು ಬಲಗೈಯಲ್ಲಿ ಹಿಡಿದು ಎಡಗೈಯಲ್ಲಿ ಕುಡಿಯಲು ಉಪಯೋಗಿಸುವ ಕೊಂಬನ್ನು ಹಿಡಿದು ನಿಂತಿರುವ ಹೆಣ್ಣಿನ ಶಿಲ್ಪಗಳು ಕಾಳಜಿಯನ್ನು ಬಿಂಬಿಸಿವೆ. ಒಂದು ಶಿಲ್ಪದಲ್ಲಿ ಮೂವರು ಸೇವಕಿಯರಿದ್ದಾರೆ. ಉಳಿದ ಶಿಲ್ಪಗಳಲ್ಲಿ ಒಬ್ಬ ಸೇವಕಿಯನ್ನು ಕೆತ್ತಲಾಗಿದೆ. ಸ್ತ್ರೀ ಶಿಲ್ಪಗಳಲ್ಲಿ ತೋರೆ ಮೊಲೆಗಳು, ಮೊಲೆಕಟ್ಟುಗಳು, ಕೈಬಳೆಗಳು, ಡಾಬ, ಕಾಲುಗಳಲ್ಲಿ ಕಡಗ, ಕಿವಿಗಳಲ್ಲಿ ಲೋಲಾಕುಗಳನ್ನು, ರಟ್ಟೆಯಲ್ಲಿ ವಂಕಿಗಳನ್ನು ಕೆತ್ತಲಾಗಿರುವ ಆಕರ್ಷಕವಾದ ಸ್ತ್ರೀ ಶಿಲ್ಪಗಳಿದ್ದು, ತಲೆಯ ಮೇಲೆ ತುರುಬನ್ನು ಕೊಂಚ ಬಲಕ್ಕೆ ವಾಲುವಂತೆ ಸಿಂಗಾರ ಮಾಡಿಕೊಂಡಿದ್ದಾರೆ. ಟೊಂಕದ ಮೇಲೆ ಕುಪ್ಪಸಗಳನ್ನು ಈ ಸೇವಕಿಯರು ಧರಿಸಿದ್ದಾರೆ. ಸೀರೆಯನ್ನು ಎರಡು ಕಾಲುಗಳಿಗೆ ಅಂಟಿಕೊಳ್ಳುವಂತೆ ಕಚ್ಚೆಯನ್ನು ಹಾಕಿದ್ದಾರೆ. ಸೀರೆಯ ಸೆರಗನ್ನು ಹಿಂದಿನಂತೆ ಎದೆಯ ಮೇಲೆ ಹಾಯಿಸದೆ ಟೊಂಕದಿಂದ ಎರಡು ಕಾಲುಗಳ ಮಧ್ಯೆ ನೆರಿಗೆಯಾಗಿ ಬೀಳುವಂತೆ ಧರಿಸಿದ್ದಾರೆ. ನೀರೆಯರ ಈ ಶಿಲ್ಪಗಳನ್ನು ಕೆತ್ತಿದ ಶಿಲ್ಪಿಗಳು ಅಂದಿನ ವೀರರಂತೆ ರಸಿಕರಾಗಿದ್ದರೆಂಬುದಕ್ಕೆ ಈ ಶಿಲ್ಪಗಳೇ ಸಾಕ್ಷಿ.

ಆಗಲೇ ಹೇಳಿದಂತೆ ಲಡಾಯಿ ಹೊಲದಲ್ಲಿರುವ ವೀರಗಲ್ಲುಗಳು ಇಂಡೋಸಾರ್ಸನಿಕ್ ಶೈಲಿಯಲ್ಲಿ (ಸರಿಯಾಗಿ ಹೇಳಬೇಕೆಂದರೆ ಮಸೀದಿಯ ಗುಮ್ಮಟಗಳನ್ನು) ಕಣಶಿಲೆ ಮತ್ತು ಸುಣ್ಣದ ಗಚ್ಚನ್ನು ಉಪಯೋಗಿಸಿ ಕಟ್ಟಲಾದ ಒಟ್ಟು ಆರು ರಚನೆಗಳು ನೋಡುಗರ ಗಮನ ಸೆಳೆಯುತ್ತವೆ. ಈ ಆರು ರಚನೆಗಳಲ್ಲಿ ಒಂದು ರಚನೆಯು ಸಂಪೂರ್ಣವಾಗಿ ಬಸರಿ ಗಿಡದಿಂದ ಮುಚ್ಚಿಹೋಗಿದೆ.

ಈ ಗಿಡದ ಬೇರುಗಳು ಗುಮ್ಮಟದ ಮೂಲಕ ಗೋಡೆಗಳಿಗೆ ಇಳಿದು ಅಲ್ಲಿಂದ ನೆಲದೊಳಕ್ಕೆ ಬೆಳೆದಿವೆ. ಇದರಿಂದಾಗಿ ಈ ರಚನೆಯ ಗೋಡೆಗಳು ಸಂಪೂರ್ಣವಾಗಿ ಬಿದ್ದುಹೋಗಿವೆ. ಗಿಡದ ಬೇರುಗಳಿಂದ ಆವೃತವಾಗಿರುವ ಗವಿಯೊಳಕ್ಕೆ ಹೋಗಿ ತಲೆ ಎತ್ತಿ ನೋಡಿದರೆ ಗುಮ್ಮಟದ ರಚನೆಗಾಗಿ ಕಣಶಿಲೆಯ ಚೂರುಗಳನ್ನು ಇಟ್ಟಿಗೆಯಂತೆ ತಾಂತ್ರಿಕವಾಗಿ ಜೋಡಿಸಿರುವುದು ಕಂಡುಬರುತ್ತದೆ. ಈ ಗುಮ್ಮಟಗಳನ್ನು ಕಟ್ಟಿದ ಸ್ಥಪತಿಗಳ ಕೌಶಲ್ಯವನ್ನು ಮೆಚ್ಚಲೇಬೇಕು. ಉಳಿದ ಐದು ಗುಮ್ಮಟಗಳು ಇನ್ನೂ ಸುಸ್ಥಿತಿಯಲ್ಲಿವೆ. ಲಡಾಯಿ ಹೊಲದಲ್ಲಿರುವ ಈ ರಚನೆಗಳನ್ನು ಸ್ಥಳೀಯರು ಮುಸ್ಲಿಂ ಗೋರಿಗಳೆಂದು ಭಾವಿಸುತ್ತಾರೆ. ಈ ರಚನೆಗಳು ಹಿಂದೂ ಧರ್ಮದ ಸಂಕೇತಗಳನ್ನು ಹೊತ್ತಿರುವ ವೀರಗಲ್ಲುಗಳು; ಹಿಂದೂ ಸೈನಿಕ ಸ್ಮಾರಕಗಳೆಂದು ತಿಳಿಯಬಹುದಾಗಿದೆ. ಅದಲ್ಲದೇ ಈ ಹೊಲ ಹಿಂದಿನ ಕಾಲದಲ್ಲಿ ಹಿಂದೂ–ಮುಸ್ಲಿಂರ ರಣರಂಗವೆಂದು ಭಾವಿಸುತ್ತಾರೆ. ನಮ್ಮ ವಾಸ್ತು–ಶಿಲ್ಪಕಲೆಯ ಪರಂಪರೆ ಮತ್ತು ಧಾರ್ಮಿಕಾಚರಣೆಗಳ ಪರಂಪರೆಯ ಬಗ್ಗೆ ತಿಳುವಳಿಕೆ ಇರದ ಸ್ಥಳೀಯರ ಈ ನಂಬಿಕೆ ಅರ್ಧಸತ್ಯದಿಂದ ಕೂಡಿದೆ.

ಇದೇ ರಚನೆಯ ಗೋಡೆಗಳ ಮೇಲೆ ಗುಮ್ಮಟವನ್ನು ಕಟ್ಟದೇ ಕಲ್ಯಾಣ ಚಾಲುಕ್ಯರ ಶೈಲಿ ಅನುಕರಿಸಿದ ಮತ್ತು ಮುಸ್ಲಿಂ ಶೈಲಿಯ ಕಮಾನುಗಳುಳ್ಳ ಗೋಪುರವನ್ನೂ ಕಟ್ಟಲಾಗಿದೆ. ಇದು ಐದು ರಚನೆಗಳಲ್ಲಿದ್ದು, ಒಳಹೊಕ್ಕರೆ ನೆಲದ ಮೇಲೆ ಯಾವ ಶಿಲ್ಪವಿಲ್ಲ ಮತ್ತು ಮುಸ್ಲಿಂ ಗೋರಿಯ ಚಿಹ್ನೆಗಳಿಲ್ಲ. ಆದರೆ ಸೂಕ್ಷ್ಮವಾಗಿ ಗಮನಿಸಿದರೆ ಈ ಐದು ರಚನೆಗಳ ಮಧ್ಯದಲ್ಲಿ ಯಾವುದೋ ಶಿಲ್ಪವನ್ನು ನೋಡಿ ಕಿತ್ತೆಸೆಯಲಾಗಿದೆ ಎಂಬುದಕ್ಕೆ ಸಾಕ್ಷಿಯಾಗಿ ಒಂದು ಕುಣಿ ಇರುವುದು ಕಂಡುಬರುತ್ತದೆ.

**ಈ ವೀರರು ಎಲ್ಲಿ ಹೋರಾಡಿದರು? :**

ಅರಕೇರಿಯಂಥ ಸಣ್ಣ ಹಳ್ಳಿಯಲ್ಲಿ ನನಗೆ ಮೂರು ದಿನಗಳ ಕ್ಷೇತ್ರಕಾರ್ಯದಲ್ಲಿ ೨೪ ವೀರಗಲ್ಲುಗಳು ಮತ್ತು ಸಮಾಧಿ ಗುಡಿಗಳು ಸಿಕ್ಕಿರುವುದು ಗಮನಾರ್ಹ. ಯಾವ ವೀರಗಲ್ಲಿನಲ್ಲಿಯೂ ಒಂದಕ್ಷರದ ಶಾಸನ ಕೂಡ ಇಲ್ಲ. ಇಷ್ಟು ದೊಡ್ಡ ಸಂಖ್ಯೆಯಲ್ಲಿ ಒಂದೇ ಊರಿನಲ್ಲಿ ಒಂದೇ ಶೈಲಿಯಲ್ಲಿ (ವಿಜಯನಗರ ಶೈಲಿ) ವೀರಗಲ್ಲುಗಳು ಸಿಗಬೇಕಾದರೆ ಈ ಹಳ್ಳಿಯ ಹತ್ತಿರದಲ್ಲಿ ಒಂದು ದೊಡ್ಡ ಯುದ್ಧವಾಗಿರಬೇಕೆಂದು ಊಹಿಸಿದರೆ ತಪ್ಪಾಗದು. ಮತ್ತು ಈ ಯುದ್ಧದಲ್ಲಿ ಹಳ್ಳಿಯ ವೀರರು ಮಡಿದಿಬಹುದೆಂದು ಊಹಿಸಬಹುದು. ಡಾ. ಜಿ.ಎಸ್. ದೀಕ್ಷಿತ್ ಮತ್ತಿತರು ಬರೆದು ಪ್ರಕಟಿಸಿರುವ ಶ್ರೀ ಕೃಷ್ಣದೇವರಾಯ ಜೀವನ ಸಾಧನೆಗಳು ಎಂಬ ಗ್ರಂಥದಲ್ಲಿ ಈ ಬಗ್ಗೆ ಮಾಹಿತಿ ಸಿಗುತ್ತದೆ. ಶ್ರೀ ಕೃಷ್ಣದೇವರಾಯನು ರಾಯಚೂರು ಕೋಟೆಯನ್ನು ಗೆಲ್ಲುವ ಪೂರ್ವದಲ್ಲಿ ಅರಕೇರಿಯಿಂದ ಸುಮಾರು ೨೦ ಕಿ.ಮೀ. ದೂರದಲ್ಲಿರುವ ದೇವದುರ್ಗ ತಾಲೂಕಿನ ಗಬ್ಬೂರಿನಲ್ಲಿ ಇಸ್ಮಾಯಿಲ್ ಆದಿಲ್‌ಶಾಹನ ಸೈನಿಕರಿಗೂ ಮತ್ತು ವಿಜಯನಗರ ಸೈನಿಕರಿಗೂ ಒಂದು ಯುದ್ಧ ನಡೆಯಿತು. ಶತ್ರುವಿಗೆ ಪರಂಗಿಗಳ ನೆರವು ಮತ್ತು ಗಬ್ಬೂರು ಕೋಟೆಯ

ಸಂರಕ್ಷಣೆಯಲ್ಲಿದ್ದುದರಿಂದ ಮೊದಲಿಗೆ ಸುಲ್ತಾನ ಸೈನಿಕರಿಗೆ ಜಯವಾಗಿ ವಿಜಯನಗರದ ಸೈನಿಕರು ಹಿಮ್ಮೆಟ್ಟಿದ್ದರು. ಇದನ್ನು ಕಂಡು ಕೃಷ್ಣದೇವರಾಯನು ತಾನೇ ಕುದುರೆಯನ್ನೇರಿ ರಣರಂಗ ಪ್ರವೇಶಿಸಿ ತನ್ನ ಸೈನಿಕರನ್ನು ಹುರಿದುಂಬಿಸಿ ತನ್ನ ಜೀವನದ ಹಂಗು ತೊರೆದು ಹೋರಾಡಿದನು. ಇದರ ಫಲವಾಗಿ ಕ್ರಿ.ಶ. ೧೫೨೦ರ ಮೇ ತಿಂಗಳ ೧೯ರಂದು ಈ ಚಾರಿತ್ರಿಕ ಮಹಾಯುದ್ಧದಲ್ಲಿ ವಿಜಯನಗರದ ಪಡೆ ವಿಜಯಶಾಲಿಯಾಯಿತು. ಇಸ್ಮಾಯಿಲ್ ಆದಿಲ್‌ಶಾಹನು ಅಸದ್‌ಖಾನನ ಸಹಾಯದಿಂದ ಕೃಷ್ಣಾ ನದಿಯನ್ನು ದಾಟಿ ಗುಡ್ಡಗಳ ಹಾದಿಯನ್ನು ಹಿಡಿದು ತಲೆಮರೆಸಿಕೊಂಡು ವಿಜಾಪುರವನ್ನು ಸೇರಿದನು. ಈ ಯುದ್ಧದ ವಿಜಯದಿಂದಾಗಿ ರಾಯಚೂರು ಕೋಟೆಯನ್ನು ಕೃಷ್ಣದೇವರಾಯನು ಸುಲಭವಾಗಿ ಗೆದ್ದುಕೊಂಡನು. ಆದ್ದರಿಂದ ಈ ಗಬ್ಬೂರಿನ ಯುದ್ಧದಲ್ಲಿ ಅರಕೇರಿಯ ಯೋಧರು ಕೃಷ್ಣದೇವರಾಯನ ಪರವಾಗಿ ಹೋರಾಡಿ ಮಡಿದರು. ಅವರ ಸ್ಮಾರಕಗಳಾಗಿ ಈ ವೀರಗಲ್ಲುಗಳನ್ನು ಮತ್ತು ಸಮಾಧಿ-ಗುಡಿಗಳನ್ನು ಅವರ ಬಂಧುಗಳು ಮತ್ತು ಅಭಿಮಾನಿಗಳು ಕಟ್ಟಿಸಿದರೆಂದು ಊಹಿಸಿದರೆ ತಪ್ಪಾಗದು.

ಮಾನ್ವಿ ತಾಲೂಕಿನಲ್ಲಿ ಸ್ಮಾರಕ ಶಾಸನಕ್ಕಿಂತ ಸ್ಮಾರಕ ಶಿಲೆಗಳಲ್ಲಿ ಹೆಚ್ಚಾಗಿ ವೀರಗಲ್ಲುಗಳ ಸಂಖ್ಯೆ ಕಂಡುಬರುತ್ತವೆ. ಈ ಪ್ರದೇಶದ ಭಾಗಗಳಲ್ಲಿ ವೀರಗಲ್ಲುಗಳಿಗೆ ಪೂಜೆ ಮಾಡಲಾಗಿದೆ. ಕೊಟ್ನಿಕಲ್ ಗ್ರಾಮದ ಬಿನ್ನಿಕಟ್ಟಿಗೆ ಹೋಗುವ ದಾರಿಯಲ್ಲಿ ಸಾಲುಸಾಲಾಗಿ ನಿಲ್ಲಿಸಿರುವ ವೀರಗಲ್ಲುಗಳಿವೆ. ಇಲ್ಲಿಯ ಮೂರು ವೀರಗಲ್ಲುಗಳಿಗೆ ಪೂಜೆ ಮಾಡಿರುವುದು ಕಂಡುಬರುತ್ತದೆ. ಅದರಲ್ಲಿ ಒಬ್ಬ ವೀರನು ಉದ್ದವಾದ ಭರ್ಚಿಯನ್ನು ಹಿಡಿದುಕೊಂಡು ಬೇಟೆಗೆ ಹೊರಟಿರುವಂತೆ ಕಾಣುತ್ತದೆ. ಇದು ವಿಜಯನಗರೋತ್ತರ ಹಂಡೆ ಪಾಳೇಗಾರರ ಕಾಲಕ್ಕೆ ಸೇರಿದ್ದಾಗಿದೆ. ಇನ್ನೊಂದು ಚಿತ್ರದಲ್ಲಿ ವೀರನು ಎಡಗೈಯಲ್ಲಿ ಗುರಾಣಿ, ಬಲಗೈಯಲ್ಲಿ ಖಡ್ಗವಿಡಿದು ನಿಂತಿರುವ ಭಂಗಿಯಿದೆ. ಕೊರಳೊಳಗೆ ನಕ್ಷತ್ರಾಕಾರದ ಆಭರಣವಿದೆ. ತಲೆಯ ಮುಡಿಯನ್ನು ಕಟ್ಟಿದ್ದಾನೆ. ಬಲಭಾಗದಲ್ಲಿ ಜಿಂಕೆಯ ಚಿತ್ರ, ಎಡಭಾಗದಲ್ಲಿ ಶ್ವಾನವಿರುವ ಚಿತ್ರವಿದೆ. ಇದು ಬೇಟೆಯಾಡಲು ಹೊರಟಿರುವ ವೀರನ ಚಿತ್ರವಾಗಿದೆ. ಇನ್ನೊಂದು ಶಿಲ್ಪದಲ್ಲಿ ವೀರನು ಎರಡು ಕೈಗಳನ್ನೆತ್ತಿ ಎಡಗೈಯಲ್ಲಿ ಗುರಾಣಿ, ಬಲಗೈಯಲ್ಲಿ ಖಡ್ಗವಿದ್ದು, ಬಲಭಾಗದಲ್ಲಿ ಶ್ವಾನವಿರುವುದು ಚಿತ್ರಿತವಾಗಿದ್ದು, ವೀರನು ನಡುವಿಗೆ ಪಟ್ಟಿಯನ್ನು ಕಟ್ಟಿದ್ದಾನೆ. ಬೇಟೆಗೆ ಹೊರಟಿರುವಂತೆ ಚಿತ್ರಿತವಾಗಿದೆ.

ಪಕ್ಕದಲ್ಲಿರುವ ಇನ್ನೊಂದು ಮಾಸ್ತಿ ವೀರಗಲ್ಲುಗಳಲ್ಲಿ ಪ್ರಧಾನವಾಗಿ ಕಂಡುಬರುವ ಶಿಲ್ಪ ಶೈಲಿಯೆಂದರೆ ಎಡಭಾಗದಲ್ಲಿ ದೊಡ್ಡದಾಗಿ ತ್ರಿಭಂಗಿಯಲ್ಲಿ ನಿಂತಿರುವ ವೀರ ಮಧ್ಯದಲ್ಲಿ ಸ್ತ್ರೀಯು ಆಕೆಯ ಬಲಭಾಗದಲ್ಲಿ ಮತ್ತೊಬ್ಬ ವೀರನು ತನ್ನ ಎಡಗೈಯಲ್ಲಿ ಉದ್ದವಾದ ಕೋಲಿನ ಹಾರಾಡುತ್ತಿರುವ ಧ್ವಜವನ್ನು, ಇನ್ನೊಂದು ಕೈಯಲ್ಲಿ ಕತ್ತಿ ಇಟ್ಟುಕೊಂಡಿದ್ದಾನೆ. ಕೊರಳೊಳಗೆ ಆಭರಣವನ್ನು ಹಾಕಿಕೊಂಡಿದ್ದಾನೆ. ಮಹಾಸತಿಯ ಎಡಭಾಗದಲ್ಲಿರುವ ವೀರನು ಎಡಗೈಯಲ್ಲಿ ಗುರಾಣಿಯನ್ನು, ಮತ್ತೊಂದು ಕೈಯಲ್ಲಿ ಖಡ್ಗವನ್ನು ಆಧರಿಸುವ ಸಾಧನವನ್ನು ನಡುಪಟ್ಟಿಯಲ್ಲಿ

ಕಟ್ಟಿದ್ದಾನೆ. ತೊಟ್ಟಿರುವ ಪಂಚೆಯ ಚುಂಗನ್ನು ಬಲಭಾಗದಲ್ಲಿ ಇಳಿ ಬಿಟ್ಟಿದ್ದಾನೆ. ಮುಡಿಯನ್ನು ಬಟ್ಟೆಯಿಂದ ಕಟ್ಟಿರುವನು; ಕೊರಳೊಳಗೊಂದು ಆಭರಣ ಇದೆ. ಎರಡು ಕೈಗಳಲ್ಲಿ ತೊಳಬಂಧಿಯನ್ನು ಹಾಕಿಕೊಂಡಿದ್ದಾನೆ. ಮಧ್ಯದಲ್ಲಿರುವ ತುರುಬನ್ನು ಕಟ್ಟಿಕೊಂಡ ಸ್ತ್ರೀಯ ಹಣೆಯಲ್ಲಿ ಕುಂಕುಮವಿದೆ. ಕಿವಿಯೋಲೆಯನ್ನು ಹಾಕಿದ್ದಾಳೆ. ತನ್ನ ಬಲಗೈಯನ್ನು ಎಡಗೈಯ ಮೇಲೆ ಇಟ್ಟುಕೊಂಡು ಏನನ್ನೋ ಹಿಡಿದುಕೊಂಡಂತಿದೆ. ಸೀರೆಯ ನೆರಿಗೆಗಳನ್ನು ಚಿತ್ರಿಸಲಾಗಿದೆ. ವಿಜಯ ಸಾಧಿಸಿ ವೀರ ಮರಣ ಹೊಂದಿರುವ ಮಾಸ್ತಿ ವೀರಗಲ್ಲು ಇರುವಂತೆ ಕಾಣಿಸುತ್ತದೆ.

ಆಯಾತಾಕಾರದ ಮತ್ತೊಂದು ಬಂಡೆಗಲ್ಲಿನ ಮೇಲೆ ಮೂರು ಜನ ವೀರರ ಶಿಲ್ಪವಿದೆ. ಮಧ್ಯದಲ್ಲಿರುವ ವೀರನು ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ಉಳಿದಂತೆ ಇಬ್ಬರು ಬಲಗೈಯಲ್ಲಿ ಕತ್ತಿಯನ್ನು ಇಬ್ಬರು ಬಂದೂಕನ್ನು ಕೈಗಳಲ್ಲಿ ಹಿಡಿದು ಹೊರಟಿರುವಂತೆ ಕೆತ್ತಲಾಗಿದೆ. ಮೂರು ಜನ ವೀರರು ನಡುವಿನಲ್ಲಿ ಕತ್ತಿಯನ್ನು ಇರಿಸುವ ಸಾಧನವನ್ನು ಕಟ್ಟಿಕೊಂಡಿದ್ದಾರೆ. ಕೊರಳೊಳಗೆ ಆಭರಣದ ಸರವನ್ನು ಹಾಕಿಕೊಂಡಿದ್ದಾರೆ. ಶ್ವಾನವನ್ನು ಚಿತ್ರಿಸಲಾಗುವ ವಿಜಯನಗರೋತ್ತರದ ಪಾಳೇಗಾರರ ವೀರಗಲ್ಲಾಗಿದೆ.

ಅದೇ ಸ್ಥಳದಲ್ಲಿರುವ ಇನ್ನೊಂದು ವೀರಗಲ್ಲಿನಲ್ಲಿ ವೀರನು ಎಡಗೈಯಲ್ಲಿ ಗುರಾಣಿಯನ್ನು ಹಿಡಿದು, ಬಲಗೈಯಲ್ಲಿ ಖಡ್ಗವನ್ನು ಹಿಡಿದು ಅರ್ಧಕ್ಕೆ ಕೈ ಎತ್ತಿದ್ದಾನೆ. ಸುತ್ತಲು ತುರುಗಳನ್ನು ಮತ್ತು ಶ್ವಾನವನ್ನು ಕೆತ್ತಲಾಗಿದೆ. ವಿಶೇಷ ಟೋಪಿಯನ್ನು ಧರಿಸಿದ್ದಾನೆ. ಕೊರಳೊಳಗೆ ಮಣಿಗಳಿಂದ ಕೂಡಿದ ಸರವನ್ನು ಹಾಕಿಕೊಂಡಿದ್ದಾನೆ. ಎರಡು ತೋಳುಗಳಲ್ಲಿ ತೊಳಬಂಧಿಯನ್ನು ಧರಿಸಿದ್ದಾನೆ. ಎರಡು ಕಾಲಿಗೆ ಕಾಲುಗಡಗವನ್ನು ಹಾಕಿದ್ದಾನೆ. ಎರಡು ಕಾಲಿನ ಮಧ್ಯದಲ್ಲಿ ಉಡುಪನ್ನು ಇಳಿಬಿಟ್ಟಿದ್ದಾನೆ.

ಇದೇ ತಾಲೂಕಿನ ಕುರುಡಿಯ ಈರಣ್ಣ ಮನೆಯ ಹತ್ತಿರ ವಿಜಯನಗರ ಕಾಲದ ಐದು ವೀರಗಲ್ಲುಗಳು ಇವೆ. ಇವುಗಳಲ್ಲಿ ಎರಡು ವೀರಗಲ್ಲುಗಳು ಎಡಗೈಯಲ್ಲಿ ಬಿಲ್ಲನ್ನು ಸಿಕ್ಕಿಸಿಕೊಂಡಿದ್ದಾರೆ. ಒಬ್ಬ ವೀರ ಮುಡಿಯನ್ನು ನೇರವಾಗಿ ಕಟ್ಟಿದರೆ ಇನ್ನೊಬ್ಬ ಬಲಗೈಯಲ್ಲಿ ಬಾಣಗಳನ್ನು ಮೇಲಕ್ಕೆತ್ತಿ ಹಿಡಿದಿದ್ದಾರೆ. ನಡುವಿನಲ್ಲಿ ಖಡ್ಗವನ್ನು ಹಿಡಿದ ವೀರ ಬಲಗಡೆ ಮುಡಿಯನ್ನು ಕಟ್ಟಿದ್ದಾನೆ. ಇಬ್ಬರು ತೋಳಬಂಧಿಯನ್ನು ಹಾಕಿದ್ದಾರೆ. ಇನ್ನುಳಿದ ಮೂರು ವೀರಗಲ್ಲುಗಳಲ್ಲಿ ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾರೆ. ಬಲಗೈಯಲ್ಲಿ ಒಬ್ಬವೀರ ಖಡ್ಗವನ್ನು ಮೇಲಕ್ಕೆ ಎತ್ತಿದ್ದಾನೆ. ಕೇಶವನ್ನು ವಸ್ತ್ರದಿಂದ ಬಲಬದಿಯಲ್ಲಿ ಕಟ್ಟಿದ್ದಾರೆ. ಒಬ್ಬ ವೀರ ಮಾತ್ರ ಬಲಗೈಗೆ ತೋಳಬಂಧಿಯನ್ನು ಹಾಕಿದ್ದಾನೆ. ಬಳಕೆಗೊಂಡಿರುವ ಕಲ್ಲುಗಳು ಕರಿಬಣ್ಣದಲ್ಲಿವೆ. ಚೌಕಾಕಾರದಲ್ಲಿದ್ದು ಒಂದು ದುಂಡಾಕಾರದಲ್ಲಿದೆ.

ಇದೇ ತಾಲೂಕಿನ ಕುರುಡಿಗೆ ಹೋಗುವ ಊರು ಪ್ರವೇಶಕ್ಕೆ ಮುಂಚಿತವಾಗಿ ಬಸ್ ನಿಲ್ದಾಣದ ಹೋಟೆಲ್‌ನ ಹೊರಭಾಗದಲ್ಲಿರುವ ರಸ್ತೆಯ ಪಕ್ಕದಲ್ಲಿ ಒಂದು ವೀರಗಲ್ಲನ್ನು ನೆಡಲಾಗಿದೆ. ಈ ವೀರಗಲ್ಲಿನ ಮೇಲ್ಭಾಗದಲ್ಲಿ ಸೂರ್ಯ-ಚಂದ್ರರಿದ್ದು, ಎಡಗೈಯಲ್ಲಿ ಗುರಾಣಿಯನ್ನು ಭುಜಕ್ಕೆ

ಎತ್ತಿಹಿಡಿದಿದ್ದಾನೆ. ಖಡ್ಗವನ್ನು ಭುಜದ ಕೆಳಭಾಗಕ್ಕೆ ಇಳಿಬಿಟ್ಟಿದ್ದಾನೆ. ಮುಡಿಯನ್ನು ವಸ್ತ್ರದಿಂದ ಬಲಬದಿಗೆ ಕಟ್ಟಿದ್ದಾನೆ. ದಪ್ಪವಾದ ಮೀಸೆಯಿದೆ. ಕಿವಿಯೋಲೆಯನ್ನು ಹಾಕಿದ್ದಾನೆ.

ಇದೇ ತಾಲೂಕಿನ ಕಪ್ಪಗಲ್ಲು ಕೇಶವ ದೇವಾಲಯದ ಮುಂದಿರುವ ವೀರಗಲ್ಲು ಕೆಳಭಾಗದಲ್ಲಿ ಬಿಲ್ಲನ್ನು ಹಿಡಿದು ಬಾಣವನ್ನು ಎತ್ತಿಹಿಡಿದ ಹೋರಾಟದ ಚಿತ್ರವಿದ್ದರೆ, ಮಧ್ಯದಲ್ಲಿ ಅವರನ್ನು ಕೈಲಾಸಕ್ಕೆ ಕೊಂಡೊಯ್ಯುತ್ತಿರುವ ದೇವತಾಸ್ತ್ರೀಯರು ಮೇಲ್ಭಾಗದ ಮತ್ತು ಹಂತದಲ್ಲಿ ಸೂರ್ಯ–ಚಂದ್ರ ಇದ್ದು, ಈಶ್ವರನ ಮುಂದೆ ವೀರ ಕುಳಿತಿರುವಂತೆ ಹಾಗೆಯೇ ಇನ್ನೊಂದು ಕಡೆ ಸ್ತ್ರೀಯು ನಿಂತಿರುವ ಚಿತ್ರವಿದೆ.

ಇದೇ ತಾಲೂಕಿನ ಬಾಗಲವಾಡ ರಾಮಲಿಂಗೇಶ್ವರ ದೇವಾಲಯದಲ್ಲಿ ನಿಲ್ಲಿಸಲಾದ ಮೂರು ಹಂತಗಳ ವೀರಗಲ್ಲು ಯುದ್ಧವನ್ನು ತಿಳಿಸುತ್ತದೆ. ಕೆಳಭಾಗದಲ್ಲಿ ಕುದುರೆ ಮೇಲೆ ಕುಳಿತಿರುವ ವೀರನು ಭರ್ಚಿಯನ್ನು ಎಸೆಯುತ್ತಿರುವುದು; ಈತನ ಮುಂದೆ ಮತ್ತೊಬ್ಬ ವೀರನು ಬಿಲ್ಲನ್ನು ಹಿಡಿದು ಬಾಣವನ್ನು ತೆಗೆಯುತ್ತಿರುವ ದೃಶ್ಯವಿದೆ. ಕೊರಳೊಳಗೆ ಆಭರಣಗಳನ್ನು ಧರಿಸಿದ್ದಾನೆ. ವೀರನು ದೇವತಾ ಸ್ತ್ರೀಯರ ಭುಜದ ಮೇಲೆ ಕೈ ಹಾಕಿಕೊಂಡು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ಚಿತ್ರವಿದೆ. ಮೇಲ್ಭಾಗದಲ್ಲಿ ಈಶ್ವರ ಮುಂದೆ ವೀರನು ಕೈಯನ್ನು ಮುಂದಿಟ್ಟುಕೊಂಡು ಕುಳಿತಿರುವ ಚಿತ್ರವಿದೆ. ಮತ್ತೊಂದು ಕಡೆ ಸ್ತ್ರೀಯು ಒಂದು ಕೈ ಮೇಲಕ್ಕೆತ್ತಿ ನಿಂತಿರುವ ಚಿತ್ರವಿದೆ. ಈ ವೀರಗಲ್ಲನ್ನು ಕಪ್ಪು ಕಲ್ಲಿನಲ್ಲಿ ಕೆತ್ತಲಾಗಿದೆ. ಈ ವೀರಗಲ್ಲಿಗೆ ಅಲ್ಲಿನ ಜನ ಹಬ್ಬ ಮತ್ತು ಜಾತ್ರೆಯ ದಿನದಂದು ಪೂಜಿಸುತ್ತಾರೆ.

ಇದೇ ತಾಲೂಕಿನ ಬಾಗಲವಾಡ ಊರಿನ ಶಾಲೆಯ ಆವರಣದಲ್ಲಿ ವೀರಗಲ್ಲಿನ ಮೇಲೆ ಸಿಡಿ ತಲೆಯ ಚಿತ್ರವಿರುವುದು ಕಂಡುಬರುತ್ತದೆ. ಈ ವೀರಗಲ್ಲು ಕೆಳಭಾಗದಲ್ಲಿ ಚೌಕಾಕಾರವಾಗಿದ್ದು, ವೀರನು ಪದ್ಮಾಸನದಲ್ಲಿ ಕುಳಿತಿದ್ದಾನೆ. ಅವನ ಪಕ್ಕದಲ್ಲಿ ದೊಡ್ಡದಾದ ಕತ್ತಿಯನ್ನು ಇಡಲಾಗಿದೆ. ರುಂಡವು ದೇಹದಿಂದ ಬೇರೆಯಾಗಿರುವುದು ಕಂಡುಬರುತ್ತದೆ. ಮಧ್ಯದಲ್ಲಿ ಅಪ್ಸರೆಯರು ಸ್ವರ್ಗಕ್ಕೊಯ್ಯುತ್ತಿದ್ದಾರೆ. ಮೇಲ್ಭಾಗದಲ್ಲಿ ವೀರನು ಕುಳಿತಿದ್ದು ಅಕ್ಕಪಕ್ಕದಲ್ಲಿ ಅಪ್ಸರೆಯರಿದ್ದಾರೆ.

ಸಿಂಧನೂರು ತಾಲೂಕಿನ ಹುಲ್ಲೂರು, ಜಾಲವಾಡಿಗಿ, ದಿದ್ದಿಗಿ ಗ್ರಾಮದ ವಿಜಯನಗರ ಕಾಲದ ವೀರಗಲ್ಲುಗಳು ಕಾಣಿಸಿಕೊಂಡಿವೆ.

ಹುಲ್ಲೂರು ಗ್ರಾಮದ ದುರುಗಮ್ಮ ಗುಡಿಯ ಪಕ್ಕದಲ್ಲಿರುವ ವೀರಗಲ್ಲು ವಿಶೇಷವಾಗಿದೆ. ಇದು ಎರಡು ಅಡಿ ಎತ್ತರವಿದೆ. ವೀರಗಲ್ಲಿನಲ್ಲಿ ವೀರನು ಕೈಯಲ್ಲಿ ಖಡ್ಗ, ಬಂದೂಕು ಮತ್ತು ಗುರಾಣಿ ಒಡಿದಿರುವ ದೃಶ್ಯವಿದೆ. ಸೈನಿಕರ ಕಾಲುಗಳು ನೇರವಾಗಿಲ್ಲದೆ ಕಣಕಾಲು ರೀತಿಯಲ್ಲಿವೆ. ವೀರರ ಪಕ್ಕದಲ್ಲಿ ಸೂರ್ಯ ಮತ್ತು ಚಂದ್ರನ ಚಿತ್ರವಿದೆ. ಇದರ ಕಾಲವನ್ನು ಕ್ರಿ.ಶ. ೧೫–೧೬ನೇ ಶತಮಾನ ಎಂದು ಹೇಳಬಹುದು.

ಜಾಲವಾಡಿಗಿ ಗ್ರಾಮದ ಶ್ರೀಮಂತ ತಾತನ ಕಟ್ಟೆಯ ಬಳಿಯಲ್ಲಿರುವ ವೀರಗಲ್ಲು ಎರಡು ಅಡಿ ಎತ್ತರವಿದೆ. ಇದು ಒಂದು ಹಂತವನ್ನು ಹೊಂದಿದ್ದು ಕುದುರೆಯ ಮೇಲೆ ಕುಳಿತಿರುವ ವೀರನನ್ನು ದೊಡ್ಡ ಗಾತ್ರದಲ್ಲಿ ಚಿತ್ರಿಸಲಾಗಿದೆ. ವೀರನ ಕೈಯಲ್ಲಿ ಖಡ್ಗವಿದೆ. ವೀರನ ಕುದುರಯನ್ನು ಒಬ್ಬ ಸೈನಿಕನು ಹಿಡಿದುಕೊಂಡು ಹೋಗುತ್ತಿರುವ ದೃಶ್ಯವಿದೆ. ವೀರನ ಪಕ್ಕದಲ್ಲಿ ಭರ್ಚಿ, ಧ್ವಜ, ಖಡ್ಗ, ಗುರಾಣಿ ಹಿಡಿದಿರುವ ಸೈನಿಕರ ಮತ್ತು ನಾಯಿಯ ದೃಶ್ಯವಿದೆ. ಮೇಲ್ಭಾಗದಲ್ಲಿ ಸೂರ್ಯ, ಚಂದ್ರನನ್ನು ಚಿತ್ರಿಸಲಾಗಿದೆ.

ದಿದ್ದಿಗಿ ಗ್ರಾಮದಲ್ಲಿನ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯ ಮುಂಭಾಗದ ಹೊಲದಲ್ಲಿ ನಾಲ್ಕು ವೀರಗಲ್ಲುಗಳಿವೆ. ಇವು ಒಂದೇ ರೀತಿಯ ಕೆತ್ತನೆಯನ್ನು ಹೊಂದಿವೆ. ಅಲ್ಲದೇ ಅಷ್ಟೇ ಸುಂದರವಾಗಿವೆ. ಕುದುರೆ ಮೇಲೆ ಕುಳಿತ ವೀರನನ್ನು ದೊಡ್ಡ ಗಾತ್ರದಲ್ಲಿ ಚಿತ್ರಿಸಲಾಗಿದೆ. ವೀರನ ಕೈಯಲ್ಲಿ ಖಡ್ಗ, ಸೊಂಟದಲ್ಲಿ ಪಟ್ಟಿಯಿದೆ. ವೀರ ಕುಳಿತ ಕುದುರೆಯನ್ನು ಸೈನಿಕನು ಹಿಡಿದು ಹೋಗುತ್ತಿದ್ದಾನೆ. ಈತನ ಕೈಯಲ್ಲಿ ಧ್ವಜವಿದೆ. ಹಿಂಭಾಗದಲ್ಲಿ ಛತ್ರಿಯನ್ನು ಹಿಡಿದಿರುವ ಮತ್ತು ಮೇಲ್ಭಾಗದಲ್ಲಿ ಸೂರ್ಯ, ಚಂದ್ರರನ್ನು ಸ್ಪಷ್ಟವಾಗಿ ಚಿತ್ರಿಸಲಾಗಿದೆ.

ಗುಲಬರ್ಗಾ ತಾಲೂಕಿನ ಹರಸೂರು ಗ್ರಾಮದ ರಸ್ತೆಯಲ್ಲಿ ಬಳಿಯಿರುವ ೧೫ನೇ ವಿಜಯನಗರ ಕಾಲದ ಶತಮಾನದ ಅಪ್ರಕಟಿತ ವೀರಗಲ್ಲು ಕಂಡುಬಂದಿದೆ. ಈ ವೀರಗಲ್ಲಿನಲ್ಲಿ ವೀರರು ಕಾದಾಡುತ್ತಿರುವ ದೃಶ್ಯವನ್ನು ಕಾಣಬಹುದು. ಒಬ್ಬ ವೀರನು ಎದುರಾಳಿಯ ಕಣ್ಣು ಕೀಳಲು ಯತ್ನಿಸುತ್ತಿದ್ದಾನೆ. ಕೆಳಗಡೆ ಒಬ್ಬನು ಸತ್ತು ಬಿದ್ದಿರುವ ಚಿತ್ರವನ್ನು ಕಾಣುತ್ತೇವೆ. ಇವರಿಬ್ಬರಲ್ಲಿ ಒಬ್ಬ ವೀರನು ಜಡೆ ಕಟ್ಟಿದ್ದರ ಬಗ್ಗೆ ವೀರಗಲ್ಲಿನಲ್ಲಿ ಕಾಣಬಹುದು. ವೀರನು ತನ್ನ ಮೊಣಕಾಲನ್ನು ಎದುರಾಳಿಯ ವೀರನ ಮೊಣಕಾಲಿನ ಮಗ್ಗುಲಿಗೆ ಇಟ್ಟು ಆತನ ಮೇಲೆ ಎರಗಿ ಹೋಗುತ್ತಿರುವ ದೃಶ್ಯವನ್ನು ಕಾಣಬಹುದು. ಮೇಲ್ಭಾಗದಲ್ಲಿ ಶಿವಲಿಂಗದ ಪಕ್ಕದಲ್ಲಿ ವೀರನು ಪದ್ಮಾಸನ ಭಂಗಿಯಲ್ಲಿ ಕುಳಿತು ಶಿವನ ಸಾನಿಧ್ಯ ಪಡೆದದ್ದನ್ನು ತೋರಿಸುತ್ತದೆ. ಈ ವೀರಗಲ್ಲು ಕಪ್ಪುಶಿಲೆಯನ್ನು ಹೊಂದಿದೆ.

ಅದೇ ಗ್ರಾಮದ ರಸ್ತೆಯ ಬಳಿಯಿರುವ ೧೫ನೇ ಶತಮಾನದ ಎರಡನೇ ವೀರಗಲ್ಲಿನಲ್ಲಿ ವೀರನು ಎದುರಾಳಿಯಿಂದ ರಕ್ಷಣೆಯನ್ನು ಪಡೆಯಲು ಗುರಾಣಿಯನ್ನು ತನ್ನ ಎಡಗೈಯಲ್ಲಿ ಹಿಡಿದು ಹೊಡೆತವನ್ನು ತಪ್ಪಿಸುತ್ತಿದ್ದಾನೆ. ಎದುರಾಳಿ ವೀರನು ಖಡ್ಗದಿಂದ ಹೊಟ್ಟೆಗೆ ತಿವಿಯುತ್ತಿದ್ದ ದೃಶ್ಯ ಕಂಡುಬರುತ್ತದೆ. ತನ್ನ ಎಡಗೈಯಲ್ಲಿ ಗದೆಯನ್ನು ಇಟ್ಟುಕೊಂಡಿದ್ದಾನೆ. ಒಬ್ಬನ ಕಾಲು ಮತ್ತೊಬ್ಬರ ಕಾಲಿಗೆ ತಾಗಿ ಯುದ್ಧದ ಭಂಗಿಯಲ್ಲಿ ನಿಂತ ಸನ್ನಿವೇಶವನ್ನು ಕಾಣುತ್ತೇವೆ. ತಲೆ ಮೇಲೆ ಕೂದಲು ಕಟ್ಟಿದ್ದರ ಒಂದು ಚಿತ್ರವನ್ನು ಸಹ ವೀರಗಲ್ಲಿನಲ್ಲಿ ಕಾಣುತ್ತೇವೆ.

ಗುಲಬರ್ಗಾ ತಾಲೂಕಿನ ಸಣ್ಣೂರು ಗ್ರಾಮದ ಹನುಮಂತ ದೇವರ ಗುಡಿಯ ಬಳಿ ಇರುವ ೧೫ನೇ ಶತಮಾನದ ವೀರಗಲ್ಲು ನಾಲ್ಕು ಪಟ್ಟಿಕೆಗಳಿಂದ ಕೂಡಿದೆ. ಕೆಳಪಟ್ಟಿಕೆಯಲ್ಲಿ ಕುದುರೆಗಳ

ಚಿತ್ರ ಕಂಡುಬರುತ್ತಿದೆ. ಮೂರನೆಯ ಪಟ್ಟಿಕೆಯಲ್ಲಿ ವೀರನು ಶತ್ರುಗಳೊಂದಿಗೆ ಕಾದಾಡುತ್ತಿರುವ ದೃಶ್ಯವಿದೆ. ಮಧ್ಯದಲ್ಲಿ ವೀರನು ಈಟಿಯಿಂದ ತನ್ನ ಬಲಕ್ಕೆ ಇದ್ದ ವೈರಿಯನ್ನು ಇರಿದಿದ್ದಾನೆ. ಎಡಕ್ಕೆ ಇದ್ದ ಶತ್ರು ಮಧ್ಯದಲ್ಲಿದ್ದ ವೀರನ ಮೇಲೆ ಆತನು ತನ್ನ ಕೈಯಲ್ಲಿದ್ದ ಈಟಿಯನ್ನು ಎತ್ತಿ ಇರಿಯುತ್ತಿರುವ ದೃಶ್ಯವನ್ನು ಕಾಣಬಹುದು. ಎರಡನೇ ಪಟ್ಟಿಕೆಯಲ್ಲಿ ಅಪ್ಸರೆಯರು ಯುದ್ಧದಲ್ಲಿ ಮಡಿದ ವೀರರನ್ನು ಎತ್ತಿಕೊಂಡು ಸ್ವರ್ಗಕ್ಕೆ ಒಯ್ಯುತ್ತಿರುವ ದೃಶ್ಯವನ್ನು ನೋಡಬಹುದು. ಕೊನೆಯ ಪಟ್ಟಿಕೆಯಲ್ಲಿ ವೀರರು ಇಬ್ಬರು ಪದ್ಮಾಸನ ಭಂಗಿಯಲ್ಲಿ ಕುಳಿತಿದ್ದಾರೆ. ಅಂದರೆ ಅವರು ಸ್ವರ್ಗಸ್ತರಾದ ಸನ್ನಿವೇಶವನ್ನು ತಿಳಿಸುತ್ತದೆ. ಈ ವೀರರ ಎಡ ಮತ್ತು ಬಲಕ್ಕೆ ಅಪ್ಸರೆಯರು ಗಾಳಿಯನ್ನು ಹಾಕುತ್ತಿರುವ ದೃಶ್ಯವನ್ನು ಕಾಣಬಹುದಾಗಿದೆ.

ಗುಲಬರ್ಗಾ ತಾಲೂಕಿನ ಶ್ರೀನಿವಾಸ ಸರಡಗಿ ಗ್ರಾಮದ ನಾಗಾವಿ ಯಲ್ಲಮ್ಮ ಗುಡಿಯ ಬಳಿ ಇರುವ ೧೫ನೇ ಶತಮಾನದ ವೀರಗಲ್ಲಿನಲ್ಲಿ ವೀರನು ತನ್ನ ಎರಡು ಕೈಗಳನ್ನು ತನ್ನ ಬಲಕ್ಕೆ ತೋರಿಸಿದ್ದಾನೆ. ಹಾಗೂ ಈ ದೃಶ್ಯದಲ್ಲಿ ವೀರನು ತುರುಬು ಕಟ್ಟಿಕೊಂಡ ದೃಶ್ಯವಿದೆ.

ಅದೇ ಗ್ರಾಮದ ದಂಡೊತ್ತಿ ಮಠದ ಪಕ್ಕದಲ್ಲಿರುವ ೧೫ನೇ ಶತಮಾನದ ವೀರಗಲ್ಲಿನ ಅರ್ಧಭಾಗ ತ್ರುಟಿತಗೊಂಡಿದೆ. ಇನ್ನೊಂದು ಅರ್ಧ ಭಾಗದಲ್ಲಿ ಇಬ್ಬರು ವೀರರು ತಮ್ಮ ಎರಡು ಕೈಗಳನ್ನು ಜೋಡಿಸಿ ನಂದಿಯನ್ನು ಪ್ರಾರ್ಥಿಸುವ ಹಾಗೆ ಕಂಡುಬರುತ್ತದೆ. ಮೇಲಿನ ಪಟ್ಟಿಕೆಯಲ್ಲಿ ಸೂರ್ಯನ ಚಿತ್ರವಿದೆ.

ಗುಲಬರ್ಗಾ ತಾಲೂಕಿನ ಹೊನ್ನಕಿರಣಗಿ ಗ್ರಾಮದ ಶ್ರೀಕೇಶವ ಈಶ್ವರ ಲಿಂಗೇಶ್ವರ ಗುಡಿಯ ಮುಂದೆ ಇರುವ ೧೫ನೇ ಶತಮಾನದ ವಿರಗಲ್ಲಿನಲ್ಲಿ ವೀರನು ತನ್ನ ಬಲಗೈಯಲ್ಲಿನ ಖಡ್ಗದಿಂದ ತನ್ನ ಎದುರಾಳಿಗೆ ಇರಿಯುವ ಭಂಗಿಯಲ್ಲಿ ನಿಂತಿದ್ದಾನೆ. ಎಡಗೈಯಲ್ಲಿ ಗುರಾಣಿ ಹಿಡಿದಿದ್ದಾನೆ. ತನ್ನ ಬಲಗಾಲನ್ನು ಮುಂದೆ ಇಟ್ಟಿದ್ದಾನೆ. ಎಡಗಾಲು ಹಿಂದೆ ಇಟ್ಟ ಹಾಗೆ ಕಂಡುಬರುತ್ತದೆ. ವೀರನು ತನ್ನ ಕಾಲಲ್ಲಿ ಕಾಲಬಂಧಿ ಧರಿಸಿದಂತಿದೆ. ಕೈಬಂಧಿ ಮತ್ತು ತೋಳಬಂಧಿ ಧರಿಸಿರುವ ಚಿತ್ರವನ್ನು ಕಾಣುತ್ತೇವೆ. ಕಿವಿಯಲ್ಲಿ ಓಲೆ ಮತ್ತು ಕೊರಳಿನಲ್ಲಿ ಎರಡು ಕಂಠಹಾರಗಳನ್ನು ಧರಿಸಿದೆ.

ಅದೇ ತಾಲೂಕಿನ ಮಹಾಗಾಂವ ಗ್ರಾಮದ ಸಂಗಯ್ಯನ ದೇವರ ಗುಡಿ ಪಕ್ಕದಲ್ಲಿರುವ ೧೫ನೇ ಶತಮಾನದ ವೀರಗಲ್ಲು ಮೂರು ಪಟ್ಟಿಕೆಗಳಿಂದ ಕೂಡಿದೆ. ಕೆಳಗಿನಿಂದ ಮೊದಲನೆ ಪಟ್ಟಿಕೆಯಲ್ಲಿ ತನ್ನ ಎರಡು ಕೈಗಳಿಂದ ಭರ್ಚಿಯನ್ನು ಹಿಡಿದು ತನ್ನ ಎದುರಿಗಿದ್ದ ವೈರಿಯ ಕುದುರೆಗೆ ಚುಚ್ಚುತ್ತಿದ್ದಾನೆ. ಎದುರಾಳಿಯು ಕುದುರೆಯ ಮೇಲೆ ಕುಳಿತು ಕೈಯಲ್ಲಿ ಖಡ್ಗವನ್ನು ಹಿಡಿದು ವೀರನನ್ನು ಹೊಡೆಯಲು ಕೈ ಮೇಲೆತ್ತಿದ ಚಿತ್ರ ಕಾಣುತ್ತೇವೆ. ಮೊದಲನೇ ಪಟ್ಟಿಕೆಯಲ್ಲಿ ಮಡಿದ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಒಯ್ಯುತ್ತಿರುವ ದೃಶ್ಯವನ್ನು ಎರಡನೆ ಪಟ್ಟಿಕೆಯಲ್ಲಿ ಕಾಣುತ್ತೇವೆ. ಮೂರನೇ ಪಟ್ಟಿಕೆಯಲ್ಲಿ ವೀರನು ಶಿವಲಿಂಗದ ಎದುರು ಕೈ ಜೋಡಿಸಿ ಶಿವನನ್ನು ಆರಾಧಿಸುತ್ತಿರುವ ದೃಶ್ಯವಿದೆ.

ಅದೇ ಗ್ರಾಮದ ಅದೇ ಗುಡಿಯ ಪಕ್ಕದಲ್ಲಿರುವ ೧೫ನೇ ಶತಮಾನದ ಎರಡನೆಯ ವೀರಗಲ್ಲಿನಲ್ಲಿಯ ಮೂರು ಪಟ್ಟಿಕೆಗಳು ಇವೆ. ಕೆಳಗಿನಿಂದ ಮೊದಲನೇ ಪಟ್ಟಿಕೆಯಲ್ಲಿ ವೀರನು ತನ್ನ ಬಲಗೈಯಲ್ಲಿ ಬಿಲ್ಲನ್ನು ಹಿಡಿದಿದ್ದಾನೆ. ಎಡಗೈಯಿಂದ ತನ್ನ ಬತ್ತಳಿಕೆಯಲ್ಲಿನ ಬಾಣವನ್ನು ತೆಗೆಯುತ್ತಿರುವ ದೃಶ್ಯವಿದೆ. ಎದುರಾಳಿ ವೀರನು ತನ್ನ ಕೈಯಲ್ಲಿ ಖಡ್ಗವನ್ನು ಹಿಡಿದು ತನ್ನ ಎದುರಿನ ವೀರನನ್ನು ಇರಿಯುತ್ತಿರುವ ಚಿತ್ರವಿದೆ. ಇಲ್ಲಿ ಮಡಿದ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೂರನೆಯ ಪಟ್ಟಿಕೆಯಲ್ಲಿ ಶಿವಲಿಂಗದ ಎದುರು ವೀರನು ಕುಳಿತಿರುವ ದೃಶ್ಯವಿದೆ.

೧೫ನೇ ಶತಮಾನದ ಮೂರು ವೀರಗಲ್ಲುಗಳು ಶಹಾಪುರ ತಾಲೂಕಿನ ಸಿರವಾಳ ಗ್ರಾಮದ ಹೊರವಲಯದಲ್ಲಿವೆ.

ವೀರಗಲ್ಲು–೧. ವೀರಗಲ್ಲಿನಲ್ಲಿ ವೀರನೊಬ್ಬನ ಉಬ್ಬುಶಿಲ್ಪ ಕಂಡು ಬರುತ್ತದೆ. ಆತನ ಒಂದು ಕೈಯಲ್ಲಿ ಕತ್ತಿಯನ್ನು, ಇನ್ನೊಂದು ಕೈಯಲ್ಲಿ ರಕ್ಷಣೆಗಾಗಿ ಗುರಾಣಿಯನ್ನು ಹಿಡಿದು ಹೋರಾಟಕ್ಕೆ ಸಿದ್ಧವಾಗಿ ನಿಂತಿರುವ ಭಂಗಿಯಲ್ಲಿನ ಉಬ್ಬುಶಿಲ್ಪವನ್ನು ಚಿತ್ರಿಸಿರುತ್ತಾರೆ.

ವೀರಗಲ್ಲು–೨ ಈ ವೀರಗಲ್ಲಿನಲ್ಲಿ ವೀರನೊಬ್ಬನ ಉಬ್ಬುಶಿಲ್ಪವನ್ನು ಕಾಣಬಹುದು. ವೀರನ ಒಂದು ಕೈಯಲ್ಲಿ ಕತ್ತಿಯನ್ನು, ಇನ್ನೊಂದು ಕೈಯಲ್ಲಿ ರಕ್ಷಣೆಗಾಗಿ ಗುರಾಣಿಯನ್ನು ಹಿಡಿದು ಎಡಗೈಯನ್ನು ಸೊಂಟದ ಮೇಲೆ ಇಟ್ಟುಕೊಂಡಿದ್ದಾನೆ. ಈ ಭಂಗಿಯು ವೀರನು ಹೋರಾಟಕ್ಕೆ ಸಿದ್ಧವಾಗಿ ನಿಂತಿರುವಂತೆ ತೋರುತ್ತದೆ.

ವೀರಗಲ್ಲು–೩ ಈ ವೀರಗಲ್ಲಿನಲ್ಲಿ ವೀರನೊಬ್ಬನು ಅಶ್ವಾರೂಢನಾದ ಉಬ್ಬುಶಿಲ್ಪವಿದ್ದು, ವೀರನು ಒಂದು ಕೈಯಲ್ಲಿ ಕತ್ತಿಯನ್ನು, ಇನ್ನೊಂದು ಕೈಯಲ್ಲಿ ಕುದುರೆಯ ಲಗಾಮನ್ನು ಹಿಡಿದುಕೊಂಡಿದ್ದಾನೆ. ಈ ಭಂಗಿ ಆತನು ಹೋರಾಟದಲ್ಲಿ ನಿರತವಾಗಿರುವಂತಿದೆ.

ಅದೇ ತಾಲೂಕಿನ ಹುಲ್ಕಲ್ (ಕೆ) ಗ್ರಾಮದ ಹಿಂದೆ ಅಂದರೆ ಕೋಡಮನಹಳ್ಳಿಗೆ ಹೋಗುವ ಮಾರ್ಗದ ಮಧ್ಯದಲ್ಲಿ ಹಳ್ಳದ ದಂಡೆಯ ಮೇಲೆ ೧೫ನೇ ಶತಮಾನ ಎರಡು ವೀರಗಲ್ಲುಗಳಿವೆ. ವೀರಗಲ್ಲು–೧ ಈ ವೀರಗಲ್ಲು ಒಂದೇ ಹಂತದ ಉಬ್ಬುಶಿಲ್ಪದಿಂದ ಕೂಡಿದೆ. ಇಲ್ಲಿ ಚಿತ್ರಗೊಂಡಿರುವ ಶಿಲ್ಪಗಳು ಅಥವಾ ವೀರರು ಕತ್ತಿಯನ್ನು ಹಿಡಿದು ಕಾಳಗ ಮಾಡುತ್ತಿರುವುದನ್ನು ಆಕರ್ಷಕವಾಗಿ ಚಿತ್ರಿಸಿದ್ದಾರೆ.

ವೀರಗಲ್ಲು–೨ ಈ ವೀರಗಲ್ಲು ಸಹ ಒಂದೇ ಹಂತದಲ್ಲಿದ್ದು, ಇಬ್ಬರು ಪುರುಷರು ಬಿಲ್ಲು ಮತ್ತು ಬಾಣಗಳನ್ನು ಹಿಡಿದು ನಿಂತಿದ್ದರೆ, ಆತನ ಬಲಭಾಗದಲ್ಲಿ ಕೆಳಗೆ ೨ ಶ್ವಾನಗಳು ಮತ್ತು ಎಡಭಾಗದಲ್ಲಿ ಎರಡು ಕೈಗಳನ್ನು ಮುಗಿದು ನಮಸ್ಕರಿಸುತ್ತಿರುವ ವ್ಯಕ್ತಿಯ ಚಿತ್ರವಿದೆ. ಇನ್ನೊಬ್ಬ ವೀರ ಬಿಲ್ಲಿನ ಎದುರು ನಿಂತಿರುವ ಚಿತ್ರವಿದೆ. ಈ ವೀರಗಲ್ಲುಗಳು ಗ್ರಾಮದ ಬೇರೆ ಬೇರೆ ಪ್ರದೇಶದಲ್ಲಿದ್ದು ಅವುಗಳನ್ನು ಒಂದೆಡೆ ಇರಿಸಿದ್ದಾರೆ ಎಂದು ಗ್ರಾಮದ ಸ್ಥಳೀಯರಿಂದ ತಿಳಿದುಬರುತ್ತದೆ.

ಕುಷ್ಟಗಿ ತಾಲೂಕಿನ ತಾವರೆಗೆರೆ ಶಶಿಧರಸ್ವಾಮಿ ಪಿಯು ಕಾಲೇಜು ಆವರಣದಲ್ಲಿನ ಕ್ರಿ.ಶ. ವಿಜಯನಗರ ಕಾಲದ ಒಂದು ವೀರಗಲ್ಲು ಇದೆ. ವೀರಯೋಧ ಕುದುರೆಯ ಮೇಲೆ ಕುಳಿತು ಯುದ್ಧದಲ್ಲಿ ಹೋರಾಡುತ್ತಿರುವಂತೆ ಕಾಣುತ್ತದೆ. ಗದಗ ತಾಲೂಕಿನ ಕಣವ ಗ್ರಾಮದ ವೀರಗಲ್ಲಿನ ಕೆಳಹಂತದಲ್ಲಿ ಯುದ್ಧ ದೃಶ್ಯದಲ್ಲಿ ವೀರ ಕೈ ಎತ್ತಿ ನಿಂತಿದ್ದಾನೆ. ತಲೆ ಮೇಲೆ ಛತ್ರಿಯಿದೆ. ಒಬ್ಬನು ಕಾಲಿಗೆ ನಮಸ್ಕರಿಸುತ್ತಿರುವನು. ಅವನ ಎಡಕ್ಕೆ ಒಬ್ಬನು ಬಿಲ್ಲನ್ನು ಅವನ ವಿರುದ್ಧ ಎತ್ತಿ ಹಿಡಿದಿದ್ದಾನೆ. ವೀರನ ಬಲಗಡೆ ಆತನ ಮೂವರು ಪರಿವಾರದವರು ನಿಂತಿದ್ದಾರೆ. ಮೇಲಿನ ಭಾಗದಲ್ಲಿ ವಿಮಾನದಲ್ಲಿ ಆತನನ್ನು ಕೂಡಿಸಿ ಅಪ್ಸರೆಯರು ಸ್ವರ್ಗಲೋಕಕ್ಕೆ ಒಯ್ಯುವ ದೃಶ್ಯವಿದೆ. ಅವರ ಇನ್ನೊಂದು ಕೈಯಲ್ಲಿ ಚೌರಿಗಳಿವೆ.

ಬೆಟಗೇರಿಯ ವೀರಗಲ್ಲು ಶಿಲ್ಪದಲ್ಲಿ ಹೋರಾಟದ ದೃಶ್ಯವಿಲ್ಲ. ಮಡಿದ ವೀರನನ್ನು ನಾಲ್ವರು ಅಪ್ಸರೆಯರು ವಿಮಾನದಲ್ಲಿ ಕೂಡಿಸಿ ಒಯ್ಯುತ್ತಿರುವರು. ಮೇಲ್ಗಡೆ ಹಂತದಲ್ಲಿ ನಡುವೆ ಜಿನ ಬದಿಗಳಲ್ಲಿ ೮ ಸೇವಕರು ಮತ್ತು ಬದಿಗಳಲ್ಲಿ ಬಲಕ್ಕೆ ಇಬ್ಬರು (ಪತಿ–ಪತ್ನಿ) ಎಡಕ್ಕೆ ಒಬ್ಬನು ಕುಳಿತಿದ್ದಾರೆ. ಗದಗ ತಾಲೂಕಿನ ಶಿರುಂಜಿ ಗ್ರಾಮದ ವೀರಗಲ್ಲು ಶಿಲ್ಪದಲ್ಲಿ ಹೋರಾಡಿ ಮಡಿದ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಒಯ್ಯುವ ಮತ್ತು ಶಿವನ ಸಾನಿಧ್ಯದಲ್ಲಿ ವೀರನಿರುವ ಚಿತ್ರಗಳಿವೆ. ಹಾಳಹುಲ್ಲೂರು ಶಿಲ್ಪದಲ್ಲಿ ವೀರನು ಕುದುರೆ ಸವಾರಿ ಮಾಡುವ ವೈರಿಯ ವಿರುದ್ಧ ಹೋರಾಡುತ್ತಿದ್ದಾನೆ. ಎರಡನೇ ಹಂತದಲ್ಲಿ ಅವನನ್ನು ಅಪ್ಸರೆಯರು ವಿಮಾನದಲ್ಲಿ ಕೂಡಿಸಿಕೊಂಡು ಒಯ್ಯುತ್ತಿರುವ ದೃಶ್ಯವನ್ನು ಕಾಣಬಹುದು.

ಗದಗ ತಾಲೂಕಿನ ಮುಳುಗುಂದದ ಒಂದು ಶಿಲ್ಪದಲ್ಲಿ ವೀರನು ವಿಮಾನದ ಕೆಳಗಡೆ ವಾದ್ಯಮೇಳದವರಿದ್ದಾರೆ. ಈ ವೀರಗಲ್ಲು ಮೂರು ಹಂತಗಳಿಂದ ಕೂಡಿದ್ದು, ಹೋರಾಟ ಮತ್ತು ಶಿವನ ಸಾನ್ನಿಧ್ಯದ ವಿವರಗಳಲ್ಲಿ ಸ್ವಲ್ಪ ಭಿನ್ನತೆ ಇದೆ. ಕೆಳಗಿನ ಹೋರಾಟ ದೃಶ್ಯದಲ್ಲಿ ವೀರನು ಎಡಗೈಯಿಂದ ಬಿಲ್ಲನ್ನು ವೈರಿಗಳ ವಿರುದ್ಧ ಎತ್ತಿ ಹಿಡಿದು ಬಾಣಗಳನ್ನು ಬೆನ್ನಿಗೆ ಕಟ್ಟಿದ್ದಾನೆ. ಬಲಗೈಯಲ್ಲಿ ಕತ್ತಿ ಹಿಡಿದು ಹಿಂದಕ್ಕೆತ್ತಿದ್ದಾನೆ. ವೈರಿ ಪಡೆಯಲ್ಲಿರುವ ಕಾಲ್ದಳವನ್ನು ವೀರನಷ್ಟು ಎತ್ತರ ಜಾಗದಲ್ಲಿ ಎರಡು ಸಾಲುಗಳಲ್ಲಿ ಚಿತ್ರಿಸಲಾಗಿದೆ. ಅವರು ಬಿಲ್ಲು ಹಿಡಿದು ಬಾಣಗಳನ್ನು ಪ್ರಯೋಗಿಸುತ್ತಿರುವರು. ವೀರನ ಬಲಗಡೆ ಮೂರು ಕಮಲದ ಚಿತ್ರಗಳಿವೆ. ಮೂರನೆಯ ಹಂತದಲ್ಲಿ ಎತ್ತರ ವೇದಿಕೆಯ ಮೇಲೆ ನಿಂತು ಪೂಜಿಸುವ ಯತಿ ಮತ್ತು ಶಿವಲಿಂಗಕ್ಕೆ ದುಂಡಾದ ಪಾನಿಬಟ್ಟಲು ನಡುವೆ ಕಿರಿದಾದ ಬಟ್ಟಲುಗಳಿವೆ. ನಡುವಿನ ಭಾಗದಲ್ಲಿ ವಿಮಾನದಲ್ಲಿ ಕುಳಿತ ವೀರನನ್ನು ಅಪ್ಸರೆಯರು ಸ್ವರ್ಗಲೋಕಕ್ಕೆ ಒಯ್ಯುವುದು ಸಾಮಾನ್ಯ ವಿವರವಾಗಿದೆ.

ಇದೇ ತಾಲೂಕಿನ ಎಕ್ಲಾಸಪುರ ಗ್ರಾಮದ ವೀರಗಲ್ಲು ಶಿಲ್ಪದಲ್ಲಿ ಎರಡು ಹೋರಾಟ ದೃಶ್ಯಗಳಿವೆ. ಒಂದರಲ್ಲಿ ಕುದುರೆ ಸವಾರರಿದ್ದರೆ ಇನ್ನೊಂದರಲ್ಲಿ ಕಾಲ್ದಳದವರಿದ್ದಾರೆ. ಇದರಲ್ಲಿ ಇಬ್ಬರು ವೀರರು ಮಡಿದಂತೆ ಕಾಣುವುದು. ಏಕೆಂದರೆ ಮೂರನೆಯ ಹಂತದಲ್ಲಿ ಎರಡು

ವಿಮಾನಗಳಿದ್ದು ಅದರಲ್ಲಿ ಮಡಿದ ವೀರರು ಕುಳಿತಿದ್ದಾರೆ. ಈ ಎರಡು ವಿಮಾನಗಳನ್ನು ಒಂದಕ್ಕೊಂದು ಜೋಡಿಸಿದ್ದು, ಅವುಗಳನ್ನು ಅಪ್ಸರೆಯರು ಹಿಡಿದು ಹಾರುವ ಭಂಗಿಯಲ್ಲಿ ನಿಂತಿದ್ದಾರೆ. ಈ ಇಬ್ಬರು ಮಡಿದ ವೀರರು ಶಿವಲಿಂಗದ ಬಲಗಡೆ ಕುಳಿತಿರುವರು; ಎಡಗಡೆ ನಂದಿ ಚಿತ್ರವಿದೆ.

ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರದ ಎರಡು ವೀರಗಲ್ಲು ಶಿಲ್ಪಗಳಲ್ಲಿ ಹೋರಾಟದ ದೃಶ್ಯಗಳಿವೆ. ವಿಮಾನದಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಲೋಕಕ್ಕೆ ಒಯ್ಯುವುದು ಮತ್ತು ವೀರರು ದೇವರ ಸಾನಿಧ್ಯದಲ್ಲಿರುವುದನ್ನು ಚಿತ್ರಿಸಲಾಗಿದೆ.

ಶಿರಹಟ್ಟಿ ತಾಲೂಕಿನ ಹುಯಿಲಗೋಳ ವೀರಗಲ್ಲು ಶಿಲ್ಪದಲ್ಲಿ ಹೋರಾಟದ ಎರಡು ದೃಶ್ಯಗಳಿವೆ. ಮೊದಲನೆಯ ದೃಶ್ಯ ಮಣ್ಣಿನಲ್ಲಿ ಹೂತಿದೆ. ವೈರಿ ಪಡೆಯ ಇಬ್ಬರು, ಕುದುರೆ ಸವಾರರ ಕಡೆ ಬಾಣ ಪ್ರಯೋಗಿಸಲು ನಿಂತಿದ್ದಾರೆ. ಬಾಣದ ಬದಲು ಬಾಕು ಇರುವುದು ಗಮನೀಯ ಮೂರನೆಯ ದೃಶ್ಯದಲ್ಲಿ ನಾಲ್ವರು ವೀರರು ಎರಡು ಸಾಲುಗಳಲ್ಲಿ ಶಿವಲಿಂಗದ ಬಲಗಡೆ ಕೈಮುಗಿದು ಕುಳಿತಿದ್ದಾರೆ. ಎಡಗಡೆ ಯತಿ ಶಿವಲಿಂಗವನ್ನು ಪೂಜಿಸುತ್ತ ನಿಂತಿದ್ದಾನೆ. ಆತನ ಎಡಕ್ಕೆ ಶಿವಲಿಂಗದ ಕಡೆ ಮುಖಮಾಡಿ ನಂದಿ ಕುಳಿತಿದೆ. ಅದು ತನ್ನ ಮುಂದಿನ ಬಲಗಾಲನ್ನು ಮುಂದೆ ಚಾಚಿದೆ. ಬದಿಗಳಲ್ಲಿ ಸೂರ್ಯ, ಚಂದ್ರರ ಚಿಹ್ನೆಗಳಿವೆ.

ಶಿರಹಟ್ಟಿ ತಾಲೂಕಿನ ಸೊರಟೂರಿನ ವೀರಗಲ್ಲು ಶಿಲ್ಪ ಮೂರು ಹಂತಗಳಿಂದ ಕೂಡಿದೆ. ಕೆಳಹಂತದಲ್ಲಿ ಕುದುರೆ ಸವಾರಿ ಮಾಡುವ ವೀರನ ವಿರುದ್ಧ ವೈರಿ ಪಡೆಯ ಇಬ್ಬರು ಹೋರಾಡುತ್ತ ನಿಂತಿದ್ದಾರೆ. ಒಬ್ಬನು ಆತನ ಕುದುರೆಗೆ ಬಿಲ್ಲಿನಿಂದ ಬಾಣವನ್ನು ಪ್ರಯೋಗಿಸುತ್ತಿರುವನು. ಹೆಗಲಿಗೆ ಬತ್ತಳಿಕೆಯನ್ನು ಕಟ್ಟಿದ್ದಾನೆ. ವೀರನು ಈಟಿಯಿಂದ ವೈರಿಯ ಬಿಲ್ಲಿಗೆ ಚುಚ್ಚಿದ್ದಾನೆ. ಎರಡನೇ ಹಂತದಲ್ಲಿ ಮತ್ತೊಬ್ಬ ವೀರನು ಅವನ ವಿರುದ್ಧ ಹೋರಾಡಲು ನಿಂತಿದ್ದಾನೆ. ಮೇಲಿನ ಹಂತದಲ್ಲಿ ಸಾಲಾಗಿ ಮೂವರು ವೀರರು ನಿಂತಿದ್ದಾರೆ.

ಮುಂಡರಗಿ ತಾಲೂಕಿನ ಡೋಣಿ ಗ್ರಾಮದ ನಂದಿವಾರ ಮಠದ ಬಳಿ ಇರುವ ವೀರಗಲ್ಲು ಶಿಲ್ಪದಲ್ಲಿ ವೀರನು ಬಂದೂಕನ್ನು ವೈರಿಯ ವಿರುದ್ಧ ಹಿಡಿದು ನಿಂತಿರುವನು. ಒಬ್ಬನು ತನ್ನನ್ನು ಕ್ಷಮಿಸಲು ಕೇಳಿಕೊಳ್ಳುತ್ತಿರುವನು. ಬದಿಯಲ್ಲಿ ಸೇವಕ ನಿಂತಿದ್ದಾನೆ. ಉಳಿದ ಭಾಗದಲ್ಲಿ ಅಪ್ಸರೆಯರು ಕುಳಿತಿರುವ ಮಡಿದ ವೀರನ ಬದಿಗಳಲ್ಲಿ ನಿಂತಿದ್ದಾನೆ. ಮುಂಡರಗಿ ತಾಲೂಕಿನ ಕಲಕೇರಿ ಗ್ರಾಮದ ವೀರಗಲ್ಲು ಶಿಲ್ಪದಲ್ಲಿ ಬಲಗಡೆಯಿಂದ ಬರುವ ವೈರಿಗಳ ವಿರುದ್ಧ ವೀರನು ಎಡಗಡೆ ನಿಂತು ಕಾದಾಡುತ್ತಿರುವನು. ಮಡಿದ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕರೆದೊಯ್ಯುತ್ತಿರುವರು. ಯತಿ ಶಿವಲಿಂಗವನ್ನು ಆರಾಧಿಸುತ್ತ ಬಲಬದಿ ನಿಂತಿದ್ದಾನೆ. ವೀರ ಎಡಬದಿಯಲ್ಲಿ ಕೈಮುಗಿದು ನಿಂತಿರುವನು.

ರೋಣ ತಾಲೂಕಿನ ಜಕ್ಕಲಿ ಗ್ರಾಮದ ವೀರಗಲ್ಲು ಶಿಲ್ಪದಲ್ಲಿ ಆಳೆತ್ತರದ ದಂಪತಿಗಳು ಕೆಳಹಂತದಲ್ಲಿರುವರು. ವೀರ ಕೈಮುಗಿದು ನಿಂತರೆ ಆತನ ಪತ್ನಿ ತನ್ನೆರಡು ಕೈಗಳನ್ನು ಕೆಳಗಿಳಿಸಿ ನಿಂತಿದ್ದಾಳೆ. ವೀರ ಸೊಂಟದಿಂದ ಅಡ್ಡ ಮಡಿಕೆಯುಳ್ಳ ವಸ್ತ್ರವನ್ನು ತಲೆಯವರೆಗೆ ಧರಿಸಿದ್ದಾನೆ. ಓಲೆ, ಸರ, ತೋಳಬಂದಿ, ಬಳೆ ಧರಿಸಿದ್ದಾನೆ. ಮುಡಿಯನ್ನು ವೀರ ಎಡಕ್ಕೆ ಮತ್ತು ಆತನ ಪತ್ನಿಯು ಬಲಕ್ಕೆ ಕಟ್ಟಿದ್ದಾರೆ. ಪತ್ನಿಯು ಲಂಗದಂತೆ ಅನೇಕ ಅಡ್ಡ ಮಡಿಕೆಯುಳ್ಳ ಸೀರೆಯನ್ನು ಉಟ್ಟಿದ್ದಾಳೆ. ಓಲೆ, ಸರ, ಬಳೆ ಇತ್ಯಾದಿ ಆಭರಣ ಧರಿಸಿದ್ದಾಳೆ. ಮೇಲ್ಭಾಗದಲ್ಲಿ ನಂದಿ, ಶಿವಲಿಂಗ ಮತ್ತು ಕುಳಿತ ದಂಪತಿಗಳು ಇದ್ದಾರೆ; ಅವರ ಮೇಲೆ ಸೂರ್ಯ-ಚಂದ್ರರಿದ್ದಾರೆ.

ಮುಂಡರಗಿ ಪ್ರದೇಶದ ಒಂದು ವೀರಗಲ್ಲಿನಲ್ಲಿ ಅಪ್ಸರೆಯರಿಬ್ಬರು ಮಡಿದ ವೀರನ ಕೈಗಳನ್ನು ತಮ್ಮ ಭುಜಗಳ ಮೇಲಿಟ್ಟುಕೊಂಡು ಒಯ್ಯುತ್ತಿರುವರು. ವೀರನ ತಲೆಯ ಮೇಲೆ ಎರಡು ಬದಿಗಳಲ್ಲಿ ಎರಡು ಛತ್ರಿಗಳಿರುವುದು ಗಮನೀಯ. ಹೋರಾಟ ದೃಶ್ಯವಿಲ್ಲ. ಅದರ ಮೇಲ್ಗಡೆ ಭಾಗ ಒಡೆದಿದ್ದು, ಉಳಿದ ಭಾಗದಲ್ಲಿ ಶಿವಲಿಂಗ, ಮಡಿದ ವೀರರಿದ್ದಾರೆ.

ಸಂಡೂರು ತಾಲೂಕಿನ ಬಂಡ್ರಿ ಗ್ರಾಮದ ಆಂಜನೇಯ ದೇವಾಲಯದ ಎದುರುಗಡೆಯ ಕಟ್ಟೆಯ ಮೇಲಿರುವ ವೀರಗಲ್ಲು ಶಿಲ್ಪದಲ್ಲಿ ವೀರನ ಬಲಗೈಯಲ್ಲಿ ಖಡ್ಗವನ್ನು ಎಡಗೈಯಲ್ಲಿ ಬಿಲ್ಲು ಮತ್ತು ಬಾಣಗಳಿವೆ. ತಲೆಯಲ್ಲಿ ಕಿರೀಟ, ಕಿವಿಯಲ್ಲಿ ವೃತ್ತಾಕಾರದ ಓಲೆ, ಭುಜಬಂಧಿ, ತೋಳಬಂಧಿ, ಕೈಗಡಗ, ಕಾಲುಗಡಗವನ್ನು, ಅಲಂಕಾರಿಕ ವಸ್ತ್ರವನ್ನು ಧರಿಸಿದ್ದಾನೆ. ಮೇಲೆ ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ. ಈ ವೀರಗಲ್ಲು ಶಿಲ್ಪವು ೧೬ನೆಯ ಶತಮಾನಕ್ಕೆ ಸೇರಿದ್ದಾಗಿದೆ.

ಸಂಡೂರು ತಾಲೂಕಿನ ಚೋರುನೂರು ಗ್ರಾಮದಲ್ಲಿರುವ ವೀರಗಲ್ಲು ಬೆಣಚು ಶಿಲೆಯಲ್ಲಿ ಕಂಡರಿಸಲ್ಪಟ್ಟಿದೆ. ಇದರಲ್ಲಿ ಇಬ್ಬರು ವೀರರ ಚಿತ್ರಣವಿದೆ. ಒಬ್ಬ ವೀರನ ಎಡಗೈ ಚಾಚಿದ್ದಾನೆ. ಬಲಗೈಯನ್ನು ಸೊಂಟದಲ್ಲಿ ಇರುವ ಕಿರುಗತ್ತಿಯ ಮೇಲೆ ಇಟ್ಟಿದ್ದಾನೆ. ಮತ್ತೊಬ್ಬ ವೀರನು ಎಡಗೈಯಲ್ಲಿ ಬಿಲ್ಲನ್ನು, ಬಲಗೈಯಲ್ಲಿ ಬಾಣ ಪ್ರಯೋಗ ಮಾಡುತ್ತಿರುವವನು. ಈ ವೀರನು ಸೊಂಟದಲ್ಲಿ ಸಹ ಕಿರುಗತ್ತಿಯಿದೆ. ಈ ವೀರರಿಬ್ಬರು ಕಿರೀಟ, ಕರ್ಣಾಭರಣ, ತೋಳಬಂಧಿ, ಕೈಗಡಗ ಧರಿಸಿದ್ದಾರೆ. ಕೊರಳಲ್ಲಿ ಸರಗಳನ್ನು ಧರಿಸಿದ್ದಾರೆ. ಇದು ಸುಮಾರು ೧೬ನೆಯ ಶತಮಾನಕ್ಕೆ ಸೇರಿದ್ದಾಗಿದೆ.

ಸಂಡೂರು ತಾಲೂಕಿನ ತಾಳೂರು ಗ್ರಾಮದ ಹೊರಗೆ ಇರುವ ಈಶ್ವರ ದೇವಾಲಯದ ಆವರಣದ ಬಲಗಡೆಗೆ ಒಂದು ತುಂಡಾದ ವೀರಗಲ್ಲು ಶಿಲ್ಪವಿದೆ. ಇದು ಮೂರು ಹಂತಗಳನ್ನೊಳಗೊಂಡಿದ್ದು, ಕೆಳಗಿನ ಹಂತದಲ್ಲಿ ವೀರನು ಕುದುರೆಯನ್ನು ಏರಿ ಬಿಲ್ಲು ಹಿಡಿದು ಹೋರಾಡುತ್ತಿರುವ ಭಾಗ ಅರ್ಧ ತುಂಡಾಗಿದೆ. ಎರಡನೆಯ ಹಂತದಲ್ಲಿ ಅಪ್ಸರೆಯರು ವೀರನನ್ನು

ಸ್ವರ್ಗಕ್ಕೆ ಕರೆದೊಯ್ಯುತ್ತಿದ್ದಾರೆ. ಮೂರನೆಯ ಹಂತದಲ್ಲಿ ವೀರನು ಶಿವನ ಬಳಿ ಧ್ಯಾನಾಸಕ್ತನಾಗಿ ಕುಳಿತಿದ್ದಾನೆ. ಪಕ್ಕದಲ್ಲಿ ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ.

ಇದೇ ದೇವಾಲಯದ ಆವರಣದ ಎಡಗಡೆಗೆ ಇರುವ ವೀರಗಲ್ಲು ಶಿಲ್ಪ ಮೂರು ಹಂತಗಳನ್ನು ಹೊಂದಿದ್ದು ಕೆಳಗಿನ ಹಂತದಲ್ಲಿ ವೀರರು ಹೋರಾಡುತ್ತಿರುವ ಶಿಲ್ಪವಿದೆ. ಎರಡನೆಯ ಹಂತದಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವಂತೆಯೂ ಮತ್ತು ಕೊನೆಯ ಹಂತದಲ್ಲಿ ವೀರನು ಶಿವನ ಸಾನಿಧ್ಯದಲ್ಲಿ ಧ್ಯಾನಾಸಕ್ತನಾಗಿ ಕುಳಿತಿದ್ದಾನೆ. ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ.

ಈ ತಾಲೂಕಿನ ಹಳೆದರೋಜಿ ಗ್ರಾಮದ ಈರಣ್ಣನ ಕಟ್ಟೆಯಲ್ಲಿಯ ವೀರಗಲ್ಲು ಶಿಲೆಯಲ್ಲಿ ಮೂವರು ವೀರರಿದ್ದಾರೆ. ಇವರು ಮುಡಿ ಕಟ್ಟಿದ್ದಾರೆ. ಕರ್ಣಾಭರಣ, ಕಂಠಾಭರಣ, ಭುಜಕವಚ, ತೋಳಬಂಧಿ, ಕೈಗಡಗ, ಯಜ್ಞೋಪವಿತ ಧರಿಸಿದ್ದಾರೆ. ಸೊಂಟದಲ್ಲಿ ಕಿರುಗತ್ತಿಗಳಿವೆ. ಮಧ್ಯದಲ್ಲಿರುವ ವೀರನು ಬಲಗೈಯಲ್ಲಿ ಖಡ್ಗವನ್ನು, ಎಡಗೈಯಲ್ಲಿ ಭರ್ಚಿಯನ್ನು ಹಿಡಿದಿದ್ದಾನೆ. ಬಲಗಡೆಯ ವೀರನು ಎರಡೂ ಕೈಗಳಿಂದ ಖಡ್ಗವನ್ನು ಹಿಡಿದಿದ್ದಾನೆ. ಎಡಗಡೆಯ ವೀರನು ಕೈಯಲ್ಲಿ ಬೆಂಕಿಯ ಜ್ವಾಲೆ (ಪಂಜು)ಯನ್ನು ಹಿಡಿದಿದ್ದಾನೆ. ಮೇಲೆ ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ.

ಇದೇ ಕಟ್ಟೆಯಲ್ಲಿರುವ ಮತ್ತೊಂದು ವೀರಗಲ್ಲಿನಲ್ಲಿ ವೀರನು ಎರಡು ಕೈಗಳಿಂದ ಈಟಿಯನ್ನು ಹಿಡಿದಿದ್ದಾನೆ. ಈತನು ಕರ್ಣಾಭರಣ, ಕೊರಳಾಭರಣ, ತೋಳಬಂಧಿ, ಕೈಗಡಗ, ಕಾಲುಗಡಗಳನ್ನು ಧರಿಸಿಕೊಂಡಿದ್ದು, ಸಮಭಂಗಿಯಲ್ಲಿ ನಿಂತಿದ್ದಾನೆ. ಮೇಲೆ ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ.

ಇದೇ ಕಟ್ಟೆಯಲ್ಲಿರುವ ಇನ್ನೊಂದು ವೀರಗಲ್ಲು ಶಿಲ್ಪದಲ್ಲಿನ ವೀರರು ಮುಡಿ ಕಟ್ಟಿದ್ದಾರೆ. ಕಿವಿಯಲ್ಲಿ ಓಲೆ, ಕಂಠಾಭರಣ, ಕೈಗಡಗ, ತೋಳಬಂಧಿಗಳನ್ನು ಧರಿಸಿದ್ದಾರೆ. ಬಲಗಡೆಯ ವೀರನು ಕೈಯಲ್ಲಿ ದಂಡವನ್ನು ಹಿಡಿದಿದ್ದಾನೆ. ಇಬ್ಬರು ವೀರರು ಸೊಂಟದಲ್ಲಿ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾರೆ. ಮೇಲೆ ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ.

ಇದೇ ಕಟ್ಟೆಯಲ್ಲಿರುವ ಮತ್ತೊಂದು ವೀರಗಲ್ಲು ಶಿಲ್ಪದಲ್ಲಿ ವೀರನು ಮುಡಿ ಕಟ್ಟಿದ್ದಾನೆ. ಕರ್ಣಾಭರಣ, ಕಂಠಾಭರಣ, ಕೈಗಡಗ ಧರಿಸಿದ್ದಾನೆ. ಬಲಗೈಯಲ್ಲಿ ಬಾಣವನ್ನು ಮತ್ತು ಎಡಗೈಯಲ್ಲಿ ಬಿಲ್ಲನ್ನು ಹಿಡಿದು ನಿಂತಿದ್ದಾನೆ. ಸೊಂಟದಲ್ಲಿ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಅಕ್ಕಪಕ್ಕದಲ್ಲಿ ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ.

ಇದೇ ಕಟ್ಟೆಯಲ್ಲಿರುವ ವೀರಗಲ್ಲಿನ ವೀರನು ಕರ್ಣಾಭರಣ, ಕಂಠಾಭರಣ, ತೋಳಬಂಧಿ, ಕೈಗಡಗ, ಸೊಂಟಪಟ್ಟಿ ಧರಿಸಿದ್ದಾನೆ. ಸೊಂಟಪಟ್ಟಿಯಲ್ಲಿ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಎರಡು ಕೈಗಳಿಂದ ಬಂದೂಕನ್ನೂ ಹಿಡಿದಿದ್ದಾನೆ. ಇಲ್ಲೇ ಮತ್ತೊಂದು ವೀರಗಲ್ಲು ಇದ್ದು, ಇದರಲ್ಲಿನ ವೀರನೂ ಕರ್ಣಾಭರಣ, ಕಂಠಾಭರಣ, ಕೈಗಡಗವನ್ನು ಧರಿಸಿದ್ದು, ಬಲಗೈಯಲ್ಲಿ

ಖಡ್ಗವನ್ನೂ ಎತ್ತಿ ಹಿಡಿದಿದ್ದಾನೆ. ಇದೇ ಸ್ಥಳದ ಮತ್ತೊಂದು ವೀರಗಲ್ಲಿನಲ್ಲಿರುವ ವೀರರು ಮುಡಿಯನ್ನು ಕಟ್ಟಿಕೊಂಡಿದ್ದಾರೆ. ಕರ್ಣಾಭರಣ, ಕಂಠಾಭರಣಗಳನ್ನು ಧರಿಸಿದ್ದಾರೆ. ಇಬ್ಬರು ವೀರರು ಖಡ್ಗವನ್ನು ಹಿಡಿದಿದ್ದಾರೆ. ಇಲ್ಲಿನ ಮತ್ತೊಂದು ವೀರಗಲ್ಲಿನಲ್ಲಿರುವ ವೀರರು ಮುಡಿ ಕಟ್ಟಿದ್ದಾರೆ. ಕರ್ಣಾಭರಣ, ಕಂಠಾಭರಣ, ಕೈಗಡಗ ಧರಿಸಿದ್ದಾರೆ. ಬಲಗಡೆಯ ವೀರನು ದಂಡವನ್ನು ಹಿಡಿದಿದ್ದಾನೆ. ಎಡಗಡೆಯ ವೀರನು ಬಲಗೈಯಲ್ಲಿ ಬಾಣವನ್ನು, ಎಡಗೈಯಲ್ಲಿ ಬಿಲ್ಲನ್ನು ಹಿಡಿದಿದ್ದಾನೆ. ಮತ್ತೊಂದು ವೀರಗಲ್ಲಿನಲ್ಲಿ ವೀರನು ಮುಡಿ ಕಟ್ಟಿಕೊಂಡಿದ್ದಾನೆ. ಕರ್ಣಾಭರಣ, ಕಂಠಾಭರಣ, ತೋಳಬಂಧಿ, ಕೈಗಡಗ ಧರಿಸಿದ್ದಾನೆ. ಎತ್ತಿದ ಬಲಗೈಯಲ್ಲಿ ಕಿರುಗತ್ತಿಯನ್ನು ಹಾಗೂ ಎಡಗೈಯಲ್ಲಿ ಖಡ್ಗವನ್ನು ಹಿಡಿದು ನಿಂತಿದ್ದಾನೆ.

ಅದೇ ಸ್ಥಳದ ಮತ್ತೊಂದು ವೀರಗಲ್ಲಿನಲ್ಲಿ ವೀರನು ಮುಡಿ ಕಟ್ಟಿಕೊಂಡಿದ್ದಾನೆ. ಕರ್ಣಾಭರಣ, ಕಂಠಾಭರಣ, ತೋಳಬಂಧಿ, ಕೈಗಡಗಗಳನ್ನು ಧರಿಸಿದ್ದು, ಬಲಗಡೆಯ ಹೆಗಲ ಮೇಲೆ ದಂಡವನ್ನು ಹೊತ್ತುಕೊಂಡಿದ್ದು, ಎರಡು ಕೈಗಳಿಂದ ಹಿಡಿದಿದ್ದಾನೆ. ಇದೇ ಕಟ್ಟೆಯಲ್ಲಿನ ಇನ್ನೊಂದು ವೀರಗಲ್ಲಿನಲ್ಲಿ ವೀರರು ಕರ್ಣಾಭರಣ, ಕೊರಳಾಭರಣಗಳನ್ನು ಧರಿಸಿದ್ದಾರೆ. ಬಲಗೈಯಲ್ಲಿ ಏನೋ ಹಿಡಿದು ಕೊಂಡಂತೆ ತೋರುತ್ತದೆ. ಎಡಗೈಯನ್ನು ಸೊಂಟದ ಮೇಲಿಟ್ಟುಕೊಂಡಿದ್ದಾನೆ. ಮತ್ತೊಂದು ವೀರಗಲ್ಲಿನಲ್ಲಿ ಈ ವೀರನು ಕರ್ಣಾಭರಣ, ಕೊರಳಾಭರಣ, ತೋಳಬಂಧಿ, ಕೈಗಡಗ ಧರಿಸಿಕೊಂಡಿದ್ದು, ಸೊಂಟದಲ್ಲಿ ಕಿರುಗತ್ತಿಯನ್ನು ಖಡ್ಗವನ್ನು ಸಿಕ್ಕಿಸಿಕೊಂಡಿದ್ದಾನೆ. ಕೈ ಮುಗಿದು ನಿಂತಿದ್ದಾನೆ.

ಇದೇ ಸ್ಥಳದ ಇನ್ನೊಂದು ವೀರಗಲ್ಲಿನ ವೀರನು ಕರ್ಣಾಭರಣ, ಕಂಠಾಭರಣ, ತೋಳಬಂಧಿ, ಕೈಗಡಗಗಳನ್ನು ಧರಿಸಿದ್ದಾನೆ. ಎತ್ತಿದ ಬಲಗೈಯಲ್ಲಿ ಕಿರುಗತ್ತಿಯನ್ನು ಹಾಗೂ ಎಡಗೈಯಲ್ಲಿ ಖಡ್ಗವನ್ನು ಹಿಡಿದು ನಿಂತಿದ್ದಾನೆ. ಈತನು ಮುಡಿ ಕಟ್ಟಿಕೊಂಡಿದ್ದಾನೆ. ಅದರಲ್ಲಿ ಪಕ್ಕದ ವೀರಗಲ್ಲಿನಲ್ಲಿರುವ ವೀರರು ಮುಡಿ ಕಟ್ಟಿದ್ದಾರೆ. ಕರ್ಣಾಭರಣ, ಕಂಠಾಭರಣ, ಭುಜಕವಚ, ತೋಳಬಂಧಿ, ಕೈಗಡಗಗಳನ್ನು ಧರಿಸಿದ್ದಾರೆ. ಬಲಗಡೆಯ ವೀರನು ಬಲಗೈಯಲ್ಲಿ ಖಡ್ಗವನ್ನು ಎಡಗೈಯಲ್ಲಿ ಬಿಲ್ಲನ್ನು ಹಿಡಿದಿದ್ದಾನೆ. ಎಡಗಡೆಯ ವೀರನು ಸೊಂಟದಲ್ಲಿ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಬಲಗೈಯನ್ನು ಹೊಟ್ಟೆಯ ಮೇಲಿಟ್ಟುಕೊಂಡಿದ್ದು ಎಡಗೈಯನ್ನು ಎದೆಯ ಮೇಲಿಟ್ಟುಕೊಂಡಿದ್ದಾನೆ. ಇವರು ಅಲಂಕಾರಕವಾಗಿ ಮುಡಿಯನ್ನು ಕಟ್ಟಿಕೊಂಡಿದ್ದಾರೆ.

ಇದೇ ಸ್ಥಳದ ಇನ್ನೊಂದು ವೀರಗಲ್ಲಿನಲ್ಲಿ ವೀರನು ಮುಡಿಯನ್ನು ಕಟ್ಟಿಕೊಂಡಿದ್ದು, ಕಿವಿಯಲ್ಲಿ ಓಲೆ, ಕಂಠಾಭರಣ, ತೋಲಬಂಧಿ, ಕೈಗಡಗಗಳನ್ನು ಧರಿಸಿಕೊಂಡಿದ್ದಾನೆ. ಸೊಂಟದಲ್ಲಿ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಬಲಗೈಯನ್ನು ಸೊಂಟದ ಮೇಲಿಟ್ಟುಕೊಂಡಿದ್ದು ಅದೇ ಕೈಯಲ್ಲಿ ಬಾಣವನ್ನು ಹಿಡಿದುಕೊಂಡಿದ್ದಾನೆ. ಅಕ್ಕಪಕ್ಕದಲ್ಲಿ ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ.

ಇನ್ನೊಂದು ವೀರಗಲ್ಲಿನಲ್ಲಿ ಇಬ್ಬರು ವೀರರಿದ್ದು ಅವರು ಮುಡಿ ಕಟ್ಟಿದ್ದಾರೆ. ಕರ್ಣಾಭರಣ, ಕೊರಳಾಭರಣ, ತೋಳಬಂಧಿ, ಕೈಗಡಗ ಧರಿಸಿದ್ದಾರೆ. ಬಲಗಡೆಯ ವೀರನು ಕೈಯಲ್ಲಿ ದಂಡವನ್ನು

ಹಿಡಿದು ನಿಂತಿದ್ದಾನೆ. ಎಡಗಡೆಯ ವೀರನು ಬಲಗೈಯಲ್ಲಿ ಖಡ್ಗವನ್ನು, ಎಡಗೈಯಲ್ಲಿ ಬಿಲ್ಲನ್ನು ಹಿಡಿದು ನಿಂತಿರುವವನು.

ಇದೇ ಕಟ್ಟೆಯಲ್ಲಿಯ ಮತ್ತೊಂದು ವೀರಗಲ್ಲಿನಲ್ಲಿ ವೀರನು ಕರ್ಣಾಭರಣ, ಕೊರಳಾಭರಣ, ಕೈಗಡಗ, ತೋಳಬಂಧಿ, ಕಾಲುಗಡಗ ಮತ್ತು ಅಲಂಕಾರಿಕವಾಗಿ ಧೋತ್ರ ಧರಿಸಿದ್ದಾನೆ. ಸೊಂಟದಲ್ಲಿ ಕಿರುಗತ್ತಿಯನ್ನು ಇಟ್ಟುಕೊಂಡಿದ್ದು, ಎಡಗೈಯನ್ನು ಎದೆಯ ಮೇಲಿಟ್ಟುಕೊಂಡಿರುವವನು. ಬಲಗೈಯಲ್ಲಿ ಖಡ್ಗವನ್ನು ಹಿಡಿದಿದ್ದಾನೆ.

ಮತ್ತೊಂದು ವೀರಗಲ್ಲಿನಲ್ಲಿ ಒಂದೇ ಶಿಲೆಯಲ್ಲಿ ಮೂವರು ವೀರರನ್ನು ಕಂಡರಿಸಲಾಗಿದೆ. ಈ ಮೂವರು ವೀರರು ಕರ್ಣಾಭರಣ, ಕಂಠಾಭರಣ, ತೋಳಬಂಧಿ, ಕೈಗಡಗ, ಕಾಲುಗಡಗ, ಧರಿಸಿದ್ದು, ಸೊಂಟಪಟ್ಟಿಯಲ್ಲಿ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿರುವರು; ತಲೆಯಲ್ಲಿ ಮುಡಿಯನ್ನು ಕಟ್ಟಿಕೊಂಡಿದ್ದಾರೆ. ಎತ್ತಿದ ಬಲಗೈಯಲ್ಲಿ ಖಡ್ಗವನ್ನು ಹಿಡಿದಿರುವರು.

ಅದೇ ಸ್ಥಳದ ಮತ್ತೊಂದು ವೀರಗಲ್ಲಿನಲ್ಲಿ ಒಂದೇ ಶಿಲೆಯಲ್ಲಿ ಮೂವರು ವೀರರು ಇದ್ದಾರೆ. ಮೊದಲನೆಯವನು ಈಟಿ ಮಾದರಿಯ ಉದ್ದನೆಯ ಆಯುಧವನ್ನು ಹಾಗೂ ಮಧ್ಯದವನು ಕಿರುಗತ್ತಿಯನ್ನು ಮತ್ತು ಕೊನೆಯವನು ದಂಡವನ್ನು ಹಿಡಿದುಕೊಂಡಿದ್ದಾನೆ. ಮೂವರು ಮುಡಿಯನ್ನು ಕಟ್ಟಿಕೊಂಡಿದ್ದು ವಸ್ತ್ರಾಭರಣಗಳನ್ನು ಧರಿಸಿಕೊಂಡಿದ್ದಾರೆ.

ಕಮಲಾಪುರದ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿ ಕ್ರಿ.ಶ. ೧೫ನೆಯ ಶತಮಾನದ ವೀರಗಲ್ಲಿನಲ್ಲಿ ವೀರ ಬಿಲ್ಲುಗಾರನಾಗಿದ್ದು ಸ್ಥಾನಿಕ ಭಂಗಿಯಲ್ಲಿದ್ದಾನೆ. ವೀರನು ಎಡಗಡೆ ಮುಡಿ ಕಟ್ಟಿದ್ದಾನೆ. ಎಡಗೈಯಲ್ಲಿ ಬಿಲ್ಲು, ಬಲಗೈಯಲ್ಲಿ ಬಾಣ ಹಿಡಿದು ಎಡಗಾಲು ಮಡಚಿ ಬಲಗಾಲನ್ನು ಮುಂದಕ್ಕೆ ಮಡಚಿಕೊಂಡಿದ್ದಾನೆ. ಕೊರಳಲ್ಲಿ ಸರ, ಪದಕಸರ ಧರಿಸಿರುವುದು ಈ ಶಿಲ್ಪದ ಲಕ್ಷಣಗಳಾಗಿವೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತು ಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೫ನೇ ಶತಮಾನದ ವೀರಗಲ್ಲಿನ ಕೆಳಭಾಗದ ಪಟ್ಟಿಕೆಯಲ್ಲಿ ಕುದುರೆಯ ಮೇಲೆ ಆಸೀನನಾದ ವೀರ ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಕುದುರೆಯ ಲಗಾಮು ಹಿಡಿದಿದ್ದಾನೆ. ವೀರನ ಹಿಂದೆ ಲಾಂಛನ ಧ್ವಜ ಹಿಡಿದು ಬರುತ್ತಿರುವ ಸೈನಿಕರ ಚಿತ್ರಣವಿದೆ. ಎರಡನೇ ಹಂತದಲ್ಲಿ ಅಪ್ಸರೆಯರು ಬಲಗೈಯನ್ನು ಎತ್ತಿ ಮಧ್ಯೆ ವೀರನನ್ನು ಹಿಡಿದು ಸ್ವರ್ಗಕ್ಕೆ ಕರೆದುಕೊಂಡು ಹೋಗುತ್ತಿರುವಂತೆ ಶಿಲ್ಪಿ ಮನಮುಟ್ಟುವಂತೆ ಚಿತ್ರಿಸಿದ್ದಾನೆ.

ಕನ್ನಡ ವಿಶ್ವವಿದ್ಯಾಲಯದ ವಸ್ತು ಸಂಗ್ರಹಾಲಯದ ಹೊರ ಆವರಣದ ಹಿಂಬದಿಯಲ್ಲಿರುವ ಕ್ರಿ.ಶ. ೧೫ನೆಯ ಶತಮಾನದ ವೀರಗಲ್ಲು ಶಿಲ್ಪ ವೀರನ ವೀರತ್ವದ ಬಗ್ಗೆ ಹಾಗೂ ಅವನ ಹೋರಾಟದ ದೃಶ್ಯವನ್ನು ಬಿಂಬಿಸುವಂತಿದೆ. ವೀರನು ಮುಡಿಯನ್ನು ಕಟ್ಟಿದ್ದಾನೆ. ಕಿವಿಯಲ್ಲಿ

ವರ್ತುಲಾಕಾರದ ಓಲೆ, ಕೊರಳಲ್ಲಿ ಸರ, ಕೈಗಳಿಗೆ ತೋಳುಬಂಧಿ, ಕಡಗ ಧರಿಸಿದ್ದು, ವೀರಗಾಸೆಯನ್ನು ಧರಿಸಿದ್ದು ಸೊಂಟದ ಬಲಕ್ಕೆ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಕಾಲುಗಳಲ್ಲಿ ಕಡಗ ಧರಿಸಿ, ಬಲಗೈಯಲ್ಲಿ ಬಾಕು ಹಿಡಿದು ಶತ್ರುಗಳ ಗುರಾಣಿಗೆ ತಿವಿಯುತ್ತಿರುವ ದೃಶ್ಯ ಈ ಶಿಲ್ಪದ ಲಕ್ಷಣಗಳಾಗಿವೆ.

ಕಮಲಾಪುರ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯ ಕ್ರಿ.ಶ. ೧೫ನೆಯ ಶತಮಾನದ ವೀರಗಲ್ಲು ಶಿಲ್ಪದಲ್ಲಿ ವೀರ ಕುದುರೆಯ ಮೇಲೆ ವೈರಿ ಪಡೆಯ ರಾವುತನೊಂದಿಗೆ ಯುದ್ಧದಲ್ಲಿ ನಿರತನಾಗಿದ್ದಾನೆ. ಅನೇಕ ಸೈನಿಕರು ರುಮಾಲು ಧರಿಸಿದ್ದು, ಕಿವಿಯಲ್ಲಿ ಲೋಲಕ, ಕೈಗೆ ತೋಳುಬಂಧಿ, ಕಡಗ ಧರಿಸಿದ್ದಾರೆ. ಸೊಂಟದ ಬಲಕ್ಕೆ ಕಿರುಗತ್ತಿ ಇದೆ. ಬಲಗೈಯಲ್ಲಿ ಕತ್ತಿಯನ್ನು ಹಿಡಿದು ಎಡಗೈಯಲ್ಲಿ ಫಲ ಹಿಡಿದಿದ್ದಾರೆ. ಕಾಲ್ಗಡಗ ಧರಿಸಿದ್ದು ಎರಡು ಪಾದಗಳ ಮಧ್ಯ ಶತ್ರುವನ್ನು ಸದೆ ಬಡಿಯುತ್ತಿರುವುದನ್ನು ಈ ಶಿಲ್ಪದಲ್ಲಿ ಚಿತ್ರಿಸಲಾಗಿದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದ ಕ್ರಿ.ಶ. ೧೫ನೆಯ ಶತಮಾನದ ವೀರಗಲ್ಲಿನ ಕೆಳಭಾಗದ ಪಟ್ಟಿಕೆಯಲ್ಲಿ ವೀರರು ಗುರಾಣಿ, ಬಿಲ್ಲು, ಬಾಣಗಳಿಂದ ಹೋರಾಡುತ್ತಿರುವುದನ್ನು ಕಾಣಬಹುದು. ಅಪ್ಸರೆಯರು ವೀರನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಿರುವುದು ಮತ್ತು ಎರಡನೇ ಪಟ್ಟಿಕೆ ಮತ್ತು ಮೂರನೇ ಪಟ್ಟಿಕೆಯಲ್ಲಿ ವೀರ ಶಿವನ ಸಾನಿಧ್ಯವನ್ನು ಪಡೆದುಕೊಂಡಿರುವುದು ಈ ಶಿಲ್ಪದ ವೈಶಿಷ್ಟ್ಯತೆಯಾಗಿದೆ.

ಕಮಲಾಪುರದ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೫ನೇ ಶತಮಾನದ ವೀರಗಲ್ಲು ಶಿಲ್ಪದಲ್ಲಿ ವೀರ ಅಶ್ವಾರೋಹಿಯಾಗಿದ್ದಾನೆ. ಕಿರೀಟಧಾರಿ ವರ್ತುಲಾಕಾರದ ಓಲೆ, ಬಲಗೈಯಲ್ಲಿ ಕತ್ತಿ ಹಿಡಿದು, ಎಡಗೈಯಿಂದ ಕುದುರೆಯ ಲಗಾಮು ಹಿಡಿದಿದ್ದಾನೆ. ವೀರನ ಹಿಂದೆ ರಾಣಿಯೂ ಆಸೀನಳಾಗಿದ್ದಾಳೆ. ಬಲಕ್ಕೆ ಈ ರಾಜನ ಶತ್ರುವಿನ ಆನೆ ಸೊಂಡಿಲೆತ್ತಿಕೊಂಡು ಓಡುವ ಚಿತ್ರಣವಿದೆ. ರಾಜ (ವೀರ) ತನ್ನ ಬಲಗೈಯಲ್ಲಿರುವ ಆಯುಧವಾದ ಕತ್ತಿಯಿಂದ ಆನೆಗೆ ತಿವಿಯುತ್ತಿರುವುದು; ಮತ್ತೊಂದು ಕೈಯಿಂದ ಆನೆಯ ಎಡಕೋರೆ ಹಲ್ಲನ್ನು ಹಿಡಿದುಕೊಂಡಿರುವುದು; ಇದು ವೀರನ ಧೈರ್ಯ, ವೀರತ್ವವನ್ನು ಎತ್ತಿ ತೋರಿಸುತ್ತದೆ. ರಾಣಿ ಸರ್ವಾಲಂಕೃತಳಾಗಿ ಅಂಜಲಿ ಮುದ್ರೆಯಲ್ಲಿದ್ದಾಳೆ. ವೀರನ ಬಲಗಡೆ ಸೂರ್ಯ, ಎಡಗಡೆ ಚಂದ್ರ ಮಧ್ಯೆ, ಶಿವಲಿಂಗದ ಉಬ್ಬು ಚಿತ್ರವಿದೆ. ಈ ಸಂಕೇತಗಳನ್ನು ಗಮನಿಸಿದಾಗ ಈ ವೀರಶಿಲ್ಪ ಶೈವಧರ್ಮಕ್ಕೆ ಸಂಬಂಧಿಸಿದೆಂದು ತಿಳಿದುಬರುತ್ತದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿರುವ ಕ್ರಿ.ಶ. ೧೫ನೆಯ ಶತಮಾನದ ವೀರಗಲ್ಲು ಶಿಲ್ಪದಲ್ಲಿ ವೀರ ಮುಡಿ ಕಟ್ಟಿದ್ದಾನೆ. ಕೊರಳಲ್ಲಿ ಮಣಿಸರ, ವೈಜಯಂತಿ ಹಾರ ಧರಿಸಿದ್ದಾನೆ. ಕೈಗಳಿಗೆ ತೋಳುಬಂಧಿ, ಕಡಗ ಧರಿಸಿದ್ದಾನೆ. ಬಲಗೈಯಲ್ಲಿ ಬಾಣ,

ಎಡಗೈಯಲ್ಲಿ ಬಿಲ್ಲು ಹಿಡಿದು ವೀರಾವೇಶದಲ್ಲಿ ಸ್ಥಾನಿಕ ಭಂಗಿಯಲ್ಲಿ ನಿಂತಿದ್ದಾನೆ. ಬಲಸೊಂಟಕ್ಕೆ ಕಿರುಕತ್ತಿ ಸಿಕ್ಕಿಸಿ ವೀರಗಾಸೆ ತೊಟ್ಟು ಪಾದಗಳಲ್ಲಿ ಕಡಗ ಧರಿಸಿದ್ದಾನೆ.

ಗುಲಬರ್ಗಾ ತಾಲೂಕಿನ ಸಣ್ಣೂರ ಗ್ರಾಮದ ರಾಮಲಿಂಗೇಶ್ವರ ದೇವಾಲಯ ಬಳಿ ೧೬ನೆಯ ಶತಮಾನ ಎರಡು ವೀರಗಲ್ಲುಗಳು ದೊರೆತಿವೆ. **ವೀರಗಲ್ಲು ೧.** ಈ ವೀರಗಲ್ಲು ಮೂರು ಪಟ್ಟಿಕೆಗಳಿಂದ ಕೂಡಿದೆ. ಕೆಳಪಟ್ಟಿಕೆಯಲ್ಲಿ ವೀರಾವೇಶದಿಂದ ಯುದ್ಧದಲ್ಲಿ ಹೋರಾಡುತ್ತಿರುವವರ ಬಗ್ಗೆ ಮಾಹಿತಿ ನೀಡುತ್ತದೆ. ಒಬ್ಬ ವೀರನು ಯುದ್ಧಭೂಮಿಯಲ್ಲಿ ನಿಂತು ಕುದುರೆಯ ಮೇಲೆ ಕುಳಿತಿದ್ದವನ ಕಡೆ ತನ್ನ ಬಾಣಗಳನ್ನು ಬಿಡುತ್ತಿರುವ ದೃಶ್ಯ ಸ್ಪಷ್ಟವಾಗಿ ಕಂಡುಬರುತ್ತದೆ. ಎರಡು ಕುದುರೆಗಳು ಮತ್ತು ಹಲವಾರು ಸೈನಿಕರು ಯುದ್ಧಮಾಡುತ್ತಲೇ ಮರಣ ಹೊಂದಿದ್ದರ ಬಗ್ಗೆ ವಿವರಣೆ ನೀಡುತ್ತದೆ. ಇಬ್ಬರು ವೀರರು ಕುದುರೆಯ ಮೇಲೆ ಕುಳಿತು ಪರಸ್ಪರ ಬಾಣಗಳನ್ನು ಬಿಡುತ್ತಿರುವ ದೃಶ್ಯವಿದ್ದು, ಇದರಲ್ಲಿ ಒಬ್ಬನಿಗೆ ಬಾಣ ತಗುಲಿ ಕೆಳಗೆ ಬೀಳುತ್ತಿರುವ ದೃಶ್ಯವನ್ನು ನೋಡಬಹುದು. ಎರಡನೇ ಪಟ್ಟಿಕೆಯಲ್ಲಿ ಅಪ್ಸರೆಯರು ಸತ್ತ ವೀರರನ್ನು ಅವನ ಬಲಕ್ಕೆ ಮತ್ತು ಎಡಕ್ಕೆ ಒಬ್ಬೊಬ್ಬ ಅಪ್ಸರೆಯರು ಅವರ ಕೈಗಳನ್ನು ಹಿಡಿದು ಸ್ವರ್ಗಕ್ಕೆ ಹೊತ್ತೊಯ್ಯುತ್ತಿರುವ ದೃಶ್ಯವಿದೆ. ಜೊತೆಗೆ ಅವರಿಗೆ ಗಾಳಿ ಹಾಕುತ್ತಿರುವ ಮತ್ತು ಮತ್ತೊಬ್ಬ ಅಪ್ಸರೆ ಅವರನ್ನು ಕೈಮುಗಿದು ನಮಸ್ಕರಿಸುತ್ತಿರುವ ಚಿತ್ರ ಇದೆ. ಮೂರನೆಯ ಪಟ್ಟಿಕೆಯಲ್ಲಿ ವೀರನು ಪದ್ಮಾಸನ ಭಂಗಿಯಲ್ಲಿ ತನ್ನ ಕೈ ಜೋಡಿಸಿ ಕೈಮುಗಿಯುತ್ತಿದ್ದಾನೆ. ಪಕ್ಕದಲ್ಲೇ ಶಿವಲಿಂಗವನ್ನು ಮತ್ತೊಬ್ಬರು ಎಡಭಾಗಕ್ಕೆ ನಿಂತು ಪೂಜೆಯನ್ನು ಸಲ್ಲಿಸುತ್ತಿರುವ ಚಿತ್ರವನ್ನು ಕಾಣುತ್ತೇವೆ.

ಅದೇ ಗ್ರಾಮದ ರಾಮಲಿಂಗೇಶ್ವರ ದೇವಾಲಯದ ಬಳಿ ಇರುವ ೧೬ನೆಯ ಶತಮಾನದ ಎರಡನೆಯ ವೀರಗಲ್ಲು ಎರಡು ಪಟ್ಟಿಕೆಗಳಿಂದ ಕೂಡಿದೆ. ಮೊದಲನೆಯ ಪಟ್ಟಿಕೆಯಲ್ಲಿ ವೀರನು ತನ್ನ ಬಲಗೈಯಲ್ಲಿ ಖಡ್ಗವನ್ನು ಹಿಡಿದು ಕೈ ಮೇಲಕ್ಕೆತ್ತಿರುವ ದೃಶ್ಯವಿದೆ. ಎಡಗೈಯಲ್ಲಿ ಗುರಾಣಿಯನ್ನು ಹೊಂದಿದ್ದಾನೆ. ವೀರನು ಎದುರಾಳಿಯ ಮೇಲೆ ಯುದ್ಧಕ್ಕೆ ನಿಂತ ಭಂಗಿಯಲ್ಲಿದ್ದಾನೆ. ಏಕೆಂದರೆ ತನ್ನ ಎಡಗಾಲನ್ನು ಮಡಚಿ ಬಲಗಾಲನ್ನು ಹಿಂದಿನಿಂದ ಎತ್ತಿ ಮುಂದೆ ಇಡುವ ಭಂಗಿಯಲ್ಲಿದ್ದಾನೆ. ತನ್ನ ದೇಹವನ್ನು ಮುಂದೆ ಹೋಗುವ ರೀತಿಯಲ್ಲಿ ನಿಂತು ವೀರನು ಸ್ವಲ್ಪಮಟ್ಟಿಗೆ ಬಗ್ಗಿದ್ದಾನೆ. ಇನ್ನು ಎರಡನೆಯ ಪಟ್ಟಿಕೆಯಲ್ಲಿ ಒಂದು ಶಿವಲಿಂಗವಿದ್ದು, ಅದರ ಎದುರಿಗೆ ವೀರನು ಕೈಮುಗಿದು ಕುಳಿತಿರುವ ದೃಶ್ಯವನ್ನು ಕಾಣಬಹುದು.

ಗುಲಬರ್ಗಾ ತಾಲೂಕಿನ ಸಣ್ಣೂರು ಗ್ರಾಮದ ಹನುಮಂತ ದೇವಾಲಯ ಬಳಿ ೧೬ನೆಯ ಶತಮಾನದ ಎರಡು ವೀರಗಲ್ಲುಗಳು ಕಂಡುಬಂದಿವೆ. **ವೀರಗಲ್ಲು ೧.** ಈ ವೀರಗಲ್ಲು ಕೂಡ ಮೂರು ಪಟ್ಟಿಕೆಗಳಿಂದ ಕೂಡಿದೆ. ಕೆಳಪಟ್ಟಿಕೆಯಲ್ಲಿ ವೀರರು ಶತ್ರುಗಳೊಂದಿಗೆ ಕಾದಾಡುತ್ತಿರುವ ದೃಶ್ಯವಿದೆ. ಈ ಪಟ್ಟಿಕೆಯಲ್ಲಿಯ ಮೂರು ವೀರರಲ್ಲಿ ಮಧ್ಯದಲ್ಲಿದ್ದ ಒಬ್ಬನು ಈಟಿಯಿಂದ ತನ್ನ ಬಲಭಾಗದ ಶತ್ರುವನ್ನು ಚುಚ್ಚುತ್ತಿದ್ದಾನೆ. ಎಡಗಡೆ ಮತ್ತೊಬ್ಬ ವೀರನು ತನ್ನ ಕೈಯಲ್ಲಿದ್ದ

ಖಡ್ಗದಿಂದ ಎದುರಾಳಿಗೆ ಹೊಡೆಯಲೆಂದು ಕೈ ಮೇಲಕ್ಕೆತ್ತಿದ್ದಾನೆ. ಎರಡನೆಯ ಪಟ್ಟಿಕೆಯಲ್ಲಿ ಕೆಳಪಟ್ಟಿಯಲ್ಲಿ ನಡೆದ ಕಾಳಗದಲ್ಲಿ ಮರಣ ಹೊಂದಿದ ಇಬ್ಬರು ವೀರರನ್ನು ಸ್ವರ್ಗಕ್ಕೆ ಅಪ್ಸರೆಯರು ಕೊಂಡೊಯ್ಯುತ್ತಿರುವ ಚಿತ್ರವಿದೆ. ಇನ್ನು ಕೊನೆಯ ಮತ್ತು ಮೂರನೇ ಪಟ್ಟಿಕೆಯಲ್ಲಿ ಇಬ್ಬರು ವೀರರು ಪದ್ಮಾಸನ ಭಂಗಿಯಲ್ಲಿ ಕುಳಿತಿರುವ ಚಿತ್ರವಿದೆ. ಎರಡು ಕಡೆ ಅಪ್ಸರೆಯರು ನಿಂತು ಅವರಿಗೆ ಗಾಳಿ ಹಾಕುತ್ತಿರುವ ದೃಶ್ಯ ಕಂಡುಬರುತ್ತದೆ.

ಅದೇ ಗ್ರಾಮದ ಹನುಮಂತ ದೇವಾಲಯ ಬಳಿ ಇರುವ ೧೬ನೆಯ ಶತಮಾನದ ಎರಡನೆಯ ವೀರಗಲ್ಲು ನಾಲ್ಕು ಪಟ್ಟಿಕೆಗಳಿಂದ ಕೂಡಿದೆ. ಕೆಳಪಟ್ಟಿಕೆಯಲ್ಲಿ ಕುದುರೆಗಳ ಚಿತ್ರ ಕಂಡುಬರುತ್ತದೆ. ಮೂರನೆಯ ಪಟ್ಟಿಕೆಯಲ್ಲಿ ವೀರನು ಶತ್ರುಗಳೊಂದಿಗೆ ಕಾದಾಡುತ್ತಿರುವ ದೃಶ್ಯವಿದೆ. ಮಧ್ಯದಲ್ಲಿ ವೀರನು ಈಟಿಯಿಂದ ತನ್ನ ಬಲಕ್ಕೆ ಇದ್ದ ವೈರಿಯನ್ನು ಇರಿದಿದ್ದಾನೆ. ಎಡಕ್ಕೆ ಇದ್ದ ಶತ್ರು ಮಧ್ಯಧಲ್ಲಿದ್ದ ವೀರನ ಮೇಲೆ ಆತನ ತನ್ನ ಕೈಯಲ್ಲಿದ್ದ ಈಟಿಯನ್ನು ಎತ್ತಿ ಇರಿಯುತ್ತಿರುವ ದೃಶ್ಯವನ್ನು ಕಾಣಬಹುದು. ಎರಡನೇ ಪಟ್ಟಿಕೆಯಲ್ಲಿ ಅಪ್ಸರೆಯರು ಯುದ್ಧದಲ್ಲಿ ಮಡಿದ ವೀರರನ್ನು ಎತ್ತಿಕೊಂಡು ಸ್ವರ್ಗಕ್ಕೆ ಒಯ್ಯುತ್ತಿರುವ ದೃಶ್ಯವನ್ನು ನೋಡಬಹುದು. ಇನ್ನೂ ಕೊನೆಯ ಪಟ್ಟಿಕೆಯಲ್ಲಿ ವೀರರಿಬ್ಬರು ಪದ್ಮಾಸನ ಭಂಗಿಯಲ್ಲಿ ಕುಳಿತಿದ್ದಾರೆ. ಅಂದರೆ ಅವರು ಸ್ವರ್ಗಸ್ಥರಾದ ಸನ್ನಿವೇಶವನ್ನು ತಿಳಿಸುತ್ತದೆ. ಈ ವೀರರ ಎಡ ಮತ್ತು ಬಲಕ್ಕೆ ಅಪ್ಸರೆಯರು ಗಾಳಿಯನ್ನು ಹಾಕುತ್ತಿರುವ ದೃಶ್ಯವನ್ನು ಕಾಣಬಹುದಾಗಿದೆ.

ಗುಲಬರ್ಗಾ ತಾಲೂಕಿನ ಸಣ್ಣೂರು ಮಲ್ಲಿಕಾರ್ಜುನ ದೇವಾಲಯ ಪಕ್ಕದಲ್ಲಿರುವ ೧೬ನೆಯ ಶತಮಾನದ ವೀರಗಲ್ಲಿನ ಕೆಳಭಾಗವು ನೆಲದಲ್ಲಿ ಹೂತು ಹೋಗಿದೆ. ಮೇಲ್ಭಾಗದಲ್ಲಿ ಇಬ್ಬರು ವೀರರ ಚಿತ್ರವಿದೆ. ಇಲ್ಲಿ ಪರಸ್ಪರ ಸಂಭಾಷಣೆಯಲ್ಲಿದ್ದಂತಿದೆ. ಒಬ್ಬ ವೀರನು ಕೊರಳಿನಲ್ಲಿ ಆಭರಣಗಳನ್ನು ಧರಿಸಿರುವಂತೆ ಈ ದೃಶ್ಯದಲ್ಲಿದೆ.

ಗುಲಬರ್ಗಾ ತಾಲೂಕಿನ ಶ್ರೀನಿವಾಸ ಸರಡಗಿ ಗ್ರಾಮ ಗಾಳಿಮರಗೆಮ್ಮನ ಗುಡಿಯ ಬಳಿ ಇರುವ ೧೬ನೇ ಶತಮಾನ ವೀರಗಲ್ಲು ಎರಡು ಪಟ್ಟಿಕೆಗಳಿಂದ ಕೂಡಿದೆ. ಮೊದಲ ಪಟ್ಟಿಕೆಯಲ್ಲಿ ವೀರನು ವೈರಿಯೊಂದಿಗೆ ಹೋರಾಡುತ್ತಿರುವ ದೃಶ್ಯವಿದೆ. ವೀರನು ಬಲಗೈಯಲ್ಲಿ ಖಡ್ಗವನ್ನು ಹಿಡಿದು ಕೈ ಮೇಲಕ್ಕೆತ್ತಿದ್ದಾನೆ. ವೀರ ಎದುರಾಳಿಯನ್ನು ಖಡ್ಗದಿಂದ ಇರಿಯುವ ಸನ್ನಿವೇಶವಿದೆ. ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿರುವಂತಿದೆ. ವೀರನು ತನ್ನ ಖಡ್ಗ ಹಿಡಿದ ಕೈಯಲ್ಲಿ ಕೈಬಂದಿಯನ್ನು ಧರಿಸುವ ಚಿತ್ರ ಕಂಡುಬರುತ್ತದೆ. ಎರಡನೆ ಪಟ್ಟಿಕೆಯಲ್ಲಿ ಕುದುರೆಗಳ ಚಿತ್ರವಿದೆ.

ಅದೇ ಗ್ರಾಮದ ಜೈನ ಬಸದಿ ಹತ್ತಿರವಿರುವ ೧೬ನೆಯ ಶತಮಾನದ ವೀರಗಲ್ಲು. ಈ ವೀರಗಲ್ಲು ಒಂದೇ ಪಟ್ಟಿಕೆಯಿಂದ ಕೂಡಿದ ವೀರಗಲ್ಲು ಆಗಿದೆ. ವೀರನು ತನ್ನ ಬಲಗೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ವೈರಿಯನ್ನು ಇರಿಯುತ್ತಿರುವಂತಿದೆ. ಎದುರಾಳಿ ವೀರನು ತನ್ನ ಈಟಿಯಿಂದ ಮೊದಲ ವೀರನಿಗೆ ಇರಿಯುತ್ತಿರುವ ದೃಶ್ಯವಿದೆ. ಮೊದಲನೆಯ ವೀರನ ಕೊರಳಲ್ಲಿ ಆಭರಣಗಳಿವೆ.

ಅದೇ ಗ್ರಾಮದ ದಂಡೋತ್ತಿ ಮಠದ ಪಕ್ಕದಲ್ಲಿರುವ ೧೬ನೆಯ ಶತಮಾನದ ವೀರಗಲ್ಲಲ್ಲಿ ಮೂರು ಪಟ್ಟಿಕೆಗಳಿದ್ದು, ಇದರ ಕೆಳಗಿನ ಪಟ್ಟಿಕೆಯಲ್ಲಿ ಎತ್ತುಗಳ ಚಿತ್ರವಿದೆ. ಎರಡನೆಯ ಪಟ್ಟಿಕೆಯಲ್ಲಿ ವೀರ ತನ್ನ ಎಡಗೈಯಲ್ಲಿ ಭರ್ಚಿಯನ್ನು ಹಿಡಿದು ತನ್ನ ಎಡಕ್ಕೆ ನಿಂತವನ ತಲೆಗೆ ಚುಚ್ಚುತ್ತಿರುವ ದೃಶ್ಯವಿದೆ. ವೀರನ ಬಲಭಾಗದಲ್ಲಿ ಮತ್ತೊಬ್ಬ ವೀರನ ಕೈಯಲ್ಲಿ ಖಡ್ಗವಿರುವುದನ್ನು ಕಾಣುತ್ತೇವೆ. ಇದರಲ್ಲಿ ಒಂದು ವೈಶಿಷ್ಟ್ಯವಿದೆ. ಅದೇನೆಂದರೆ ವೀರರಿಬ್ಬರು ತಮ್ಮ ಜಡೆಯನ್ನು ತಲೆ ಮೇಲೆ ಕಟ್ಟಿದ್ದಾರೆ. ಮೂರನೆಯ ಪಟ್ಟಿಕೆಯಲ್ಲಿ ವೀರನು ಮಧ್ಯದಲ್ಲಿ ಕುಳಿತಿದ್ದಾನೆ. ಅಪ್ಸರೆಯರು ಅವನ ಬಲಕ್ಕೆ ಮತ್ತು ಎಡಕ್ಕೆ ನಿಂತು ಅವನಿಗೆ ಗಾಳಿಯನ್ನು ಬೀಸುತ್ತಿದ್ದಾರೆ.

ಅದೇ ಗ್ರಾಮದ ಮಲ್ಲಯ್ಯನ ಗುಡಿ ಬಳಿ ಇರುವ ೧೬ನೆಯ ಶತಮಾನದ ವೀರಗಲ್ಲು ಮೂರು ಪಟ್ಟಿಕೆಗಳಿಂದ ಕೂಡಿದೆ. ಕೆಳಪಟ್ಟಿಕೆ ಅಥವಾ ಮೊದಲ ಪಟ್ಟಿಕೆಯಲ್ಲಿ ಹೂವಿನ ಎಸಳುಗಳ ಚಿತ್ರವಿಧೆ. ಎರಡನೆಯ ಪಟ್ಟಿಕೆಯಲ್ಲಿ ವೀರನು ಕುದುರೆ ಮೇಲೆ ಕುಳಿತು ತನ್ನ ಹೆಗಲ ಮೇಲೆ ಭರ್ಚಿಯನ್ನು ಇಟ್ಟುಕೊಂಡ ಚಿತ್ರವಿದೆ. ಆ ಭರ್ಚಿಯನ್ನು ಕೈಯಲ್ಲಿ ಅರ್ಧ ಹಿಡಿದು ಅರ್ಧ ಹೆಗಲ ಮೇಲೆ ಇಟ್ಟುಕೊಂಡು ವೈರಿಗೆ ಅದರಿಂದ ಇರಿಯುತ್ತಿರುವ ದೃಶ್ಯವನ್ನು ಕಾಣುತ್ತೇವೆ. ಕೊನೆಯ ಪಟ್ಟಿಕೆಯಲ್ಲಿ ಶಿವಲಿಂಗದ ಎದುರು ವೀರನು ತನ್ನ ಎರಡು ಕೈಗಳನ್ನು ಜೋಡಿಸಿ ಶಿವಸಾನಿಧ್ಯ ಪಡೆದಂತಿದೆ.

ಗುಲಬರ್ಗಾ ತಾಲೂಕಿನ ಮಹಾಗಾಂವ ಗ್ರಾಮದ ಗೌರಿಶಂಕರ ದೇವಾಲಯ ಭಿತ್ತಿಯಲ್ಲಿರುವ ೧೬ನೇ ಶತಮಾನದ ವೀರಗಲ್ಲು ಎರಡು ಪಟ್ಟಿಕೆಗಳಿಂದ ಕೂಡಿದೆ. ಕೆಳಗಿನಿಂದ ಮೊದಲನೆಯ ಪಟ್ಟಿಕೆಯಲ್ಲಿ ವೀರನು ತನ್ನ ಬಲಗೈಯಲ್ಲಿ ಖಡ್ಗವನ್ನು ಹಿಡಿದು ಎದುರಾಳಿಯನ್ನು ಇರಿಯುತ್ತಿರುವ ದೃಶ್ಯವಿದೆ. ಎರಡನೆಯ ಪಟ್ಟಿಕೆಯಲ್ಲಿ ಶಿವನನ್ನು ಪೂಜಿಸುತ್ತಿರುವ ಭಂಗಿಯಲ್ಲಿ ವೀರನು ಕುಳಿತಿರುವ ದೃಶ್ಯವಿದೆ.

ಅದೇ ಗ್ರಾಮದ ಮಲ್ಲಿಕಾರ್ಜುನ ದೇವಾಲಯ ಬಳಿ ಇರುವ ೧೬ನೆಯ ಶತಮಾನದ ವೀರಗಲ್ಲಲ್ಲಿ ಮೂರು ಪಟ್ಟಿಕೆಗಳಿವೆ. ಕೆಳಗಿನ ಮೊದಲನೆ ಪಟ್ಟಿಕೆಯಲ್ಲಿ ವೀರನು ತನ್ನ ಕೈಯಲ್ಲಿ ಭರ್ಚಿಯನ್ನು ಹಿಡಿದುಕೊಂಡು ತನ್ನ ವೈರಿಯತ್ತ ಮುಖಮಾಡಿ ನಿಂತಿರುವ ದೃಶ್ಯವಿದೆ.

ಕಮಲಾಪುರದ ಭಾರತೀಯ ಪ್ರಾಚ್ಯ ಪುರಾತತ್ವ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೬ನೆಯ ಶತಮಾನದ ವೀರಗಲ್ಲು ಶಿಲ್ಪದಲ್ಲಿ ವೀರ ಕುದುರೆಯ ಮೇಲೆ ವೈರಿ ಪಡೆಯು ರಾವುತನೊಂದಿಗೆ ಹೋರಾಟದಲ್ಲಿ ನಿರತನಾಗಿದ್ದಾನೆ. ಅನೇಕ ಸೈನಿಕರು ಮತ್ತು ವೀರ ರುಮಾಲು ಧರಿಸಿದ್ದು ಕಿವಿಯಲ್ಲಿ ಲೋಲಕ ಧರಿಸಿ, ಕೈಗೆ ತೋಳುಬಂಧಿ, ಕಡಗ ಧರಿಸಿ ವೀರಗಾಸೆ ತೊಟ್ಟು ಸೊಂಟದ ಬಲಕ್ಕೆ ಕಿರುಗತ್ತಿ ಇಟ್ಟುಕೊಂಡಿದ್ದಾರೆ. ವೀರ ಬಲಗೈಯಲ್ಲಿ ಕಿರುಗತ್ತಿ ಎತ್ತಿ ಹಿಡಿದು ಎಡಗೈಯಲ್ಲಿ ಫಲ ಹಿಡಿದಿದ್ದಾನೆ. ಕಾಲಲ್ಲಿ ಕಡಗ ಧರಿಸಿದ್ದು ಎರಡು ಪಾದಗಳ ಮಧ್ಯೆ ಶತ್ರುವನ್ನು ಸದೆಬಡಿಯುತ್ತಿರುವುದು ಈ ಶಿಲ್ಪದಲ್ಲಿ ಚಿತ್ರಿಸಲಾಗಿದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹಿಂಬದಿಯ ಆವರಣದಲ್ಲಿರುವ ಕ್ರಿ.ಶ. ೧೬ನೆಯ ಶತಮಾನದ ವೀರಗಲ್ಲಿನ ಕೆಳಭಾಗದ ಪಟ್ಟಿಕೆಯು ದೊಡ್ಡದಾಗಿದೆ. ವೀರನು ಬಲಗಡೆ ಮುಡಿ ಕಟ್ಟಿದ್ದಾನೆ. ಕಿವಿಯಲ್ಲಿ ವರ್ತುಲಾಕಾರದ ಓಲೆಗಳನ್ನು ಧರಿಸಿದ್ದಾನೆ. ಕೊರಳಲ್ಲಿ ಮಣಿಸರ ಧರಿಸಿದ್ದಾನೆ. ಬಲಗೈಯಲ್ಲಿ ಖಡ್ಗ ಹಿಡಿದಿದ್ದಾನೆ. ಎಡಗೈ ಮೇಲಕ್ಕೆ ಎತ್ತಿದ್ದಾನೆ. ಕೈಗಳಿಗೆ ತೋಳುಬಂಧಿ, ಕಡಗ ಧರಿಸಿ ವೀರಗಾಸೆ ಧರಿಸಿದ್ದಾನೆ. ಪಾದಗಳಲ್ಲಿ ಪಾದಸರ ಧರಿಸಿ, ವೀರನು ವೈರಿಯನ್ನು ಕಾಲಿನಿಂದ ತುಳಿಯುತ್ತಿರುವ ದೃಶ್ಯವನ್ನು ಈ ಶಿಲ್ಪದಲ್ಲಿ ತೋರಿಸಲಾಗಿದೆ. ಎರಡನೇ ಪಟ್ಟಿಕೆಯಲ್ಲಿ ವೀರನನ್ನು ಅಪ್ಸರೆಯರು ಹೆಗಲ ಮೇಲೆ ಕೈ ಹಾಕಿಕೊಂಡು ಕೈಲಾಸಕ್ಕೆ ಕರೆದುಕೊಂಡು ಹೋಗುತ್ತಿರುವ ದೃಶ್ಯವಿದೆ.

ಕಮಲಾಪುರದ ಭಾರತೀಯ ಪುರಾತತ್ವ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೬ನೆಯ ಶತಮಾನದ ವೀರಗಲ್ಲಿನಲ್ಲಿ ವೀರನ ಕಿವಿಯಲ್ಲಿ ವರ್ತುಲಾಕಾರದ ಓಲೆಗಳಿವೆ. ಕೊರಳಲ್ಲಿ ಮಣಿಸರ, ಸರಪಣಿ ಧರಿಸಿದ್ದಾನೆ. ಕೈಗಳಿಗೆ ತೋಳುಬಂಧಿ, ಕಡಗ ಧರಿಸಿದ್ದಾನೆ. ವೀರಗಾಸೆಯನ್ನು ಧರಿಸಿರುವುದು ಕಂಡುಬರುತ್ತದೆ. ಕಾಲಲ್ಲಿ ಕಡಗ ಧರಿಸಿ ಎರಡೂ ಕೈಗಳಿಂದ ಕತ್ತಿಯನ್ನು ಹಿಡಿಯುವ ಕೆತ್ತನೆ ತುಂಬಾ ಕಲಾತ್ಮಕವಾಗಿದೆ.

ಕಮಲಾಪುರ ಭಾರತೀಯ ಪುರಾತತ್ವ ವಸ್ತುಸಂಗ್ರಹಾಲಯದಲ್ಲಿರುವ ಕ್ರಿ.ಶ. ೧೬ನೆಯ ಶತಮಾನದ ವೀರಗಲ್ಲಿನಲ್ಲಿರುವ ವೀರ ಸ್ಥಾನಿಕ ಭಂಗಿಯಲ್ಲಿದ್ದಾನೆ. ವೀರನು ಮುಡಿ ಕಟ್ಟಿದ್ದಾನೆ. ಕೊರಳಲ್ಲಿ ಮಣಿಸರ, ಪದಕಸರ ಧರಿಸಿದ್ದಾನೆ. ಕೈಗಳಿಗೆ ತೋಳುಬಂಧಿ, ಕಡಗ ಧರಿಸಿದ್ದು, ಎಡಗೈಯಲ್ಲಿ ಬಿಲ್ಲು ಹಿಡಿದು ಬಲಗೈಯಿಂದ ಸೊಂಟದಲ್ಲಿನ ಕಿರುಗತ್ತಿಯನ್ನು ಮೇಲಕ್ಕೆ ಎತ್ತಿರುವುದನ್ನು ನೈಜವಾಗಿ ಚಿತ್ರಿಸಲಾಗಿದೆ. ವೀರನ ಪಾದಗಳಲ್ಲಿ ಕಡಗ ಇದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಒಳ ಆವರಣದ ಕ್ರಿ.ಶ. ೧೬ನೆಯ ಶತಮಾನದ ವೀರಗಲ್ಲು ಇದೆ. ಇಲ್ಲಿ ವೀರ ಬಲಗಡೆ ಮುಡಿ ಕಟ್ಟಿದ್ದಾನೆ. ವರ್ತುಲಾಕಾರದ ಓಲೆ, ಕೊರಳಲ್ಲಿ ಮಣಿಸರ ಧರಿಸಿದ್ದು, ಕೈಗಳಿಗೆ ತೋಳುಬಂಧಿ, ಕಡಗ ಧರಿಸಿ ವೀರಗಾಸೆ ತೊಟ್ಟು ಕಾಲಲ್ಲಿ ಕಡಗ ಧರಿಸಿದ್ದಾನೆ. ವೀರನ ಎಡಭಾಗ ಖಡ್ಗವಿದ್ದು ಅದನ್ನು ಹಿಡಿದುಕೊಳ್ಳುವ ದೃಶ್ಯವಿದೆ.

ಕಮಲಾಪುರ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯ ಹಿಂಬದಿಯ ಕ್ರಿ.ಶ. ೧೬ನೆಯ ಶತಮಾನದ ವೀರಗಲ್ಲು ಶಿಲ್ಪದಲ್ಲಿ ಇಬ್ಬರು ವೀರರು ಸ್ಥಾನಿಕ ಭಂಗಿಯಲ್ಲಿದ್ದು ಬಲಗಡೆ ವೀರ ಮುಡಿ ಕಟ್ಟಿ ಎಡಗೈ ಅಭಯಹಸ್ತ ಬಲಗೈ ಕೆಳಗೆ ಬಿಟ್ಟಿದ್ದಾನೆ. ಎಡಗಡೆ ವೀರ ಬಲಗೈ ಮೇಲಕ್ಕೆ ಎತ್ತಿ ಎಡಗೈಯಲ್ಲಿ ಬಿಲ್ಲು ಹಿಡಿದಿದ್ದಾನೆ. ಇಬ್ಬರೂ ವೀರಗಾಸೆ ಧರಿಸಿ ಕಾಲ್ಗಡಗ ಧರಿಸಿದ್ದಾರೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಕ್ರಿ.ಶ. ೧೭ನೆಯ ಶತಮಾನದ ವೀರಗಲ್ಲು ಶಿಲ್ಪದಲ್ಲಿ ಇಬ್ಬರು ವೀರರು ಸ್ಥಾನಿಕ ಭಂಗಿಯಲ್ಲಿದ್ದು, ಮುಡಿ ಕಟ್ಟಿಕೊಂಡಿದ್ದಾರೆ.

ಇವರಿಬ್ಬರ ಅಕ್ಕಪಕ್ಕ ಸೂರ್ಯ-ಚಂದ್ರ ಉಬ್ಬುಶಿಲ್ಪಗಳಿವೆ. ಇಬ್ಬರು ಕೈಗಳಿಗೆ ತೋಳುಬಂಧಿ ಕಾಲಲ್ಲಿ ಕಡಗ ಧರಿಸಿದ್ದಾರೆ. ವೀರಗಾಸೆಯನ್ನು ಸಹ ಧರಿಸಿದ್ದಾರೆ. ಬಲಗಡೆಯಲ್ಲಿರುವ ವೀರನ ಬಲಗೈಯಲ್ಲಿ ಖಡ್ಗ ಎಡಗೈಯಲ್ಲಿ ಪುಷ್ಪದ ಮೊಗ್ಗು ಇದೆ. ಎಡಗಡೆ ವೀರ ಎರಡು ಕೈಗಳಿಂದ ಖಡ್ಗ ಹಿಡಿದಿದ್ದಾನೆ. ಇವು ಈ ಶಿಲ್ಪದ ವೈಶಿಷ್ಟ್ಯತೆಯಾಗಿದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿರುವ ಕ್ರಿ.ಶ. ೧೭ನೆಯ ಶತಮಾನದ ವೀರಗಲ್ಲಿನಲ್ಲಿ ವೀರ ಕುದುರೆಯ ಮೇಲೆ ಕುಳಿತು ಸವಾರಿ ಮಾಡುತ್ತಿದ್ದಾನೆ. ಕಿವಿಯಲ್ಲಿ ವರ್ತುಲಾಕಾರ ಓಲೆ, ಕೊರಳಲ್ಲಿ ಹಾರ, ಕೈಗಳಿಗೆ ತೋಳುಬಂಧಿ, ಕಡಗ ಧರಿಸಿದ್ದಾನೆ. ಬಲಗೈಯಲ್ಲಿ ಬಿಲ್ಲು ಹಿಡಿದು ಮೇಲಕ್ಕೆತ್ತಿ ಶತ್ರುವಿಗೆ ಎಸೆಯುವಂತಿದೆ. ವೀರನು ವೀರಗಾಸೆ ಧರಿಸಿದ್ದಾನೆ. ಎಡಗಡೆ ಸೈನಿಕರು ಕತ್ತಿ, ಛತ್ರಿ ಹಿಡಿದು ಸ್ಥಾನಿಕ ಭಂಗಿಯಲ್ಲಿದ್ದಾರೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೭ನೆಯ ಶತಮಾನದ ವೀರಗಲ್ಲಿನಲ್ಲಿ ಇಬ್ಬರು ವೀರರು ಸ್ಥಾನಿಕ ಭಂಗಿಯಲ್ಲಿದ್ದಾರೆ. ಮುಡಿ ಕಟ್ಟಿ ಕಿವಿಯಲ್ಲಿ ಲೋಲಕ ಧರಿಸಿ ಕೈಯಲ್ಲಿ ಕಡಗ, ತೋಳುಬಂಧಿ ಧರಿಸಿದ್ದಾರೆ. ಬಲಗಡೆ ವೀರ ಬಲಗೈಯನ್ನು ಕೆಳಗೆ ಬಿಟ್ಟು ಎಡಗೈಯಲ್ಲಿ ಕತ್ತಿ ಹಿಡಿದಿದ್ದಾನೆ. ವೀರಗಾಸೆ ತೊಟ್ಟು ಕಾಲಲ್ಲಿ ಕಡಗ ಧರಿಸಿದ್ದಾನೆ. ಎಡಗಡೆ ವೀರ ಬಲಗೈಯಲ್ಲಿ ಪಂಜು ಹಿಡಿದು ಎಡಗೈ ಇಳಿಬಿಟ್ಟಿದ್ದಾನೆ. ಇಲ್ಲಿ ವೀರನ ಹೋರಾಟದ ದೃಶ್ಯವನ್ನು ಚಿತ್ರಿಸಲಾಗಿದೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೭ನೆಯ ಶತಮಾನದ ವೀರಗಲ್ಲು ಶಿಲ್ಪದಲ್ಲಿ ವೀರ ಕಿವಿಯಲ್ಲಿ ಕುಂಡಲ ಕೊರಳಲ್ಲಿ ಮಣಿಸರ, ಪದಕಸರ, ಸೊಂಟಪಟ್ಟಿ ಧರಿಸಿದ್ದಾನೆ. ಕೈಗಳಿಗೆ ತೋಳುಬಂಧಿ, ಕಡಗ ಧರಿಸಿ ಬಲಗೈಯಲ್ಲಿ ಉದ್ದವಾದ ಖಡ್ಗ, ಎಡಗೈಯಲ್ಲಿ ಕಿರುಗತ್ತಿ ಹಿಡಿದಿದ್ದಾನೆ. ಸೈನಿಕ ಟೋಪಿ ಧರಿಸಿದ ವಸ್ತ್ರದ ಕೆತ್ತನೆ ತುಂಬಾ ಕಲಾತ್ಮಕವಾಗಿದೆ.

ಕಮಲಾಪುರದ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೭ನೆಯ ಶತಮಾನದ ವೀರಗಲ್ಲಿನಲ್ಲಿ ವೀರ ತಲೆಯ ಟೋಪಿಗೆ ಎಡಗಡೆ ಕಿರುಕತ್ತಿ, ಬಲಗಡೆ ತುರುಬು, ಬೆನ್ನ ಹಿಂದೆ ವಸ್ತ್ರದ ವಿನ್ಯಾಸ, ಕಿವಿಯಲ್ಲಿ ಕುಂಡಲಗಳು, ಕೊರಳಲ್ಲಿ ಸರ, ಕೈಗಳಿಗೆ ತೋಳುಬಂಧಿ, ಕಡಗ ಬಲಗೈಯಲ್ಲಿ ಉದ್ದವಾದ ಖಡ್ಗ ಹಿಡಿದಿದ್ದಾನೆ.

ಗುಲಬರ್ಗಾ ತಾಲೂಕಿನ ಶ್ರೀನಿವಾಸ ಸರಡಗಿ ಗ್ರಾಮದ ಜೈನ ಬಸದಿ ಹತ್ತಿರವಿರುವ ೧೭ನೆಯ ಶತಮಾನದ ವೀರಗಲ್ಲು ಎರಡು ಪಟ್ಟಿಕೆಗಳಿಂದ ಕೂಡಿದೆ. ಮೊದಲನೆಯ ಪಟ್ಟಿಕೆಯಲ್ಲಿ ವೀರನು ತನ್ನ ಕೈಯಲ್ಲಿ ಖಡ್ಗವನ್ನು ಹಿಡಿದು ವೈರಿಯ ಹೊಟ್ಟೆಗೆ ಚುಚ್ಚಿತ್ತಿದ್ದಾನೆ. ಗುರಾಣಿಯನ್ನು ತನ್ನ ಎಡಗೈಯಲ್ಲಿ ಹಿಡಿದು ವೈರಿಯ ಏಟುಗಳಿಂದ ರಕ್ಷಣೆಯನ್ನು ಪಡೆದುಕೊಳ್ಳುತ್ತಿದ್ದಾನೆ. ಕೊನೆಯ ಹಾಗೂ ಎರಡನೆಯ ಪಟ್ಟಿಕೆಯಲ್ಲಿ ನಂದಿ ಮತ್ತು ಶಿವಲಿಂಗದ ಚಿತ್ರವನ್ನು ಕಾಣಬಹುದು.

ನವಲಗುಂದ ತಾಲೂಕಿನ ಜಾವೂರಿನ ಬಸ್ ನಿಲ್ದಾಣದ ಬಳಿಯಿರುವ ವೀರಗಲ್ಲಿನಲ್ಲಿ ವೀರನ ಚಿತ್ರವಷ್ಟೇ ಇದೆ. ವೀರ ಕೈಯಲ್ಲಿ ಕೋವಿ (ಬಂದೂಕು)ಯನ್ನು ಹಿಡಿದು ನಿಂತಿದ್ದಾನೆ. ಸೊಂಟದಲ್ಲಿ ಕಠಾರಿಯನ್ನು ಸಿಗಿಸಿದ್ದಾನೆ. ತಲೆಯಲ್ಲಿ ಕೂದಲನ್ನು ಬಿಟ್ಟಿದ್ದು ಹಣೆಗೆ ಬಟ್ಟೆಯನ್ನು ಕಟ್ಟಿದ್ದಾನೆ. ಕೊರಳಲ್ಲಿ ಪದಕವಿರುವ ಸರವಿದೆ. ವೀರನ ತಲೆಗೆ ಸಮಾನಾಂತರವಾಗಿ ಎರಡೂ ಕಡೆ ಪದ್ಮಗಳ ಅಲಂಕಾರವಿದೆ. ಕಿವಿಯಲ್ಲಿ ಕುಂಡಲಗಳಿವೆ. ವೀರನಿರುವ ಈ ಪಟ್ಟಿಕೆಯ ಮೇಲೆ ಒಂದು ಚಿಕ್ಕ ಭಾಗವಿದ್ದು ಅದರಲ್ಲಿ ಸೂರ್ಯ-ಚಂದ್ರ, ಮಧ್ಯದಲ್ಲಿ ತೆಂಗಿನ ಕಾಯಿಯ ಚಿತ್ರವಿದೆ. ವೀರಗಲ್ಲಿನ ಸುತ್ತಲು ಇರುವ ಪಟ್ಟಿಕೆಯಲ್ಲಿ ಬಳ್ಳಿ ಅಲಂಕಾರವಿದೆ. ಇದು ವೀರಗಲ್ಲು ೧೬ನೆಯ ಶತಮಾನದಾಗಿದೆ.

ಕಮಲಾಪುರ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದಲ್ಲಿರುವ ವಿಜಯನಗರ ಮತ್ತು ವಿಜಯನಗರೋತ್ತರ ಕಾಲದ ವೀರ ಮತ್ತು ಮಹಾಸತಿಯರ ಶಿಲ್ಪಗಳನ್ನು ಎರಡು ಕಡೆಗಳಲ್ಲಿ ಪ್ರದರ್ಶಿಸಲಾಗಿದೆ. ಕೆಲವು ಅದರ ಒಳಗಡೆಯಿದ್ದರೆ ಕೆಲವು ಅದರ ಹೊರಗಡೆ ಇವೆ. ಅಲ್ಲಿಯ ವೀರಗಲ್ಲುಗಳನ್ನು ವಿವಿಧ ರೀತಿಯಲ್ಲಿ ವರ್ಗೀಕರಿಸಲಾಗಿದೆ. ಒಂದು ವೀರಗಲ್ಲುಗಳು: ಅವು ಬಿಲ್ಲು, ಕತ್ತಿ ಹಿಡಿದು ನಿಂತ ವೀರರ ಶಿಲ್ಪ, ಕುದುರೆ ಸವಾರರ ಶಿಲ್ಪ, ಸಾಲಾಗಿ ನಿಂತ ವೀರರ ಶಿಲ್ಪ, ಚಾಕು, ಕಪಾಲ ಹಿಡಿದು ವೀರರ ಶಿಲ್ಪ ಮತ್ತು ಎರಡು ಅಥವಾ ಮೂರು ಫಲಕವುಳ್ಳ ವೀರಗಲ್ಲುಗಳಾಗಿವೆ. ಎರಡನೆಯದು: ಮಹಾಸತಿ ಶಿಲ್ಪಗಳು; ಅವು ಸತಿ ಗೈಸ್ತಂಭವುಳ್ಳ ದಂಪತಿ ಶಿಲ್ಪಗಳು ಮಾನವ ರೂಪದ ಮಹಾಸತಿ ಕಲ್ಲುಗಳು ದಂಪತಿಯರುಳ್ಳ ಮಹಾಸತಿ ಕಲ್ಲುಗಳ (ಎಡರು/ಮೂರು/ನಾಲ್ಕು) ಕುದುರೆ ಸವಾರ ಸತಿ ಶಿಲ್ಪಗಳು ಮತ್ತು ವೀರ ಮಾಸ್ತಿ ಶಿಲ್ಪಗಳಿವೆ.

ಕತ್ತಿಯನ್ನು ಎಡಕ್ಕೆ ಮುಂಚಾಚಿ ಹಿಡಿದು ನಿಂತ ವೀರ. ಮುಂದೆ ಚಾಚಿ ಈ ಶಿಲ್ಪದಲ್ಲಿ ಕತ್ತಿಯನ್ನು ಎಡಕ್ಕೆ ನಿಂತ ವೀರನು ತನ್ನ ಎಡಗೈಯನ್ನು ಎತ್ತಿ ಬೆರಳನ್ನು ಮುಂದಕ್ಕೆ ತೋರಿಸುತ್ತ ನಿಂತಿದ್ದಾನೆ. ತಲೆಗೆ ವಸ್ತ್ರವನ್ನು ಕಟ್ಟಿದ್ದು ಆತನ ತುರುಬನ್ನು ತಲೆಯ ಎಡಕ್ಕೆ ತೋರಿಸಲಾಗಿದೆ. ವಸ್ತ್ರಾಭರಣಗಳಲ್ಲಿ ಕಿವಿಯ ಓಲೆಗಳು ವಿಶೇಷ ಗಮನವನ್ನು ಸೆಳೆಯುತ್ತವೆ. ಇನ್ನೊಂದು ಈ ಮಾದರಿಯ ಶಿಲ್ಪದಲ್ಲಿ ಮಡಚಿದ ಬಲಗೈಯಲ್ಲಿ ಹಿಡಿದ ಕತ್ತಿಯನ್ನು ಎಡಗಡೆ ಮುಖ ಮಾಡಿ ಹಿಡಿದು ನಿಂತಿದ್ದಾನೆ. ಎಡಗೈಯನ್ನು ಮಡಚಿ ಮೇಲೆತ್ತಿ ಹಿಡಿದಿದ್ದಾನೆ. ಈ ಕೈಯ ಮಧ್ಯದ ಬೆರಳನ್ನು ಮೇಲಕ್ಕೆತ್ತಿ ಹಿಡಿದಿರುವನು. ತನ್ನ ತುರುಬನ್ನು ಎಡಕ್ಕೆ ಕಟ್ಟಿದ್ದಾನೆ. ಸೊಂಟಕ್ಕೆ ಡ್ಯಾಗರನ್ನು ಕಟ್ಟಿದ್ದಾನೆ. ವಿಶೇಷವೆಂದರೆ ಉದ್ದವಾದ ಮೀಸೆಯನ್ನು ತೋರಿಸಲಾಗಿದೆ. ತಲೆಯ ಬಲಕ್ಕೆ ಶಿವಲಿಂಗವನ್ನು ಮತ್ತು ಮೇಲ್ಗಡೆ ಸೂರ್ಯ-ಚಂದ್ರರ ಚಿತ್ರಗಳಿವೆ. (ವಿಜಯನಗರ ಅಧ್ಯಯನ ಸಂಪುಟ ೯, (ಸಂ) ರಾಮಕೃಷ್ಣ ಕೆ.ಆರ್. ಮತ್ತು ಇತರರು ೨೦೦೩, ಪು ೩೨೦)

**ಕತ್ತಿಯನ್ನು ಎಡಬದಿಗೆ ಚಾಚಿ ಹಿಡಿದು ನಿಂತ ವೀರರ ಶಿಲ್ಪ :**

ಈ ಶಿಲ್ಪದಲ್ಲಿ ಇಬ್ಬರು ವೀರರು ಕತ್ತಿಯನ್ನು ಮೇಲಕ್ಕೆತ್ತಿ ಹಿಡಿದು ನಿಂತಿದ್ದಾರೆ. ವಿಶೇಷವೆಂದರೆ ಒಂದೇ ಸಾಲಿನಲ್ಲಿ ಬಲಗಡೆ ನಿಂತ ವೀರನ ಎಡಗೈಯಲ್ಲಿ ಪದ್ಮವಿದ್ದ ಹಾಗಿದೆ. ಆತನ ತಲೆಯ

ಬಲಕ್ಕೆ ಕತ್ತಿಯು ವೀರನ ತಲೆಯ ಮೇಲ್ಭಾಗದಲ್ಲಿ ಎಡಕ್ಕೆ ಕ್ರಮವಾಗಿ ಸೂರ್ಯ ಮತ್ತು ಚಂದ್ರರನ್ನು ತೋರಿಸಲಾಗಿದೆ. ಆಯತಾಕಾರದ ಶಿಷ್ಟ ಕಲೆಯ ಈ ಶಿಲ್ಪ ಫಲಕ ಇದಾಗಿದೆ. ಈ ರೀತಿ ಅಲ್ಲಿ ಇನ್ನೆರಡು ಶಿಲ್ಪಗಳಿವೆ. ಅದರಲ್ಲಿ ಕೇವಲ ವೀರರಿಬ್ಬರು ಕತ್ತಿಹಿಡಿದು ನಿಂತಿದ್ದಾರೆ. ಅವು ಗ್ರಾನೈಟ್ ಶಿಲ್ಪವಾಗಿವೆ. (ವಿಜಯನಗರ ಅಧ್ಯಯನ ಸಂಪುಟ ೯. (ಸಂ) ರಾಮಕೃಷ್ಣ ಕೆ.ಆರ್. ಇತರರು. ೨೦೦೩. ಪು. ೩೨೦)

**ಕತ್ತಿಯನ್ನು ಮೇಲಕ್ಕೆತ್ತಿ ಹಿಡಿದು ನಿಂತ ವೀರಶಿಲ್ಪ :**

ಈ ವೀರಗಲ್ಲು ಆಯತಾಕಾರದಲ್ಲಿದ್ದು ವೀರನು ಬಲಗೈಯಲ್ಲಿ ಕತ್ತಿಯನ್ನು ಮೇಲಕ್ಕೆತ್ತಿ ಹಿಡಿದು ನಿಂತಿದ್ದಾನೆ. ಎಡಗೈಯಲ್ಲಿ ಕನ್ನಡಿ (?)ಯನ್ನು ಮೇಲಕ್ಕೆತ್ತಿ ಹಿಡಿದಿದ್ದಾನೆ. ಆತನು ಉದ್ದವಾದ ಮುಂಚಾಚಿದ ಪೀಠ ಫಲಕದ ಮೇಲೆ ನಿಂತಿರುವುದನ್ನು ಚಿತ್ರಿಸಲಾಗಿದೆ. ಇಲ್ಲಿಯ ವೀರನು ತನ್ನ ತುರುಬನ್ನು ತಲೆಯ ಬಲಗಡೆಗೆ ಕಟ್ಟಿರುವನು. ಅಲ್ಲಿಯ ಇನ್ನೊಂದು ಶಿಲ್ಪದಲ್ಲಿ ವೀರನು ಬಲಗೈಯಲ್ಲಿ ಕತ್ತಿಯನ್ನು ಎತ್ತಿ ಹಿಡಿದಿದ್ದು ಎಡಗೈಯಲ್ಲಿ ಚಾಕುವನ್ನು ಹಿಡಿದು ಕೆಳಗಡೆ ಇಳಿಬಿಟ್ಟಿದ್ದಾನೆ. ತುರುಬನ್ನು ತಲೆಯ ಬಲಕ್ಕೆ ಧರಿಸಿದ್ದು, ತಲೆಯ ಎಡ ತುದಿಯ ಮೇಲೆ ಕಿರುಬಾಣ ನೆಟ್ಟಂತೆ ಕಾಣುವುದು. ವಸ್ತ್ರಾಲಂಕರಣದ ರೇಖೆಗಳು ಕಾಣುತ್ತವೆ. ಈ ಶಿಲ್ಪ ಶಿಷ್ಟಕಲೆಯಾಗಿದೆ. (ವಿಜಯನಗರ ಅಧ್ಯಯನ ಸಂಪುಟ-೯, (ಸಂ) ರಾಮಕೃಷ್ಣ ಕೆ.ಆರ್. ಇತರರು ೨೦೦೩ ಪು. ೩೨೧)

**ಬಿಲ್ಲನ್ನು ಎಡಕ್ಕೆ ಚಾಚಿ ಹಿಡಿದು ನಿಂತ ವೀರರ ಶಿಲ್ಪ :**

ಬಿಲ್ಲನ್ನು ಎಡಗೈಯಲ್ಲಿ ಹಿಡಿದು ಅದನ್ನು ಮುಂದಕ್ಕೆ ವೀರಾವೇಶದಿಂದ ಚಾಚಿ ಹಿಡಿದು ನೆಲದ ಮೇಲೆ ಬಿದ್ದ ವೈರಿಗಳ ಮೇಲೆ ಈ ವೀರ ನಡೆಯುತ್ತಿರುವುದನ್ನು ಚಿತ್ರಿಸಲಾಗಿದೆ. ಆತನು ತನ್ನ ಬಲಗೈಯನ್ನು ಬಗ್ಗಿಸಿ ಸೊಂಟದಲ್ಲಿ ಕಟ್ಟಿದ ಡ್ಯಾಗರನ್ನು ಹಿಡಿದಿರುವನು. ಅವನ ದೇಹ ಮತ್ತು ತಲೆಯ ಸುತ್ತ ಬಾಣಗಳು ನೆಟ್ಟಿರುವುದು ವಿಶೇಷವೆನ್ನಬಹುದು. ವಸ್ತ್ರದಿಂದ ತಲೆಯ ಕೂದಲನ್ನು ಕಟ್ಟಿದ್ದು ಅದರ ತುರುಬನ್ನು ತಲೆಯ ಬಲಗಡೆ ಕಟ್ಟಲಾಗಿದೆ. ವಸ್ತುಸಂಗ್ರಹಾಲಯದ ಈ ಮಾದರಿಯ ಇನ್ನೊಂದು ಶಿಲ್ಪವು ಗಮನಾರ್ಹವಾದದ್ದು, ಅದರಲ್ಲಿ ವೀರನು ತ್ರಿಭಂಗಿಯಲ್ಲಿ ಎದುರು ಮುಖಮಾಡಿ ನಿಂತಿರುವನು. ಎಡಗೈಯಲ್ಲಿಡಿದ ಬಿಲ್ಲಿನ ದಾರವನ್ನು ತನ್ನ ಶಿರದ ಬಲಭಾಗದವರೆಗೆ ಬಗ್ಗಿಸಿ ಹಿಡಿದಿದ್ದಾನೆ. ಎಡಗೈಯಿಂದ ಈ ಬಿಲ್ಲನ್ನು ಎಡಕ್ಕೆ ವೀರಾವಶದಿಂದ ಮುಂದೆ ಚಾಚಿ ಹಿಡಿದಿದ್ದಾನೆ. ಅವನ ದೇಹ ಕಾಲು ಮತ್ತು ತಲೆಯ ಸುತ್ತ ಬಾಣಗಳು ನೆಟ್ಟಿವೆ. ತನ್ನ ತುರುಬು ತಲೆಯ ಎಡಕ್ಕಿದೆ. ಸರಳ ಕಡಗ, ಗೆಜ್ಜೆ ಕಡಗ, ಬಳೆ ಪಟ್ಟಿ, ಕುಂಡಲ ಸರ, ವಸ್ತ್ರ ಇತ್ಯಾದಿ ಆಭರಣಗಳನ್ನು ಧರಿಸಿರುವನು. ಅಲ್ಲಿಯ ಈ ಮಾದರಿಯ ಒಂದು ಶಿಲ್ಪದಲ್ಲಿ ಖಡ್ಗಾಸನದಲ್ಲಿ ಬಲಗಾಲನ್ನು ಮಡಚಿ ನೆಲಕ್ಕೆ ಮಂಡಿಯನ್ನಿಟ್ಟು ಎಡಗಾಲನ್ನು ಮುಂದಿಟ್ಟು ನಿಂತಿದ್ದಾನೆ. ಎಡಗೈಯಲ್ಲಿ ಬಿಲ್ಲನ್ನು ಹಿಡಿದು ಎಡಕ್ಕೆ ಚಾಚಿದ್ದಾನೆ. ಬಲಕೈಯನ್ನು ಒಳಭಾಗಕ್ಕೆ

ಮಡಚಿರುವನು. (ವಿಜಯನಗರ ಅಧ್ಯಯನ ಸಂಪುಟ ೯ (ಸಂ) ರಾಮಕೃಷ್ಣ ಕೆ.ಆರ್. ಇತರರು ೨೦೦೩ ಪು ೩೨೧)

**ಮೂರು ಫಲಕವುಳ್ಳ ವೀರಗಲ್ಲು :**

ಈ ಶಿಲ್ಪದಲ್ಲಿ ಮೂರು ವಿವಿಧ ಫಲಕಗಳಿವೆ. ಕೆಳಗಿನ ಫಲಕದಲ್ಲಿ ವೀರನು ತನ್ನ ವೈರಿ ಕುದುರೆ ಸವಾರಿ ಮಾಡುವವನು ಎದುರಿಗೆ ಚಾಟಿಯನ್ನು (?) ಮೇಲೆತ್ತಿ ಹಿಡಿದು ನಿಂತಿದ್ದಾನೆ. ಎಡಗೈಯನ್ನು ಒಳಬಗ್ಗಿಸಿ ಹಿಡಿದಿದ್ದಾನೆ. ಕುದುರೆ ಸವಾರನು ತನ್ನ ಎಡಗೈಯಲ್ಲಿ ಈಟಿಯನ್ನು ಹಿಡಿದಿದ್ದಾನೆ. ನೆಲದ ಮೇಲೆ ಬಿದ್ದ ವೀರರ ಮೇಲೆ ಕುದುರೆ ರಭಸದಲ್ಲಿ ಓಡುತ್ತಿರುವಂತೆ ಚಿತ್ರಿಸಲಾಗಿದೆ. ಎರಡನೇ ಫಲಕದಲ್ಲಿ ವೀರನು ಅಪ್ಸರೆಯರಿಬ್ಬರ ಕೈಗಳನ್ನು ಹಿಡಿದು ಆಕಾಶಕ್ಕೆ ಹಾರುವ ಭಂಗಿಯಲ್ಲಿರುವನು. ಮೂರನೇ ಫಲಕದಲ್ಲಿ ಶಿವಲಿಂಗದ ಎಡಕ್ಕೆ ಇಬ್ಬರು ಮತ್ತು ಬಲಕ್ಕೆ ಇಬ್ಬರು ಕೈ ಮುಗಿದು ನಿಂತಿದ್ದಾರೆ. ಬಲಗಡೆಯವನ ಮುಂದೆ ಯತಿ ನಿಂತು ಶಿವಲಿಂಗವನ್ನು ಪೂಜಿಸುತ್ತಿರುವನು. ಅದರ ಮೇಲ್ಭಾಗ ತ್ರಿಕೋನಕಾರದಲ್ಲಿದ್ದು, ಅದರಲ್ಲಿ ಸೂರ್ಯ-ಚಂದ್ರ ಚಿತ್ರಗಳಿವೆ. (ವಿಜಯನಗರ ಅಧ್ಯಯನ ಸಂಪುಟ ೯ (ಸಂ) ರಾಮಕೃಷ್ಣ ಕೆ.ಆರ್. ಇತರರು ೨೦೦೩, ಪು. ೩೨೨)

**ಎರಡು ಫಲಕಗಳುಳ್ಳ ವೀರಗಲ್ಲುಗಳು :**

ಈ ಶಿಲ್ಪದಲ್ಲಿ ವಿಸ್ತಾರವಾದ ಎರಡು ಫಲಕಗಳಿವೆ. ಕೆಳಗಿನ ಫಲಕದಲ್ಲಿ ವೀರ ಮತ್ತು ವೈರಿಯ ನಡುವೆ ಬಾಕ-ಕತ್ತಿಯಿಂದ ಹೋರಾಡುವ ದೃಶ್ಯವಿದೆ. ಇಬ್ಬರು ತಮ್ಮ ಎರಡೂ ಕೈಗಳಲ್ಲಿ ಬಾಕ-ಕತ್ತಿಯನ್ನು ಹಿಡಿದು ಹೋರಾಡುತ್ತಿರುವರು. ಕಿರಿದಾದ ಒಬ್ಬ ವೀರನ ಚಿತ್ರ ಅವರ ಬಲ ಭಾಗದ ತುದಿಯಲ್ಲಿ ಚಿತ್ರಿಸಲಾಗಿದೆ. ಆ ವೀರನು ಕತ್ತಿ-ಗುರಾಣಿ ಹಿಡಿದು ನಿಂತಿದ್ದಾನೆ. ಎರಡನೆಯ ಫಲಕದಲ್ಲಿ ಸೇವಕನ ಸಂಗಡ ದಂಪತಿಗಳು ನಿಂತಿದ್ದಾರೆ. ಸೇವಕ ಕೈಮುಗಿದು ನಿಂತ ವೀರನಿಗೆ ಛತ್ರಿಯನ್ನು ಹಿಡಿದಿದ್ದಾನೆ. ಸತಿಯು ಬಲಗೈಯನ್ನು ಮೇಲೆತ್ತಿ ಎಡಕೈಯನ್ನು ಕೆಳಗಡೆ ಇಳಿಬಿಟ್ಟು ನಿಂತಿದ್ದಾಳೆ. ಅದರ ಮೇಲ್ಭಾಗದಲ್ಲಿ ಸೂರ್ಯ-ಚಂದ್ರರಿದ್ದಾರೆ. (ವಿಜಯನಗರ ಅಧ್ಯಯನ ಸಂಪುಟ ೯. (ಸಂ) ರಾಮಕೃಷ್ಣ ಕೆ.ಆರ್. ಇತರರು ೨೦೦೩, ಪು ೩೨೪)

**ಮಹಾಸತಿ ಗೈಸ್ಥಂಭವುಳ್ಳ ದಂಪತಿ ಶಿಲ್ಪಗಳು :**

ವಿಶೇಷ ಗಮನವನ್ನು ಸೆಳೆಯುವ ಈ ಬೃಹತ್ ಶಿಲ್ಪದಲ್ಲಿ ಮೂರು ಭಾಗಗಳಿವೆ. ಕೆಳಗಿನ ಭಾಗದಲ್ಲಿ ಕೇವಲ ಸಿಂಹಾಸನವುಳ್ಳ ನಿಂತ ಕುದುರೆ ಮತ್ತು ಅದಕ್ಕೆ ಮುಖಮಾಡಿನಿಂತ ಸೇವಕರ (?) ಚಿತ್ರಗಳಿವೆ. ಎರಡನೇ ಫಲಕವು ತುಂಬಾ ವಿಸ್ತಾರವಾಗಿದೆ. ಅದರಲ್ಲಿ ದಂಪತಿಗಳ ಸುಂದರ ಚಿತ್ರಗಳಿವೆ. ಸತಿಯು ಬಲಗೈಯಲ್ಲಿ ಕಮಂಡಲವನ್ನು ಹಿಡಿದು ಅದರಿಂದ ನೀರನ್ನು ಆಕೆಯ ಎದುರಿನ ಪೀಠದ ಮೇಲೆ ಎಡಗೈಯನ್ನು ದಿಂಬಿಗೆ ಆನಿಸಿಕೊಂಡು ಕುಳಿತ ಪತಿಗೆ ಹಾಕುತ್ತಾ

ನಿಂತಿದ್ದಾಳೆ. ಆಕೆಯು ತನ್ನ ಎಡಗೈಯನ್ನು ಅವನ ಕಡೆಗೆ ಬಗ್ಗಿಸಿ ತಲೆಗೆ ಆನಿಸಿ ದಿಂಬಿನ ಮೇಲಿಟ್ಟಿರುವನು. ಅವನ ಎಡಬದಿಗೆ ಅಂಚಿನಲ್ಲಿ ಉದ್ದವಾದ ಪಟ್ಟಿಕೆಯುಳ್ಳ ಕಂಬದ ಬಲತುದಿಗೆ ಬಲಗೈ ಎತ್ತಿರುವುದನ್ನು ಜೋಡಿಸಲಾಗಿದೆ. ಕಂಬದ ತುದಿಯ ಮೇಲೆ ಕಳಸವಿದೆ. ಅದರ ಮೇಲಿನ ಭಾಗದಲ್ಲಿ ಚಂದ್ರ ಮತ್ತು ಸೂರ್ಯರ ಚಿತ್ರಗಳಿವೆ. (ವಿಜಯನಗರ ಅಧ್ಯಯನ ಸಂಪುಟ ೯ (ಸಂ) ರಾಮಕೃಷ್ಣ ಕೆ.ಆರ್. ಇತರರು ೨೦೦೩, ಪು. ೩೨೪)

**ದಂಪತಿಯರುಳ್ಳ ಮಹಾಸತಿ ಶಿಲ್ಪಗಳು :**

ಈ ಶಿಲ್ಪಗಳು ದಂಪತಿಗಳುಳ್ಳ ಸತಿಶಿಲ್ಪವಾಗಿದೆ. ಈ ದಂಪತಿಗಳ ಚಿತ್ರಗಳು ಗಾತ್ರದಲ್ಲಿ ದೊಡ್ಡದಿವೆ. ಪತಿಯು ಎತ್ತರದ ಪೀಠದ ಮೇಲೆ ಸವ್ಯಲಲಿತಾಸನದಲ್ಲಿ ಕುಳಿತಿದ್ದು, ಆತನ ಬಲಗೈಯನ್ನು ಬಲಗಾಲಿನ ತೊಡೆಯ ಮೇಲೆ ಇಳಿಬಿಟ್ಟಿದ್ದಾನೆ. ಎಡಗೈಯನ್ನು ಬಗ್ಗಿಸಿಕೊಂಡು ದಿಂಬಿನ ಮೇಲಿಟ್ಟಿರುವನು. ಹೆಚ್ಚು ಆಭರಣಗಳನ್ನು ಧರಿಸಿದ್ದಾನೆ. ತುರುಬನ್ನು ತಲೆಯ ಎಡಕ್ಕೆ ಕಟ್ಟಿದ್ದಾನೆ. ಆತನ ಎಡಗಡೆ ಸತಿಯು ತನ್ನ ಬಲಗೈಯನ್ನು ಎತ್ತಿಹಿಡಿದು ನಿಂತಿರುವಳು. ಎಡಗೈಯನ್ನು ಕೆಳಗಡೆ ಇಳಿಬಿಟ್ಟಿದ್ದಾಳೆ. ತಲೆಯ ಬಲಕ್ಕೆ ತುರುಬನ್ನು, ಕಿವಿಗಳಲ್ಲಿ ದೊಡ್ಡದಾದ ದುಂಡಾದ ಓಲೆಗಳನ್ನು, ಕೊರಳಲ್ಲಿ ಭುಜದ ಮೇಲೆ ಸರಗಳನ್ನು, ಕೈಯಲ್ಲಿ ಮತ್ತು ತೋಳಲ್ಲಿ ಬಳೆಗಳನ್ನು ಧರಿಸಿದ್ದಾಳೆ. ಉಟ್ಟ ಸೀರೆಯು ಸೊಂಟದಿಂದ ಪಾದದ ಮೇಲಿನವರೆಗಿದೆ. ಅದಕ್ಕೆ ಅನೇಕ ಮಡಿಕೆಗಳಿವೆ. ಅದರ ಮೇಲೆ ಹಾರವನ್ನು ಧರಿಸಿದ್ದಾಳೆ. ಎಡಗಾಲನ್ನು ಸ್ವಲ್ಪ ಎಡಕ್ಕೆ ಇಟ್ಟಿದ್ದಾಳೆ. ಅವಳು ಸಹ ಪೀಠದ ಮೇಲೆ ನಿಂತಿದ್ದಾಳೆ. ಈ ಶಿಲ್ಪದ ಮೇಲಿನ ಪಟ್ಟಿಕೆಯ ಎಡಭಾಗದಲ್ಲಿ ತ್ರಿಶೂಲದ ಚಿತ್ರವಿರುವುದು ವಿಶೇಷವಾಗಿದೆ. ಅದರ ಮೇಲ್ಭಾಗದಲ್ಲಿ ಒಂದೇ ಸಾಲಿನಲ್ಲಿ ಕುಳಿತ ನಂದಿ ಶಿವಲಿಂಗದ ಕಡೆಗೆ ಮುಖಮಾಡಿದೆ. ತನ್ನ ಎಡಗಾಲನ್ನು ಮುಂದೆ ಚಾಚಿದೆ. ಈ ಶಿವಲಿಂಗವನ್ನು ನಂದಿಯ ಮುಂದೆ ನಿಂತ ಯತಿ ಪೂಜಿಸುತ್ತಿರುವನು. (ವಿಜಯನಗರ ಅಧ್ಯಯನ ಸಂಪುಟ ೯ (ಸಂ) ರಾಮಕೃಷ್ಣ ಕೆ.ಆರ್. ಇತರರು ೨೦೦೩ ಪು. ೩೨೬)

**ವೀರ-ಮಾಸ್ತಿಶಿಲ್ಪ :**

ಈ ಮಾದರಿಯಲ್ಲಿ ಅಲ್ಲಿಯ ಒಂದು ಶಿಲ್ಪದಲ್ಲಿ ಮೂರು ಫಲಕಗಳಿವೆ. ಕೆಳಗಿನ ಫಲಕದಲ್ಲಿ ಎದುರುಬದುರಾಗಿ ನಿಂತ ಕುದುರೆ ಸವಾರರು ಕೈಗಳಲ್ಲಿ ಕತ್ತಿಯನ್ನು ಹಿಡಿದಿರುವರು. ಅವರ ಕುದುರೆಗಳ ಮುಂದಿನ ಕಾಲುಗಳು ಮೇಲೆತ್ತಿ ಒಂದಕ್ಕೊಂದು ಡಿಕ್ಕಿ ಹೊಡೆಯುವುದನ್ನು ಗಮನಿಸಿದರೆ ಅವುಗಳು ಹೋರಾಡುವುದನ್ನು ತೋರಿಸಿಕೊಡುತ್ತದೆ. ಎರಡನೇ ಫಲಕದಲ್ಲಿ ನಾಲ್ವರು ಸತಿಯರ ಮಧ್ಯೆ ಕೈಮುಗಿದು ವೀರ ನಿಂತಿದ್ದಾರೆ. ಸತಿಯರು ಮಾತ್ರ ತಮ್ಮ ಬಲಗೈಯನ್ನು ಮೇಲೆತ್ತಿದ್ದಾರೆ. ಎಡಗೈಯನ್ನು ಕೆಳಗಡೆ ಇಳಿಬಿಟ್ಟಿದ್ದಾರೆ. ಮೂರನೇ ಫಲಕದಲ್ಲಿ ಯತಿ ಶಿವಲಿಂಗವನ್ನು ಆರಾಧಿಸುತ್ತಿದ್ದು ಬದಿಗೆ ಕುಳಿತ ನಂದಿ ತನ್ನ ಎಡಗಾಲನ್ನು ಸ್ವಲ್ಪ ಮುಂದೆ

ಇಟ್ಟಿದೆ. ಅದರ ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ಚಿತ್ರಗಳಿವೆ. (ವಿಜಯನಗರ ಅಧ್ಯಯನ ಸಂಪುಟ ೯ (ಸಂ) ರಾಮಕೃಷ್ಣ ಕೆ.ಆರ್. ಇತರರು ೨೦೦೩, ಪು ೩೨೮)

ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿನ ವಿಜಯನಗರ ಮತ್ತು ವಿಜಯನಗರೋತ್ತರ ಕಾಲದ ವೀರ ಮಾಸ್ತಿಶಿಲ್ಪಗಳು. ಗುಂಜಿಯಲ್ಲೊಂದು ವೀರ ಮಾಸ್ತಿಶಿಲ್ಪವಿದೆ. ಅದರಲ್ಲಿ ಐದು ಪಟ್ಟಿಕೆಗಳಲ್ಲಿ ವಿಭಿನ್ನ ಚಿತ್ರಗಳನ್ನು ಚಿತ್ರಿಸಿದ ಮಾದರಿ ಈ ಪ್ರದೇಶದಲ್ಲಿಯೇ ಅಪರೂಪವೆನಿಸಿದೆ. ಅದರಲ್ಲಿ ಕೆಳಗಿನ ಮೂರು ಪಟ್ಟಿಕೆಗಳಲ್ಲಿ ಯುದ್ಧದ ದೃಶ್ಯಗಳಿವೆ. ಎರಡರಲ್ಲಿ ಕೇವಲ ಕಾಲ್ದಳಗಳಿದ್ದರೆ, ಮೂರನೆಯದರಲ್ಲಿ ಕಾಲ್ದಳ ಮತ್ತು ಕುದುರೆಗಳಿವೆ. ಈ ಮೂರರ ಚಿತ್ರಗಳಲ್ಲಿ ಎಡಗಡೆಯ ಕುದುರೆ ಸವಾರನೊಬ್ಬನು ತನ್ನೆರಡೂ ಕೈಗಳನ್ನು ಮೇಲಕ್ಕೆತ್ತಿ ಹಿಡಿದಿರುವುದನ್ನು ಗಮನಿಸಿದರೆ ಆತನು ಯುದ್ಧದಲ್ಲಿ ಸೋಲನ್ನು ಒಪ್ಪಿಕೊಂಡಿರಬೇಕು. ನಾಲ್ಕರ ಪಟ್ಟಿಕೆಯಲ್ಲಿ ಮಡಿದ ವೀರನನ್ನು ನಾಲ್ವರು ಅಪ್ಸರೆಯರು ಹಿಡಿದುಕೊಂಡು ಹಾರುವಂತೆ ನಿಂತಿದ್ದಾರೆ. ಮೇಲಿನ ಐದನೆಯ ಪಟ್ಟಿಕೆಯಲ್ಲಿ ಎರಡು ಜೋಡಿ ದಂಪತಿಗಳ ನಡುವೆ ಶಿವಲಿಂಗ (?) ಮತ್ತು ಯತಿಯರ ಚಿತ್ರವಿದೆ. ತಲಾ ಒಂದು ಪಟ್ಟಿಕೆಯನ್ನು ಬೇರ್ಪಡಿಸಲು ನಡುವೆ ಕಿರು ಅಗಲವುಳ್ಳ ಪಟ್ಟಿಕೆಯಿದೆ. ಲಿಂಗನಮಠದ ವೀರಗಲ್ಲಿನಲ್ಲಿ ದನಗಳನ್ನು ಓಡಿಸುವ ಕಳ್ಳರನ್ನು ಕೆಳಗಿನ ಪಟ್ಟಿಕೆಯಲ್ಲಿ ಚಿತ್ರಿಸಲಾಗಿದೆ. ಅದರ ಮೇಲೆ ಕುದುರೆ ಸವಾರರಿಬ್ಬರು ವೀರನನ್ನು ಸುತ್ತುವರಿದು ನಿಂತಿದ್ದಾರೆ. ಅದರ ಎಡಕ್ಕೆ ಮಹಿಳೆಯ ಕಂಬಕ್ಕೆ ಕಟ್ಟಿರುವುದು ಮತ್ತು ಬಿಲ್ಲನ್ನು ಹಿಡಿದು ನಿಂತಿರುವುದಿದೆ. ಮೂರರಲ್ಲಿ ಒಬ್ಬರು ವೀರರನ್ನು ಅಪ್ಸರೆಯರಿಬ್ಬರು ಒಯ್ಯಲು ನಿಂತಿದ್ದಾರೆ. ಮೇಲಿನ ಫಲಕದಲ್ಲಿ ಇಬ್ಬರು ವೀರರು ಬಿಲ್ಲುಗಳನ್ನು ಹಿಡಿದು ನಿಂತಿದ್ದಾರೆ. ಇದು ಈ ಭಾಗದ ಅಪರೂಪದ ವೀರಗಲ್ಲಾಗಿದೆ. (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ್ ಆರ್. ಮತ್ತು ಇತರರು ೨೦೦೬, ಪು. ೨೧೬)

ಅವರೊಳ್ಳಿಯ ವೀರಗಲ್ಲು ಶಿಲ್ಪದಲ್ಲಿ ಮೂರು ಸರಳ ಪಟ್ಟಿಕೆಗಳಿದ್ದು ಅವುಗಳಲ್ಲಿ ಕ್ರಮವಾಗಿ ವೀರನು ವೈರಿಗಳ ಸಂಗಡ ಬಿಲ್ಲನ್ನು ಹಿಡಿದು ಹೋರಾಡುವುದು, ಮಡಿದ ವೀರರನ್ನು ವಿಮಾನದಲ್ಲಿ ಕೂಡಿಸಿ ಅಪ್ಸರೆಯರು ಹಾರಲು ನಿಂತಿರುವುದು ಮತ್ತು ದೇವರ ಸಾನಿಧ್ಯದಲ್ಲಿ ಕೈ ಮುಗಿದು ಕುಳಿತಿರುವುದನ್ನು ತೋರಿಸಲಾಗಿದೆ. ಇಲ್ಲಿ ವೀರನನ್ನು ವಿಮಾನದಲ್ಲಿ ಕೂಡಿಸಿರುವುದು ಖಾನಾಪುರದ ಈ ಕಾಲದ ಶಿಲ್ಪಗಳಲ್ಲಿ ವಿರಳವೆನ್ನಬಹುದು. (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ್ ಆರ್. ಮತ್ತು ಇತರರು ೨೦೦೬ ಪು ೨೧೭)

ಬೈಲಹೊಂಗಲ ತಾಲೂಕಿನ ಸವಟಗಿ ಗ್ರಾಮದ ವೀರಗಲ್ಲಿನಲ್ಲಿ ತೋರಿಸಿದ ಚಿತ್ರಗಳು ವಿಶೇಷ ಗಮನವನ್ನು ಸೆಳೆಯುತ್ತದೆ. ಅದರಲ್ಲಿ ಮೂರು ದೃಶ್ಯಗಳಿವೆ. ಕೆಳಗಿನ ಪಟ್ಟಿಕೆಯಲ್ಲಿ ಒಂದಕ್ಕೊಂದು ಮುಖಮಾಡಿ ನಿಂತ ಎರಡು ಆಕಳು ಕರುಗಳ ನಡುವೆ ವೀರನು (?) ನಿಂತ ಕುದುರೆ ಏರಿ ಕುಳಿತಿರುವನು. ಒಂದರಲ್ಲಿ ಕರು ಹಸುವಿನ ಹಾಲನ್ನು ಕುಡಿಯುತ್ತಿರುವುದನ್ನು ಚಿತ್ರಿಸಲಾಗಿದೆ. ಎರಡನೆಯ ಪಟ್ಟಿಕೆಯಲ್ಲಿ ನಾಲ್ಕು ಹಸು ಕರುಗಳ ನಡುವೆ ಇಬ್ಬರು ಮಹಿಳೆಯರು ನಿಂತಿರುವರು.

ಒಂದರ ಅಂಚಿನಲ್ಲಿ ಒಂದರ ಮೇಲೆ ಒಂದರಂತೆ ಎರಡು ನಿಂತ ಹಸು-ಕರುಗಳಿವೆ. ಮಹಿಳೆಯರು ಸೀರೆಯನ್ನು ಲಂಗದಂತೆ ಉಟ್ಟಿರುವರು. ಮೇಲ್ಭಾಗದಲ್ಲಿ ಶಿವಲಿಂಗದ ಎಡಕ್ಕೆ ಯತಿ ಮತ್ತು ಬಲಕ್ಕೆ ಕುಳಿತ ನಂದಿ ಇವೆ. ಇಲ್ಲಿ ಚಿತ್ರಿಸಿದ ಹಸು-ಕರುಗಳಿಂದ ಈ ಶಿಲ್ಪ ಗೋಗ್ರಹಣದ ಪ್ರಸಂಗವನ್ನು ಪ್ರತಿನಿಧಿಸುವುದು (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ ಆರ್. ಇತರರು ೨೦೦೬ ಪು ೨೧೭)

ಬೈಲಹೊಂಗಲ ತಾಲೂಕಿನ ಬೈಲೂರಿನ ಸಮಾಧಿ ಸ್ಥಳದ ಒಂದು ವೀರಗಲ್ಲಿನಲ್ಲಿ ನಾಲ್ಕು ದೃಶ್ಯಗಳಿದ್ದು, ಕೆಳಗಡೆ ಕುದುರೆಯೊಂದನ್ನು ಹಿಡಿದು ಕಂಬಕ್ಕೆ ಕಟ್ಟಿಹಾಕಲಾಗಿದೆ. ಅದು ತಪ್ಪಿಸಿಕೊಳ್ಳುವ ರೀತಿಯಲ್ಲಿ ನಿಂತಿದೆ. ಕಂಬವನ್ನು ಹಿಡಿದುಕೊಂಡು ಒಬ್ಬ ನಿಂತಿದ್ದಾನೆ. ಎರಡನೆಯ ಫಲಕದಲ್ಲಿ ಮಡಿದ ವೀರನ ಹಾಸಿಗೆ ಇರುವ ಪಲ್ಲಕ್ಕಿಯನ್ನು ಇಬ್ಬರು ಸೇವಕರು ಹೊತ್ತಿರುವುದನ್ನು ಚಿತ್ರಿಸಿರುವುದು ವಿಶೇಷ ಎನಿಸಿದೆ. ಪಲ್ಲಕ್ಕಿಯ ಮೇಲೆ ಛತ್ರಿಯನ್ನು ಹಿಡಿಯಲಾಗಿದೆ. ಮೂರನೆಯ ಪಟ್ಟಿಕೆಯಲ್ಲಿ ನಿಂತ ವೀರನನ್ನು ದೊಡ್ಡದಾಗಿ ಚಿತ್ರಿಸಿದ್ದು, ಆತನ ಎದುರಿಗೆ ವೈರಿ ನಿಂತಿದ್ದಾನೆ. ವೀರನು ಎಡಗೈಯಲ್ಲಿ ಬಿಲ್ಲನ್ನು ಮೇಲೆತ್ತಿ ಹಿಡಿದಿದ್ದು, ಬಲಗೈಯಲ್ಲಿ ಬಾಣವನ್ನು ಹಿಡಿದು ವೈರಿಗೆ ತೋರಿಸುತ್ತಿರುವನು. ವೈರಿಯನ್ನು ಕಿರಿದಾಗಿ ಚಿತ್ರಿಸಲಾಗಿದೆ. ಮೇಲ್ಗಡೆ ಶಿವಲಿಂಗದ ಮುಂದೆ ಬಲಕ್ಕೆ ಕುಳಿತ ನಂದಿ ಇದೆ. ಲಿಂಗದ ಬದಿಗಳಲ್ಲಿ ಸೂರ್ಯ ಚಂದ್ರರಿದ್ದಾರೆ. (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ ಆರ್. ಇತರರು ೨೦೦೬ ಪು ೨೧೮)

ಇದೇ ತಾಲೂಕಿನ ನಾಗರವಾಳಿಯ ಒಂದು ವೀರಗಲ್ಲಿನಲ್ಲಿ ನಾಲ್ಕು ಫಲಕಗಳಿದ್ದು ಒಂದರಲ್ಲಿ ಕೆಳಗಡೆ ಯುದ್ಧದ ದೃಶ್ಯವಿದೆ. ಅದರಲ್ಲಿ ವೀರನು ವೈರಿಯ ವಿರುದ್ಧ ಕುಸ್ತಿ ಆಡುತ್ತಿರುವನು. ಬದಿಗಳಲ್ಲಿ ಈರ್ವರು ಪರಿವಾರದವರಿದ್ದಾರೆ. ಒಬ್ಬೊಬ್ಬರನ್ನು ಮಾತ್ರ ಸಾಂಕೇತಿಕವಾಗಿ ಚಿತ್ರಿಸಲಾಗಿದೆ. ಎರಡನೇ ಫಲಕದಲ್ಲಿ ಅಪ್ಸರೆಯರಿಬ್ಬರು ಮಡಿದ ವೀರನನ್ನು ಆತನ ಕೈಗಳನ್ನು ಹಿಡಿದು ಹಾರುವ ರೀತಿಯಲ್ಲಿದ್ದಾರೆ. ಮೂರನೆಯ ಫಲಕದಲ್ಲಿ ನಡುವೆ ಮಡಿದ ವೀರ ಕುಳಿತಿದ್ದು ಆತನ ಬದಿಗೆ ಇಬ್ಬರು ಸೇವಕರು ನಿಂತಿರುವರು. ಮೇಲಿನ ಫಲಕದಲ್ಲಿ ಶಿವಲಿಂಗಗಳೆರಡನ್ನು ಯತಿಯೊಬ್ಬ ಪೂಜಿಸುತ್ತ ನಿಂತಿರುವುದನ್ನು ಚಿತ್ರಿಸಲಾಗಿದೆ. (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ ಆರ್. ಇತರರು ೨೦೦೬, ಪು ೨೧೮)

ಬೆಳಗಾವಿ ತಾಲೂಕಿನ ಕಾಕತಿಯ ಗ್ರಾಮದ ಸಿದ್ದೇಶ್ವರ ಗುಡಿಯ ಮುಂದೆ ಒಕ್ಕೈ ಮಹಾಸತಿ ಇದೆ. ಅದರಲ್ಲಿ ವಿಭಿನ್ನ ಗಾತ್ರದ ಎರಡು ಫಲಕಗಳಿವೆ. ಕೆಳಪಟ್ಟಿಕೆಯಲ್ಲಿ ತೋಳುಳ್ಳ ಮೇಲೆತ್ತಿದ ಬಲಗೈಯನ್ನು ಎಡ ಅಂಚಿನ ನಡುಭಾಗಕ್ಕೆ ಜೋಡಿಸಲಾಗಿದೆ. ಆ ಭಾಗವನ್ನು ಕಂಬ ರೀತಿಯಲ್ಲಿ ಚಿತ್ರಿಸಲಾಗಿದೆ. ಕೈಯಲ್ಲಿ ನಿಂಬೆಹಣ್ಣಿದೆ. ಈ ಕೈ ತೋಳಿನ ಕೆಳಭಾಗದ ಫಲಕದಲ್ಲಿ ಕುದುರೆಯೊಂದರ ಮೇಲೆ ಇಬ್ಬರು ಕುಳಿತು ಕತ್ತಿಯಿಂದ ಹೊಡೆದಾಡುತ್ತಿರುವರು. ಇಬ್ಬರೂ ತಮ್ಮೆರಡು ಕೈಗಳನ್ನು ಮೇಲಕ್ಕೆತ್ತಿ ಹಿಡಿದಿರುವರು. ತೇರಿನ ಮೇಲೆ ಮಡಿದ ವೀರನನ್ನು ಇಬ್ಬರು ಅಪ್ಸರೆಯರು

ಹಿಡಿದುಕೊಂಡು ಹಾರುವ ರೀತಿಯಲ್ಲಿ ನಿಂತಿರುವರು. ಮೇಲಿನ ಭಾಗದಲ್ಲಿ ಸತಿ ಪತಿಯರಿಬ್ಬರು ಶಿವಲಿಂಗದ ಮುಂದೆ ಕೈಮುಗಿದು ಕುಳಿತಿರುವರು. ಇದೇ ಸ್ಥಳದಲ್ಲಿ ಇನ್ನೂ ಮೂರು ಒಕ್ಕೈ ಮಹಾಸತಿ ಶಿಲ್ಪಗಳಿವೆ. ಒಂದರಲ್ಲಿ ಒಕ್ಕೈ ಚಿತ್ರದ ಕೆಳಗಡೆ ಮಡಿದ ವೀರನನ್ನು ಕೂರಿಸಿಕೊಂಡು ಇಬ್ಬರು ಒಯ್ಯುತ್ತಿರುವುದನ್ನು ಚಿತ್ರಿಸಲಾಗಿದೆ. ತೋಳಿನ ಮೇಲ್ಭಾಗದಲ್ಲಿ ಮಡಿದ ವೀರನನ್ನು ಮೂವರು ಸುಂದರಿಯರು ಒಯ್ಯಲು ನಿಂತಿರುವರು. ಅದರ ಮೇಲ್ಭಾಗದಲ್ಲಿ ಸಾಲಾಗಿ ಕೈಮುಗಿದು ಕುಳಿತ ದಂಪತಿಗಳು ಶಿವಲಿಂಗ ಮತ್ತು ಯತಿಯರನ್ನು ಚಿತ್ರಿಸಲಾಗಿದೆ. (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ್ ಆರ್. ಇತರರು ೨೦೦೬ ಪು. ೨೧೯)

ಇದೇ ತಾಲೂಕಿನ ಹತ್ತರಗಿ ಗ್ರಾಮದಲ್ಲಿರುವ ವಿಜಯನಗರ ಕಾಲದ ಎರಡು ಕೈಗಳುಳ್ಳ ಸತಿಕಲ್ಲು ಅಪರೂಪದ್ದೆನಿಸಿದೆ. ಅದರ ಮೂರು ಪಟ್ಟಿಕೆಗಳಲ್ಲಿ ವೈರಿ ಮತ್ತು ವೀರರು ಕುದುರೆಗಳನ್ನೇರಿ ಎದುರುಬದುರು ನಿಂತಿರುವುದನ್ನು ಕೆಳಗಿನ ಫಲಕದಲ್ಲಿ ಚಿತ್ರಿಸಲಾಗಿದೆ. ಅದರ ಮೇಲ್ಗಡೆ ಎಡ ಮತ್ತು ಬಲ ಕೈಗಳನ್ನೆರಡನ್ನು ಸಮಾನಾಂತರವಾಗಿ ನಿಲ್ಲಿಸಿ ಅದರ ತೋಳುಗಳನ್ನು ಅಂಚಿನಲ್ಲಿರುವ ಕಂಬಗಳ ನಡುವಿನ ಭಾಗಕ್ಕೆ ಜೋಡಿಸಿರುವುದರಿಂದ ಅಲ್ಲಿ ಕೆಳ ಮತ್ತು ಮೇಲ್ಭಾಗದಲ್ಲಿ ಎರಡು ಪಟ್ಟಿಕೆಗಳನ್ನಾಗಿ ವಿಭಾಗಿಸಲು ಕಾರಣವಾಗಿದೆ. ತೋಳಿನ ಕೆಳಭಾಗದ ಪಟ್ಟಿಕೆಯಲ್ಲಿ ಮೂವರು ಕೈ ಮುಗಿದು ಕಾಲುಗಳನ್ನು ಕೆಳಗಡೆ ಇಳಿಬಿಟ್ಟು ಕುಳಿತಿದ್ದರೆ ಮೇಲಿನ ಪಟ್ಟಿಕೆಯ ಎರಡು ಕೈಗಳಿರುವುದು ಎದ್ದು ಕಾಣುತ್ತದೆ. (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ ಆರ್. ಇತರರು ೨೦೦೬, ಪು ೨೨೦)

ಖಾನಾಪುರ ತಾಲೂಕಿನ ರಾಮಗುರುವಾಡಿಯ ವಿಜಯನಗರ ಕಾಲದ ಮಹಾಸತಿ ಕಲ್ಲಿನಲ್ಲಿ ಸತಿಯು ಸೀರೆಯನ್ನು ಲಂಗದ ರೀತಿಯಲ್ಲಿ ಉಟ್ಟುಕೊಂಡು ತಲೆಗೆ ಕೇದಿಗೆ ಕಿವಿಗಳಲ್ಲಿ ಓಲೆ, ಕೊರಳಲ್ಲಿ ಸರ, ಕುಚಹಾರ, ಬಳೆ, ತೊಳುಬಂಧಿ, ಕಡಗಗಳನ್ನು ಧರಿಸಿ ಸಮಭಂಗ ರೀತಿಯಲ್ಲಿ ತನ್ನೆರಡೂ ಕೈಗಳನ್ನು ಮೇಲಕ್ಕೆತ್ತಿ ನಿಂತಿರುವುದು ವಿಶೇಷವೆನಿಸಿದೆ. ಎಡಗೈಯನ್ನು ಸ್ವಲ್ಪ ಭಿನ್ನ ರೀತಿಯಲ್ಲಿ ಬಗ್ಗಿಸಿ ಅದರಲ್ಲಿ ಕನ್ನಡಿಯನ್ನು ತನ್ನ ಮುಖದ ಕಡೆಗೆ ಹಿಡಿದುಕೊಂಡಿದ್ದರೆ ತೆರೆದ ಎಡಗೈಯಲ್ಲಿ ನಿಂಬೆ ಹಣ್ಣಿದೆ. ಮೇಲಿನ ಪಟ್ಟಿಕೆಯಲ್ಲಿ ತನ್ನ ಗಂಡ ಮತ್ತು ಸವತಿ ಜೊತೆ ಶಿವಲಿಂಗದ ಬಲಗಡೆ ಕೈಮುಗಿದು ಕುಳಿತಿರುವರು. ಶಿವಲಿಂಗದ ಎಡಕ್ಕೆ ಕುಳಿತ ನಂದಿಯಿದೆ. (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ್ ಆರ್. ಇತರರು ೨೦೦೬, ಪು ೨೨೦)

ಅದೇ ತಾಲೂಕಿನ ಅಸೋಗ ಗ್ರಾಮದ ಶಿವ ದೇವಾಲಯದ ಹೊರಗಡೆ ಒಂದು ಮಹಾಸತಿ ಶಿಲ್ಪ ಇದ್ದು, ಅದರಲ್ಲಿ ಬಲಗೈಯನ್ನು ಎತ್ತಿ ನಿಂತ ಸತಿಯ ಚಿತ್ರವನ್ನು ದೊಡ್ಡದಾಗಿ ಚಿತ್ರಿಸಲಾಗಿದೆ. ಅದರಲ್ಲಿ ನಿಂಬೆಹಣ್ಣಿದೆ. ಮೇಲ್ಭಾಗದಲ್ಲಿ ಎರಡು ಆಯತಾಕಾರ ಪಟ್ಟಿಕೆಗಳನ್ನು ನಿರ್ಮಿಸಿದ್ದು ಕೆಳಗಡೆ ಮಡಿದ ಸತಿ ತನ್ನ ಸತಿ ಪಂಗಡ ಕೈಮುಗಿದು ಕುಳಿತಿರುವರು. ಮೇಲಿನ ಪಟ್ಟಿಕೆಗಳಲ್ಲಿ

ದೇವರ ಮುಂದೆ ನಾರಿಯರು ಎಡಕ್ಕೆ ಕುಳಿತಿರುವುದನ್ನು ಚಿತ್ರಿಸಲಾಗಿದೆ. (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ ಆರ್. ಇತರರು ೨೦೦೬, ಪು ೨೨೧)

ಖಾನಾಪುರ ತಾಲೂಕಿನ ಗುಂಡಪಿ ಮತ್ತು ಚಿಕ್ಕದಿನ ಕೊಪ್ಪಗಳಲ್ಲಿರುವ ವಿಜಯನಗರ ಕಾಲದ ಸತಿ ಪತಿಯರುಳ್ಳ ಶಿಲ್ಪದಲ್ಲಿ ಸತಿ-ಪತಿಯರಿಬ್ಬರ ಏಕ ಗಾತ್ರದ ಎತ್ತರದ ಉಬ್ಬುಶಿಲ್ಪಗಳಿದ್ದು ಅವರು ನಿಂತ ಭಂಗಿಯಲ್ಲಿರುವರು. ಎಡಗಡೆ ನಿಂತಿರುವ ಸತಿಯು ತನ್ನ ಕೈಗಳನ್ನು ಎತ್ತಿ ಹಿಡಿದಿದ್ದಾಳೆ. ಮೇಲೆ ಕಿರುಪಟ್ಟಿಯಿದ್ದು ಅದರಲ್ಲಿ ಶಿವಲಿಂಗದ ಬಲಕ್ಕೆ ಸತಿ-ಪತಿಯರು ಕೈಮುಗಿದು ಕುಳಿತಿದ್ದರೆ, ಎಡಕ್ಕೆ ಅದನ್ನು ಯತಿಯೊಬ್ಬ ಪೂಜಿಸುತ್ತ ನಿಂತಿದ್ದಾನೆ. ಇದೇ ರೀತಿಯ ಇನ್ನೊಂದು ಸತಿ-ಪತಿಯರಿರುವ ಶಿಲ್ಪವಿದ್ದು ಅದರಲ್ಲಿಯೂ ಸತಿ ತನ್ನ ಕೈಗಳನ್ನು ಎತ್ತಿ ಹಿಡಿದಿದ್ದಾಳೆ. ಈ ರೀತಿಯ ಮತ್ತೊಂದು ಶಿಲ್ಪದಲ್ಲಿ ಕೆಳಭಾಗದಲ್ಲಿ ವೀರನ ಉಬ್ಬುಶಿಲ್ಪವನ್ನು ತೋರಿಸಲಾಗಿದೆ. (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ ಆರ್. ಇತರರು ೨೦೦೬, ಪು ೨೨೧)

ಇದೇ ತಾಲೂಕಿನ ಬಲೋಗಾ ಗ್ರಾಮದ ಶಿಲ್ಪದಲ್ಲಿ ಕೆಳ ಮತ್ತು ಎರಡನೇ ವೀರನನ್ನು ಪಟ್ಟಿಕೆಯಲ್ಲಿ ದೊಡ್ಡದಾಗಿ ತೋರಿಸಲಾಗಿದೆ. ನಡುವಿನ ಭಾಗದಲ್ಲಿ ನಿಂತ ಆಕಳು ಕರುಗಳಿವೆ. ಕೆಳಗಿನ ಭಾಗ ಮಣ್ಣಲ್ಲಿ ಹೂತಿದೆ. ಈ ತಾಲೂಕಿನ ಕರೀಕಚ್ಚಿಯ ವೀರಗಲ್ಲಿನಲ್ಲಿ ಆರು ಪಟ್ಟಿಕೆಗಳಿರುವುದು ಗಮನೀಯ. ತಲಾ ಒಂದರ ಐದು ಪಟ್ಟಿಕೆಗಳಲ್ಲಿ ಇಬ್ಬರು ಕೈಗಳನ್ನು ಹಿಡಿದು ವಿವಿಧ ರೀತಿಯಲ್ಲಿ ನಿಂತಿರುವುದನ್ನು ಚಿತ್ರಿಸಲಾಗಿದೆ. ಅವರು ಸತಿ-ಪತಿಯರಿರಬಹುದು. ಆದರೆ ಐದನೆಯ ಫಲಕದಲ್ಲಿ ಸತಿ ಹೋದವಳು ತನ್ನ ಎರಡು ಕೈಗಳನ್ನು ಮೇಲಕ್ಕೆತ್ತಿ ಹಿಡಿದು ನಿಂತಿದ್ದರೆ, ಆಕೆಯ ಪತಿ ಎಡಗೈಯಲ್ಲಿ ಬಿಲ್ಲನ್ನು ಹಿಡಿದು ನಿಂತಿರುವನು. ಆರನೆಯ (ಮೇಲಿನ ಪಟ್ಟಿಕೆಯಲ್ಲಿ ಚಿತ್ರಿಸಿದ ಚಿತ್ರಗಳು ಅಸ್ಪಷ್ಟವಿದೆ. (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ ಆರ್. ಇತರರು ೨೦೦೬, ಪು ೨೨೧)

ಖಾನಾಪುರ ತಾಲೂಕಿನ ಹಲಸಿಯ ಕಲ್ಲೇಶ್ವರ ದೇವಾಲಯದ ಸಮೀಪ. ಅದರಲ್ಲಿ ಎರಡು ವಿಭಿನ್ನ ಗಾತ್ರದ ಗೂಡುಗಳನ್ನು ತಯಾರಿಸಿ ನಡುವೆ ಉಬ್ಬುಚಿತ್ರಗಳನ್ನು ಕಂಡರಿಸಲಾಗಿದೆ. ಕೆಳಗಿನ ಚೌಕಾದ ಗೂಡಿನ ಪಟ್ಟಿಕೆ ಭಾಗದಲ್ಲಿ ಸತಿಯು ತನ್ನೆರಡು ಕೈಗಳನ್ನು ಮೇಲಕ್ಕೆತ್ತಿಕೊಂಡು ಪತಿಯ ಜೊತೆ ನಿಂತಿದ್ದಾಳೆ. ಇಬ್ಬರ ಚಿತ್ರಗಳು ಏಕ ಗಾತ್ರದಲ್ಲಿವೆ. ಮೇಲಿನ ಆಯತಾಕಾರದ ಪಟ್ಟಿಕೆಯಲ್ಲಿ ಸತಿ-ಪತಿಯರಿಬ್ಬರು ಶಿವಲಿಂಗದ ಮುಂದೆ ಕೈಮುಗಿದು ಕುಳಿತಿರುವರು. ಒಂದರಲ್ಲಿ ಶಿವಲಿಂಗದ ಎಡಕ್ಕೆ ನಂದಿ ಮತ್ತು ಯತಿಯರನ್ನು ತೋರಿಸಲಾಗಿದೆ. (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ ಆರ್. ಇತರರು ೨೦೦೬, ಪು ೨೨೧)

ಹಲಸಿ ಗ್ರಾಮದ ಸತಿ-ಪತಿಯರ ಶಿಲ್ಪದಲ್ಲಿ ಈರ್ವರು ಸಮಾನ ಗಾತ್ರದಲ್ಲಿದ್ದು ಪತಿಯು ಖಡ್ಗ ಹಿಡಿದು ನಿಂತಿದ್ದರೆ, ಸತಿಯು ಬಲಗೈಯನ್ನು ಮಾತ್ರ ಮೇಲಕ್ಕೆತ್ತಿ ಎಡಗೈಯನ್ನು ಕೆಳಗಡೆ ಇಳಿಬಿಟ್ಟು ನಿಂತಿದ್ದಾಳೆ. ಬಲಗೈಯಲ್ಲಿ ನಿಂಬೆಹಣ್ಣಿದ್ದರೆ, ಎಡಗೈಯಲ್ಲಿ ಕನ್ನಡಿಯಿದೆ. ಸೀರೆಯನ್ನು

ಲಂಗದಂತೆ ಧರಿಸಿರುವಳು. ಆಕೆಯ ಪತಿಗೆ ಉದ್ದ ಮೀಸೆಗಳಿವೆ. ಆತನು ಸತಿಯ ಕಡೆ ಸ್ವಲ್ಪ ತಿರುಗಿ ನಿಂತಿರುವನು. ಮೇಲ್ಭಾಗದಲ್ಲಿ ದಂಪತಿಗಳು ಶಿವಲಿಂಗದ ಬಲಕ್ಕೆ ಕುಳಿತಿದ್ದಾರೆ. ಅದರ ಎಡಕ್ಕೆ ಯತಿ ಮತ್ತು ಕುಳಿತ ನಂದಿ ಇವೆ. (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ ಆರ್. ಇತರರು ೨೦೦೬, ಪು ೨೨೨)

ಖಾನಾಪುರ ತಾಲೂಕಿನ ಗೋಲಿ ಹಳ್ಳಿಯಲ್ಲಿ ನಾಲ್ಕು ಮಹಾಸತಿಯರ ಶಿಲ್ಪಗಳಿದ್ದು ತಲಾ ಒಂದರಲ್ಲಿ ಏಕ ಗಾತ್ರದಲ್ಲಿ ನಿಂತ ಸತಿ ಪತಿಯರ ಉಬ್ಬುಶಿಲ್ಪಗಳಿವೆ. ಇಲ್ಲಿಯೂ ಸತಿ ಹೋದವಳು ತನ್ನ ಬಲಗೈಯನ್ನು ಮೇಲಕ್ಕೆತ್ತಿ ಹಿಡಿದಿರುವಳು. ಒಂದರ ಮೇಲಿನ ಭಾಗ ಒಡೆದಿದೆ. ಉಳಿದೆರಡರ ಮೇಲಿನ ಭಾಗದಲ್ಲಿ ದಂಪತಿಗಳನ್ನು ಶಿವಲಿಂಗದ ಸಾನಿಧ್ಯದಲ್ಲಿ ಚಿತ್ರಿಸಲಾಗಿದೆ. ಯತಿಯೊಬ್ಬ ಶಿವಲಿಂಗವನ್ನು ಆರಾಧಿಸುತ್ತಿರುವನು (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ್ ಆರ್. ಇತರರು ೨೦೦೬ ಪು. ೨೨೨)

ಖಾನಾಪುರ ತಾಲೂಕಿನ ನಾಗರಹಳ್ಳಿ ವೀರ–ಮಹಾಸತಿ ಶಿಲ್ಪವಿದ್ದು ಇದು ಮೂರು ದೃಶ್ಯಗಳಿಂದ ಕೂಡಿದೆ. ಕೆಳಗಿನ ಫಲಕದಲ್ಲಿ ವೀರನು ತನ್ನ ಪರಿವಾರದೊಂದಿಗೆ ವೈರಿ ಪರಿವಾರದ ವಿರುದ್ಧ ಯುದ್ಧ ಮಾಡುವ ದೃಶ್ಯವಿದೆ. ವೈರಿ ಕುದುರೆಯ ಮೇಲೆ ಕುಳಿತ ವೀರನ ಜೊತೆ ಕತ್ತಿಯಿಂದ ಯುದ್ಧ ಮಾಡುತ್ತಿರುವರು. ವೈರಿ ಪರಿವಾರದವ ಬಿಲ್ಲು–ಬಾಣ ಹಿಡಿದಿರುವ ಎರಡನೇ ಫಲಕದಲ್ಲಿ ವೀರನು ತನ್ನ ಪತ್ನಿಯರಿಬ್ಬರ ನಡುವೆ ಬಿಲ್ಲು ಹಿಡಿದು ನಿಂತಿರುವನು. ಪತ್ನಿಯರಿಬ್ಬರು ತಮ್ಮ ಬಲಗೈಯನ್ನು ಮೇಲತ್ತಿಕೊಂಡು ನಿಂತಿರುವರು. ಮೇಲ್ಭಾಗದಲ್ಲಿ ಎಡಗಡೆಗೆ ಮಡಿದ ವೀರ ತನ್ನಿಬ್ಬರು ಪತ್ನಿಯರ ಜೊತೆ ಕೈಮುಗಿದು ಕುಳಿತಿದ್ದು ಅವರ ಬಲಗಡೆಗೆ ತಮ್ಮ ಆರಾಧ್ಯದೈವವನ್ನು ಚಿತ್ರಿಸಲಾಗಿದೆ. ಈ ದೇವತೆ ಚಿತ್ರ ಅಸ್ಪಷ್ಟ. ಅದರ ಬಲಕ್ಕೆ ಒಂದು ಪ್ರಾಣಿ ನಿಂತಿದೆ. (ವಿಜಯನಗರ ಅಧ್ಯಯನ ಸಂಪುಟ ೧೨ (ಸಂ) ಗೋಪಾಲ ಆರ್. ಇತರರು ೨೦೦೬, ಪು ೨೨೩)

## ಅಧ್ಯಾಯ : ಏಳು

# ಮಹಾಸತಿಗಲ್ಲು ಶಾಸನ ಸಹಿತ

ಪ್ರಾಚೀನ ಭಾರತೀಯ ಜನರಲ್ಲಿ ನಂಬಿಕೆ ಅಪಾರ ಪ್ರಮಾಣದಲ್ಲಿ ಬೇರೂರಿತ್ತು. ಪರಲೋಕದ ಕಲ್ಪನೆಯಲ್ಲಿ ನಂಬಿಕೆ ಇಟ್ಟ ಜನರು ಮರಣ ಹೊಂದಿದ ವ್ಯಕ್ತಿಯ ಜೊತೆಯಲ್ಲಿ ಅವನಿಗಿಷ್ಟವಾದ ಕೆಲವು ವಸ್ತುಗಳನ್ನು ಕಳುಹಿಸಿಕೊಡುವ ಸಂಪ್ರದಾಯವನ್ನು ರೂಢಿಸಿಕೊಂಡರು (ಚನ್ನಕ್ಕ ಎಲಿಗಾರ, ಮಾಸ್ತಿಕಲ್ಲು, ೧೯೭೭, ಪುಟ-೧೫). ನಮ್ಮ ಪುರಾತನ ಸಮಾಧಿಗಳನ್ನು ತೆರೆದಾಗ ಅಲ್ಲಿ ಹೂಳಿದ್ದ ವ್ಯಕ್ತಿಯ ಅಸ್ಥಿಪಂಜರದ ಜೊತೆಯಲ್ಲಿ ಅನೇಕ ಕುಡಿಕೆ, ಆಭರಣಗಳು ದೊರೆತಿವೆ. ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ವ್ಯಕ್ತಿ ಸತ್ತಾಗ ಅವನಿಗಿಷ್ಟವಾದ ವಸ್ತುಗಳನ್ನು ಸಮಾಧಿಯ ಮುಂದಿಟ್ಟು ಪೂಜಿಸುವುದನ್ನು ಕಾಣುತ್ತೇವೆ. ಈ ಭಾವನೆಯೇ ಮಾಸ್ತಿ ಪರಂಪರೆಗೆ ದಾರಿ ಮಾಡಿಕೊಟ್ಟಿತೆನ್ನಬಹುದು. ಪುರುಷನ ಅತ್ಯಂತ ಪ್ರಿಯವಾದ ವಸ್ತು ವ್ಯಕ್ತಿಗಳಲ್ಲಿ ಆತನ ಪತ್ನಿಯೂ ಒಬ್ಬಳು. ತಾನು ಮರಣ ಹೊಂದಿದ ನಂತರ ತನ್ನ ಪತ್ನಿ ತನ್ನಿಂದ ಅಗಲಿರಬಾರದೆಂಬ ಭ್ರಮೆಯಿಂದಲೋ ಅಥವಾ ಅವಳು ಮತ್ತೊಬ್ಬನ ವಶವರ್ತಿಯಾಗಿರಬಾರದೆಂಬ ಕಲ್ಪನೆಯಿಂದಲೋ ತಾನು ಹೋದಾಗ ತನ್ನೊಡನೆ ಅವಳನ್ನು ಕರೆದೊಯ್ಯುವಂತೆ ಮಾಡಿದ ವ್ಯವಸ್ಥೆ ಎಂದು ಹೇಳಬಹುದು. (ಸಮಾಧಿ ಬಲಿದಾನ ವೀರಮರಣ ಸ್ಮಾರಕಗಳು, ಕಲಬುರ್ಗಿ ಎಂ.ಎಂ., ೧೯೮೦, ಪುಟ-೨೬)

ಈ ಪದ್ಧತಿಯ ಆರಂಭದ ಕಾಲವನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟಸಾಧ್ಯ. ವಿದ್ವಾಂಸರಲ್ಲಿ ನಿಖರವಾದ ಅಭಿಪ್ರಾಯಗಳಿಲ್ಲ. ಇಂಥ ಪದ್ಧತಿಯು ಕೇವಲ ಭಾರತದಲ್ಲಿ ಅಷ್ಟೇ ಅಲ್ಲದೇ ಪ್ರಪಂಚದ ನಾಗರಿಕತೆಗಳಾದ ಈಜಿಪ್ತ್, ಸುಮೇರಿಯಾ, ಗ್ರೀಕ್, ಚೀನಿಯರಲ್ಲಿಯೂ ಆಚರಣೆಯಲ್ಲಿತ್ತು. ಮಹಾಭಾರತದಲ್ಲಿ ಸತಿ ಪದ್ಧತಿಯ ಉಲ್ಲೇಖವಿದೆ. ಪಾಂಡುರಾಜನ ಮರಣದ ನಂತರ ಆತನ

ಕಿರಿಯ ರಾಣಿ ಮಾದ್ರಿ ಅಕ್ಕ ಕುಂತಿಗೆ ಈ ರೀತಿ ಹೇಳುತ್ತಾಳೆ. 'ಅಕ್ಕ ನಾನು ಪತಿಯೊಡನೆ ಚಿತೆಯೆರುತ್ತೇನೆ, ಐವರು ಮಕ್ಕಳ ಭಾರವು ನಿನ್ನದೆ' ಎಂದು ಹೇಳಿದಾಗ ಕುಂತಿಯ ಕರುಳು ಕಿತ್ತುಬರುವಂತೆ ರೋಧಿಸುತ್ತಾಳೆ. ವೈವಿಧ್ಯದ ಬಾಳು ಬಾಳೆ? ಏಕೆ ಈ ಬಾಳು ಎಂದು ಕುಂತಿ ಚಿಂತಿಸಿದರೂ ಮಕ್ಕಳ ಉಳುವಿಗಾಗಿ ಕಷ್ಟ ನಿಷ್ಟುರುಗಳನ್ನು ಸಹಿಸಿ ಮಕ್ಕಳ ಪೋಷಣೆಗೆ ನಿಂತರೆ, ಮಾದ್ರಿ ಚಿತೆಯೇರಿ ಸತಿ ಸಾಧ್ವಿಯಾಗುತ್ತಾಳೆ.

ಅಗ್ನಿ ಪುರಾಣದಲ್ಲಿ 'ಮಡಿದ ಗಂಡನ ಜೊತೆ ಬೆಂಕಿಯಲ್ಲಿ ಬಿದ್ದು ಮರಣ ಹೊಂದಿದ ಸತಿ, ಪತಿ ಸಹಿತ ಸ್ವರ್ಗ ಸೇರುತ್ತಾಳೆ' ಎಂದು ತಿಳಿದುಬರುತ್ತದೆ. ಬೃಹಸ್ಪತಿಯು 'ಪತಿಯ ಸುಖ-ದುಖಃದಲ್ಲಿ ಪತ್ನಿಯು ಸಹ ಭಾಗಿಯಾಗಿದ್ದಲ್ಲಿ ಅವನ ಮರಣ ನಂತರ ತಾನು ಮೃತ್ಯುವನ್ನಪ್ಪುತ್ತಾಳೆ. ಆಗಲೇ ನಿಜವಾಗಿ ಆಕೆ ಅವನಲ್ಲಿ ಅನುರಕ್ತಳು' ಎಂದು ಹೇಳಿದ್ದಾನೆ. ಈ ಪದ್ಧತಿಗೆ ಬಳಸುವ ಪದ ಬಹುಶಃ ಶಿವನ ಪತ್ನಿ ದಾಕ್ಷಾಯಿಣಿ ಅಥವಾ ಸತಿದೇವಿ ಪತಿಯ ಪರವಾಗಿ ನಿಂತು ದಕ್ಷಬ್ರಹ್ಮನ ಯಜ್ಞದಲ್ಲಿನ ಪ್ರಾಣಾರ್ಪಣೆ ಮಾಡಿದ ಘಟನೆಯೇ ಗಂಡನಿಗಾಗಿ ಹೆಂಡತಿ ಚಿತಾ ಪ್ರವೇಶ ಮಾಡುವ ಈ 'ಸತಿ' ಪದ್ಧತಿಗೆ ಮೂಲವಾಗಿರಬೇಕು. (ಮಾಸ್ತಿಕಲ್ಲು, ಚನ್ನಕ್ಕ ಎಲಿಗಾರ, ೧೯೭೭, ಪುಟ-೧೨) ಪುರಾತನ ಕಾಲದಲ್ಲಿ ಈ ಸತಿ ಪದ್ಧತಿ ಬ್ರಾಹ್ಮಣರಲ್ಲಿ ಆರಂಭವಾಗಿ ಕಾಲಾನಂತರ ನಿಷೇದಕ್ಕೊಳಪಟ್ಟು ಕ್ಷತ್ರಿಯರಲ್ಲಿ ಅದು ಮುಂದುವರೆಯಿತು. ಸತಿಯಾಗಬಯಸುವವಳು ಬೇರೊಂದು ಲೋಕದಲ್ಲಿರುವ ತನ್ನ ಪತಿಯ ಸಂಗವನ್ನು, ಸಾನಿಧ್ಯವನ್ನು ಬಯಸಿ ಸಹಗಮನ ಕೈಗೊಳ್ಳುತ್ತಿದ್ದಳು. ಧರ್ಮ, ಅರ್ಥ, ಕಾಮ, ಮೋಕ್ಷಗಳಲ್ಲಿ ಪತಿಯೊಡನೆ ಸಪ್ತಪದಿ ತುಳಿದು ಸಹಗಮನದ ಮೂಲಕ ಅಗಲಿದ ಪತಿಯನ್ನು ಪಡೆಯುವ ಕಲ್ಪನೆಯಿತ್ತು.

ಸತಿ ಆಚರಿಸುವವಳು ಮೊದಲು ಎಣ್ಣೆ, ಅರಿಶಿಣ ಹಚ್ಚಿಕೊಂಡು ಪುಷ್ಪಾಲಂಕೃತಳಾಗಿ ಹಳದಿ ಸೀರೆಯನ್ನುಟ್ಟು, ಕೈಯಲ್ಲಿ ನಿಂಬೆಹಣ್ಣನ್ನು ಹಿಡಿದು ಊರ ಮಹಾಜನರ ಸಮ್ಮುಖದಲ್ಲಿ ಮನೆ ಮನೆಗೆ ಕಾಲು ನಡಿಗೆಯಿಂದ ಹೋಗಿ ಕೋರೊಟ ಮಾಡಿ ಅಗ್ನಿ ಪ್ರವೇಶಿಸುವ ಮೊದಲು ತನ್ನ ಬಲಗೈಯನ್ನು ಕಲ್ಲಿನ ಮೇಲೆ ಒತ್ತಿ ಮೈಮೇಲಿನ ಆಭರಣಗಳನ್ನು ದಾನ ಮಾಡಿ ಎಣ್ಣೆಯಲ್ಲಿ ಮುಖ ನೋಡಿ, ನೋಡುಗರತ್ತ ಕೈಬೀಸುತ್ತ ಮಂಗಳ ವಾದ್ಯಗಳು ಮೊಳಗುತ್ತಿದ್ದಂತೆ ಕರ್ಪೂರ ಕಟ್ಟಿಗೆಗಳ ಬೆಂಕಿಯಲ್ಲಿ ಚಿತೆ ಏರುತ್ತಿದ್ದಳು. ಹೀಗೆ ಬೆಂಕಿಯಲ್ಲಿ ಬಿದ್ದು ಸಾಯುವ ಕ್ರಿಯೆ ಸತಿ ಆಚರಣೆಯಾಗಿತ್ತು.

ತುಱುಗೋಳ್, ಊರಳಿವು ಮತ್ತು ಪೆಣ್ಬುಯ್ಯಲ್‌ಗಳಂತಹ ಸಂದರ್ಭಗಳಲ್ಲಿ ವೀರ ಮರಣ ಹೊಂದಿದ ವೀರರ ಪತ್ನಿಯರು ತಮ್ಮ ಮುಂದಿನ ಜೀವನದ ಭಯದಿಂದಲೋ, ಇಲ್ಲವೇ ಸ್ವರ್ಗ ಪ್ರಾಪ್ತಿಯಾಗುವುದೆಂಬ ಭಾವನೆಯಿಂದಲೋ ಸತಿ ಆಚರಿಸುತ್ತಿದ್ದರು. ಇದರಲ್ಲಿ ಅರಸ, ಸಾಮಂತ, ಗಾವುಂಡ ಅಲ್ಲದೆ ಜನಸಾಮಾನ್ಯರಿಗೆ ಸಂಬಂಧಿಸಿದ ಮಹಿಳೆಯರೂ ಭಾಗಿಗಳಾಗುತ್ತಿದ್ದರು.

ಒಟ್ಟಿನಲ್ಲಿ ಗಂಡ ಸತ್ತ ಮೇಲೆ ಆತನ ಜೊತೆ ಪ್ರಾಣತ್ಯಾಗ ಮಾಡುವ ಸ್ತ್ರೀಯರನ್ನು 'ಮಹಾಸತಿ' ಅಥವಾ 'ಮಾಸ್ತಿ' ಎಂದು ಕರೆಯುತ್ತಿದ್ದರು.

'ಮಾಸ್ತಿ' ಎಂಬುದು ಸಂಸ್ಕೃತದ 'ಮಹಾಸತಿ' ಎಂಬುದರ ಸಂಕ್ಷಿಪ್ತರೂಪ. ಗಂಡ ಸತ್ತ ಮೇಲೆ ಅವನ ಜೊತೆ ಪ್ರಾಣತ್ಯಾಗ ಮಾಡುವ ಸ್ತ್ರೀಯನ್ನು ಮಹಾಸತಿ ಅಥವಾ ಮಾಸ್ತಿ ಎಂದು ಕರೆಯುತ್ತಿದ್ದರು. (ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು, ಚಿದಾನಂದಮೂರ್ತಿ ಎಂ., ೧೯೮೪, ಪುಟ-೧೫) ಮಹಾಸತಿ-ಮಾಸ್ತಿ ಎಂಬುದರ ತದ್ಭವ ರೂಪ. ಮಾಸ್ತಿ ಎರಡು ಬಗೆಯಾಗಿದೆ.

೧. ಸಹಗಮನ – (ಸಹಮರಣ)

೨. ಅನುಗಮನ – (ಅನುಮರಣ)

ಗಂಡನ ಶವದೊಂದಿಗೆ ಚಿತೆಯೇರುವುದು ಸಹಗಮನ, ಗಂಡ ದೂರದ ಸ್ಥಳದಲ್ಲಿ ಮಡಿದರೆ ಅವನ ಪ್ರಿಯ ವಸ್ತುಗಳನ್ನು ಹಿಡಿದು ಚಿತೆಯೇರುವುದು ಅನುಗಮನ. (ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಕಲಬುರ್ಗಿ ಎಂ.ಎಂ., ೧೯೮೦, ಪುಟ-೨೭)

ವೀರಗಲ್ಲುಗಳಂತೆಯೇ ಮಾಸ್ತಿಕಲ್ಲುಗಳನ್ನು ಗುರುತಿಸುವುದು ಬಹು ಸುಲಭ. ಶಸ್ತ್ರಧಾರಿಯಾದ ಪುರುಷ ಮತ್ತು ಅವನ ಜೊತೆ ಇನ್ನೊಬ್ಬ ಸ್ತ್ರೀಯ ಚಿತ್ರವಿದ್ದರೆ ಅವನು ಹೋರಾಡಿ ಸತ್ತ ವೀರನೆಂದೂ, ಅವಳು ಅವನ ಜೊತೆ ಸಹಗಮನ ಮಾಡಿದ ಅವನ ಹೆಂಡತಿಯೆಂದೂ ತಿಳಿದುಬರುತ್ತದೆ. ಕೆಲವೊಮ್ಮೆ ಮೂವರು, ನಾಲ್ವರು ಸ್ತ್ರೀಯರ ಚಿತ್ರವಿದ್ದು ಅವರೆಲ್ಲ ತಮ್ಮ ಗಂಡನ ಸಮೇತ ಸಹಗಮನ ಮಾಡಿರುತ್ತಾರೆ. ಕೆಲವು ಮಾಸ್ತಿಕಲ್ಲುಗಳ ಮೇಲೆ ಬರಿಯ ಸ್ತ್ರೀ ವಿಗ್ರಹವಿರುತ್ತದೆ. (ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು, ಚಿದಾನಂದಮೂರ್ತಿ ಎಂ., ೧೯೮೪, ಪುಟ-೧೫) ಹೀಗೆ ಅಗ್ನಿ ಪ್ರವೇಶದ ಮೂಲಕವೋ, ಸಲ್ಲೇಖನ ವ್ರತದ ಮೂಲಕವೋ, ಸಮಾಧಿ ಪ್ರವೇಶದ ಮೂಲಕವೋ ತಮ್ಮನ್ನು ಪತಿಗೆ ಸಮರ್ಪಿಸಿಕೊಂಡು ಮಹಾಸತಿಯರ ಹೆಸರಿನಲ್ಲಿ ನಿಲ್ಲಿಸಿದ ಅನೇಕ ಸ್ಮಾರಕಗಳು ನಮಗೆ ಕಾಣಸಿಗುತ್ತವೆ. ಇಲ್ಲಿ ಒಂದೇ ಚಿತ್ರವಿದ್ದರೆ ಒಬ್ಬ, ಒಂದಕ್ಕಿಂತ ಹೆಚ್ಚು ವಿಗ್ರಹಗಳಿದ್ದರೆ ಬಹು ಪತ್ನಿಯರ ಸಹಗಮನವನ್ನು ಸೂಚಿಸುತ್ತದೆ. ಸಹಗಮನ ಹೊಂದಿದ ಸ್ತ್ರೀಯ ಸಂಪೂರ್ಣ ಚಿತ್ರವಿದ್ದರೆ ಒಂದು ಕೈಯಲ್ಲಿ ನಿಂಬೆಹಣ್ಣು ಇರುತ್ತದೆ. ಇನ್ನೊಂದು ಕೈಯಲ್ಲಿ ಕನ್ನಡಿ ಇರಬಹುದು, ಕೆಲವೊಮ್ಮೆ ಬಿಚ್ಚಿದ ಕೂದಲು, ಅದರ ಹಿಂದೆ ಉರಿಯುವ ಜ್ವಾಲೆ ಇರುತ್ತದೆ. ಸೌಭಾಗ್ಯ ಸೂಚಕಗಳಾದ ಓಲೆ, ಕಂಕಣ, ಬಳೆ, ಪೂರ್ಣಕುಂಭ, ತೆಂಗು, ಪದ್ಮಗಳು ಕಂಡುಬರುತ್ತವೆ. ಕೈಯಲ್ಲಿ ಲಿಂಬೆ ಅನಿಷ್ಟ ನಿವಾರಕದ ಸೂಚಿಯಾಗಿರಬೇಕು. ಪತಿಗಾಗಿ ಅಗ್ನಿ ಪ್ರವೇಶಗೈದ ಸತಿ ಜನತೆಯ ದೃಷ್ಟಿಯಲ್ಲಿ ದೈವಿ ಸ್ವರೂಪಳಾಗಿ ಮಾರ್ಪಡಾದಾಗ ಅವಳಿಗೆ ಗುಡಿ ಕಟ್ಟಿಸಲ್ಪಟ್ಟು ಪೂಜೆ-ಪುನಸ್ಕಾರಗಳು ನೆರವೇರತೊಡಗಿದವು. (ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಚನ್ನಕ್ಕ ಎಲಿಗಾರ, ೧೯೯೦, ಪುಟ-೨೫೦-೨೫೧)

ಮಾಸ್ತಿಕಲ್ಲುಗಳ ಮೇಲಿರುವ ಶಿವಲಿಂಗದ ಚಿತ್ರವು ಅವರು ಭಗವಂತನ ಸಾನಿಧ್ಯಕ್ಕೆ ಹೋದರೆಂಬುದನ್ನು ಸೂರ್ಯ, ಚಂದ್ರರ ಚಿತ್ರಗಳು ಮಾಸ್ತಿಯವರ ಸ್ಮಾರಕಗಳಾದ ಶಿಲೆಗಳ ಶಾಶ್ವತವಾಗಿ ಉಳಿದು ಅವರ ಹೆಸರು ಲೋಕದಲ್ಲಿ ಎಂದೆಂದಿಗೂ ಉಳಿಯಲೆಂಬ ಹಾರೈಕೆಯನ್ನು ಸೂಚಿಸುತ್ತವೆ. (ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು, ಚಿದಾನಂದಮೂರ್ತಿ ಎಂ., ೧೯೮೪, ಪುಟ–೧೬,೩೩) ಇಂಥ ಒಟ್ಟು ಸ್ಮಾರಕಗಳನ್ನು ಕರ್ನಾಟಕದ ಶಾಸನಗಳು ಮಾಸ್ತಿಕಲ್ಲು, ಮಧುವಳಿಗೆ ಕಲ್ಲು, ಸಹಾನುಭೂತಿ ಕಲ್ಲು, ಬೀರುಗಲ್ಲು, ಮಾಸ್ತಿ ಸತಿಕಲ್ಲು ಎಂದು ಕರೆಯಲಾಗುತ್ತದೆ. (ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಚನ್ನಕ್ಕ ಎಲಿಗಾರ, ೧೯೯೦, ಪುಟ–೨೫೦–೨೫೨) ಇಂತಹ ಅನೇಕ ವಿಶಿಷ್ಟವಾದ, ವೈವಿಧ್ಯಮಯವಾದ ಮಾಸ್ತಿ ಹಾಗೂ ವೀರಮಾಸ್ತಿ ಶಿಲೆಗಳು ಉತ್ತರ ಕರ್ನಾಟಕದಲ್ಲಿ ಅಲ್ಪ ಪ್ರಮಾಣದಲ್ಲಿ ಸಿಗುತ್ತವೆ. ಕ್ರಿ.ಶ. ೧೦೫೭ರ ಬೆಳತೂರಿನ ದೇಕಬ್ಬೆ ಶಾಸನ ಗಮನಾರ್ಹವಾಗಿದ್ದು, ಇಲ್ಲಿ ಪತಿಯ ಸಾವನ್ನು ಕೇಳಿ ಅಗ್ನಿ ಪ್ರವೇಶ ಮಾಡುತ್ತಾಳೆ.

ಚಿಂಚೋಳಿ ತಾಲೂಕಿನ ಐನಾಪುರ ಗ್ರಾಮದ ಹಿರೇಮಠದ ಗೋಡೆಗೆ ಇರುವ ೧೧ನೇ ಶತಮಾನದ ಒಕ್ಕೈ ಮಾಸ್ತಿಗಲ್ಲು ವ್ಯಾಸನ ತೋಳು ಸತಿ–ಪತಿಯರು ಅಂಜಲಿ ಹಸ್ತದಲ್ಲಿ ಕುಳಿತಿರುವ ಶಿಲ್ಪವನ್ನು ಒಳಗೊಂಡಿದೆ. ಮೇಲ್ಭಾಗದಲ್ಲಿ ಚಂದ್ರ, ಲಿಂಗ ಮತ್ತು ಸೂರ್ಯನ ಶಿಲ್ಪಗಳಿವೆ.

ಚಿಂಚೋಳಿ ತಾಲೂಕಿನ ಭೂತಪುರ ಗ್ರಾಮದ ಸ.ಹಿ.ಪ್ರಾ. ಶಾಲೆ ಹಿಂಬದಿಯಲ್ಲಿರುವ ೧೧ನೇ ಶತಮಾನದ ಒಕ್ಕೈ ಮಾಸ್ತಿಗಲ್ಲು ಎರಡು ಸ್ತರದಲ್ಲಿದೆ. ಒಂದನೇ ಸ್ತರದಲ್ಲಿ ಮಾಸ್ತಿಗ್ಯೆ ಮತ್ತು ಮೇಲ್‌ಸ್ತರದಲ್ಲಿ ಲಿಂಗೈಕ್ಯವಾದ ಸತಿ ಅಂಜಲಿ ಹಸ್ತದಲ್ಲಿ ಲಿಂಗದ ಮುಂದೆ ಕುಳಿತ ಶಿಲ್ಪಾವಳಿಯಿದೆ. (ಕರ್ನಾಟಕದ ಗೆಜಿಟೆಯರ್, ಕಲಬುರಗಿ ಜಿಲ್ಲೆ, ೧೯೯೭, ಪುಟ–೭೪೭)

ಆನೆಗೊಂದಿ ಶಾಸನವೊಂದರಲ್ಲಿ ಗಂಡ ಸತ್ತಾಗ ರಾಣಿ ಶ್ರೀ ರಂಗಮ್ಮ ತಾನು ಕೂಡ ಮಹಾಸತಿಯಾಗಿ ಬೆಂಕಿಯಲ್ಲಿ ಬಿದ್ದು ಸತ್ತಿರಬಹುದು ಎಂದು ಹೇಳಬಹುದು. (ಕವಿಹಂ.ಶಾ.ಸಂ–೨, ಗಂಗಾವತಿ–೩೮)

ಅದೇ ಊರಿನ ಶಾಸನವೊಂದರಲ್ಲಿ ಭಯಿರಿ ಸೆಟ್ಟಿ ಮಗನಾಗಿ ಸೆಟ್ಟಿಯ ಹೆಂಡತಿ ತಿಂಮಾಯಿ ತನ್ನ ಗಂಡ ಸತ್ತಾಗ ಕಿಚ್ಚಹಾಯ್ದು ಸತ್ತ ವಿಷಯ ತಿಳಿಸುತ್ತದೆ. (ಕವಿಹಂ.ಶಾ.ಸಂ–೨, ಗಂಗಾವತಿ–೩೯)

ಅಮೀನಬಾವಿ ಗ್ರಾಮದ ಜೈನ ಬಸದಿಯ ಎದುರು ಮಹಾಸತಿಗಲ್ಲು ಶಾಸನದ ಕೆಲವು ಸಾಲುಗಳು ಒಡೆದು ಹೋಗಿವೆ. ಶಾಸನದ ಮಿತಿ ಪ್ರಾರಂಭದಲ್ಲಿ ಚಾಲುಕ್ಯ ವಿಕ್ರಮ ವರ್ಷದ ಉಲ್ಲೇಖ ಬರುತ್ತದೆ. ಅರಸನ ಹೆಸರು ಹಾಳಾದ ಭಾಗದಲ್ಲಿರಬಹುದು. ಆದಿತ್ಯ ದೇವನ ಸತ್ರಕ್ಕೆ ಉಣ್ಕಲ್ಲದ ಉತ್ತವರಾಶಿ ಪಂಡಿತರ ಮಹಾಸತಿ ಚಂದಿಕಬ್ಬೆ ಭೂಮಿ, ಮನೆ, ಗಾಣ, ಬಣವೆಗಳನ್ನೂ ಇವಳು ತಮ್ಮ ದಸವರ್ಮ ಮತ್ತು ದಸವರ್ಮನ ಮಗ ರಾಜಾದಿತ್ಯರು ಐದು ತಳಿಗಳನ್ನೂ

ಚಂದಲೆಯ ಮಗ ಪಂಡಿತರ ಹಂಪಗಾವುಂಡ ಮೂರು ತಳಿಗಳನ್ನೂ ದಾನ ನೀಡಿದುದ್ದು ಈ ಶಾಸನದ ವಿಷಯ. ಮಲ್ಲಿಕಾರ್ಜುನ ದೇವರಿಗೆ ಗೊರವಗೇರಿಯ ದೇವಪುತ್ರಕರು ಹಾಗೂ ಬಾಡಸರೊಕ್ಕಲು ಮುಖ್ಯವಾಗಿ ಅಜಿತ್ತೊಕ್ಕಲುಗಳು ಬಿಟ್ಟ ದತ್ತಿಯೊಂದರ ಉಲ್ಲೇಖವೂ ಇಲ್ಲಿ ಬರುತ್ತದೆ. ಇದರ ಕಾಲ ಕ್ರಿ.ಶ.ಸುಮಾರು ೧೧೧೨ಕ್ಕೆ ಸಮಾನವಾದುದು. (ಧಾರವಾಡ ತಾಲೂಕಿನ ಶಾಸನಗಳು, (ಸಂ) ಕಲಬುರ್ಗಿ ಎಂ.ಎಂ., ೧೯೭೬, ಪುಟ-೫)

ಮನಗುಂಡಿ ಗ್ರಾಮದ ಸಿದ್ಧಲಿಂಗ ಹಕ್ಕಲವೆಂಬ ಹೊಲದಲ್ಲಿಯ ಮಾಸ್ತಿಕಲ್ಲು ನಾಡು ಪ್ರಭು ಹಳ್ಳಿಗೆರೆಯ ಮಲ್ಲಪ್ಪನು ಸ್ವರ್ಗಸ್ಥನಾದನೆಂಬ ಉಲ್ಲೇಖವಿದೆ. ಇದು ಮಲ್ಲಪ್ಪನ ಹೆಂಡತಿಯ ಸಹಗಮನದ ಸ್ಮಾರಕವಾಗಿರಬಹುದು. ಈ ಶಾಸನದ ಕಾಲ ಕ್ರಿ.ಶ.ಸುಮಾರು ೧೫೮೪ ಇರಬಹುದು. (ಧಾರವಾಡ ತಾಲೂಕಿನ ಶಾಸನಗಳು, (ಸಂ) ಕಲಬುರ್ಗಿ ಎಂ.ಎಂ., ೧೯೭೬, ಪುಟ-೧೧೬)

ಕ್ರಿ.ಶ. ೧೪೦೭ರ ಒಂದು ಶಾಸನವು ಗದಗ ತಾಲೂಕಿನ ಕಣವಿಯ ಮೈಲಾರಿ ದೇವಾಲಯದಲ್ಲಿದ್ದು ಇದು ಎರಡನೇ ಹರಿಹರನ ಕಾಲಕ್ಕೆ ಸೇರಿರುತ್ತದೆ. ಇದರಲ್ಲಿ “ಕಿಲಾರಿ ಸಾಯಿನಾಯಕನ ಮಗ (ದೇವ) ನಾಯಕ ಅವನ ಮದವಳಿಗೆ ನಾಗಾಯಿ, ದೇಮಾಯಿಗಳು ಮಹಾಸತಿ ಆತನ ಸಂಘಾತ ಸ್ವರ್ಗಸ್ತರಾದರು” ಎಂದು ಹೇಳುತ್ತದೆ. ಇದು ವೀರಗಲ್ಲು ಮಹಾಸತಿ ಎರಡು ವಿಷಯಗಳನ್ನು ತಿಳಿಸುವ ಶಾಸನವಾಗಿದೆ. (ಎಸ್.ಐ.ಐ. ೨೦, ಕಣವಿ, ಶಾ.ಸಂ.೨, ಪುಟ-೭೯)

ಮುಂಡರಗಿ ತಾಲೂಕಿನ ಕಲಕೇರಿ ಗ್ರಾಮದ ಊರ ಚಾವಡಿ ಹತ್ತಿರ ಒಂದು ಕೈ ಮೇಲಕ್ಕೆ ಎತ್ತಿದ ಒಂದು ಮಹಾಸತಿಯ ವಿಗ್ರಹವಿದ್ದು, ಅದು ಸಹ ಮಹಾಸತಿಯಾದವಳ ಬಗ್ಗೆ ತಿಳಿಸುತ್ತದೆ. ಆದರೆ ಯಾವುದೇ ವಿಚಾರವನ್ನು ತಿಳಿಸುವ ಲಿಪಿ ಇಲ್ಲ.

ಹುಬ್ಬಳ್ಳಿ ತಾಲೂಕಿನ ಭೈರಿದೇವರ ಕೊಪ್ಪದ ಬಸ್ ನಿಲ್ದಾಣದ ಬಳಿಯ ಮಠದ ಹತ್ತಿರವಿರುವ ವೀರ-ಸತಿಕಲ್ಲಿನಲ್ಲಿ ಈಗ ಎರಡು ಭಾಗಗಳು ಮಾತ್ರ ಕಂಡುಬರುತ್ತವೆ. ಕೆಳಗಿನ ಭಾಗದಲ್ಲಿ ಬಲಮಗ್ಗುಲಿನಲ್ಲಿ ಇಬ್ಬರು ಸತಿಯರು ತಮ್ಮ ಬಲಗೈಗಳನ್ನು ಮೇಲಕ್ಕೆತ್ತಿ ಎಡಗೈಯನ್ನು ಕೆಳಗೆ ಇಳಿಬಿಟ್ಟು ನಿಂತಿದ್ದಾನೆ. ಈ ಇಬ್ಬರು ಸತಿಯರು ವಸ್ತ್ರಾಭರಣಗಳಿಂದ ಅಲಂಕೃತಗೊಂಡಿದ್ದು ತಮ್ಮ ಕೇಶವನ್ನು ಕೇದಿಗೆಯಿಂದ ಅಲಂಕರಿಸಿಕೊಂಡಿದ್ದಾರೆ. ಇವರಿಬ್ಬರ ಮಧ್ಯದಲ್ಲಿ ವ್ಯಕ್ತಿ (ಮಗ)ಯೊಬ್ಬನನ್ನು ತೋರಿಸಲಾಗಿದೆ. ಸತಿಯರ ಎಡ ಮಗ್ಗುಲಲ್ಲಿ ಅಂದರೆ ಶಿಲ್ಪದ ಎಡಭಾಗದಲ್ಲಿ ಒಂದು ವಿಮಾನವಿದ್ದು, ಅದರ ಮಧ್ಯದಲ್ಲಿ ವೀರ, ವೀರನ ಬದಿಯಲ್ಲಿ ಸತಿಯರಿಬ್ಬರು ಕುಳಿತಿದ್ದಾರೆ. ಈ ಮೂರು ಜನ ಪದ್ಮಾಸನದಲ್ಲಿ ಕೈಮುಗಿದು ಕುಳಿತಿದ್ದಾರೆ. ಈ ವಿಮಾನವನ್ನು ಅಪ್ಸರೆಯರಿಬ್ಬರು ಹಿಡಿದುಕೊಂಡು ನಿಂತಿದ್ದಾರೆ. ಮೇಲಿನ ಭಾಗದಲ್ಲಿ ಶಿವಲಿಂಗಕ್ಕೆ ಯತಿಯೊಬ್ಬ ನಿಂತು ಪೂಜಿಸುತ್ತಿದ್ದಾನೆ. ಆತನ ಹಿಂಭಾಗದಲ್ಲಿ ವೀರ ಮೈಮುಗಿದು ಕುಳಿತಿದ್ದಾನೆ. ವೀರನ ಬಲಕ್ಕೆ ಸತಿಯರಿಬ್ಬರು ಕೈಮುಗಿದು ಕುಳಿತಿದ್ದಾರೆ. ಶಿವಲಿಂಗದ ಎಡಬದಿಯಲ್ಲಿ ಕುಳಿತ ಮೂರು ನಂದಿಗಳನ್ನು ತೋರಿಸಲಾಗಿದೆ. ಇದು ಕ್ರಿ.ಶ. ೧೨ನೆಯ ಶತಮಾನದ್ದಾಗಿದೆ.

ಕಲಘಟಗಿ ತಾಲೂಕಿನ ಉಗ್ಗಿನಕೇರಿಯ ಮಧ್ಯದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರ ಸತಿಕಲ್ಲು. ಇದು ಮೂರು ಭಾಗಗಳಲ್ಲಿದೆ. ಕೆಳಗಿನ ಭಾಗದಲ್ಲಿ ದಂಪತಿಗಳಿಬ್ಬರು ನಿಂತಿದ್ದಾರೆ. ಪತ್ನಿಯು ತನ್ನ ಬಲಗೈಯನ್ನು ಮೇಲಕ್ಕೆತ್ತಿದ್ದಾಳೆ. ಎಡಗೈಯಲ್ಲಿ ಕಮಂಡಲವನ್ನು ಹಿಡಿದು ಕೆಳಗೆ ಇಳಿಬಿಟ್ಟಿದ್ದಾಳೆ. ಎರಡನೇ ಭಾಗದಲ್ಲಿ ವೀರ ತನ್ನ ಬಲಗೈಯನ್ನು ಕಮಂಡಲ ಹಿಡಿದು ಕೆಳಗೆ ಇಳಿಬಿಟ್ಟಿದ್ದಾನೆ. ಎಡಗೈಯಲ್ಲಿ ತ್ರಿಶೂಲವನ್ನು ಎದೆಯ ಸಮಭಾಗಕ್ಕೆ ಹಿಡಿದುಕೊಂಡಿದ್ದಾನೆ. ಇಲ್ಲಿ ಸತಿ ತನ್ನ ಬಲಗೈಯಲ್ಲಿ ಕಲಶ ಅಥವಾ ದೀಪವನ್ನು ಹಿಡಿದಿದ್ದಾಳೆ. ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾಳೆ. ಇವಳು ತನ್ನ ಕೇಶವನ್ನು ಕೇದಿಗೆಯಿಂದ ಅಲಂಕರಿಸಿಕೊಂಡಿದ್ದಾಳೆ. ಮೇಲಿನ ಭಾಗದಲ್ಲಿ ಶಿವಲಿಂಗ ಪೂಜಿಸುತ್ತಿರುವ ಯತಿ, ಕೈಮುಗಿದು ಕುಳಿತ ದಂಪತಿಗಳು ಮತ್ತು ನಂದಿಯ ಚಿತ್ರಗಳಿವೆ. ಮೇಲೆ ಸೂರ್ಯ–ಚಂದ್ರರಿದ್ದಾರೆ. ಶಿಲ್ಪಕ್ಕೆ ಎಣ್ಣೆ ಹಾಕಿರುವುದರಿಂದ ದೃಶ್ಯ ಅಸ್ಪಷ್ಟವಾಗಿದೆ.

ಕಲಘಟಗಿ ತಾಲೂಕಿನ ಸೋಮನಕೊಪ್ಪದ ಆಕಾರ್ಯರ ಮನೆಯ ಹಿಂಭಾಗದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರ ಮಹಾಸತಿ ಕಲ್ಲಿನಲ್ಲಿ ಎರಡು ದೃಶ್ಯಗಳಿವೆ. ಕೆಳಗಿನ ದೃಶ್ಯದಲ್ಲಿ ದಂಪತಿಗಳನ್ನು ಸಮ ಪ್ರಮಾಣದಲ್ಲಿ ಕಂಡರಿಸಲಾಗಿದೆ. ವೀರ ತನ್ನ ಬಲಗೈಯಲ್ಲಿ ಕತ್ತಿಯನ್ನು ಹೊಟ್ಟೆಯ ಸಮಭಾಗಕ್ಕೆ ಹಿಡಿದಿದ್ದಾನೆ. ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾನೆ. ಕೇಶವನ್ನು ತಲೆಯ ಎಡಭಾಗಕ್ಕೆ ಕಟ್ಟಿಕೊಂಡಿದ್ದಾನೆ. ವೀರನ ಎಡಬದಿಗೆ ಸತಿ ಇದ್ದಾಳೆ. ಸತಿಯು ತನ್ನ ಬಲಗೈಯನ್ನು ಮೇಲಕ್ಕೆತ್ತಿ ಎಡಗೈಯಲ್ಲಿ ನಿಂಬೆಹಣ್ಣನ್ನು ಹಿಡಿದು ಕೆಳಗೆ ಇಳಿಬಿಟ್ಟಿದ್ದಾಳೆ. ತನ್ನ ತಲೆಯ ಕೇಶವನ್ನು ತಲೆಯ ಬಲಭಾಗಕ್ಕೆ ಕಟ್ಟಿದ್ದಾಳೆ. ಸತಿ–ಪತಿರಿಬ್ಬರೂ ವಸ್ತ್ರಾಭರಣಗಳಿಂದ ಭೂಷಿತರಾಗಿದ್ದಾರೆ. ಮೇಲಿನ ಭಾಗದಲ್ಲಿ ಶಿವಲಿಂಗ, ಶಿವಲಿಂಗದ ಬಲಬದಿಗೆ ಕುಳಿತ ನಂದಿ, ಮೇಲೆ ಸೂರ್ಯ–ಚಂದ್ರರ ಚಿತ್ರಗಳಿವೆ. ವೀರಗಲ್ಲಿನ ಮೇಲಿನ ಭಾಗ ಘಂಟಾಕಾರದಲ್ಲಿದೆ.

ಕಲಘಟಗಿ ತಾಲೂಕಿನ ದ್ಯಾವನಕೊಂಡದ ಅಲಕಟ್ಟಿ ಅವರ ಮನೆಯ ಹಿಂಭಾಗದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ವೀರ ಮಹಾಸತಿಕಲ್ಲು ಮೂರು ದೃಶ್ಯಗಳಲ್ಲಿದೆ. ಕೆಳಗಿನ ದೃಶ್ಯದಲ್ಲಿ ವೀರನು ಬಲಗೈಯಲ್ಲಿ ಕಠಾರಿಯನ್ನು ಹಿಡಿದು ಸೊಂಟದ ಮೇಲಿಟ್ಟುಕೊಂಡಿದ್ದಾನೆ. ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾನೆ. ಕಿವಿಯಲ್ಲಿ ಕುಂಡಲಗಳನ್ನು ಧರಿಸಿದ್ದಾನೆ. ಕೊರಳಲ್ಲಿ ಸರವಿದೆ. ಕೈಯಲ್ಲಿ ಕಡಗಗಳಿವೆ. ವೀರನ ಎಡಬದಿಯಲ್ಲಿ ನಿಂತ ಸತಿಯಿದ್ದಾಳೆ. ಸತಿಯು ತನ್ನ ಬಲಗೈಯನ್ನು ಮೇಲಕ್ಕೆತ್ತಿ ದರ್ಪಣವನ್ನು ಹಿಡಿದು ಎಡಗೈಯನ್ನು ಹೊಟ್ಟೆಯ ಸಮಭಾಗಕ್ಕೆ ಹಿಡಿದಿದ್ದಾಳೆ. ಇವಳೂ ಸಹ ತನ್ನ ಕೇಶವನ್ನು ಮೇಲಕ್ಕೆ ಕಟ್ಟಿಕೊಂಡು ಅದನ್ನು ಕೇದಿಗೆಯಿಂದ ಅಲಂಕರಿಸಿಕೊಂಡಿದ್ದಾಳೆ.

ಕಲಘಟಗಿ ತಾಲೂಕಿನ ಗಂಜೀಗಟ್ಟಿಯ ಆಂಜನೇಯ ದೇವಾಲಯದ ಮುಂಭಾಗದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ಮಹಾಸತಿ ಶಿಲ್ಪವನ್ನು ಪೂರ್ಣಪ್ರಮಾಣದಲ್ಲಿ ತೋರಿಸಲಾಗಿದೆ. ಸತಿಯು ಬಲಗೈಯನ್ನು ಮೇಲಕ್ಕೆತ್ತಿ, ಎಡಗೈಯನ್ನು ಕೆಳಗೆ ಇಳಿಬಿಟ್ಟು ತ್ರಿಭಂಗಿಯಲ್ಲಿ ನಿಂತಿದ್ದಾಳೆ.

ಎಡಗೈಯಲ್ಲಿ ನಿಂಬೆಹಣ್ಣನ್ನು ಹಿಡಿದಿದ್ದಾಳೆ. ಸತಿಯು ಕುಂಡಲ, ಉದ್ದವಾದ ಹಾರ, ತೋಳುಬಂಧಿ, ಭುಜಬಂಧ, ಕೈಕಡಗ, ಕಾಲ್ಗಡಗ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿದ್ದಾಳೆ. ಸತಿಯ ಎದೆಯ ಭಾಗ ಭಗ್ನಗೊಂಡಿದೆ.

ಇದೇ ತಾಲೂಕಿನ ದುಮ್ಮನವಾಡದ ಕೆರೆಯ ಬಳಿಯಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ಮಹಾಸತಿಗಲ್ಲನ್ನು ಈ ಮಹಾಸತಿಯನ್ನು ಪೂರ್ಣ ಪ್ರಮಾಣದಲ್ಲಿ ಒಂದೇ ಹಂತದಲ್ಲಿ ತೋರಿಸಲಾಗಿದೆ. ಸತಿಯು ತನ್ನ ಬಲಗೈಯನ್ನು ಮೇಲಕ್ಕೆತ್ತಿ, ಎಡಗೈಯನ್ನು ಕೆಳಗೆ ಇಳಿಬಿಟ್ಟು ನಿಂತಿದ್ದಾಳೆ. ಸತಿಯು ಹಾರ, ಸರ, ಕೈಗಡಗ, ಭುಜಬಂಧಿ, ಕುಂಡಲ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿದ್ದಾಳೆ. ಕೇಶವನ್ನು ಕೇದಿಗೆಯಿಂದ ಅಲಂಕರಿಸಿಕೊಂಡಿದ್ದಾಳೆ. ಮೇಲಿನ ಭಾಗದಲ್ಲಿ ಶಿವಲಿಂಗ, ಕುಳಿತ ನಂದಿ, ಸೂರ್ಯ–ಚಂದ್ರರ ಚಿತ್ರಗಳಿವೆ. ಈ ಮಹಾಸತಿಗಲ್ಲು ಸತಿಯ ತೊಡೆಯ ಭಾಗದವರೆಗೆ ಮಣ್ಣಿನಲ್ಲಿ ಹೂತು ಹೋಗಿದೆ.

ಕಲಘಟಗಿ ತಾಲೂಕಿನ ತಂಬೂರಿನ ಗ್ರಾಮದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ಮಹಾಸತಿ ಶಿಲ್ಪದಲ್ಲಿ ಇಬ್ಬರು ಸತಿಯರನ್ನು ತೋರಿಸಲಾಗಿದೆ. ಮೊದಲನೇ ಸತಿಯ ಬಲಗೈ ಭಗ್ನಗೊಂಡಿದೆ. ಅವಳು ತನ್ನ ಮತ್ತೊಂದು ಕೈಯನ್ನು ಕೆಳಗೆ ಇಳಿಬಿಟ್ಟಿದ್ದಾಳೆ. ಮೊದಲನೆಯ ಸತಿಯು ಕೇಶಕ್ಕೆ ಕೇದಿಗೆಯನ್ನು ಮುಡಿದಿದ್ದಾಳೆ. ಕಿವಿಯಲ್ಲಿ ಕುಂಡಲ, ಹಾರ, ಸರ, ಕೈಬಳೆ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿದ್ದಾಳೆ. ಎರಡನೇ ಸತಿಯು ತನ್ನ ಬಲಗೈಯನ್ನು ಮೇಲಕ್ಕೆತ್ತಿ ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾಳೆ. ಎಡಗೈಯಲ್ಲಿ ನಿಂಬೆಹಣ್ಣನ್ನು ಹಿಡಿದಿದ್ದಾಳೆ. ಹಾರ, ಸರ, ಕುಂಡಲ, ತೋಳುಬಂಧಿ, ಕೈಬಳೆ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿದ್ದಾಳೆ.

ಇದೇ ತಾಲೂಕಿನ ಹಟಕಿನಾಳ ಬಳಿಯ ಹೊಲವೊಂದರಲ್ಲಿ ಕ್ರಿ.ಶ. ೧೨ನೆಯ ಶತಮಾನದ ಮಹಾಸತಿ ಶಿಲ್ಪದಲ್ಲಿ ಐದು ಜನ ಸತಿಯರನ್ನು ತೋರಿಸಲಾಗಿದೆ. ಮೊದಲೆರಡು ಮತ್ತು ನಾಲ್ಕು, ಐದನೆಯ ಸತಿಯರು ತಮ್ಮ ಬಲಗೈಯನ್ನು ಮೇಲಕ್ಕೆತ್ತಿ, ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾರೆ. ಮಧ್ಯದಲ್ಲಿರುವ ಸತಿಯು ತನ್ನ ಕೈಯನ್ನು, ಹೊಟ್ಟೆಯನ್ನು ಸಮಭಾಗಕ್ಕೆ ಹಿಡಿದಿದ್ದು, ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾಳೆ. ಇವರೆಲ್ಲ ವಿವಿಧ ಆಭರಣಗಳಿಂದ ಅಲಂಕೃತಗೊಂಡಿದ್ದಾರೆ. ಕೇಶವನ್ನು ವಿವಿಧ ರೀತಿಯಲ್ಲಿ ಅಲಂಕರಿಸಿಕೊಂಡಿದ್ದಾರೆ. (ಧಾರವಾಡ ಜಿಲ್ಲೆಯ ಪುರಾತತ್ವ, ಜಯಮ್ಮ ಬಿ., ೨೦೧೦, ಪುಟ–೨೬೭) ಕಿವಿಯಲ್ಲಿ ಕುಂಡಲ, ಕೊರಳಲ್ಲಿ ಸರ, ತೋಳುಬಂಧಿ, ಕೈಗಡ, ಸೀರೆ ಮುಂತಾದ ವಸ್ತ್ರಾಭರಣಗಳಿಂದ ಅಲಂಕೃತಗೊಂಡಿದ್ದಾಳೆ. ಎರಡನೆಯ ದೃಶ್ಯದಲ್ಲಿ ವೀರ ನಾಲ್ಕು ಜನ ವೈರಿಯೊಂದಿಗೆ ಕಾದಾಡುತ್ತಿದ್ದಾನೆ. ಈತ ತನ್ನ ಸೊಂಟದಲ್ಲಿ ಕಠಾರಿಯನ್ನು ಸಿಗಿಸಿಕೊಂಡು ತೋಳಿನಲ್ಲಿ ಬಿಲ್ಲನ್ನು ಏರಿಸಿಕೊಂಡು ಬೆನ್ನ ಹಿಂದೆ ಬಾಣಗಳನ್ನು ಬತ್ತಳಿಕೆಯಲ್ಲಿಟ್ಟುಕೊಂಡು ಎಡಗೈಯಲ್ಲಿ ಈಟಿ/ಬಾಣವನ್ನು ಹಿಡಿದು ವೈರಿಗೆ ತಿವಿಯುತ್ತಿದ್ದಾನೆ. ವೈರಿ ಕುಳಿತ ಕುದುರೆಗೆ ವಸ್ತ್ರವನ್ನು ತೊಡಿಸಿದ್ದಾರೆ. ಏಕೆಂದರೆ ಅದು ಉಬ್ಬಿದಂತೆ ಕಂಡುಬರುತ್ತದೆ. ವೈರಿಯು ಹಿಂಭಾಗದಲ್ಲಿ

ಸಂಗಡಿಗನೊಬ್ಬ ಕೈಯಲ್ಲಿ ಬಿಲ್ಲು-ಬಾಣ ಹಿಡಿದು ಪ್ರಯೋಗಹಸ್ತದಲ್ಲಿದ್ದಾನೆ. ಇವರಿಬ್ಬರ ಮೇಲ್ಭಾಗದಲ್ಲಿ ಮತ್ತಿಬ್ಬರು ಕೈಯಲ್ಲಿ ಕತ್ತಿ-ಗುರಾಣಿ ಹಿಡಿದು ಮುನ್ನುಗ್ಗುತ್ತಿದ್ದಾರೆ. ಮೇಲಿನ ದೃಶ್ಯದಲ್ಲಿ ಶಿವಲಿಂಗಕ್ಕೆ ಪೂಜಿಸುತ್ತಿರುವ ಯತಿ, ಬಲಬದಿಯಲ್ಲಿ ಕೈಮುಗಿದು ಕುಳಿತ ವೀರ ಮತ್ತು ಸತಿ, ಎಡಬದಿಯಲ್ಲಿ ಕುಳಿತ ನಂದಿ, ಸೂರ್ಯ-ಚಂದ್ರ, ನಂದಿ ಚಿತ್ರಗಳಿವೆ.

ಧಾರವಾಡ ತಾಲೂಕಿನ ಹೊಲ್ತಿಕಟ್ಟಿಯ ಹೊರವಲಯದ ಗುಡಿಯಲ್ಲಿರುವ ಕ್ರಿ.ಶ. ೧೨ನೇ ಶತಮಾನದ ವೀರಸತಿಕಲ್ಲು ಒಂದೇ ಪಟ್ಟಿಕೆಯಲ್ಲಿದೆ. ಶಿಲ್ಪದಲ್ಲಿ ವೀರನನ್ನು ಗಾತ್ರದಲ್ಲಿ ದೊಡ್ಡದಾಗಿ ಚಿತ್ರಿಸಿದ್ದಾರೆ. ಈತ ಕುದುರೆಯ ಮೇಲೆ ಬಲಗೈಯಲ್ಲಿ ಕತ್ತಿಯನ್ನು ಹಿಡಿದು, ಎಡಗೈಯಲ್ಲಿ ಅಂಕುಶವನ್ನಿಡಿದು ಬಲಕ್ಕೆ ತಿರುಗಿ ಕುಳಿತಿದ್ದಾನೆ. ವೀರನು ಹಾರ, ಕುಂಡಲಿ, ಕೈಗಡಗ, ಕಾಲ್ಗಡಗ ಮುಂತಾದ ಆಭರಣಗಳನ್ನು ಧರಿಸಿದ್ದಾನೆ. ಸೊಂಟದಲ್ಲಿ ಕಠಾರಿಯನ್ನು ಸಿಗಿಸಿದ್ದಾನೆ. ಕುದುರೆಯ ಮುಂಭಾಗದಲ್ಲಿ ಸೇವಕನಿದ್ದಾನೆ. ಸೇವಕ ತನ್ನ ಬಲಗೈಯಲ್ಲಿ ಕುದುರೆಯನ್ನು, ಎಡಗೈಯಲ್ಲಿ ಒಂದು ಕೋಲನ್ನು ಹಿಡಿದು ಮುಂದೆ ಸಾಗುತ್ತಿದ್ದಾನೆ. ವೀರನ ಹಿಂಭಾಗದಲ್ಲಿ ಸತಿಯು ನಿಂತಿದ್ದಾಳೆ. ಇವಳು ತನ್ನ ಬಲಗೈಯನ್ನು ಮೇಲಕ್ಕೆತ್ತಿ ಎಡಗೈಯನ್ನು ವೀರನ ಭುಜದ ಮೇಲಿಟ್ಟಿದ್ದಾಳೆ. ಕೇಶವನ್ನು ತುರುಬಿನಂತೆ ಕಟ್ಟಿದ್ದಾಳೆ. ಉದ್ದವಾದ ಲಂಗ ಧರಿಸಿದ್ದಾಳೆ. ಕರ್ಣಕುಂಡಲ, ಸರ, ಬಳೆ ಮುಂತಾದವುಗಳಿಂದ ಅಲಂಕೃತಗೊಂಡಿದ್ದಾಳೆ. ಸತಿಯ ಹಿಂಭಾಗದಲ್ಲಿ ಮತ್ತೊಬ್ಬ ಸತಿ ಅಥವಾ ಸೇವಕಿಯಿದ್ದು ಇವಳು ತನ್ನ ಬಲಗೈಯನ್ನು ಕೆಳಗೆ ಇಳಿಬಿಟ್ಟು ಎಡಗೈಯನ್ನು ಮುಂದಿರುವ ಸತಿಯ ಸೊಂಟದ ಮೇಲಿಟ್ಟಿದ್ದಾಳೆ. ಇವಳೂ ಸಹ ಆಭರಣಗಳಿಂದ ಅಲಂಕೃತಗೊಂಡಿದ್ದಾಳೆ. ಈ ಇಬ್ಬರು ಸತಿಯರು ನಿಂತಿರುವ ಪಟ್ಟಿಗೆ ತಳಿರು ತೋರಣದ ಅಲಂಕರಣವಿದೆ. ಕುದುರೆಯ ಮೇಲ್ಭಾಗದಲ್ಲಿ ಚಿಕ್ಕ ಶಿವಲಿಂಗವನ್ನು ಸೇವಕನ ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ಚಿತ್ರಗಳನ್ನು ತೋರಿಸಿದ್ದಾರೆ. ಶಿಲ್ಪದಲ್ಲಿ ದೃಶ್ಯಗಳನ್ನು ಗಮನಿಸಿದರೆ ಯಾವುದೇ ಒಬ್ಬ ಪ್ರಮುಖ ವೀರನ ಯುದ್ಧಕ್ಕೆ ಹೋದಾಗ ಆತನ ಸಂಗಡ ಸೇವಕನೂ ಹೋಗಿ ಹೋರಾಟದಲ್ಲಿ ಮಡಿದಿರಬೇಕು. ಆ ವಿಷಯ ತಿಳಿದು ವೀರನ ಸತಿ ಮತ್ತು ಸೇವಕನ ಸತಿ ಇಬ್ಬರೂ ಸಹಗಮನ ಆಗಿರಬಹುದು.

ಧಾರವಾಡ ಜಿಲ್ಲೆಯ ಸಿದ್ಧಾಪುರ ಪಂಚಲಿಂಗೇಶ್ವರ ದೇವಾಲಯದ ಹಿಂಭಾಗದಲ್ಲಿರುವ ಕ್ರಿ.ಶ. ೧೨ನೇ ಶತಮಾನದ ವೀರ ಮಹಾಸತಿಕಲ್ಲು ಮೂರು ಪಟ್ಟಿಕೆಗಳಿಂದ ಕೂಡಿದೆ. ಕೆಳಗಿನ ಪಟ್ಟಿಕೆಯಲ್ಲಿ ವೀರ ಸತಿಯರಿದ್ದಾರೆ. ವೀರ ತನ್ನ ಬಲಗೈಯಲ್ಲಿ ಈಟಿಯನ್ನು ಹಿಡಿದು ಮೇಲಕ್ಕೆತ್ತಿ, ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾನೆ. ಸತಿಯು ತನ್ನ ಬಲಗೈಯನ್ನು ಮೇಲಕ್ಕೆತ್ತಿ ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾಳೆ. ದಂಪತಿಗಳಿಬ್ಬರು ವಸ್ತ್ರಾಭರಣಗಳಿಂದ ಭೂಷಿತರಾಗಿದ್ದಾರೆ. ಇವರ ಬದಿಗಳಲ್ಲಿ ಕಂಬಗಳನ್ನು ತೋರಿಸಲಾಗಿದೆ. ಎರಡನೇ ಪಟ್ಟಿಕೆಯಲ್ಲಿ ಶಿವಲಿಂಗಕ್ಕೆ ಪೂಜಿಸುತ್ತಿರುವ ಯತಿ, ಬದಿಯಲ್ಲಿ ಕೈಮುಗಿದು ಕುಳಿತ ದಂಪತಿಗಳು ಶಿವಲಿಂಗದ ಎಡಬದಿಯಲ್ಲಿ ಕುಳಿತ ನಂದಿಯ

ಚಿತ್ರಗಳಿವೆ. ಮೇಲಿನ ಪಟ್ಟಿಕೆಯ ಮಧ್ಯದಲ್ಲಿ ಕಲಶ, ಬದಿಗಳಲ್ಲಿ ಸೂರ್ಯ-ಚಂದ್ರರ ಚಿತ್ರಗಳಿವೆ. ಕೆಳಗಿನ ಪಟ್ಟಿಕೆಯಲ್ಲಿ ಸ್ತಂಭಗಳನ್ನು ಮತ್ತು ಮೇಲಿನ ಪಟ್ಟಿಕೆಯಲ್ಲಿ ಕಲಶವನ್ನು ಕಾಣಬಹುದು.

ಕುಂದಗೋಳ ತಾಲೂಕಿನ ಕುಂಕುರ ಗ್ರಾಮದ ಮುಂದೆ ಒಂದು ಕಿ.ಮೀ. ದೂರದಲ್ಲಿರುವ ಕ್ರಿ.ಶ. ೧೩ನೆಯ ಶತಮಾನದ ವೀರ ಮಹಾಸತಿಕಲ್ಲು ಒಂದೇ ಪಟ್ಟಿಕೆಯಲ್ಲಿ ಅಗಲವಾಗಿದೆ. ಮಧ್ಯದಲ್ಲಿ ವೀರ ಕುದುರೆಯ ಮೇಲೆ ಕುಳಿತಿದ್ದಾನೆ. ಈತನ ಹಿಂಬದಿಯಲ್ಲಿ ಇಬ್ಬರು ಸತಿ-ಪತಿಯರು, ಮುಂಬದಿಯಲ್ಲಿ ಇಬ್ಬರು ದಂಪತಿಗಳಿದ್ದಾರೆ. ಕುದುರೆ ಮೇಲೆ ಕುಳಿತ ವೀರನು ಬಲಗೈಯಲ್ಲಿ ಕತ್ತಿಯನ್ನು ಹಿಡಿದಿದ್ದರೆ, ಎಡಗೈಯಲ್ಲಿ ಕುದುರೆಯ ಅಂಕುಶವನ್ನು ಹಿಡಿದಿದ್ದಾನೆ.

ಕುದುರೆಯು ಮುಂದೆ ನುಗ್ಗುತ್ತಿರುವ ಭಂಗಿಯಲ್ಲಿದೆ. ಕುದುರೆಯ ಹಿಂಭಾಗದಲ್ಲಿ ಮತ್ತೊಬ್ಬ ವೀರ ನಿಂತಿದ್ದಾನೆ. ಇವನು ಬಲಗೈಯಲ್ಲಿ ಕತ್ತಿಯನ್ನು ಹಿಡಿದು ಭುಜಕ್ಕೆ ಹೊಂದಿಸಿಕೊಂಡಿದ್ದಾನೆ. ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ಇವನ ಎಡಬದಿಯಲ್ಲಿ ಸತಿಯೊಬ್ಬಳು ನಿಂತಿದ್ದಾಳೆ. ಸತಿಯು ಬಲಗೈಯನ್ನು ಹೊಟ್ಟೆಯ ಸಮಭಾಗಕ್ಕೆ ಹಿಡಿದು, ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾಳೆ. ಎಡಗೈಯಲ್ಲಿ ಕಲಶವನ್ನು ಹಿಡಿದಿದ್ದಾಳೆ. ಕುದುರೆಯ ಮುಂಭಾಗದಲ್ಲಿ ಸತಿಯು ನಿಂತಿದ್ದಾಳೆ. ಇವಳ ಬಲಗೈಯಲ್ಲಿ ಪದ್ಮ, ಎಡಗೈಯಲ್ಲಿ ಕಲಶವಿದ್ದು, ಸೊಂಟದ ಸಮಭಾಗಕ್ಕೆ ಹಿಡಿದುಕೊಂಡಿದ್ದಾಳೆ. ಇವಳ ಎಡಬದಿಯಲ್ಲಿ ಚಿಕ್ಕದಾಗಿ ಒಬ್ಬ ವ್ಯಕ್ತಿಯನ್ನು ತೋರಿಸಿದ್ದಾರೆ. ಈ ವ್ಯಕ್ತಿ ಸತಿಯ ಮಗುವೋ ಅಥವಾ ಕುದುರೆಯ ಸೇವಕನೋ ಇರಬೇಕು. ಸತಿಯು ಬಲಬದಿಯಲ್ಲಿ ನಿಂತಿರುವ ವೀರ ಬಲಗೈಯಲ್ಲಿ ಕತ್ತಿಯನ್ನು ಭುಜಕ್ಕೆ ಹಿಡಿದಿದ್ದಾನೆ. ಎಡಗೈಯಲ್ಲಿ ಕಠಾರಿಯನ್ನು ಹಿಡಿದು ಕೆಳಗೆ ಇಳಿಬಿಟ್ಟಿದ್ದಾಳೆ. ಈ ದಂಪತಿಗಳು ಮತ್ತು ಕುದುರೆಯ ಮೇಲೆ ಕುಳಿತ ವೀರ ಎಲ್ಲರೂ ವಸ್ತ್ರಾಭರಣಗಳಿಂದ ಭೂಷಿತರಾಗಿದ್ದಾರೆ.

ಕುಂದಗೋಳ ತಾಲೂಕಿನ ಹಿರೇಹೊನ್ನಿಹಳ್ಳಿಯ ಅರಳಿಕಟ್ಟೆಯ ಬಳಿಯಿರುವ ಕ್ರಿ.ಶ. ೧೩ನೆಯ ಶತಮಾನದ ವೀರ ಮಹಾಸತಿಗಲ್ಲಿನಲ್ಲಿ ನಾಲ್ಕು ದೃಶ್ಯಗಳಿವೆ. ಕೆಳಗಿನ ದೃಶ್ಯ ಸಂಪೂರ್ಣ ಮಣ್ಣಿನಲ್ಲಿ ಹೂತುಹೋಗಿದೆ. ಎರಡನೇ ದೃಶ್ಯದಲ್ಲಿ ವೀರ ಕುದುರೆ ಮೇಲೆ ಕುಳಿತಿದ್ದಾನೆ. ಈ ವೀರ ತನ್ನ ಬಲಗೈಯಲ್ಲಿ ಭರ್ಚಿಯನ್ನು ಹಿಡಿದು ಮೇಲಕ್ಕೆತ್ತಿ ಎದುರಿಗೆ ಇರುವ ಹಂದಿಗೆ ತಿವಿಯುತ್ತಿದ್ದಾನೆ. ಈ ಹಂದಿಯನ್ನು ಕೆಳಗಿನಿಂದ ಒಂದು ನಾಯಿ ಮೇಲಿಂದ, ಒಂದು ನಾಯಿ ಹಿಡಿದು ಎಳೆಯುತ್ತಿವೆ. ವೀರನಿಗೆ ಛತ್ರಿಯನ್ನು ತೋರಿಸಲಾಗಿದೆ. ಕುದುರೆಯ ಹಿಂಭಾಗದಲ್ಲಿರುವ ವ್ಯಕ್ತಿ (ಸೇವಕ) ಈ ಛತ್ರಿಯನ್ನು ಹಿಡಿದಿರಬಹುದು. ಈ ವ್ಯಕ್ತಿಯ ಪಕ್ಕದಲ್ಲಿ ಇಬ್ಬರು ಸತಿಯರನ್ನು ತೋರಿಸಲಾಗಿದೆ. ಒಬ್ಬಳು ಸತಿ ತನ್ನ ಬಲಗೈಯನ್ನು ಮೇಲೆತ್ತಿ, ಎಡಗೈಯನ್ನು ಪಕ್ಕದಲ್ಲಿರುವ ಮತ್ತೊಬ್ಬ ಸತಿಯ ಮೇಲಿಟ್ಟಿದ್ದಾಳೆ. ಮತ್ತೊಬ್ಬ ಸತಿ ತನ್ನ ಎಡಗೈಯನ್ನು ಮೇಲಕ್ಕೆತ್ತಿ ಬಲಗೈಯನ್ನು ಕೆಳಗೆ ಇಳಿಬಿಟ್ಟಿದ್ದಾಳೆ. ಮೂರನೇ ದೃಶ್ಯದಲ್ಲಿ ಮಧ್ಯದಲ್ಲಿ ವೀರ ನಿಂತಿದ್ದಾನೆ. ಈತನ ಬಲಗೈಯಲ್ಲಿ ಏನನ್ನೊ (ಬಾಣ) ಎದೆಗೆ ಸಮವಾಗಿ ಹಿಡಿದಿದ್ದಾನೆ. ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾನೆ.

ವೀರನ ಬಲಬದಿಯಲ್ಲಿ ಇಬ್ಬರು ಸ್ತ್ರೀಯರು, ಎಡಬದಿಯಲ್ಲಿ ಇಬ್ಬರು ಸ್ತ್ರೀಯರು ನಿಂತಿದ್ದಾರೆ. ಈ ಎಲ್ಲ ಸತಿಯರು ಬಲಗೈಯನ್ನು ಮೇಲಕ್ಕೆತ್ತಿ ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾರೆ. ತಮ್ಮ ತುರುಬನ್ನು ತಲೆಯ ಬಲಭಾಗಕ್ಕೆ ಕಟ್ಟಿದ್ದಾರೆ. ಮತ್ತು ಕೇಶವನ್ನು ಕೇದಿಗೆಯಿಂದ ಅಲಂಕರಿಸಿಕೊಂಡಿದ್ದಾರೆ. ಮೇಲಿನ ದೃಶ್ಯದ ಎಡಭಾಗದಲ್ಲಿ ಶಿವಲಿಂಗಕ್ಕೆ ಪೂಜಿಸುತ್ತಿರುವ ಯತಿ ಇದ್ದಾನೆ. ಶಿವಲಿಂಗದ ಬಲಬದಿಗೆ ಕುಳಿತ ನಂದಿ ಇದೆ. ನಂದಿಯ ಹಿಂಭಾಗದಲ್ಲಿ ವೀರ ಮತ್ತು ಮೂರು ಜನ ಸತಿಯರು ಕೈಮುಗಿದು ಕುಳಿತಿದ್ದಾರೆ. ಇವರ ಮೇಲ್ಭಾಗದಲ್ಲಿ ಮೈಮುಗಿದು ಕುಳಿತ ಮತ್ತೊಬ್ಬ ಸತಿ ಇದ್ದಾಳೆ. ಈ ಸತಿಯ ಪಕ್ಕದಲ್ಲಿ ಸೂರ್ಯ-ಚಂದ್ರರ ಚಿತ್ರಗಳಿವೆ. (ಧಾರವಾಡ ಜಿಲ್ಲೆಯ ಪುರಾತತ್ವ, ಜಯಮ್ಮ ಬಿ., ೨೧೧೦, ಪುಟ-೨೭೧) ವೀರಗಲ್ಲಿನ ಕೆಳಭಾಗದಲ್ಲಿ ಗೋವನ್ನು, ಎರಡನೇ ದೃಶ್ಯದಲ್ಲಿ ಹಂದಿಯನ್ನು ತೋರಿಸುವುದರಿಂದ ವೀರ ಗೋರಕ್ಷಣೆಗಾಗಿ ಕಾದಾಡಿ ಮಡಿದನೋ? ಅಥವಾ ಹಂದಿ ಬೇಟೆಗಾಗಿ ಹೋಗಿ ಮಡಿದನೋ? ಎಂದು ಸ್ಪಷ್ಟವಾಗಿ ಹೇಳಲು ಆಗುವುದಿಲ್ಲ. ಆದರೆ ವೀರ ಹೋರಾಟದಲ್ಲಿ ಪ್ರಾಣ ತೆತ್ತಾಗ ಆತನ ನಾಲ್ವರು ಸತಿಯರು ಸಹಗಮನವಾಗಿದ್ದಾರೆ. ವೀರನಿಗೆ ಸೇವಕ ಛತ್ರಿಯನ್ನು ಹಿಡಿದಿರುವುದರಿಂದ ವೀರ ಒಬ್ಬ ಪ್ರಮುಖ ವ್ಯಕ್ತಿಯಾಗಿದ್ದಾನೆಂದು ಹೇಳಬಹುದು.

ಕುಂದಗೋಳ ತಾಲೂಕಿನ ಭೂತರ್ಲಘಟ್ಟದಲ್ಲಿರುವ ಕ್ರಿ.ಶ. ೧೩ನೆಯ ಶತಮಾನದ ವೀರ ಮಹಾಸತಿ ಕಲ್ಲಿನಲ್ಲಿ ಮೂರು ದೃಶ್ಯಗಳಿವೆ. ಕೆಳಗಿನ ದೃಶ್ಯದಲ್ಲಿ ಬಲಬದಿಗೆ ಸತಿಯನ್ನು, ಎಡಬದಿಗೆ ಹೋರಾಟದ ಚಿತ್ರಣವನ್ನು ತೋರಿಸಿದ್ದಾರೆ. ಸತಿಯು ತನ್ನ ಬಲಗೈಯನ್ನು ಮೇಲಕ್ಕೆತ್ತಿ, ಎಡಗೈಯನ್ನು ಕೆಳಗೆ ಇಳಿಬಿಟ್ಟು ನಿಂತಿದ್ದಾಳೆ. ಎಡಗೈಯಲ್ಲಿ ನಿಂಬೆಹಣ್ಣನ್ನು ಹಿಡಿದಿದ್ದಾಳೆ. ಸತಿಯ ಎಡಭಾಗದಲ್ಲಿರುವ ಹೋರಾಟದ ಚಿತ್ರಣವನ್ನು ವೀರ ಬಿಲ್ಲು-ಬಾಣವನ್ನು ಹಿಡಿದು ವೈರಿಗಳ ವಿರುದ್ಧ ಕಾದಾಡುತ್ತಿದ್ದಾನೆ. ವೈರಿ ದಳದಲ್ಲಿ ತುಂಬಾ ಜನರಿದ್ದು, ವೀರನ ಸಂಗಡ ಮತ್ತೊಬ್ಬ ಸಹಚರ ಮಾತ್ರ ಇದ್ದಾನೆ. ಹೋರಾಡುತ್ತಿರುವವರ ಕೆಳಭಾಗದಲ್ಲಿ ಅಂದರೆ ಕಾಲಬಳಿ ಕೆಲ ಮೃತ ದೇಹಗಳಿವೆ.

ಕುಂದಗೋಳ ತಾಲೂಕಿನ ಯರಗುಪ್ಪಿಯಲ್ಲಿರುವ ಕ್ರಿ.ಶ. ೧೩ನೆಯ ಶತಮಾನದ ಮಹಾಸತಿ ಶಿಲ್ಪದಲ್ಲಿ ಸತಿಯು ತನ್ನ ಬಲಗೈಯನ್ನು ಮೇಲಕ್ಕೆತ್ತಿ, ಎಡಗೈಯನ್ನು ಕೆಳಗೆ ಇಳಿಬಿಟ್ಟು ನಿಂತಿದ್ದಾಳೆ. ಕಾಲುಗಳನ್ನು ಸ್ವಲ್ಪ ಓರೆಮಾಡಿ ನಿಂತಿದ್ದಾಳೆ. ಕಿವಿಯಲ್ಲಿ ಓಲೆ, ಕೈಕಡಗ, ಕಾಲ್ಗಡಗ, ಸರ ಮುಂತಾದ ಆಭರಣಗಳನ್ನು ಧರಿಸಿದ್ದಾಳೆ.

ಧಾರವಾಡ ತಾಲೂಕಿನ ಛಬ್ಬಿಯ ನಾರಾಯಣ ದೇವಾಲಯದ ಗೋಡೆಯಲ್ಲಿರುವ ಕ್ರಿ.ಶ. ೧೩ನೆಯ ಶತಮಾನದ ವೀರಸತಿಕಲ್ಲು. ಎರಡು ಪಟ್ಟಿಕೆಗಳಲ್ಲಿ ಕಂಡುಬರುತ್ತದೆ. ಕೆಳಗಿನ ಪಟ್ಟಿಕೆಯಲ್ಲಿ ವೀರ ಸತಿಯರಿಬ್ಬರು ಕೈಮುಗಿದು ಅರ್ಧ ಪದ್ಮಾಸನದಲ್ಲಿ ಕುಳಿತಿದ್ದಾರೆ. ಇವರು ಪತ್ರ ಕುಂಡಲ, ಕೈಕಡಗ, ಕಾಲುಕಡಗ, ಹಾರ, ಸರ ಮುಂತಾದ ಆಭರಣಗಳಿಂದ

ಅಲಂಕೃತಗೊಂಡಿದ್ದಾರೆ. ತಮ್ಮ ಕೇಶವನ್ನು ಮೇಲಕ್ಕೆತ್ತಿ ಕಟ್ಟಿದ್ದಾರೆ. ಇವರ ಮೇಲ್ಭಾಗದಲ್ಲಿ ಪದ್ಮದ ಅಲಂಕಾರವಿದೆ. ಮೇಲಿನ ಪಟ್ಟಿಕೆಯ ಮಧ್ಯದಲ್ಲಿ ಶಿವಲಿಂಗವಿದೆ. ಅದರ ಬಲಬದಿಯಲ್ಲಿ ವೀರ ಸತಿಯರಿಬ್ಬರು ಕೈಮುಗಿದು ಕುಳಿತಿದ್ದಾರೆ. ಶಿವಲಿಂಗದ ಎಡಭಾಗದಲ್ಲಿ ಕುಳಿತ ನಂದಿ ಇದೆ. ಮೇಲ್ಭಾಗದಲ್ಲಿ ಸೂರ್ಯ–ಚಂದ್ರರಿದ್ದಾರೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯ ಕ್ರಿ.ಶ. ೧೬ನೆಯ ಶತಮಾನದ ವೀರ ಮಾಸ್ತಿಗಲ್ಲು ಶಿಲ್ಪದಲ್ಲಿ ಸತಿಯಿಂದ ಭಾಷೆ ತೆಗೆದುಕೊಳ್ಳುತ್ತಿರುವ ಶಿಲ್ಪವಾಗಿರಬೇಕು. ವೀರ ಆಸೀನ ಭಂಗಿಯಲ್ಲಿದ್ದು, ಮುಡಿ ಕಟ್ಟಿದ್ದಾನೆ. ಕೊರಳಲ್ಲಿ ಮಣಿಸರ ಪದಕಸರ ಸಾಪಣಿ ಸರ ಧರಿಸಿದ್ದು, ಬಲಗೈ ಇಳಿಬಿಟ್ಟು, ಎಡಗೈಯನ್ನು ತನ್ನ ಹತ್ತಿರದ ಕಮಂಡಲದ ಮೇಲೆ ಇಟ್ಟಿದ್ದಾಳೆ. ಮಹಿಳೆ ವರ್ತುಲಾಕಾರದ ಓಲೆ ಧರಿಸಿ ಮುಡಿ ಕಟ್ಟಿ ಬಲಗೈಯನ್ನು ಎತ್ತಿ ಎಡಗೈ ಇಳಿಬಿಟ್ಟಿರುವುದು ಇವು ಶಿಲ್ಪದ ವೈಶಿಷ್ಟ್ಯತೆಯಾಗಿದೆ. (ಕನ್ನಡ ಶಾಸನ ಶಿಲ್ಪ, ಪರಮಶಿವಮೂರ್ತಿ ಡಿ.ವಿ., ೧೯೯೯, ಪು–೨೨)

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯ ಕ್ರಿ.ಶ. ೧೬ನೆಯ ಶತಮಾನದ ವೀರ ಮಾಸ್ತಿಗಲ್ಲಿನಲ್ಲಿ ವೀರ ಎಡಕ್ಕೆ ತುರುಬು ಕಟ್ಟಿ ಕಿವಿಯಲ್ಲಿ ಕುಂಡಲಗಳನ್ನು ಧರಿಸಿ ಕೊರಳಲ್ಲಿ ಪದಕಸರ, ವೈಜಂತಿಹಾರ ಧರಿಸಿದ್ದಾನೆ. ಕೈಯಲ್ಲಿ ಕಡಗ, ತೋಳುಬಂಧಿ, ಅಂಜಲಿ ಮುದ್ರೆಯಲ್ಲಿ ನಿಂತಿದ್ದು, ಸೊಂಟಪಟ್ಟಿ ಧರಿಸಿದ್ದಾನೆ. ಬಲಗಾಲಲ್ಲಿ ಪಾದರಸ ಕಡಗವಿದೆ. ಉಳಿದ ಶಿಲ್ಪಕ್ಕೆ ಹೋಲಿಸಿದರೆ ಎಡಗಾಲಲ್ಲಿ ಕಡಗ ಇಲ್ಲದಿರುವುದೇ ಮೂಲರೂಪದಂತಿದೆ. ಸ್ತ್ರೀ ತುರುಬು ಕಟ್ಟಿ ವರ್ತುಲಾಕಾರದ ಓಲೆ ಧರಿಸಿದ್ದು, ಬಲಗೈ ಅಭಯ ಹಸ್ತ, ಎಡಗೈಯಲ್ಲಿ ನಿಂಬೆಹಣ್ಣು ಹಿಡಿದಿದ್ದಾಳೆ. ಕೈಗೆ ಕಡಗ, ಬಳೆ, ತೋಳುಬಂಧಿ ಧರಿಸಿದ್ದಾಳೆ. ಸೊಂಟಪಟ್ಟಿ, ಸೀರೆಯ ನೆರಿಗೆ ಇತ್ಯಾದಿ ತುಂಬಾ ಕಲಾ ವಿನ್ಯಾಸದಿಂದ ಕೂಡಿದೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯ ಕ್ರಿ.ಶ. ೧೬ನೆಯ ಶತಮಾನದ ವೀರ ಮಾಸ್ತಿಗಲ್ಲು ಶಿಲ್ಪದಲ್ಲಿ ಬಲಗಡೆ ವೀರ ಕೈಮುಗಿದು ಸ್ಥಾನಿಕ ಭಂಗಿಯಲ್ಲಿದ್ದಾನೆ. ಕಟಿಬಂಧ, ಕೊರಳಲ್ಲಿ ಮಣಿಸರ, ಪದಕಸರ ಧರಿಸಿ ಮುಡಿಕಟ್ಟಿದ್ದಾನೆ. ವೀರಗಾಸೆ ಧರಿಸಿ ಕಿವಿಯಲ್ಲಿ ಲೋಲಕ ಧರಿಸಿದ್ದಾನೆ. ವೀರನ ಎಡಗಡೆ ಸ್ತ್ರೀ ತುರುಬು ಕಟ್ಟಿ, ಕಿವಿಯಲ್ಲಿ ವರ್ತುಲಾಕಾರದ ಓಲೆ ಧರಿಸಿ, ಎಡಗೈ ಕೆಳಗೆ ಬಿಟ್ಟು ನಿಂಬೆಹಣ್ಣು ಹಿಡಿದುಕೊಂಡಿದ್ದಾಳೆ. ಬಲಗೈ ಮೇಲಕ್ಕೆ ಎತ್ತಿದೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯ ಕ್ರಿ.ಶ. ೧೬ನೆಯ ಶತಮಾನದ ವೀರ ಮಾಸ್ತಿಗಲ್ಲಿನ ವೀರನು ಮುಡಿ ಕಟ್ಟಿ ಕಿವಿಯಲ್ಲಿ ವರ್ತುಲಾಕಾರದ ಓಲೆ, ಕೈಗಳಿಗೆ ಕಡಗ ಧರಿಸಿದ್ದು, ಬಲಗೈಯಲ್ಲಿ ಬಾಣವನ್ನು ಬತ್ತಳಿಕೆಯಿಂದ ಹೊರ ತೆಗೆಯುತ್ತಿರುವುದು; ಎಡಗೈಯಲ್ಲಿ ಬಿಲ್ಲು ಹಿಡಿದಿದ್ದಾನೆ. ವೀರಗಾಸೆ ತೊಟ್ಟು ಬಲಗಡೆ ಕಿರುಗಿತ್ತಿ ಸಿಕ್ಕಿಸಿಕೊಂಡಿದ್ದಾನೆ.

ಕಾಲಲ್ಲಿ ಕಡಗ ಪಾದರಸ ಧರಿಸಿದ್ದಾನೆ. ವೀರನ ಬಲಗಡೆ ವೀರವನಿತೆ ಮುಡಿ ಕಟ್ಟಿ ವರ್ತುಲಾಕಾರದ ಓಲೆ, ಕೊರಳಲ್ಲಿ ಮಣಿಸರ, ಪದಕಸರ, ಕೈಗಳಿಗೆ ತೋಳಂಬ ಬಳೆ ಧರಿಸಿದ್ದಾಳೆ. ಬಲಗೈಯು ಅಭಯ ಹಸ್ತದಲ್ಲಿದೆ. ಎಡಗೈಯಲ್ಲಿ ನಿಂಬೆಹಣ್ಣು ಹಿಡಿದಿದ್ದಾಳೆ. ವೀರ ವನಿತೆಯು ಸೀರೆ ನೆರಿಗೆಯ ಕೆತ್ತನೆ ಕಲಾತ್ಮಕವಾಗಿದೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯ ಕ್ರಿ.ಶ. ೧೬ನೆಯ ಶತಮಾನದ ವೀರ ಮಾಸ್ತಿಗಲ್ಲು ಶಿಲ್ಪದಲ್ಲಿ ಮಹಿಳೆಯು ಸ್ಥಾನಿಕ ಭಂಗಿಯಲ್ಲಿದ್ದಾಳೆ. ಇವಳ ಕಿವಿಯಲ್ಲಿ ವರ್ತುಲಾಕಾರದ ಓಲೆ, ಬಲಗಡೆ ತುರುಬು ಕಟ್ಟಿ, ಕೊರಳಲ್ಲಿ ಮಣಿಸರ, ಪದಕಸರ ಧರಿಸಿದ್ದಾಳೆ. ಕೈಗಳಿಗೆ ತೋಳುಬಂಧಿ, ಬಳೆ, ಸೊಂಟಪಟ್ಟಿಯನ್ನು ಧರಿಸಿದ್ದಾಳೆ. ಮಹಿಳೆಯು ಎಡಗೈಯಲ್ಲಿ ನಿಂಬೆಹಣ್ಣು ಹಿಡಿದಿದ್ದಾಳೆ. ಬಲಗೈಯನ್ನು ಅಭಯಹಸ್ತದಿಂದ ಮೇಲಕ್ಕೆ ಎತ್ತಲಾಗಿದೆ. ಎಡಗಡೆ ವೀರ ಮುಡಿ ಕಟ್ಟಿ ಕಿವಿಯಲ್ಲಿ ಕುಂಡಲಗಳನ್ನು ಧರಿಸಿ ಕೊರಳಲ್ಲಿ ಮಣಿಸರ ಹೀಗೆ ವೈವಿಧ್ಯಮಯ ಸರಗಳಿಂದ ಅಲಂಕರಿಸಲಾಗಿದೆ. ವೀರ ಅಂಜಲಿ ಮುದ್ರೆಯಲ್ಲಿದ್ದಾನೆ. ಕೈಗೆ ಕಡಗ, ತೋಳುಬಂಧಿ ಧರಿಸಿದ್ದು, ವೀರ ಕಚ್ಚೆ ಹಾಕಿ ಬಲಗಾಲಿಗೆ ಕಡಗ ಪಾದರಸ ಧರಿಸಿರುವುದು ಈ ಶಿಲ್ಪದ ವೈಶಿಷ್ಟ್ಯಗಳಾಗಿವೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯ ಕ್ರಿ.ಶ. ೧೬ನೆಯ ಶತಮಾನದ ವೀರ ಮಾಸ್ತಿಗಲ್ಲು ಶಿಲ್ಪದಲ್ಲಿ ಇಬ್ಬರು ಮಹಿಳೆಯರು ಅಂಜಲಿ ಮುದ್ರೆಯಲ್ಲಿದ್ದು ಮಧ್ಯೆ ಮಹಾಸತಿ ತುರುಬು ಕಟ್ಟಿದ್ದಾಳೆ. ಕಿವಿಯಲ್ಲಿ ವರ್ತುಲಾಕಾರದ ಓಲೆ, ಕೈಗಳಿಗೆ ತೋಳುಬಂಧಿ, ಬಳೆ ಧರಿಸಿದ್ದಾರೆ. ಮಹಾಸತಿ ಅಂಜಲಿ ಮುದ್ರೆಯಲ್ಲಿದ್ದು ಪದ್ಮಾಸನದಲ್ಲಿ ಆಸೀನಳಾಗಿದ್ದಾರೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯ ಕ್ರಿ.ಶ. ೧೬ನೆಯ ಶತಮಾನದ ವೀರ ಮಾಸ್ತಿಗಲ್ಲಿನ ಕೆಳಭಾಗದ ಪಟ್ಟಿಕೆಯಲ್ಲಿ ವೀರರು ಕತ್ತಿಗಳನ್ನು ಎರಡೂ ಕೈಗಳಿಂದ ಹಿಡಿದು ಹೋರಾಡುತ್ತಿದ್ದಂತೆ ಚಿತ್ರಸಲಾಗಿದೆ. ವೀರರು ತುರುಬು ಕಟ್ಟಿದ್ದಾರೆ. ಕಿವಿಯಲ್ಲಿ ವರ್ತುಲಾಕಾರದ ಓಲೆ, ಕೈಗಳಿಗೆ ಬಳೆ, ಕಡಗ, ವೀರಗಚ್ಚೆ ಹಾಕಿರುವ ದೃಶ್ಯ ಚಿತ್ರಿತವಾಗಿದೆ. ವೀರನ ಹಿಂದೆ ಧ್ವಜವನ್ನು ಹಿಡಿದ ಮತ್ತೊಬ್ಬ ಪುರುಷನ ಚಿತ್ರವಿದೆ. ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ಉಬ್ಬುಶಿಲ್ಪಗಳಿವೆ. ವೀರ ಅಂಜಲಿ ಮುದ್ರೆಯಲ್ಲಿದ್ದು ಸ್ಥಾನಿಕ ಭಂಗಿಯಲ್ಲಿದ್ದಾನೆ. ಮಹಿಳೆ ಬಲಗೈಯನ್ನು ಮೇಲಕ್ಕೆ ಎತ್ತಿದ್ದಾಳೆ. ಎಡಗೈ ಕೆಳಗೆ ಬಿಟ್ಟು ನಿಂಬೆಹಣ್ಣು ಹಿಡಿದಿದ್ದಾಳೆ. ಮುತ್ತೈದೆಯ ಸತಿ ಸಹಗಮನದ ಸಂಕೇತ ಇದಾಗಿದೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯ ಕ್ರಿ.ಶ. ೧೬ನೆಯ ಶತಮಾನದ ವೀರ ಮಾಸ್ತಿಗಲ್ಲಿನಲ್ಲಿ ವೀರ ಸತಿ (ವನಿತೆ)ಯರು ಸರ್ವಾಲಂಕೃತರಾಗಿ ಅಂಜಲಿ ಮುದ್ರೆಯಲ್ಲಿ ಪದ್ಮಾಸನದಲ್ಲಿ ಕುಳಿತಿದ್ದಾರೆ. ಸತಿಯ ಬಲಗೈ ಮೇಲಕ್ಕೆ ಎತ್ತಿ ಎಡಗಡೆ ಬಿಟ್ಟಿದ್ದಾಳೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿ ಕ್ರಿ.ಶ. ೧೬-೧೭ನೆಯ ಶತಮಾನದ ವೀರ ಮಾಸ್ತಿಗಲ್ಲು ಇದೆ. ಇಲ್ಲಿ ವೀರನು ಬಲಗಡೆ ನಿಂತು ಆತನ ಪತ್ನಿ ಎಡಗಡೆ ನಿಂತಿದ್ದಾಳೆ. ವೀರ ಮುಡಿ ಕಟ್ಟಿದ್ದಾನೆ. ಕೊರಳಲ್ಲಿ ಪದಕಸರ, ಮಣಿಸರ ಧರಿಸಿದ್ದಾನೆ. ಎರಡು ಕೈಗಳಿಂದ ಖಡ್ಗವನ್ನು ಹಿಡಿದು ವೀರಗಾಸೆಯನ್ನು ಧರಿಸಿದ್ದಾನೆ. ವೀರ ಸೊಂಟದ ಬಲಗಡೆ ಕತ್ತಿ ಸಿಕ್ಕಿಸಿಕೊಂಡಿದ್ದಾನೆ. ಸ್ತ್ರೀ ಬಲಗಡೆ ಮುಡಿ ಕಟ್ಟಿದ್ದಾರೆ. ಕಿವಿಯಲ್ಲಿ ವರ್ತುಲಾಕಾರದ ಓಲೆಗಳು, ಕೊರಳಲ್ಲಿ ಸರ ಧರಿಸಿದ್ದಾಳೆ. ಬಲಗೈಯಲ್ಲಿ ಚಿಕ್ಕ ಕತ್ತಿ ಹಿಡಿದು ತನ್ನ ಕುತ್ತಿಗೆ ತನಕ ಮೇಲಕ್ಕೆ ಎತ್ತಿದ್ದಾಳೆ. ಎಡಗೈಯಲ್ಲಿ ಕನ್ನಡಿ ಹಿಡಿದು ಮೇಲಕ್ಕೆ ಎತ್ತಿದ್ದಾಳೆ. ಸೀರೆಯ ನೆರಿಗೆಯ ಕೆತ್ತನೆ ತುಂಬಾ ಅಲಂಕೃತವಾಗಿದೆ. ಈ ಶಿಲ್ಪದಲ್ಲಿ ಪತಿಯೊಂದಿಗೆ ಆತನ ಪತ್ನಿ ಸಹಗಮನ ಮಾಡಿರುವಂತೆ ಕಂಡುಬರುತ್ತದೆ. ಬಲಗೈಯಲ್ಲಿನ ಕತ್ತಿ ಕೊರಳಿಗೆ ತಾಕದಂತೆ ಚಿತ್ರಿಸಲಾಗಿದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿ ಕ್ರಿ.ಶ. ೧೬-೧೭ನೆಯ ಶತಮಾನದ ವೀರ ಮಾಸ್ತಿಗಲ್ಲು ಶಿಲ್ಪದಲ್ಲಿ ವೀರನೊಡನೆ ಆತನ ಪತ್ನಿ ಎಡಗಡೆ ನಿಂತಿದ್ದಾಳೆ. ವೀರ ಮುಡಿ ಕಟ್ಟಿದ್ದಾನೆ. ಕೊರಳಲ್ಲಿ ಪದಕಸರ, ಮಣಿಸರ ಧರಿಸಿದ್ದಾನೆ. ಎರಡು ಕೈಗಳಿಂದ ಖಡ್ಗವನ್ನು ಹಿಡಿದು ವೀರಗಾಸೆಯನ್ನು ಧರಿಸಿದ್ದಾನೆ. ವೀರ ಸೊಂಟದ ಬಲಗಡೆ ಕತ್ತಿ ಸಿಕ್ಕಿಸಿಕೊಂಡಿದ್ದಾನೆ. ಸ್ತ್ರೀಯರು ಬಲಗಡೆ ಮುಡಿ ಕಟ್ಟಿದ್ದಾಳೆ. ಕಿವಿಯಲ್ಲಿ ವರ್ತುಲಾಕಾರದ ಓಲೆ, ಕೊರಳಲ್ಲಿ ಸರ ಧರಿಸಿದ್ದಾಳೆ. ಬಲಗೈಯಲ್ಲಿ ಚಿಕ್ಕ ಕತ್ತಿ ಹಿಡಿದು ಮೇಲಕ್ಕೆ ಎತ್ತಿದ್ದಾಳೆ. ಸೀರೆಯ ನೆರಿಗೆಯ ಕೆತ್ತನೆ ತುಂಬಾ ಕಲಾತ್ಮಕವಾಗಿದೆ. ಈ ಶಿಲ್ಪವು ತನ್ನ ವೀರ ಪತಿಯೊಂದಿಗೆ ಆತನ ಪತ್ನಿ ಸಹಗಮನ ಮಾಡಿರುವ ವಿಷಯವಿದೆ. ಈ ಶಿಲ್ಪದಲ್ಲಿ ಬಲಗೈಯಲ್ಲಿನ ಕತ್ತಿ ಕೊರಳಿಗೆ ತಾಕಿರುವಂತೆ ಇಲ್ಲಿ ಮಹಿಳೆಯು ಪತಿ ಭಕ್ತಿಯನ್ನು ಶಿಲ್ಪದ ಮೂಲಕ ತೋರಿಸಿದ್ದಾನೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯ ಕ್ರಿ.ಶ. ೧೬-೧೭ನೆಯ ಶತಮಾನದ ವೀರ ಮಾಸ್ತಿಗಲ್ಲು ಶಿಲ್ಪದಲ್ಲಿ ವೀರ ಮಹಾಸತಿ ಕುದುರೆಯ ಮೇಲೆ ಹೋರಾಡುತ್ತಿರುವ ದೃಶ್ಯವಿದೆ. ಕಿರೀಟಧಾರಿ ವೀರ ಬಲಗೈಯಲ್ಲಿ ಖಡ್ಗ ಹಿಡಿದು, ಎಡಗೈಯಲ್ಲಿ ಲಗಾಮು ಹಿಡಿದಿದ್ದಾನೆ. ವೀರನ ಹಿಂದೆ ರಾಣಿ ಕಿವಿಯಲ್ಲಿ ಓಲೆ, ಕೊರಳಲ್ಲಿ ಸರ, ಕೈಗೆ ಬಳೆ ಧರಿಸಿದ್ದಾಳೆ. ಬಲಗೈ ಅಭಯ ಹಸ್ತ, ಎಡಗೈಯಲ್ಲಿ ಪುಷ್ಪದ ಮೊಗ್ಗು ಹಿಡಿದಿದ್ದಾಳೆ. ಕಾಲಲ್ಲಿ ಕಡಗ ಧರಿಸಿದ್ದಾಳೆ. ಪುಷ್ಪದ ಮೊಗ್ಗು ಇದು ಮುತ್ತೈದೆಯ ಸಂಕೇತವೂ ಹೌದು.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯ ಕ್ರಿ.ಶ. ೧೬-೧೭ನೆಯ ಶತಮಾನದ ಒಕ್ಕೈ ಮಾಸ್ತಿಗಲ್ಲು ಬಿಳಿಕಣ ಶಿಲೆಯಾಗಿದೆ. ಈ ಶಿಲ್ಪದ ಕೆಳಭಾಗದ ಪಟ್ಟಿಕೆಯಲ್ಲಿ ಕುದುರೆ ಸವಾರರಾದ ಇಬ್ಬರು ವೀರರು ಬಲಗೈಯಲ್ಲಿ ಈಟಿ, ಎಡಗೈಯಲ್ಲಿ ಖಡ್ಗಗಳನ್ನು ಹಿಡಿದು ಹೋರಾಡುತ್ತಿರುವ ದೃಶ್ಯವಿದೆ. ಮೇಲ್ಭಾಗದ ಪಟ್ಟಿಕೆಯಲ್ಲಿ ರಾಜ ದಂಪತಿಗಳ ಬಲಕ್ಕೆ ಕಂಬದಿಂದ ಹೊರಟ ಕೈಯನ್ನು ಚಿತ್ರಿಸಲಾಗಿದೆ. ರಾಜ ದಂಪತಿಗಳು ಮುಡಿ ಕಟ್ಟಿ

ಪದ್ಮಾಸನದಲ್ಲಿ ಅಂಜಲಿ ಮುದ್ರೆಯಲ್ಲಿದ್ದಾರೆ. ದೇವ ಕೋಷ್ಟಕದಲ್ಲಿ ಶಿವಲಿಂಗವಿದೆ. ಅದರ ಅಕ್ಕಪಕ್ಕ ಸೂರ್ಯ-ಚಂದ್ರರ ಉಬ್ಬುಶಿಲ್ಪಗಳಿವೆ. ಇಂತಹ ಶಿಲ್ಪಗಳನ್ನು ತೋಳಗೈ, ವ್ಯಾಸನ ತೋಳು, ಒಕ್ಕೈ ಮಾಸ್ತಿ ಮುಂತಾದ ಹೆಸರಿನಿಂದ ಕರೆಯುತ್ತಾರೆ. ಬೆಂಕಿ ಕೊಂಡಕ್ಕೆ ಬೀಳುವಾಗ ಎಲ್ಲರಿಗೂ ತನ್ನ ಬಲಗೈಯನ್ನು ಎತ್ತಿ ಹರಸುತ್ತಿದ್ದಳು. ಅವಳ ಸಾವಿನ ನಂತರ ಅವಳು ಹರಿಸಿದ ಕೈಯ ರೂಪವನ್ನು ಶಿಲೆಗಳ ಮೇಲೆ ಕೆತ್ತಿ ಸ್ಮಾರಕವಾಗಿ ನಿಲ್ಲಿಸುತ್ತಿದ್ದರು. ಇಲ್ಲಿ ಕೇವಲ ಒಂದು ತೋಳನ್ನು ಮಾತ್ರ ಬಿಡಿಸಿದ್ದು ಇದರ ತಳಭಾಗ ಕಂಬದಂತೆ ಇದ್ದು ಇದರ ಮೇಲ್ಭಾಗ ಫಲಕದಂತೆ ಆಕಾರದಂತಿವೆ. ಈ ಫಲಕದಲ್ಲಿ ಸಾಂಕೇತಿಕವಾಗಿ ತೋಳನ್ನು ಮಾತ್ರ ಬಿಡಿಸಲಾಗಿದೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯ ಕ್ರಿ.ಶ. ೧೬-೧೭ನೆಯ ಶತಮಾನದ ವಿಜಯನಗರೋತ್ತರ ಕಾಲದ ವೀರ ಮಾಸ್ತಿಗಲ್ಲು ಶಿಲ್ಪದ ಬಲಗಡೆ ಶಿವಲಿಂಗ ದೇವಕೊಷ್ಟಕದಲ್ಲಿ ಆಸೀನನಾಗಿದ್ದು ಅದರ ಹತ್ತಿರ ನಂದಿಯ ಉಬ್ಬುಶಿಲ್ಪವಿದೆ. ವೀರ ಮುಡಿ ಕಟ್ಟಿ ಓಲೆ ಧರಿಸಿ, ಕೈಗಳಿಗೆ ಕಡಗ, ತೋಳುಬಂಧಿ, ಆಭರಣಗಳಿಂದ ಅಂಜಲಿ ಮುದ್ರೆಯಲ್ಲಿ ಪದ್ಮಾಸೀನಳಾಗಿದ್ದಾಳೆ. ವೀರನ ಎಡಗಡೆ ಮಹಿಳೆ ಅಂಜಲಿ ಮುದ್ರೆಯಲ್ಲಿ ಕುಳಿತಿದ್ದಾಳೆ.

ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ ಸದಲಗಾ ಗ್ರಾಮದ ಹೊರಗೆ ಇರುವ ಮಹಾಸತಿ ಶಿಲ್ಪದಲ್ಲಿ ಬಲ ತೋಳುಗೈಯನ್ನು ಉದ್ದವಾದ ಕಂಬದ ಮಧ್ಯ ಜೋಡಿಸಲಾಗಿದೆ. ಮೇಲ್ಭಾಗದಲ್ಲಿ ಕೈ ಮತ್ತು ಕಂಬದ ತುದಿ ಮಧ್ಯ ಶಿವಲಿಂಗವಿದ್ದು ಅದನ್ನು ಯತಿ ಮತ್ತು ದಂಪತಿಗಳು ಕೈಮುಗಿದು ಪೂಜಿಸುತ್ತಿರುವ ರೀತಿಯಲ್ಲಿ ಕೆತ್ತಲಾಗಿದೆ. (ಇಂಡಿಯನ್ ಆ್ಯಂಟಿಕ್ವೆರಿ ವ್ಯಾಲ್ಯೂಮ್-೧೨, ಪುಟ-೯೫) ಇದೇ ತಾಲೂಕಿನ ಚಿಂಚಲಿ ಗ್ರಾಮದ ಮುಖ್ಯ ರಸ್ತೆಯ ಬದಿಯಲ್ಲಿ ಒಂದು ಶಿಲ್ಪದಲ್ಲಿ ಕೇವಲ ಕಂಬಕ್ಕೆ ಜೋಡಿಸಿದ ಬಲತೋಳುಗೈ ಚಿತ್ರವಿದೆ. ತೋಳಿನ ಕೆಳಗಡೆ ದಂಪತಿಗಳು ಕೈಮುಗಿದು ಕುಳಿತಿರುವವರು. ಈ ಶಿಲ್ಪದಲ್ಲಿ ಸೂರ್ಯ-ಚಂದ್ರ, ಶಿವಲಿಂಗ ಮತ್ತು ದಂಪತಿಗಳನ್ನು ಎದ್ದು ಕಾಣುವಂತೆ ಚಿತ್ರಿಸಲಾಗಿದೆ. (ಬೆಳಗಾವಿ ಜಿಲ್ಲಾ ಗ್ಯಾಜಿಟಿಯರ್ (ಪ್ರ.ಸಂ), ಸೂರ್ಯನಾಥ ಕಾಮತ್, ೧೯೮೭, ಪುಟ-೧೦೦)

ಇದೇ ತಾಲೂಕಿನ ಬೆಡಕಿಹಾಳ ಗ್ರಾಮದ ಸಿದ್ಧೇಶ್ವರ ದೇವಾಲಯದ ಒಳಗೋಡೆಯಲ್ಲಿರುವ ಮಹಾಸತಿ ಶಿಲ್ಪದಲ್ಲಿ ಎಡ ಅಂಚಿನವರೆಗೆ ತೋರಿಸಿದ ಕಂಬ ಅದರ ಮಧ್ಯಭಾಗಕ್ಕೆ ಬಲ ತೋಳುಗೈಯನ್ನು ಜೋಡಿಸಲಾಗಿದೆ. ಈ ಕಂಬಕ್ಕೆ ಎರಡು ಚೌಕ ಪಟ್ಟಿಕೆಗಳು, ಮೇಲೆ ಕಳಸ, ಅಲಂಕಾರವುಳ್ಳ ಗುಮ್ಮಟವಿದೆ. ಶಿಲ್ಪದಲ್ಲಿ ತೋಳುಗೈಯೊಂದಿಗೆ ನಾಲ್ಕು ಬೇರೆ ಬೇರೆ ಚಿತ್ರಗಳಿವೆ. ಕೆಳಗಿನ ಚಿತ್ರದಲ್ಲಿ ವೀರ ತನ್ನ ಎರಡು ಕೈಗಳನ್ನು ಮೇಲಕ್ಕೆತ್ತಿಕೊಂಡು ಕುದುರೆ ಮೇಲೆ ಕುಳಿತಿದ್ದಾನೆ. ತೋಳುಗೈಯ ಮೇಲೆ ದಂಪತಿಗಳು ಕೈಮುಗಿದು ವಿಮಾನದಲ್ಲಿ ಕುಳಿತಿದ್ದಾರೆ. ಮತ್ತು ಕಂಬದ ಮೇಲ್ಭಾಗದಲ್ಲಿ ಮಂಟಪವಿದ್ದು ಅಲ್ಲಿ ಶಿವಲಿಂಗಕ್ಕೆ ಪೂಜಿಸುತ್ತಿರುವ ಯತಿ ಇದ್ದಾನೆ. ಅದರ ಮೇಲೆ ಬಲಗಡೆಗೆ ಒಂದು ಚೌಕದಡಿಯಲ್ಲಿ ದಂಪತಿಗಳು ಕೈಮುಗಿದು

ಕುಳಿತಿದ್ದಾನೆ. ಈ ಶಿಲ್ಪದಲ್ಲಿ ಕಂಬ, ಕುದುರೆ ಸವಾರ, ಶಿವಲಿಂಗ, ದಂಪತಿಗಳನ್ನು ವಿಮಾನ ಮತ್ತು ಗೂಡಿನಲ್ಲಿ ಚಿತ್ರಿಸಿರುವ ಶೈಲಿಯು ವಿಶೇಷವೆನಿಸಿದೆ. (ಬೆಳಗಾವಿ ಜಿಲ್ಲಾ ಗ್ಯಾಜಿಟಿಯರ್ (ಪ್ರ.ಸಂ), ಸೂರ್ಯನಾಥ ಕಾಮತ್ ೧೯೮೭, ಪುಟ-೧೦೨)

ಇದೇ ತಾಲೂಕಿನ ಚಿಂಚಲಿ ಗ್ರಾಮದ ರಾಮಲಿಂಗೇಶ್ವರ ದೇವಾಲಯದ ಒಳಗೋಡೆಯ ಮಹಾಸತಿ ಶಿಲ್ಪದಲ್ಲಿ ಜೋಡು ತೋಳುಗೈಗಳು ಇರುವುದು ವಿಶೇಷ. ಅದರಲ್ಲಿ ಎಡಕ್ಕೆ ಬಲತೋಳುಗೈ, ಬಲಕ್ಕೆ ಎಡ ತೋಳುಗೈಯನ್ನು ಒಂದಕ್ಕೊಂದು ಸಮಾನಾಂತರವಾಗಿ ಚಿತ್ರಿಸಿರುವುದು ಗಮನೀಯ. ಈ ತೋಳುಗೈಗಳ ಕೆಳಗೆ ಕುದುರೆ ಸವಾರ ತಲೆ ಮೇಲೆ ವಸ್ತುಗಳನ್ನು ಹೊತ್ತು ವ್ಯಕ್ತಿ ಮತ್ತು ಎರಡು ಕೈಗಳನ್ನು ಮೇಲಕ್ಕೆತ್ತಿದೆ. ಸತಿ ಮುಂತಾದವರ ದೃಶ್ಯ ವಿಶೇಷವೆನಿಸಿದೆ. (ಬೆಳಗಾವಿ ಜಿಲ್ಲಾ ಗ್ಯಾಜಿಟಿಯರ್, (ಪ್ರ.ಸಂ), ಸೂರ್ಯನಾಥ ಕಾಮತ್ ೧೯೮೭, ಪುಟ-೧೦೨)

ಇದೇ ತಾಲೂಕಿನ ಸದಲಗಾ ಗ್ರಾಮದ ಮಹಾದೇವ ದೇವಾಲಯದ ಶಿಲ್ಪದಲ್ಲಿ ಮೂರು ಪಟ್ಟಿಕೆಗಳಿವೆ. ಕೆಳಗಿನ ಪಟ್ಟಿಕೆಯಲ್ಲಿ ದಂಪತಿಗಳು ಕೈಮುಗಿದು ಕುಳಿತಿದ್ದು, ಅವರ ಮಧ್ಯೆ ಬಾಳೆ ಗಿಡವಿದೆ. ಈ ಪಟ್ಟಿಕೆಯ ಎಡಕ್ಕೆ ಮೇಲ್ಭಾಗದಲ್ಲಿ ಅಂಚಿನವರೆಗೆ ಅಲಂಕೃತ ಕಂಬವಿದೆ. ಈ ಕಂಬಕ್ಕೆ ಎರಡು ಚೌಕಗಳಿದ್ದು, ಮೇಲಿನ ಚೌಕ ಪಟ್ಟಿಯಲ್ಲಿ ಉದ್ದ ಕಳಸವುಳ್ಳ ಗುಮ್ಮಟವಿದೆ. ಈ ಕಂಬದ ಎರಡನೇ ಚೌಕ ಪಟ್ಟಿಕೆಗೆ ಬಲ ತೋಳುಗೈ ತುದಿಯನ್ನು ಜೋಡಿಸಲಾಗಿದೆ. ಈ ತೋಳಿನ ಮತ್ತು ಕೆಳಗಿನ ಪಟ್ಟಿಕೆಯ ಮಧ್ಯದಲ್ಲಿ ಅರ್ಧ ವೃತ್ತಾಕಾರಾದ ಪಟ್ಟಿಕೆ ಇದೆ. ಅದರ ಮಧ್ಯದಲ್ಲಿ ಶಿವಲಿಂಗವಿದೆ. ಬಲಕ್ಕೆ ಮತ್ತು ಕಂಬದ ಕಳಸದ ಮೇಲ್ಭಾಗದಲ್ಲಿ ಅಸ್ಪಷ್ಟ ಚಿತ್ರಗಳ ಅಲಂಕರಣವಿದೆ. (ಬೆಳಗಾವಿ ಜಿಲ್ಲಾ ಗ್ಯಾಜಿಟಿಯರ್ (ಪ್ರ.ಸಂ), ಸೂರ್ಯನಾಥ ಕಾಮತ್ ೧೯೮೭, ಪುಟ-೧೦೪)

ಇದೇ ತಾಲೂಕಿನ ಪಂಗೇರಿಯ ಅಡ್ಡರಸ್ತೆ ಹತ್ತಿರ ದೊರೆತಿರುವ ಮಹಾಸತಿ ಶಿಲ್ಪದಲ್ಲಿ ಅನೇಕ ಶಿಲ್ಪಗಳನ್ನು ಮೂರು ಭಾಗದಲ್ಲಿ ತೋರಿಸಲಾಗಿದೆ. ಕೆಳಗಿನ ಭಾಗದಲ್ಲಿ ನಾಲ್ವರು ವೀರರು ಕೈಮುಗಿದು ನಿಂತಿದ್ದಾರೆ. ಬಲಗಡೆ ತೋಳಿನ ಮೇಲೆ ಗಿಂಡಿಯಿದೆ. ಮೇಲಿನ ಭಾಗದಲ್ಲಿ ಶಿವಲಿಂಗ, ನಿಂತ ನಂದಿ, ಕೈಮುಗಿದು ಕುಳಿತಿರುವ ವೀರರ ಚಿತ್ರಗಳಿವೆ. ಈ ಶಿಲ್ಪದಲ್ಲಿ ತೋರಿಸಿದ ಗಿಂಡಿ ಚಿತ್ರ ವಿಶೇಷ ಗಮನವನ್ನು ಸೆಳೆಯುತ್ತದೆ. (ಸೂರ್ಯನಾಥ ಕಾಮತ್ (ಪ್ರ.ಸಂ), ಬೆಳಗಾವಿ ಜಿಲ್ಲಾ ಗ್ಯಾಜಿಟಿಯರ್, ೧೯೮೭, ಪುಟ-೧೦೬) ಈ ಮಹಾಸತಿ ಶಿಲ್ಪಗಳು ಶೈಲಿಯ ದೃಷ್ಟಿಯಿಂದ ಕ್ರಿ.ಶ. ೧೬ ಮತ್ತು ೧೭ನೆಯ ಶತಮಾನಕ್ಕೆ ಸೇರಿರುವಂತೆ ತೋರುತ್ತದೆ. ಇವು ಈ ಪ್ರದೇಶದ ಆ ಕಾಲದ ಮೂಲ ಆಕರಗಳೆನಿಸಿಕೊಳ್ಳುವುವು. ಈ ಪ್ರದೇಶದಲ್ಲಿ ಆಳೆತ್ತರದ ಮನುಷ್ಯಾಕೃತಿಯುಳ್ಳ ಮಹಾಸತಿ ಶಿಲ್ಪಗಳು ಕಂಡುಬರುವುದಿಲ್ಲ. ಹಾಗೂ ಕಂಡುಬಂದಿರುವ ಮಹಾಸತಿ ಶಿಲ್ಪಗಳಲ್ಲಿ ಕೆಲವು ವಿಶಿಷ್ಟ ಲಕ್ಷಣಗಳಿರುವುದು ಗಮನೀಯವಾಗಿವೆ.

೭.೧. ಶಾಸನ ರಹಿತ ಮಹಾಸತಿಗಲ್ಲು :

ಚಿಂಚೋಳಿ ತಾಲೂಕಿನ ಎತ್ತಾಪುರ ಗ್ರಾಮದ ಹನುಮಾನ್ ಮಂದಿರಬಳಿ ೭ನೆಯ ಶತಮಾನದ ಮಾಸ್ತಿಗಲ್ಲು ಇದೆ. ಹೆಣ್ಣಿನ ಮೂರ್ತಿಶಿಲ್ಪ ಈ ಊರಲ್ಲಿದೆ. ಇದು ಪುರಾತನ ಶಿಲ್ಪವಾಗಿದೆ. ವೀರ ಮಹಿಳೆಯೊಬ್ಬಳ ಶಿಲ್ಪವಿದೆ. ನಗ್ನವಾಗಿದೆ. ತಲೆಯ ಮೇಲೆ ಕೂದಲುಗಳಿಲ್ಲದಂತೆ ತೋರಿಸಿದೆ. ಕಾಲುಗಳು ಅತಿ ಚಿಕ್ಕದಾಗಿ ಕೆತ್ತಲ್ಪಟ್ಟಿದೆ. ಕೈಮುಗಿದು ನಿಂತಿದೆ. ಇದು ವೀರಸತಿಯಂತೆ ತೋರುತ್ತದೆ.

ಬಳ್ಳಾರಿ ತಾಲೂಕಿನ ಕುಡಿತಿಯ ಗ್ರಾಮದ ದೊಡ್ಡ ಆಂಜನೇಯ ದೇವಾಲಯದ ಮುಂದಿನ ಭಾಗದಲ್ಲಿ ದೊರೆತ ಮಾಸ್ತಿಗಲ್ಲು ಶಾಸನ ರಹಿತವಾಗಿದೆ. ಈ ಶಾಸನವು ಶೈವ ಶಾಸನವಾಗಿದ್ದು, ಎರಡು ಹಂತಗಳನ್ನು ಮಾತ್ರ ಹೊಂದಿದೆ. ಈ ಮಾಸ್ತಿಗಲ್ಲು ಶಾಸನದಲ್ಲಿ ವೀರನಿಗೆ ಇಬ್ಬರ ಪತ್ನಿಯರಿದ್ದು, ಯುದ್ಧಕ್ಕೆ ಹೋದಾಗ ವೀರನು ಮಡಿದ ಸುದ್ದಿಯನ್ನು ಕೇಳಿ ಸತಿಯರಿಬ್ಬರು ಮಹಾಸತಿಯಾಗುವ ದೃಶ್ಯವಿದೆ. ಶಾಸನದ ಮೊದಲ ಹಂತದಲ್ಲಿ ಮಹಾಸತಿಯರಿಬ್ಬರೂ ಕೈಗಳಲ್ಲಿ ನಿಂಬೆಹಣ್ಣುಗಳನ್ನು ಹಿಡಿದು ಇಬ್ಬರು ಬಲಗೈ ಮೇಲೆ ಎತ್ತಿದ್ದಾರೆ. ಇಬ್ಬಿಬ್ಬರ ಮಧ್ಯೆ ವೀರನು ಕೈಮುಗಿದು ನಿಂತುಕೊಂಡಿರುವ ದೃಶ್ಯವಿದೆ. ವೀರ ಮತ್ತು ಸತಿಯರ ಕೈಗಡ, ತೋಳುಬಂಧಿ, ಕೊರಳಾಭರಣ, ನಡುವಿನ ಆಭರಣ ಧರಿಸಿರುವ ಚಿತ್ರಣವಿದೆ. ಮೇಲಿನ ಹಂತದಲ್ಲಿ ಶಿವಲಿಂಗದ ಮುಂದೆ ವೀರನು ನಿಂತುಕೊಂಡು ಆರಾಧನೆಯಲ್ಲಿ ತೊಡಗಿರುವ ದೃಶ್ಯ ಶಿವಲಿಂಗಕ್ಕೆ ಎದುರಾಗಿ ವೃಷಭ ಬಲಗಾಲನ್ನು ಚಾಚಿಕೊಂಡು ಆಸೀನನಾಗಿರುವ ದೃಶ್ಯ ಅದರ ಪಕ್ಕಗಳಲ್ಲಿ ಸೂರ್ಯ, ಚಂದ್ರರಿಬ್ಬರು ಇರುವ ಚಿತ್ರವನ್ನು ಕಾಣಬಹುದು. ಇದು ಸುಮಾರು ಕ್ರಿ.ಶ. ೧೨ನೆಯ ಶತಮಾನದ್ದಾಗಿದೆ.

ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಕಲಕೇರಿಯಲ್ಲಿ ಒಂದು ಮಹಾಸತಿ ಶಿಲ್ಪವಿದ್ದು, ಸಣ್ಣದಾದ ನಡುವನ್ನು ಹೊಂದಿದೆ. ಎದೆ, ಕೊರಳಲ್ಲಿ ತುಂಬ ಆಭರಣಗಳನ್ನು ಧರಿಸಿ, ಕೇದಿಗೆ ಗರಿಗಳಿಂದ ಅಲಂಕರಿಸಿದ ಕೂದಲ ಗಂಟನ್ನು ಹಾಕಿಕೊಂಡಿದ್ದಾಳೆ. ಸೀರೆಯ ನೇರಿಗೆ ಪಾದದವರೆಗೂ ತೆರೆ ತೆರೆಯಾಗಿ ಹರಡಿದೆ. ಮಾಸ್ತಿಯ ಎರಡು ಕಿವಿಯ ಭಾಗದಲ್ಲಿ ರಂದ್ರಗಳನ್ನು ಕೊರೆಯಲಾಗಿದೆ. ಈಕೆಯ ಬಲಗೈಯನ್ನು ಮೇಲೆತ್ತಿ ಜನರನ್ನು ಹರಸುತ್ತಿರುವಂತೆ ಇದ್ದು, ಎಡಗೈಯನ್ನು ಕೆಳಭಾಗಕ್ಕೆ ನೀಳವಾಗಿ ಚಾಚಲಾಗಿದೆ. ಕೈಯಲ್ಲಿ ಬಳೆಗಳನ್ನು ಧರಿಸಿದ್ದು, ಕೊರಳಲ್ಲಿ ಪದಕವನ್ನು ಹಾಕಲಾಗಿದೆ. ಇದು ಸುಮಾರು ಕ್ರಿ.ಶ. ೧೨ನೆಯ ಶತಮಾನದ್ದಾಗಿದೆ.

ಕೂಡ್ಲಿಗಿ ತಾಲೂಕಿನ ಚಂದ್ರಶೇಖರಪುರದ ಕಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿ ಇರುವ ಮಾಸ್ತಿಕಲ್ಲಿನ ಮೊದಲ ಹಂತದಲ್ಲಿ ವೀರರು ಕತ್ತಿ ಮತ್ತು ಗುರಾಣಿಗಳನ್ನು ಹಿಡಿದು ಹೋರಾಡುವ ಚಿತ್ರವಿದೆ. ಎರಡನೇ ಹಂತದಲ್ಲಿ ಕುದುರೆಯ ಮೇಲೆ ಕುಳಿತ ವೀರರು ಕತ್ತಿಯಿಂದ ಹೋರಾಡುವ ಚಿತ್ರವಿದೆ. ಕುದುರೆಗಳನ್ನು ತುಂಬಾ ಅಲಂಕಾರವಾಗಿ ಕೆತ್ತಲಾಗಿದೆ. ಮೂರನೆಯ ಹಂತದಲ್ಲಿ

ಇಬ್ಬರು ಮಹಾಸತಿಯರು ತಮ್ಮ ಒಂದೊಂದು ಕೈಯನ್ನು ಮೇಲಕ್ಕೆ ಎತ್ತಿನಿಂತ ಚಿತ್ರವಿದೆ. ಇದು ಮಹಾಸತಿ ಹೋಗುವ ಚಿತ್ರವಾಗಿದೆ. ಇದು ಕ್ರಿ.ಶ. ೧೨ನೆಯ ಶತಮಾನದ್ದಾಗಿದೆ.

ಇದೇ ತಾಲೂಕಿನ ಕಾನಾಮಡುಗು ಗ್ರಾಮದ ಮಧ್ಯೆ ಕಟ್ಟೆಯೊಂದರ ಮೇಲೆ ಇರುವ ಮಾಸ್ತಿಕಲ್ಲಿನಲ್ಲಿ ಮೊದನೆಯ ಹಂತದಲ್ಲಿ ವೀರರು ಶತ್ರುಗಳೊಂದಿಗೆ ಕತ್ತಿಯನ್ನು ಹಿಡಿದು ಹೋರಾಡುವ ಚಿತ್ರವಿದೆ. ಎರಡನೇ ಹಂತದಲ್ಲಿ ಸತಿಯು ತನ್ನ ಒಂದು ಕೈಯನ್ನು ಮೇಲಕ್ಕೆ ಎತ್ತಿ ನಿಂತಿದ್ದಾಳೆ. ಇದು ಕ್ರಿ.ಶ. ೧೨ನೆಯ ಶತಮಾನದ್ದಾಗಿದೆ.

ಗುಲಬರ್ಗಾ ತಾಲೂಕಿನ ನಾಗನಹಳ್ಳಿ ಗ್ರಾಮದ ಕೊರಮ್ಮ ದೇವಸ್ಥಾನದ ಬಳಿ ಇರುವ ೧೫ನೇ ಶತಮಾನದ ಮಾಸ್ತಿಕಲ್ಲು ಇದೆ. ಇದು ನಾಗಲಿಂಗೇಶ್ವರ ದೇವಾಲಯ ಪಕ್ಕದಲ್ಲಿರುವ ಕೊರಮ್ಮನ ದೇವಸ್ಥಾನ ಬಲಭಾಗದಲ್ಲಿದೆ. ಮಹಿಳೆ ತನ್ನ ಕೈಯನ್ನು ತೋರಿಸಿದ್ದಾಳೆ. ಅದರ ಮೇಲೆ ಒಂದು ಅಗ್ನಿಕುಂಡಲದ ಚಿತ್ರಣವಿದೆ.

ಅದೇ ಗ್ರಾಮದ ನಾಗಲಿಂಗೇಶ್ವರ ದೇವಾಲಯ ಮುಂದೆ ಇರುವ ೧೫ನೇ ಶತಮಾನದ ಒಕ್ಕೈ ಮಾಸ್ತಿಕಲ್ಲಿನ ಕೆಳಭಾಗದಲ್ಲಿ ಗಮನಿಸಿದಾಗ ಪತಿಯೊಂದಿಗೆ ಅವಳು ಚಿತೆಯ ಮೇಲೆ ಮಲಗಿರುವಂತಿರುವ ದೃಶ್ಯವಿದೆ. ಇದರ ಮೇಲೆ ಸ್ತ್ರೀಯು ತನ್ನ ಬಲಗೈಯನ್ನು ತೋರಿಸಿರುವ ಚಿತ್ರವಿದೆ. ಆ ಕೈಗೆ ತೋಳ್ಬಂಧಿ ಧರಿಸಿರುವುದರ ಬಗ್ಗೆ ಮತ್ತು ಅಂಗೈ ಬಳಿಯಲ್ಲಿ ಮತ್ತೊಂದು ಕೈ ಬಂಧಿಯನ್ನು ಹೊಂದಿರುವ ದೃಶ್ಯವಿದೆ. ಅವಳ ಅಂಗೈಯೊಂದಿಗೆ ಐದು ಬೆರಳುಗಳು ಸ್ಪಷ್ಟವಾಗಿ ಮೂಡಿರುವ ಚಿತ್ರಣವಿದೆ. ಕೈ ಚಿತ್ರದ ಮೇಲ್ಭಾಗದಲ್ಲಿ ಒಂದು ಶಿವಲಿಂಗ ಇದ್ದು ಅದರ ಅಕ್ಕಪಕ್ಕದಲ್ಲಿ ದಂಪತಿಯರು ಕೈಮುಗಿದು ಆ ಲಿಂಗವನ್ನು ಪೂಜಿಸುತ್ತಿರುವ ಚಿತ್ರವಿದೆ. ಮೇಲ್ಭಾಗದಲ್ಲಿ ಸೂರ್ಯ-ಚಂದ್ರರ ಚಿತ್ರವಿದೆ. ಈ ಎಲ್ಲ ಸನ್ನಿವೇಶಗಳನ್ನು ಒಂದೇ ಕಲ್ಲಿನಲ್ಲಿ ಬಿಡಿಸಲಾಗಿದೆ.

ಅದೇ ತಾಲೂಕಿನ ಹರಸೂರು ಗ್ರಾಮದ ಕರಿಬಸವೇಶ್ವರ ದೇವಾಲಯಕ್ಕೆ ಹೋಗುವ ದಾರಿಯಲ್ಲಿರುವ ೧೫ನೆಯ ಶತಮಾನದ ಮಾಸ್ತಿಗಲ್ಲು ಇದ್ದು, ಇದನ್ನು ದಕ್ಷಿಣಕ್ಕೆ ಮುಖಮಾಡಿ ನಿಲ್ಲಿಸಲಾಗಿದೆ. ಈ ಮಾಸ್ತಿಕಲ್ಲಿನ ಕೆಳಭಾಗದಲ್ಲಿ ಮಹಾಸತಿಯು ಕುದುರೆಯ ಮೇಲೆ ಕುಳಿತು ಮಹಾಸತಿಯಾಗಲು ಚಿತೆಯ ಕಡೆ ಹೊರಟ ಸನ್ನಿವೇಶವಿದೆ. ಅದರ ಮೇಲೆ ಅವಳು ತನ್ನ ಬಲಗೈಯನ್ನು ತೋರಿಸಿದ ಚಿತ್ರವಿದೆ. ಈ ಕೈಗೆ ತೋಳ್ಬಂಧಿ ಧರಿಸಿದಂತಿದೆ. ಸ್ತ್ರೀಯ ಅಂಗೈ ಸ್ಪಷ್ಟವಾಗಿ ಗೋಚರಿಸುತ್ತಿದೆ. ಕೈಗೆ ಬಳೆಗಳನ್ನು ಧರಿಸಿದ್ದನ್ನು ಕಾಣುತ್ತೇವೆ. ಮಾಸ್ತಿಕಲ್ಲಿನ ಕೊನೆಯ ಭಾಗದಲ್ಲಿ ಚಂದ್ರ, ಶಿವಲಿಂಗ ಮತ್ತು ಸೂರ್ಯನ ಚಿತ್ರಗಳನ್ನು ಕಾಣಬಹುದು.

ಅದೇ ತಾಲೂಕಿನ ಪಾಳಾ ಗ್ರಾಮ ಹನುಮಂತ ದೇವರ ಗುಡಿಯ ಪಕ್ಕದಲ್ಲಿರುವ ೧೫ನೆಯ ಶತಮಾನದ ಮಾಸ್ತಿಕಲ್ಲು ಇದ್ದು, ತೋಳ್ಬಂಧಿ ಧರಿಸಿರುವುದು, ಬಳೆಗಳನ್ನು ಧರಿಸಿರುವುದು

ಕಾಣಬಹುದು. ಕೈ ತೋರಿಸುವುದರ ಬಲಭಾಗಕ್ಕೆ ಮಹಾಸತಿಯು ಆನೆಯ ಮೇಲೆ ಕುಳಿತು ಹೋರಾಡಿ ಮಡಿದ ಮಹಾಸತಿಯಾದ ಸ್ಮಾರಕವಾಗಿದೆ. ಅದರ ಮೇಲೆ ಚಂದ್ರ, ಶಿವಲಿಂಗ ಮತ್ತು ಸೂರ್ಯನ ಚಿತ್ರಗಳು ಇವೆ.

ಪಾಳಾ ಗ್ರಾಮದ ಹಜರತ್ ನಜಮುಲ್ಲಾ ಹುಸೇನಿ ದರ್ಗಾ ಬಳಿ ಇರುವ ೧೫ನೇ ಶತಮಾನದ ಬಿಳಿಕಲ್ಲು ಮಾಸ್ತಿಗಲ್ಲುಗಳಲ್ಲಿ ಅತ್ಯಂತ ವಿಶಿಷ್ಟವಾದ ಮಾಸ್ತಿಗಲ್ಲಾಗಿದೆ. ಈ ಕಲ್ಲಿನ ಕೆಳಭಾಗದಲ್ಲಿ ಚಿತೆಯಲ್ಲಿ ಹಾರುತ್ತಿರುವ ಮಹಿಳೆಯ ದೃಶ್ಯವಿದೆ. ಅದರ ಪಕ್ಕದಲ್ಲೇ ಕುದುರೆಯ ಚಿತ್ರವು ಸಹ ಕಂಡುಬರುತ್ತದೆ. ಇದರ ಮೇಲೆ ಕೈ ತೋರಿಸುವ ಚಿತ್ರವಿದೆ. ಕೈಗೆ ತೋಳ್ಬಂಧಿ ಮತ್ತು ಬಳೆಗಳು ಧರಿಸಿರುವುದನ್ನು ಸಹ ಕಾಣುತ್ತೇವೆ. ಕೈ ಚಿತ್ರದ ಎದುರುಗಡೆ ಒಂದು ತಂಬಿಗೆಯ ಮೇಲೆ ತೆಂಗಿನಕಾಯಿ ಇದೆ. ಈ ಮಾಸ್ತಿಗಲ್ಲಿನ ಕೊನೆಯಲ್ಲಿ ದಂಪತಿಯರು ಕೈ ಜೋಡಿಸಿ ಶಿವಲಿಂಗವನ್ನು ಪ್ರಾರ್ಥಿಸುವ ದೃಶ್ಯವಿದೆ. ತನ್ನ ಪತಿಯ ಮರಣದೊಂದಿಗೆ ಅವನ ಪತ್ನಿಯೂ ಮರಣ ಹೊಂದಿದರೆ ಅವರಿಬ್ಬರೂ ಸ್ವರ್ಗವನ್ನು ಪಡೆಯುತ್ತಾರೆ ಎಂಬ ನಂಬಿಕೆಯಿಂದ ಸ್ತ್ರೀಯು ತನ್ನ ಗಂಡನ ಚಿತೆಯಲ್ಲಿ ಹಾರಿ ಪ್ರಾಣಾರ್ಪಣೆ ಮಾಡುತ್ತಿದ್ದಾಳೆ. ಈ ಕಲ್ಲಿನ ಕೊನೆಯ ಘಟ್ಟದಲ್ಲಿ ಸೂರ್ಯ–ಚಂದ್ರರ ಕೆತ್ತನೆ ಇದೆ.

ಗುಲಬರ್ಗಾದ ಬಿದ್ದಾಪುರ ಕಾಲೋನಿಯಲ್ಲಿರುವ ೧೫ನೇ ಶತಮಾನದ ಮಹಾಸತಿ ಕಲ್ಲನ್ನು ಗೋಡೆಗೆ ಹೊಂದಿಕೊಂಡಂತೆ ನಿಲ್ಲಿಸಲಾಗಿದೆ. ವೀರನಾರಿ ಮಹಾಸತಿಯಾದ ಸನ್ನಿವೇಶವನ್ನು ಈ ಚಿತ್ರ ತಿಳಿಸುತ್ತದೆ. ಈ ಕಲ್ಲಿನ ಕೊನೆಯ ಭಾಗದಲ್ಲಿ ಸೂರ್ಯ–ಚಂದ್ರ ಮತ್ತು ಶಿವಲಿಂಗದ ಚಿತ್ರಗಳು ಕಂಡುಬಂದಿವೆ.

**ವೀರ ಮಾಸ್ತಿಕಲ್ಲು :**

ಸಂಡೂರು ತಾಲೂಕಿನ ಅಂಕಮ್ಮನಾಳು ಗ್ರಾಮದ ಹೊರಗೆ ಪಶ್ಚಿಮ ದಿಕ್ಕಿಗೆ ಇರುವ ವೀರ–ಮಾಸ್ತಿಗಲ್ಲಿನ ಮಂಟಪವು ಪೂರ್ವಾಭಿಮುಖವಾಗಿದೆ. ಐದುವರೆ ಅಡಿ ಎತ್ತರದ ಮಂಟಪದಲ್ಲಿ ಈ ವೀರ ಮಾಸ್ತಿಗಲ್ಲನ್ನು ನಿಲ್ಲಿಸಲಾಗಿದ್ದು, ಮಂಟಪವು ಆರು ಸಾದಾ ಕಂಬಗಳಿಂದ ಕೂಡಿದ್ದು, ಮೇಲ್ಚಾವಣಿಯನ್ನು ಹೊಂದಿದೆ. ಮೂರುವರೆ ಅಡಿ ಎತ್ತರವಿರುವ ಈ ವೀರ ಮಾಸ್ತಿಗಲ್ಲಿನಲ್ಲಿ ವೀರನು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಕಿರುಗತ್ತಿಯನ್ನು ಹಾಗೂ ಸೊಂಟದಲ್ಲಿ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ವೀರ ತಲೆಯಲ್ಲಿ ಮುಡಿಯನ್ನು ಕಟ್ಟಿಕೊಂಡಿದ್ದು, ಹಣೆಗೆ ಬಟ್ಟೆಯನ್ನು ಕಟ್ಟಿಕೊಂಡಿದ್ದಾನೆ. ಕಿವಿಯಲ್ಲಿ ಕರ್ಣಾಭರಣ, ಕೊರಳಾಭರಣ, ತೋಳುಬಂಧಿ, ಕೈಬಳೆ, ಕಡಗ, ಸೊಂಟಕ್ಕೆ ಗೆಜ್ಜೆಯ ಡಾಬು, ಕಾಲುಂಗುರ, ಅಲಂಕಾರಿಕ ಉಡುಪು ಧರಿಸಿದ್ದು, ಕೈಮುಗಿದು ನಿಂತಿದ್ದಾಳೆ. ಮೇಲೆ ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ. ಈ ವೀರ ಮಾಸ್ತಿಗಲ್ಲನ್ನು ಸ್ಥಳೀಯರು ಮಂಡಕ್ಕಿ, ಬಾಳೆಹಣ್ಣು, ಉತ್ತತ್ತಿ, ಊದಿನ ಕಡ್ಡಿ, ದೀಪದಿಂದ ಪೂಜೆ ಮಾಡಿದರೆ

ಮಕ್ಕಳಿಗೆ ಬಂದ ಕಾಯಿಲೆ ವಾಸಿಯಾಗುತ್ತದೆ ಎಂದು ನಂಬುತ್ತಾರೆ. ಈ ಹಿನ್ನೆಲೆಯಲ್ಲಿ ಈ ಇಂದಿಗೂ ವೀರ ಮಾಸ್ತಿಕಲ್ಲನ್ನು ಪೂಜಿಸುತ್ತಾರೆ.

ಸಂಡೂರು ತಾಲೂಕಿನ ಬೊಮ್ಮಗಟ್ಟದ ಆಂಜನೇಯ ದೇವಾಲಯದ ಬಳಿಯಿರುವ ವೀರ–ಮಾಸ್ತಿಗಲ್ಲಿನ ಶಿಲ್ಪವು ಒಂದು ಗರ್ಭಗೃಹದಲ್ಲಿದೆ. ಅದರಲ್ಲಿ ಹುತ್ತ ಬೆಳೆದಿದ್ದು, ಅದರಲ್ಲಿಯೇ ವೀರಗಲ್ಲು ಶಿಲ್ಪವಿದೆ. ಇದರಲ್ಲಿ ಇಬ್ಬರು ವೀರರ ಶಿಲ್ಪಗಳನ್ನು ಕಂಡರಿಸಲಾಗಿದೆ. ಈ ಇಬ್ಬರು ವೀರರ ಮಧ್ಯ ಒಂದು ಚಿಕ್ಕ ಸ್ತ್ರೀಯ ಶಿಲ್ಪವನ್ನು ಕಂಡರಿಸಲಾಗಿದ್ದು, ಇದನ್ನು ಗಮನಿಸಿದರೆ ವೀರ ಮತ್ತು ವೀರನ ಮಗ ಯಾವುದೋ ಯುದ್ಧದಲ್ಲಿ ಹೋರಾಡಿ ಮಡಿದಿರಬೇಕು; ಆ ಸಂದರ್ಭದಲ್ಲಿ ವೀರನ ಪತ್ನಿ ಸಹಗಮನ ಆಚರಿಸಿರಬೇಕು ಎಂದು ಊಹಿಸಬಹುದಾಗಿದೆ. ವೀರನು ಬಲಗೈಯಲ್ಲಿ ಖಡ್ಗವನ್ನು, ಎಡಗೈಯಲ್ಲಿ ಭರ್ಚಿಯನ್ನು ಹಿಡಿದಿದ್ದಾನೆ. ವೀರ ಮುಡಿಯನ್ನು ಕಟ್ಟಿದ್ದು ವೀರಗಾಸೆಯನ್ನು ತೊಟ್ಟಿದ್ದಾನೆ. ಕರ್ಣಾಭರಣ, ಕೊರಳಾಭರಣ, ತೋಳುಬಂಧಿ, ಕೈಗಡಗ, ಕಾಲುಗಡಗ, ಸೊಂಟ ಪಟ್ಟಿಯಲ್ಲಿ ಕಿರುಗತ್ತಿಯನ್ನು ಇಟ್ಟುಕೊಂಡಿದ್ದಾನೆ. ಈ ವೀರಗಲ್ಲು ಒಂದು ಹಂತದಾಗಿದೆ. ಮೇಲೆ ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ.

ಇದೇ ತಾಲೂಕಿನ ವಿಠಲಾಪುರದ ಗ್ರಾಮದ ಹೊರಗೆ ಇರುವ ಗುರುಪಾದಪ್ಪನವರ ಹೊಲದಲ್ಲಿರುವ ವೀರ ಮಾಸ್ತಿಗಲ್ಲು ದಕ್ಷಿಣಾಭಿಮುಖವಾಗಿದೆ. ಇದು ಒಂದು ಹಂತವನ್ನು ಹೊಂದಿದೆ. ವೀರನು ಕುದುರೆಯ ಮೇಲೆ ಕುಳಿತಿದ್ದಾನೆ. ಈತನು ಕಿರೀಟ, ಕರ್ಣಾಭರಣ, ತೋಳುಬಂಧಿ, ಕೈಗಡಗ, ಕಾಲುಗಡಗ, ಕೊರಳಾಭರಣ ಧರಿಸಿದ್ದಾನೆ. ಬಲಗೈಯಲ್ಲಿ ಕಿರುಗತ್ತಿ ಹಿಡಿದು ಆ ಕೈಯನ್ನು ಸೊಂಟದ ಮೇಲೆ ಹಿಡಿದಿದ್ದಾನೆ. ಎಡಗೈಯಿಂದ ಕುದುರೆಯ ಲಗಾಮನ್ನು ಹಿಡಿದಿದ್ದಾನೆ. ಕುದುರೆಯು ಚಲಿಸುವ ಶೈಲಿಯಲ್ಲಿದೆ. ಮುಂದೆ ಚಿಕ್ಕದಾಗಿ ಕಂಡರಿಸಲಾದ ಒಬ್ಬ ಯೋಧನ ಶಿಲ್ಪವಿದೆ. ಕುದುರೆಯ ಹಿಂದೆ ಚಿಕ್ಕದಾಗಿ ಸರ್ವವಸ್ತ್ರಾಭರಣಗಳಿಂದ ಅಲಂಕೃತವಾಗಿರುವ ಇಬ್ಬರು ನಿಂತಿರುವ ಸ್ತ್ರೀಯರ ಶಿಲ್ಪಗಳಿವೆ. ಮೇಲೆ ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ. ಈ ವೀರ ಮಾಸ್ತಿಗಲ್ಲನ್ನು ಗಮನಿಸಿದರೆ ಈತನು ಬಹುಪತ್ನಿ ವ್ರತಸ್ಥನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ.

ಈ ತಾಲೂಕಿನ ಯಶವಂತನಗರದ ಊರ ಹೊರಗಿರುವ ಈಶ್ವರ ದೇವಾಲಯದ ಮುಂದಿನ ವೀರ–ಮಾಸ್ತಿಗಲ್ಲು ಶಿಲ್ಪದಲ್ಲಿ ವೀರನು ಮಧ್ಯದಲ್ಲಿ ನಿಂತಿದ್ದಾನೆ. ಅಕ್ಕಪಕ್ಕದಲ್ಲಿ ಇಬ್ಬರು ಪತ್ನಿಯರಿದ್ದಾರೆ. ವೀರನು ತಲೆಯಲ್ಲಿ ಕಿರೀಟ, ಕಿವಿಯಲ್ಲಿ ವೃತ್ತಾಕಾರದ ಓಲೆಯನ್ನು, ತೋಳುಬಂಧಿ, ಕೈಗಡಗ, ಅಲಂಕಾರಿಕ ಉಡುಪನ್ನು ಧರಿಸಿದ್ದಾನೆ. ಬಲಗೈಯನ್ನು ಇಳಿಬಿಟ್ಟಿದ್ದಾನೆ. ಎಡಗೈಯನ್ನು ಮಡಚಿಕೊಂಡಿದ್ದಾನೆ. ಇಬ್ಬರು ಸ್ತ್ರೀಯರು ತುರುಬನ್ನು ಕಟ್ಟಿದ್ದಾರೆ. ಕರ್ಣಾಭರಣ, ಕೊರಳಾಭರಣ, ಕಾಲಲ್ಲಿ ಗೆಜ್ಜೆ, ಸೊಂಟಪಟ್ಟಿ, ಕೈಯಲ್ಲಿ ಬಳೆಯನ್ನು ಮತ್ತು ಅಲಂಕಾರಿಕ ಉಡುಪನ್ನು ಧರಿಸಿದ್ದಾರೆ. ಈ ಶಿಲ್ಪಗಳು ಕೈಮುಗಿದು ನಿಂತಿವೆ. ಮೇಲೆ ಸೂರ್ಯ ಮತ್ತು ಚಂದ್ರರ ಶಿಲ್ಪಗಳಿವೆ. ಈ ಶಿಲ್ಪವನ್ನು ಗಮನಿಸಿದರೆ ವೀರನಿಗೆ ಇಬ್ಬರು ಪತ್ನಿಯರಿದ್ದಂತೆ ತಿಳಿದುಬರುತ್ತದೆ.

ಈ ತಾಲೂಕಿನ ಯಶವಂತನಗರದ ಊರ ಹೊರಗಿನ ಈಶ್ವರ ದೇವಾಲಯದ ಮುಂದಿನ ವೀರ ಮಾಸ್ತಿಗಲ್ಲು ಶಿಲ್ಪದಲ್ಲಿ ವೀರನು ಕಿರೀಟ, ಕರ್ಣಾಭರಣ, ಕೊರಳಲ್ಲಿ ಸರ, ತೋಳುಬಂಧಿ, ಕೈಗಡಗ ಹಾಗೂ ಅಲಂಕಾರಿಕ ಉಡುಪನ್ನು ಧರಿಸಿದ್ದಾನೆ. ತ್ರಿಭಂಗಿಯಲ್ಲಿ ನಿಂತ ಈ ವೀರನು ಬಲಗೈ ಇಳಿ ಬಿಟ್ಟಿದ್ದಾನೆ. ಎಡಗೈಯನ್ನು ಮಡಚಿಕೊಂಡಿರುವನು. ಸೊಂಟದಲ್ಲಿ ಕಿರುಗತ್ತಿಯನ್ನು ಇಟ್ಟುಕೊಂಡಿದ್ದಾನೆ. ಸ್ತ್ರೀಯು ತುರುಬನ್ನು ಕಟ್ಟಿದ್ದಾಳೆ. ಕೊರಳಲ್ಲಿ ಸರ, ಕೈಯಲ್ಲಿ ಬಳೆ, ಸೊಂಟದಲ್ಲಿ ಡಾಬು, ಕಾಲಲ್ಲಿ ಗೆಜ್ಜೆ ಹಾಗೂ ಅಲಂಕಾರಿಕವಾದ ಉಡುಪನ್ನು ಧರಿಸಿದ್ದು, ಕೈಮುಗಿದು ನಿಂತಿರುವಳು.

ಈ ತಾಲೂಕಿನ ಮೆಟ್ರಿಕಿ ಗ್ರಾಮದ ಹೊರಗೆ ಅಂದರೆ ವಿಠಲಾಪುರಕ್ಕೆ ಹೋಗುವ ಮಾರ್ಗದಲ್ಲಿ ಕುಮಾರರಾಮನ ತಂದೆ-ತಾಯಿಯಾದ ಕಂಪಲಿರಾಯ, ಹರಿಯಾಲದೇವಿಯರ ದೇವಾಲಯವೆಂದು ಸ್ಥಳೀಯರು ಹೇಳುವ ವೀರ ಮಾಸ್ತಿಕಲ್ಲನ್ನು ಹೊಂದಿದ ದೇವಾಲಯವಿದೆ. ಇದು ಗರ್ಭಗೃಹ, ತೆರೆದ ಸಭಾಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಇಬ್ಬರು ಶಸ್ತ್ರಧಾರಿಗಳಾದ ಕುದುರೆ ಸವಾರಿ ಮಾಡುತ್ತಿರುವ ವೀರರ ಶಿಲ್ಪಗಳ ಮಧ್ಯೆ ಹರಿಯಾಲದೇವಿ ಎಂದು ಹೇಳುವ ಸ್ತ್ರೀಯ ವಿಗ್ರಹವಿದೆ. ಇದು ಬಲಗೈ ಎತ್ತಿದೆ. ಎಡಗೈಯನ್ನು ಕೆಳಗೆ ಇಳಿಬಿಟ್ಟಿದೆ. ತಲೆಯಲ್ಲಿ ತುರುಬು ಕಟ್ಟಿದೆ. ಕೊರಳಹಾರ, ಕರ್ಣಾಭರಣ, ಸೊಂಟಪಟ್ಟಿ, ಬಳೆ, ಮೂಗುತಿ, ಸರ, ಕುಪ್ಪಸ ಧರಿಸಿದ್ದಾಳೆ. ಹಿಂದೆ ಉರಿಯುತ್ತಿರುವ ಬೆಂಕಿಯ ಜ್ವಾಲೆ ಇದೆ. ಸ್ಥಳೀಯರ ಹೇಳಿಕೆಯಂತೆ ಕುಮಾರರಾಮನ ತಂದೆ-ತಾಯಿಯ ಗುಡಿ ಎಂಬಂತೆ ಇಲ್ಲಿ ತಂದೆ-ತಾಯಿಯ ಶಿಲ್ಪವಷ್ಟೇ ಅಲ್ಲದೇ ಈ ಇಬ್ಬರು ವೀರರು ಇರುವುದನ್ನು ಗಮನಿಸಿದರೆ ಬಹುಶಃ ಈ ಇಬ್ಬರು ವೀರರಲ್ಲಿ ಒಬ್ಬ ವೀರನು ಕಂಪಿಲರಾಯ ಹಾಗೂ ಮತ್ತೊಬ್ಬ ವೀರ ಬೈಚಪ್ಪನಾಯಕ ಅವರ ಜೊತೆಗೆ ಹರಿಯಾಲದೇವಿ ಈ ಮೂವರ ಶಿಲ್ಪಗಳು ಇವು ಆಗಿರಬೇಕೆಂದು ಊಹಿಸಬಹುದಾಗಿದೆ.

ಈ ಇಬ್ಬರು ವೀರರು ಕರ್ಣಾಭರಣ, ಕೊರಳಾಭರಣ, ಸೊಂಟಪಟ್ಟಿ, ಧೋತ್ರವನ್ನು ಧರಿಸಿದ್ದಾರೆ. ಬಲಗೈಯಲ್ಲಿ ಖಡ್ಗವನ್ನು, ಎಡಗೈಯಲ್ಲಿ ಭರ್ಚಿಯನ್ನು, ಸೊಂಟದಲ್ಲಿ ಕಿರುಗತ್ತಿಯನ್ನು ಹಾಗೂ ಕುದುರೆಯ ಜೂಲದಲ್ಲಿಯೂ ಖಡ್ಗವಿದ್ದು, ಅಕ್ಕಪಕ್ಕದಲ್ಲಿ ಚಿಕ್ಕದಾಗಿ ಕಾಣಿಸುವ ಸೈನಿಕರು ರಾಜಛತ್ರಿಯನ್ನು, ಧ್ವಜವನ್ನು ಹಾಗೂ ಆಯುಧಗಳನ್ನು ಹಿಡಿದುಕೊಂಡಿದ್ದಾರೆ. ಪಕ್ಕದಲ್ಲಿ ನಾಯಿಯ ಶಿಲ್ಪವಿದೆ. ಒಂದೊಂದೇ ಶಿಲೆಗಳಲ್ಲಿ ಕಂಡರಿಸಲಾಗಿರುವ ಇಬ್ಬರು ವೀರರು ವೀರಗಲ್ಲಿನಲ್ಲಿ ಆಯುಧಧಾರಿಯಾದ ವೀರ ಸೈನಿಕ ಹಾಗೂ ನಾಯಿಯ ಶಿಲ್ಪಗಳನ್ನು ಕಂಡರಿಸಿರುವುದನ್ನು ಗಮನಿಸಿದರೆ ಬೇಟೆಗೆ ಹೊರಟಂತಹ ಸಂದರ್ಭವನ್ನು ನೆನಪಿಸುವಂತಿದೆ. ತೆರೆದ ಸಭಾಮಂಟಪದಲ್ಲಿ ಎರಡು ಸಾದಾ ಕೆತ್ತನೆಯ ಕಂಬಗಳಿವೆ.

ಈ ತಾಲೂಕಿನ ಬೊಮ್ಮಗಟ್ಟ ಗ್ರಾಮದ ಒಳಗಿರುವ ವೀರ-ಮಾಸ್ತಿಗಲ್ಲು ಶಿಲ್ಪದಲ್ಲಿ ಇಬ್ಬರು ವೀರರಿದ್ದು, ಒಬ್ಬ ವೀರನು ಬಲಗೈಯಿಂದ ಬಾಣವನ್ನು ಹಿಡಿದಿದ್ದು, ಎಡಗೈಯಲ್ಲಿ ಬಿಲ್ಲನ್ನು

ಹಿಡಿದುಕೊಂಡು ಬಾಣ ಪ್ರಯೋಗಿಸುತ್ತಿದ್ದಾನೆ. ಮತ್ತೊಬ್ಬ ವೀರನು ಎಡಗೈ ಇಳಿಬಿಟ್ಟಿದ್ದು, ಬಲಗೈಯಲ್ಲಿ ಖಡ್ಗವನ್ನು ಹಿಡಿದು ನಿಂತಿದ್ದಾನೆ. ಕೊನೆಯಲ್ಲಿ ಸ್ತ್ರೀಯು ಕೈಮುಗಿದು ನಿಂತಿದ್ದಾಳೆ. ಆಕೆಯು ತುರುಬು ಕಟ್ಟಿದ್ದಾಳೆ. ಕರ್ಣಾಭರಣ, ಕೊರಳಾಭರಣ, ತೋಳುಬಂಧಿ, ಬಳೆ, ಪಾದಗೆಜ್ಜೆ ಹಾಗೂ ಅಲಂಕಾರಿಕ ಉಡುಪನ್ನು ಧರಿಸಿದ್ದಾಳೆ. ವೀರರು ವೀರ ಮುಡಿಯನ್ನು ಕಟ್ಟಿದ್ದು, ವೀರಗಾಸೆಯನ್ನು ತೊಟ್ಟಿದ್ದಾರೆ. ಕೊರಳಹಾರ, ಕರ್ಣಾಭರಣ, ತೋಳುಬಂಧಿ, ಕೈಗಡಗ, ಕಾಲುಗಡಗ, ಧರಿಸಿಕೊಂಡಿದ್ದಾರೆ. ಈ ವೀರ ಮಾಸ್ತಿಗಲ್ಲಿನಲ್ಲಿ ಇಬ್ಬರು ವೀರರು ಹಾಗೂ ಒಬ್ಬ ಸ್ತ್ರೀ ಇರುವುದನ್ನು ಗಮನಿಸಿದರೆ ವೀರ ಹಾಗೂ ಆತನ ಮಗ ಹೋರಾಟದಲ್ಲಿ ಮಡಿದಾಗ ವೀರನ ಪತ್ನಿ ಸಹಗಮನ ಮಾಡಿರಬೇಕೆಂದು ಊಹಿಸಬಹುದಾಗಿದೆ.

ಇದೇ ಗ್ರಾಮದ ಇದೇ ಸ್ಥಳದಲ್ಲಿ ಒಬ್ಬ ಮಾಸ್ತಿಯ ಶಿಲ್ಪ ಮಾತ್ರವಿದೆ. ಈ ಶಿಲ್ಪವು ಎರಡು ಕೈಗಳನ್ನು ಎತ್ತಿದ್ದು, ಒಂದು ಕೈಯಲ್ಲಿ ನಿಂಬೆಹಣ್ಣು ಹಾಗೂ ಮತ್ತೊಂದು ಕೈಯಲ್ಲಿ ಕಮಲದ ಹೂವನ್ನು ಹಿಡಿದಂತೆ ಇದೆ. ಈ ಶಿಲ್ಪವು ತುರುಬನ್ನು ಕಟ್ಟಿರುವುದು, ಕರ್ಣಾಭರಣ, ಕೊರಳಾಭರಣ, ತೋಳುಬಂಧಿ, ಬಳೆಗಳನ್ನು, ಕಾಲುಗಡಗ, ಪಾದ ಗೆಜ್ಜೆಯನ್ನು, ಸೊಂಟಪಟ್ಟಿಯನ್ನು ಹಾಗೂ ಅಲಂಕಾರಿಕ ಉಡುಪನ್ನು ಧರಿಸಿದ್ದಾಳೆ.

ಇದೇ ತಾಲೂಕಿನ ಬಂಡ್ರಿ ಗ್ರಾಮದ ಆಂಜನೇಯ ದೇವಾಲಯದ ಎದುರುಗಡೆಗಿರುವ ಕಟ್ಟೆಯ ಮೇಲಿನ ವೀರ-ಮಾಸ್ತಿಕಲ್ಲು ಶಿಲ್ಪದಲ್ಲಿ ವೀರನು ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾನೆ. ಎತ್ತಿದ ಬಲಗೈಯಲ್ಲಿ ಕಿರುಗತ್ತಿಯನ್ನು ಹಿಡಿದಿದ್ದಾನೆ. ಈತನು ವೀರ ಮುಡಿಯನ್ನು ಕಟ್ಟಿದ್ದು, ವೀರಗಾಸೆಯನ್ನು ತೊಟ್ಟಿದ್ದಾನೆ. ಕೈಗಡಗ ಧರಿಸಿದ್ದಾನೆ. ಈತನ ಇಬ್ಬರು ಸತಿಯರು ಎಡಗೈಯನ್ನು ಕೆಳಗೆ ಇಳಿಬಿಟ್ಟಿದ್ದಾರೆ. ಬಲಗೈಯನ್ನು ಎತ್ತಿದ್ದಾರೆ. ಇಬ್ಬರು ತುರುಬನ್ನು ಕಟ್ಟಿದ್ದು, ಕಿವಿಯಲ್ಲಿ ವೃತ್ತಾಕಾರದ ಓಲೆಯನ್ನು, ಕೊರಳಲ್ಲಿ ಸರವನ್ನು, ತೋಳುಬಂಧಿಯನ್ನು, ಬಳೆಗಳನ್ನು ಹಾಗೂ ಅಲಂಕಾರಿಕ ಉಡುಪನ್ನು ಧರಿಸಿದ್ದಾರೆ. ಈ ವೀರ ಮಾಸ್ತಿಗಲ್ಲನ್ನು ಗಮನಿಸಿದರೆ ಈ ವೀರನು ಬಹು ಪತ್ನಿವ್ರತಸ್ಥನೆಂದು ತಿಳಿದುಬರುತ್ತದೆ. ಈ ಶಿಲ್ಪವನ್ನು ಬೆಣಚು ಶಿಲೆಯಲ್ಲಿ ಕಂಡರಿಸಲಾಗಿದೆ. ಇದರ ಕಾಲ ಸುಮಾರು ೧೬ನೆಯ ಶತಮಾನವಾಗಿದೆ.

ಇದೇ ಗ್ರಾಮದ ಇದೇ ದೇವಾಲಯದ ಎದುರುಗಡೆಗಿರುವ ಕಟ್ಟೆಯ ಮೇಲಿನ ವೀರ-ಮಾಸ್ತಿಗಲ್ಲು ಶಿಲ್ಪದಲ್ಲಿ ಒಬ್ಬ ವೀರನು ಎಡಗೈಯಲ್ಲಿ ಬಿಲ್ಲನ್ನು ಹಿಡಿದಿದ್ದಾನೆ. ಬಲಗೈಯಲ್ಲಿ ಬಾಣಗಳನ್ನು ಹಿಡಿದಿದ್ದಾನೆ. ಮತ್ತೊಬ್ಬ ವೀರನು ಕುದುರೆಯ ಮೇಲೆ ಕುಳಿತಿದ್ದು, ಎಡಗೈಯಿಂದ ಕುದುರೆಯ ಲಗಾಮನ್ನು ಹಿಡಿದಿದ್ದು, ಎತ್ತಿದ ಬಲಗೈಯಲ್ಲಿ ಕಿರುಗತ್ತಿಯನ್ನು ಹಿಡಿದಿದ್ದಾನೆ. ಕುದುರೆಯು ಚಲಿಸುವ ಶೈಲಿಯಲ್ಲಿದೆ. ಮಾಸ್ತಿಯು ಕೈಮುಗಿದು ನಿಂತಿದ್ದಾಳೆ. ಈಕೆಯು ಜಡೆಯನ್ನು ಹಾಕಿಕೊಂಡಿರುವಳು. ಕೊರಳಲ್ಲಿ ಸರ, ಕೈಯಲ್ಲಿ ಬಳೆಯನ್ನು ಹಾಗೂ ಉಡುಪನ್ನು ಧರಿಸಿದ್ದಾಳೆ. ವೀರರಲ್ಲಿ ಒಬ್ಬನು ವೀರ ಮುಡಿ ಕಟ್ಟಿದ್ದು, ವೀರಗಾಸೆ ತೊಟ್ಟಿದ್ದಾನೆ. ಕಿವಿಯಲ್ಲಿ ವೃತ್ತಾಕಾರದ

ಓಲೆ, ಕೊರಳಲ್ಲಿ ಸರ, ಕೈಗಡಗ, ಸೊಂಟದಲ್ಲಿ ಕಿರುಗತ್ತಿಯನ್ನು ಇಟ್ಟುಕೊಂಡಿದ್ದಾನೆ. ಕುದುರೆಯ ಮೇಲಿರುವ ವೀರನ ತಲೆಯಲ್ಲಿ ರುಮಾಲನ್ನು, ಕೈಯಲ್ಲಿ ಕಡಗ, ಕಾಲಲ್ಲಿ ಕಡಗವನ್ನು ಧರಿಸಿದ್ದಾನೆ. ಈ ವೀರಗಲ್ಲನ್ನು ಗಮನಿಸಿದರೆ ಅರಸ ಹಾಗೂ ಆತನ ಬಂಟನು ಯುದ್ಧದಲ್ಲಿ ಹೋರಾಡಿ ಮರಣಿಸಿರಬೇಕು. ಆ ಸಂದರ್ಭದಲ್ಲಿ ಅರಸನ ಪತ್ನಿ ಸಹಗಮನ ಮಾಡಿರಬೇಕು. ಆದ್ದರಿಂದ ಅವರ ಸ್ಮರಣಾರ್ಥವಾಗಿ ಸ್ಮಾರಕವನ್ನು ನಿಲ್ಲಿಸಿರಬೇಕೆಂದು ಊಹಿಸಬಹುದಾಗಿದೆ. ಈ ಸ್ಮಾರಕವನ್ನು ಬೆಣಚು ಶಿಲೆಯಲ್ಲಿ ಕಂಡರಿಸಲಾಗಿದೆ. ಇದರ ಕಾಲ ಸುಮಾರು ೧೬ನೆಯ ಶತಮಾನವಾಗಿದೆ. ಇದು ಒಂದು ಹಂತದ ವೀರಗಲ್ಲು ಆಗಿದೆ.

ಇದೇ ಗ್ರಾಮದ ಇದೇ ಸ್ಥಳದಲ್ಲಿರುವ ಮತ್ತೊಂದು ವೀರ–ಮಾಸ್ತಿಗಲ್ಲು ಶಿಲ್ಪದಲ್ಲಿ ಮೂವರು ವೀರರು ಹಾಗೂ ಒಬ್ಬ ಸ್ತ್ರೀಯ ಶಿಲ್ಪವಿದೆ. ಇದರಲ್ಲಿ ಮುಂದಿನ ವೀರನು ಎರಡು ಕೈಗಳಿಂದ ಖಡ್ಗವನ್ನು ಹಿಡಿದಿದ್ದಾನೆ. ಮತ್ತೊಬ್ಬ ವೀರನು ಎಡಗೈಯಲ್ಲಿ ಬಿಲ್ಲನ್ನು ಎತ್ತಿದ್ದು, ಬಲಗೈಯಲ್ಲಿ ಬಾಣವನ್ನು ಹಿಡಿದಿದ್ದಾನೆ. ಸೊಂಟದಲ್ಲಿ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಇನ್ನೊಬ್ಬ ವೀರನು ಎಡಗೈಯಲ್ಲಿ ಬಂದೂಕನ್ನು ಹಿಡಿದಿರುವುದು ಶಿಲ್ಪದ ವಿಶೇಷವಾಗಿದೆ. ಹಾಗೂ ಬಲಗೈಯಲ್ಲಿ ಕಿರುಗತ್ತಿಯನ್ನು ಹಿಡಿದು ನಿಂತಿದ್ದಾನೆ. ಸೊಂಟದಲ್ಲಿ ಕಿರುಗತ್ತಿ ಸಿಕ್ಕಿಸಿಕೊಂಡಿದ್ದಾನೆ. ಈ ಮೂವರು ವೀರರು ವೀರ ಮುಡಿಯನ್ನು ಕಟ್ಟಿದ್ದು, ವೀರಗಾಸೆಯನ್ನು ತೊಟ್ಟಿರುವರು. ಕಿವಿಯಲ್ಲಿ ವೃತ್ತಾಕಾರದ ಓಲೆಯನ್ನು, ಕೊರಳಲ್ಲಿ ಸರವನ್ನು, ತೋಳುಬಂಧಿಯನ್ನು, ಕೈಗಡಗ, ಕಾಲುಗಡಗವನ್ನು ಧರಿಸಿದ್ದಾರೆ. ಸ್ತ್ರೀಯು ತುರುಬನ್ನು ಕಟ್ಟಿದ್ದು, ವೃತ್ತಾಕಾರದ ಓಲೆಯನ್ನು, ಕೊರಳಲ್ಲಿ ಸರವನ್ನು, ತೋಳುಬಂಧಿಯನ್ನು, ಬಳೆಯನ್ನು ಹಾಗೂ ಉಡುಪನ್ನು ಧರಿಸಿದ್ದಾಳೆ. ಈ ಶಿಲ್ಪವನ್ನು ಗಮನಿಸಿದರೆ ವೀರ ಮತ್ತು ಅವನ ಜೊತೆಗಾರರು ಯುದ್ಧದಲ್ಲಿ ಹೋರಾಡಿ ಮಡಿದಾಗ ವೀರನ ಸತಿ ಸಹಗಮನವನ್ನು ಆಚರಿಸಿರಬೇಕು. ಆದ್ದರಿಂದ ಮಾಸ್ತಿಯ ಜೊತೆಗೆ ಈ ಮೂವರು ವ್ಯಕ್ತಿಯ ಶಿಲ್ಪಗಳನ್ನು ಕಂಡರಿಸಿರಬೇಕೆಂದು ಊಹಿಸಬಹುದಾಗಿದೆ. ಇದು ಒಂದು ಹಂತದ ವೀರ ಮಾಸ್ತಿಗಲ್ಲಾಗಿದ್ದು, ಬೆಣಚು ಶಿಲೆಯಲ್ಲಿ ಕಂಡರಿಸಲಾಗಿದೆ. ಇದು ಸುಮಾರು ೧೬ನೆಯ ಶತಮಾನಕ್ಕೆ ಸೇರಿದ್ದಾಗಿದೆ.

ಸಂಡೂರು ತಾಲೂಕಿನ ಚೋರನೂರು ಗ್ರಾಮದ ಒಳಗೆ ಇರುವ ವೀರ–ಮಾಸ್ತಿಗಲ್ಲಿನ ಶಿಲ್ಪದಲ್ಲಿಯ ವೀರನ ಎಡಗೈಯಿಂದ ಬಿಲ್ಲನ್ನು ಹಾಗೂ ಬಲಗೈಯಿಂದ ಬಾಣವನ್ನು ಹಿಡಿದು ಬಾಣ ಪ್ರಯೋಗಿಸುತ್ತಿದ್ದಾನೆ. ಸೊಂಟದಲ್ಲಿ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಈತನು ವೀರ ಮುಡಿಯನ್ನು ಕಟ್ಟಿದ್ದು, ವೀರಗಾಸೆಯನ್ನು ತೊಟ್ಟಿದ್ದಾನೆ. ಮಾಸ್ತಿ ಶಿಲ್ಪವು ಬಲಗೈಯಲ್ಲಿ ನಿಂಬೆಹಣ್ಣನ್ನು ಮತ್ತು ಎಡಗೈಯಲ್ಲಿ ಕನ್ನಡಿಯನ್ನು ಹಿಡಿದುಕೊಂಡಿದೆ. ಮಾಸ್ತಿ ಅಲಂಕಾರಿಕವಾಗಿ ಜಡೆಯನ್ನು ಹಾಕಿಕೊಂಡಿದ್ದಾಳೆ. ಕಿವಿಯಲ್ಲಿ ವೃತ್ತಾಕಾರದ ಓಲೆಯನ್ನು, ಕೊರಳಲ್ಲಿ ಪದಕ ಸರಗಳನ್ನು, ತೋಳುಬಂಧಿ, ಬಳೆಗಳನ್ನು, ಕಾಲಲ್ಲಿ ಗೆಜ್ಜೆಯನ್ನು, ಸೊಂಟಪಟ್ಟಿಯನ್ನು ಧರಿಸಿದ್ದಾಳೆ. ಹಾಗೂ ಅಲಂಕಾರಿಕ ಉಡುಪನ್ನು ಧರಿಸಿದ್ದಾಳೆ. ಇದು ಒಂದು ಹಂತದ ವೀರಗಲ್ಲು ಶಿಲ್ಪವಾಗಿದೆ. ಬೆಣಚು ಶಿಲೆಯಲ್ಲಿ ಕಂಡರಿಸಲಾಗಿದೆ. ಇದು ಸುಮಾರು ೧೬ನೆಯ ಶತಮಾನದ್ದಾಗಿದೆ.

ಇದೇ ಗ್ರಾಮದ ಒಳಗಿರುವ ಸ್ಮಾರಕದ ಪಕ್ಕದಲ್ಲಿರುವ ಮತ್ತೊಂದು ವೀರ-ಮಾಸ್ತಿಗಲ್ಲಿನ ಶಿಲ್ಪದಲ್ಲಿ ವೀರನು ಅಲಂಕಾರಿಕವಾದ ವೀರ ಮುಡಿಯನ್ನು ಕಟ್ಟಿಕೊಂಡಿದ್ದಾನೆ. ಕಿವಿಯಲ್ಲಿ ಹರಳಿನ ಓಲೆಯನ್ನು, ಮತ್ತೊಂದು ಖಡ್ಗವನ್ನು ಹಿಡಿದಿದ್ದು, ಸೊಂಟಕ್ಕೆ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಉಡುಪನ್ನು ಧರಿಸಿದ್ದಾನೆ. ಮಾಸ್ತಿಯು ತುರುಬನ್ನು ಕಟ್ಟಿದ್ದಾಳೆ. ಕಿವಿಯಲ್ಲಿ ಹರಳಿನ ಓಲೆಯನ್ನು, ಬುಡಕಡ್ಡೆಯನ್ನು ಹಾಕಿದ್ದಾಳೆ. ಕೊರಳಿನಲ್ಲಿ ಕಂಠಿಹಾರ, ಪದಕ ಸರಗಳನ್ನು, ತೋಳುಬಂಧಿಯನ್ನು, ಕೈಯಲ್ಲಿ ಬಳೆಯನ್ನು, ಸೊಂಟದಲ್ಲಿ ಸೊಂಟಪಟ್ಟಿಯನ್ನು ಧರಿಸಿದ್ದಾಳೆ. ಕಾಲಲ್ಲಿ ಗೆಜ್ಜೆ ಹಾಕಿದ್ದಾಳೆ. ಬಲಗೈಯಲ್ಲಿ ನಿಂಬೆಹಣ್ಣನ್ನು ಮತ್ತು ಎಡಗೈಯಲ್ಲಿ ಕನ್ನಡಿಯನ್ನು ಹಿಡಿದಿದ್ದಾಳೆ. ಈಕೆ ಅಲಂಕಾರಿಕ ವಸ್ತುವನ್ನು ಧರಿಸಿದ್ದಾಳೆ. ಮೇಲೆ ಸೂರ್ಯ-ಚಂದ್ರರ ಶಿಲ್ಪಗಳಿವೆ. ಇದನ್ನು ಬೆಣಚು ಶಿಲೆಯಲ್ಲಿ ಕಂಡರಿಸಲಾಗಿದ್ದು, ಇದು ಒಂದು ಹಂತದ ವೀರ ಮಾಸ್ತಿಗಲ್ಲಾಗಿದೆ. ಸುಮಾರು ೧೬ನೇ ಶತಮಾನಕ್ಕೆ ಸೇರಿದ್ದಾಗಿದೆ.

ಇದರ ಬಳಿಯಲ್ಲಿರುವ ಇನ್ನೊಂದು ವೀರ-ಮಾಸ್ತಿ ಶಿಲ್ಪದಲ್ಲಿ ವೀರನು ಕುದುರೆಯ ಮೇಲೆ ಕುಳಿತಿರುವನು. ಎಡಗೈಯಿಂದ ಕುದುರೆಯ ಲಗಾಮನ್ನು ಹಿಡಿದಿದ್ದಾನೆ. ಎತ್ತಿದ ಬಲಗೈಯಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ಈತನ ಮುಂದೆ ಇರುವ ಮತ್ತೊಬ್ಬ ವೀರನು ಬಲಗೈಯಲ್ಲಿ ದಂಡವನ್ನು ಹಿಡಿದಿದ್ದಾನೆ. ಈ ಇಬ್ಬರು ವೀರರು ವೀರ ಮುಡಿಯನ್ನು ಕಟ್ಟಿದ್ದಾರೆ. ಕೊರಳಾಭರಣಗಳನ್ನು, ತೋಳುಬಂಧಿ, ಕೈಗಡಗ ಧರಿಸಿದ್ದ, ಅಲಂಕಾರಿಕ ಉಡುಪನ್ನು ಧರಿಸಿಕೊಂಡಿದ್ದಾರೆ. ಕುದುರೆಯು ಚಲಿಸುವ ಶೈಲಿಯಲ್ಲಿದೆ. ಮಾಸ್ತಿ ಶಿಲ್ಪವು ಬಲಗೈಯಲ್ಲಿ ನಿಂಬೆಹಣ್ಣನ್ನು, ಎಡಗೈಯಲ್ಲಿ ಕನ್ನಡಿಯನ್ನು ಹಿಡಿದಿದ್ದಾಳೆ. ಕೊರಳಲ್ಲಿ ಹಾರಗಳನ್ನು, ತೋಳುಬಂಧಿಯನ್ನು, ಬಳೆಯನ್ನು ಹಾಕಿಕೊಂಡಿದ್ದಾಳೆ. ಅಲಂಕಾರಿಕ ಉಡುಪನ್ನು ಧರಿಸಿದ್ದಾಳೆ. ಈ ಶಿಲ್ಪವನ್ನು ಗಮನಿಸಿದರೆ ಅರಸ ಆತನ ಬಂಟನು ಯುದ್ಧದಲ್ಲಿ ಹೋರಾಡಿ ಮಡಿದಾಗ ಅರಸನ ಪತ್ನಿಯು ಸಹಗಮನ ಮಾಡಿರಬೇಕು. ಆ ಸಂದರ್ಭದಲ್ಲಿ ಅವರ ಸ್ಮಾರಕಾರ್ಥವಾಗಿ ಈ ವೀರ ಮಾಸ್ತಿಗಲ್ಲು ಶಿಲೆಯನ್ನು ಕಂಡರಿಸಿರಬೇಕೆಂದು ಊಹಿಸಲಾಗಿದೆ. ಇದು ಸುಮಾರು ೧೬ನೆಯ ಶತಮಾನದ್ದಾಗಿದೆ.

ಹಳೆದರೋಜಿಯ ಈರಣ್ಣ ಕಟ್ಟೆಯಲ್ಲಿಯ ವೀರ-ಮಾಸ್ತಿಗಲ್ಲಿನಲ್ಲಿ ವೀರನು ಅಲಂಕಾರಿಕವಾಗಿ ಮುಡಿಯನ್ನು ಕಟ್ಟಿಕೊಂಡಿದ್ದಾನೆ. ಕರ್ಣಾಭರಣ, ಕೊರಳಾಭರಣ, ತೋಳುಬಂಧಿ, ಕೈಗಡಗವನ್ನು ಧರಿಸಿದ್ದು, ಅಲಂಕಾರಿಕ ಉಡುಪು ಧರಿಸಿಕೊಂಡಿದ್ದಾನೆ. ಸೊಂಟದಲ್ಲಿ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಈತನ ಎಡಗೈಯನ್ನು ಎದೆಯ ಮೇಲಿಟ್ಟುಕೊಂಡಿದ್ದಾನೆ. ಬಲಗೈಯಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ಮಾಸ್ತಿಯು ಅಲಂಕಾರಿಕವಾಗಿ ಮುಡಿಯನ್ನು ಕಟ್ಟಿಕೊಂಡಿದ್ದಾಳೆ. ಕಿವಿಯಲ್ಲಿ ವೃತ್ತಾಕಾರದ ಓಲೆಯನ್ನು ಧರಿಸಿದ್ದಾಳೆ. ಕೊರಳಾಭರಣ, ತೋಳುಬಂಧಿ, ಕೈಯಲ್ಲಿ ಬಳೆಯನ್ನು ಧರಿಸಿಕೊಂಡಿದ್ದಾಳೆ. ಅಲಂಕಾರಿಕ ಉಡುಪನ್ನು ಧರಿಸಿದ್ದು, ಎಡಗೈಯಲ್ಲಿ ಕನ್ನಡಿಯನ್ನು ಹಿಡಿದಿದ್ದಾಳೆ. ಬಲಗೈಯಲ್ಲಿ ನಿಂಬೆಹಣ್ಣನ್ನು ಹಿಡಿದಿರುವಳು.

ಇದೇ ಕಟ್ಟೆಯಲ್ಲಿಯ ಮತ್ತೊಂದು ವೀರ–ಮಾಸ್ತಿಗಲ್ಲಿನಲ್ಲಿ ವೀರನು ಕರ್ಣಾಭರಣ, ಕೊರಳಾಭರಣ, ತೋಳುಬಂಧಿ, ಕೈಗಡಗ, ಸೊಂಟಪಟ್ಟಿಯಲ್ಲಿ ಕಿರುಗತ್ತಿಯನ್ನು ಧರಿಸಿದ್ದಾನೆ. ಎತ್ತಿದ ಬಲಗೈಯಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ಮಾಸ್ತಿಯು ಸಹ ಸರ್ವಾಲಂಕಾಭೂಷಿತಳಾಗಿದ್ದು, ಎರಡೂ ಕೈಗಳನ್ನು ಎತ್ತಿ ಹಿಡಿದಿದ್ದಾಳೆ. ಬಲಗೈಯಲ್ಲಿ ಅಭಯ ಮುದ್ರೆಯಲ್ಲಿದ್ದು, ಎಡಗೈಯಲ್ಲಿ ಲಿಂಬೆಹಣ್ಣನ್ನು ಹಿಡಿದಿರುವಳು. ಈ ವೀರ ಮತ್ತು ಮಾಸ್ತಿಯರ ಮಧ್ಯದಲ್ಲಿ ಖಡ್ಗವಿದೆ.

ಇದೇ ಸ್ಥಳದ ಇನ್ನೊಂದು ವೀರ–ಮಾಸ್ತಿಶಿಲ್ಪದಲ್ಲಿ ಇಬ್ಬರು ಮಾಸ್ತಿಯರ ಮಧ್ಯದಲ್ಲಿ ವೀರನು ನಿಂತಿದ್ದಾನೆ. ಈತನ ಕರ್ಣಾಭರಣ, ಕೊರಳಾಭರಣ, ತೋಳುಬಂಧಿ, ಭುಜಕವಚ, ಕೈಗಡಗ, ಸೊಂಟಪಟ್ಟಿಯಲ್ಲಿ ಕಿರುಗತ್ತಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಮಾಸ್ತಿಯೂ ಸಹ ಸರ್ವಾಲಂಕಾರ ಭೂಷಿತರಾಗಿದ್ದಾರೆ. ಬಲಗಡೆ ನಿಂತಿರುವ ಮಾಸ್ತಿಯು ಎಡಗೈಯಲ್ಲಿ ಕನ್ನಡಿಯನ್ನು, ಬಲಗೈ ಅಭಯ ಮುದ್ರೆಯಲ್ಲಿದೆ. ಎಡಗಡೆ ನಿಂತಿರುವ ಮಾಸ್ತಿಯು ಬಲಗೈಯಲ್ಲಿ ಏನನ್ನೋ ಹಿಡಿದಿದ್ದು, ಎಡಗೈಯನ್ನು ಹೊಟ್ಟೆಯ ಮಧ್ಯಕ್ಕೆ ಇಟ್ಟುಕೊಂಡಿದ್ದಾಳೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೫ನೆಯ ಶತಮಾನದ ವೀರ–ಮಾಸ್ತಿಗಲ್ಲು ಶಿಲ್ಪದಲ್ಲಿ ವೀರ ಎಡಗಡೆ ಅಂಜಲಿ ಮುದ್ರೆಯಲ್ಲಿ ಸ್ಥಾನಿಕ ಭಂಗಿಯಲ್ಲಿದ್ದಾನೆ. ಕೊರಳಲ್ಲಿ ಮಣಿಸರ, ತೋಳುಬಂಧಿ, ಕಡಗ ಧರಿಸಿದ್ದಾನೆ. ಎಡಗಡೆ ಸ್ತ್ರೀ, ಬಲಗೈ ಅಭಯ ಹಸ್ತ, ಎಡಗೈಯಲ್ಲಿ ಕಮಂಡಲ ಹಿಡಿದಿದ್ದಾಳೆ. ಕೊರಳಲ್ಲಿ ಸರ, ಸೀರೆಯ ನೆರಿಗೆ, ಸೊಂಟಪಟ್ಟಿಯ ಅಲಂಕೃತ ಕೆತ್ತನೆ ತುಂಬಾ ಕಲಾತ್ಮಕವಾಗಿದೆ. ಮೇಲ್ಗಡೆ ಸೂರ್ಯ–ಚಂದ್ರ, ಶಿವಲಿಂಗ, ನಂದಿಯ ಉಬ್ಬುಶಿಲ್ಪಗಳಿವೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೫ನೆಯ ಶತಮಾನದ ವೀರ–ಮಾಸ್ತಿಗಲ್ಲು ಶಿಲ್ಪದಲ್ಲಿ ಸ್ತ್ರೀ ಕುದುರೆಯ ಮೇಲೆ ಕುಳಿತು ವೀರಾವೇಶದಿಂದ ಕುದುರೆ ಸವಾರಿ ಮಾಡುತ್ತಿದ್ದಾಳೆ. ಕಿರೀಟ ಧರಿಸಿದ್ದು, ಜಡೆ ಕಲಾತ್ಮಕ ವಿನ್ಯಾಸದಿಂದ ಕೂಡಿದೆ. ಬಲಗೈಯಲ್ಲಿ ನೀಳ್ಗತ್ತಿ ಹಿಡಿದು, ಎಡಗೈಯಲ್ಲಿ ಕುದುರೆಯ ಲಗಾಮು ಹಿಡಿದಿರುವಂತೆ ಚಿತ್ರಿಸಲಾಗಿದೆ. ಕುದುರೆಯ ಮುಂಗಾಲುಗಳನ್ನು ಎತ್ತಿ ಓಡುತ್ತಿರುವಂತೆ ಚಿತ್ರಿಸಲಾಗಿದೆ. ಈ ಮಾಸ್ತಿಗಲ್ಲು ಬೆಣಚು ಕಲ್ಲಿನಿಂದ ಕೂಡಿದೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೫ನೆಯ ಶತಮಾನದ ವೀರ–ಮಾಸ್ತಿಗಲ್ಲಿನ ವಸ್ತು ಬೆಣಚುಕಲ್ಲು. ಇಲ್ಲಿ ವೀರ ತಲೆಗೂದಲನ್ನು ಕೆದರಿಸಿಕೊಂಡು ಬಲಗೈಯಲ್ಲಿ ಕುಡಗೋಲು, ಎಡಗೈ ನೀಳ್ಗತ್ತಿ ಹಿಡಿದು ನಿಂತಿದ್ದಾನೆ. ಇವನ ಬಲಗಡೆ ಸ್ತ್ರೀ ತುರುಬು ಕಟ್ಟಿ ಅಂಜಲಿ ಮುದ್ರೆಯಲ್ಲಿ ಸ್ಥಾನಿಕ ಭಂಗಿಯಲ್ಲಿದ್ದಾಳೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೫ನೆಯ ಶತಮಾನದ ವೀರ–ಮಾಸ್ತಿಗಲ್ಲು ಶಿಲ್ಪದ ಮೇಲ್ಭಾಗದಲ್ಲಿ ಸೂರ್ಯ, ಲಿಂಗ, ಚಂದ್ರರಿದ್ದಾರೆ.

ಭಕ್ತ ದಂಪತಿಗಳು ಅಂಜಲಿ ಮುದ್ರೆಯಲ್ಲಿ ಆಸೀನರಾಗಿದ್ದಾರೆ. ಎಡಗಡೆ ವೀರ ಮುಡಿ ಕಟ್ಟಿ ರೌದ್ರಮೀಸೆ, ಕೈಗಳಿಗೆ ತೊಳುಬಂಧಿ, ಕಡಗ ಧರಿಸಿ ಅಂಜಲಿ ಮುದ್ರೆಯಲ್ಲಿ ಸ್ಥಾನಿಕ ಭಂಗಿಯಲ್ಲಿರುವುದು. ವೀರಗಾಸೆ ತೊಟ್ಟು ಸೊಂಟಪಟ್ಟಿ ಧರಿಸಿ ಕಾಲಲ್ಲಿ ಕಡಗ, ಸರ, ಬಲಕ್ಕೆ ಸ್ತ್ರೀ ತುರುಬು, ಕಿವಿಯಲ್ಲಿ ವರ್ತುಲಾಕಾರದ ಓಲೆ, ಕೈಗಳಿಗೆ ಕಡಗ, ಬಳೆ, ತೋಳುಬಂಧಿ ಧರಿಸಿದ್ದು, ಪಾದಗಳಲ್ಲಿ ಪಾದರಸ ಗೆಜ್ಜೆ ಧರಿಸಿರುವುದು ಈ ಶಿಲ್ಪದ ವೈಶಿಷ್ಟ್ಯವಾಗಿದೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೫ನೆಯ ಶತಮಾನದ ವೀರ–ಮಾಸ್ತಿಗಲ್ಲಿನ ಕೆಳಭಾಗದಲ್ಲಿ ಪಟ್ಟಿಕೆಯಲ್ಲಿ ವೀರನ ಬಲಗಡೆ ಇಬ್ಬರು ಮಹಿಳೆಯರು, ಎಡಗಡೆ ಒಬ್ಬ ಮಹಿಳೆ ಸ್ಥಾನಿಕ ಭಂಗಿಯಲ್ಲಿದ್ದಾರೆ. ವೀರನು ಇಲ್ಲಿ ಮುಡಿ ಕಟ್ಟಿ, ಲೋಲಕದಂತಹ ಓಲೆ ಧರಿಸಿದ್ದು, ವೀರ ಕಚ್ಚೆ ತೊಟ್ಟು, ಕೈಯಲ್ಲಿ ಕಡಗ, ತೋಳುಬಂಧಿ ಧರಿಸಿ ಅಂಜಲಿ ಮುದ್ರೆಯಲ್ಲಿದ್ದಾನೆ. ಮಹಿಳೆಯರ ಕಿವಿಯಲ್ಲಿ ಓಲೆ, ಕೈಗಳಿಗೆ ಕಡಗ, ತೋಳುಬಂಧಿ ಧರಿಸಿದ್ದು, ಬಲಗೈಯಲ್ಲಿ ಅಭಯಹಸ್ತ, ಎಡಗೈಯಲ್ಲಿ ನಿಂಬೆಹಣ್ಣನ್ನು ಹಿಡಿದಿದ್ದಾರೆ. ಮೇಲ್ಭಾಗದ ಪಟ್ಟಿಕೆಯಲ್ಲಿ ವೀರ ಶಿವ ಪೂಜೆ ಮಾಡುತ್ತಿರುವುದು, ಇಬ್ಬರು ಮಹಿಳೆಯರು ಅಂಜಲಿ ಮುದ್ರೆಯಿಂದ ಪದ್ಮಾಸನದಲ್ಲಿ ಕುಳಿತಿದ್ದಾಳೆ. ಮೇಲೆ ಶಿವಲಿಂಗ, ನಂದಿ ಶಿಲ್ಪ ಕೆತ್ತಲಾಗಿದೆ. ಈ ವೀರ–ಮಾಸ್ತಿಗಲ್ಲು ಬಳಿಕಣ ಶಿಲೆಯಿಂದ ಕೆತ್ತಲಾಗಿದೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೫ನೆಯ ಶತಮಾನದ ವೀರ–ಮಾಸ್ತಿಗಲ್ಲು ಶಿಲ್ಪದ ಮೇಲ್ಭಾಗದಲ್ಲಿ ಸೂರ್ಯ, ಶಿವಲಿಂಗ, ಚಂದ್ರ, ನಂದಿ, ಉಬ್ಬುಶಿಲ್ಪಗಳಿವೆ. ವೀರ ಮುಡಿ ಕಟ್ಟಿ ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ವರ್ತುಲಾಕಾರದ ಗುರಾಣಿ ರಕ್ಷಣೆಗೆ ಹಿಡಿದಿದ್ದಾನೆ. ವೀರ ಕಡಗವನ್ನು ಕೈಗಳಿಗೆ ಧರಿಸಿದ್ದು, ವೀರ ಕಚ್ಚೆಹಾಕಿ, ಕಾಲಲ್ಲಿ ಕಡಗ ಧರಿಸಿದ್ದಾನೆ. ಮಹಿಳೆ ತುರುಬು ಕಟ್ಟಿ, ಕಿವಿಯಲ್ಲಿ ವರ್ತುಲಾಕಾರದ ಓಲೆ, ಕೊರಳಲ್ಲಿ ಸರ, ಸೀರೆ ನೆರಿಗೆಯನ್ನು ಧರಿಸಿದ ರೀತಿ ತುಂಬಾ ಕಲಾತ್ಮಕವಾಗಿದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದಲ್ಲಿರುವ ಕ್ರಿ.ಶ. ೧೫ನೆಯ ಶತಮಾನದ ವೀರ–ಮಾಸ್ತಿಗಲ್ಲು ಇದೆ. ಇಲ್ಲಿ ವೀರ ಮತ್ತು ಸತಿ ಅಲಂಕೃತರಾಗಿ ವೀರ ತನ್ನ ಹೆಂಡತಿಯನ್ನು ಎಡಗೈಯಿಂದ ಹಿಡಿದುಕೊಂಡಿರುವ ಭಂಗಿಯ ತುಂಬಾ ಕಲಾತ್ಮಕವಾಗಿ ಚಿತ್ರಿಸಲಾಗಿದೆ. ಈ ವೀರ–ಮಾಸ್ತಿಗಲ್ಲಿನ ವಸ್ತು ಬೆಣಚುಕಲ್ಲು.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೫ನೆಯ ಶತಮಾನದ ವೀರ–ಮಾಸ್ತಿಗಲ್ಲಿನ ಮೇಲ್ಭಾಗದಲ್ಲಿ ನಂದಿ, ಶಿವಲಿಂಗ, ವೀರ ಮಹಿಳೆಯರ ಉಬ್ಬುಶಿಲ್ಪಗಳಿವೆ. ಬಲಗಡೆ ವೀರ ಅಂಜಲಿ ಮುದ್ರೆಯಲ್ಲಿದ್ದು, ಸ್ಥಾನಿಕ ಭಂಗಿಯಲ್ಲಿದ್ದಾನೆ. ತೋಳುಬಂಧಿ, ವೀರಗಚ್ಚೆ ತೊಟ್ಟು ಕೊರಳಲ್ಲಿ ಮಣಿಸರ, ಸರಗಿಯಾಕಾರದ ಸರ ಧರಿಸಿದ್ದು, ಕಿವಿಯಲ್ಲಿ ಲೋಲಕ ಧರಿಸಿದ್ದು, ಕಾಲಲ್ಲಿ ಕಡಗ ಧರಿಸಿದ್ದಾನೆ. ಮಹಿಳೆ ಕಿವಿಯಲ್ಲಿ ವರ್ತುಲಾಕಾರದ

ಓಲೆ ಧರಿಸಿ ಮುಡಿ ಕಟ್ಟಿದ್ದಾಳೆ. ಬಲಗೈ ಅಭಯ ಹಸ್ತ, ಎಡಗೈಯಲ್ಲಿ ಕಮಂಡಲ ಹಿಡಿದಿದ್ದಾಳೆ. ಸೀರೆಯ ನೆರಿಗೆಯ ಕೆತ್ತನೆ ತುಂಬಾ ಕಲಾತ್ಮಕವಾಗಿದೆ. ಈ ವೀರ–ಮಾಸ್ತಿಗಲ್ಲು ಬೆಣಚು ಕಲ್ಲಿನಿಂದ ಕೆತ್ತಲಾಗಿದೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದಲ್ಲಿರುವ ಕ್ರಿ.ಶ. ೧೫ನೆಯ ಶತಮಾನದ ವೀರ–ಮಾಸ್ತಿಗಲ್ಲು ಇದೆ. ಇದರಲ್ಲಿ ವೀರ ಎಡಗಡೆ ಮುಡಿ ಕಟ್ಟಿದ್ದು, ಕೊರಳಲ್ಲಿ ಪದಕಸರ, ಕೈಯಲ್ಲಿ ತೋಳುಬಂಧಿ, ಕಡಗ ಧರಿಸಿದ್ದು, ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಕಿರುಗತ್ತಿ ಎತ್ತಿ ಹಿಡಿದಿದ್ದಾನೆ. ವೀರಗಾಸೆ ತೊಟ್ಟು ಸೊಂಟದ ಬಲಗಡೆ ಕಿರುಗತ್ತಿ ಸಿಕ್ಕಿಸಿಕೊಂಡಿದ್ದಾನೆ. ಬಲಗಾಲಲ್ಲಿ ಗೆಜ್ಜೆಯಾಕಾರದ ಕಡಗ, ಪಾದರಸ ಧರಿಸಿದ್ದು, ಎಡಗಾಲಲ್ಲಿ ಯಾವ ಆಭರಣವಿಲ್ಲ.

ಮಾಲಗತ್ತಿ ಸೊಸೈಟಿ ಕಛೇರಿಯಲ್ಲಿ ಕ್ರಿ.ಶ. ೧೫ನೆಯ ಶತಮಾನದ ವೀರ ಮಾಸ್ತಿಕಲ್ಲು ಇದೆ. ಇದರಲ್ಲಿ ವೀರನು ತನ್ನ ಪತ್ನಿಯ ಹೆಗಲ ಮೇಲಕ್ಕೆ ಕೈ ಹಾಕಿ ನಿಂತಿದ್ದು, ಪತ್ನಿಯು ತನ್ನ ಕೈಯನ್ನು ಮೇಲಕ್ಕೆತ್ತಿ ನಿಂತಿರುವಂತೆ ತೋರಿಸಲಾಗಿದೆ.

ಕುಷ್ಟಗಿ ತಾಲೂಕಿನ ಗೋತಗಿ ಹನುಮಂತ ದೇವಾಲಯದ ಆವರಣದಲ್ಲಿನ ಒಂದು ಮಹಾಸತಿಗಲ್ಲು ಇದೆ. ಮಹಾಸತಿಯ ಘಟನೆಯನ್ನು ತಿಳಿಸಲು ಸಾಂಕೇತಿಕವಾಗಿ ಕಂಬದಿಂದ ಹೊರಟ ಕೈಯನ್ನು ಚಿತ್ರಿಸಲಾಗಿದೆ. ಇದನ್ನು ಒಕ್ಕೈ ಮಾಸ್ತಿ, ತೋಳುಗೈ, ವ್ಯಾಸನ ತೋಳು ಎಂದೆಲ್ಲಾ ಕರೆಯುತ್ತಾರೆ. ಮಹಾಸತಿಯು ಬೆಂಕಿಯ ಹೊಂಡಕ್ಕೆ ಬೀಳುವಾಗ ಎಲ್ಲರಿಗೂ ತನ್ನ ಬಲಗೈಯನ್ನು ಎತ್ತಿ ಹರಸುತ್ತಿದ್ದಳು. ಅವಳ ಸಾವಿನ ನಂತರ ಅವಳು ಹರಸಿದ ಕೈ ರೂಪವನ್ನು ಶಿಲೆಗಳ ಮೇಲೆ ಕೆತ್ತಿ ಅವಳ ಸ್ಮಾರಕವಾಗಿ ನಿಲ್ಲಿಸುತ್ತಾರೆ. ಇದು ಕ್ರಿ.ಶ. ೧೫ನೆಯ ಶತಮಾನದ್ದಾಗಿದೆ. ತಾವರಗೆರೆ ತಿಪ್ಪಣ್ಣ ಹೂಗಾರ ಅವರ ಹೊಲದಲ್ಲಿ ಕ್ರಿ.ಶ. ೧೫ನೆಯ ಶತಮಾನದ ವೀರಮಾಸ್ತಿಗಲ್ಲು ಇದೆ. ಇಲ್ಲಿ ವೀರನು ಕುದುರೆಯ ಮೇಲೆ ಕುಳಿತಿದ್ದು, ಮಹಾಸತಿಯು ತನ್ನೆರಡು ಕೈಗಳನ್ನು ಮೇಲಕ್ಕೆ ಎತ್ತಿ ನಿಂತಿರುವಂತೆ ಚಿತ್ರಿಸಲಾಗಿದೆ.

ಬಾಗಲಕೋಟೆ ತಾಲೂಕಿನ ಬೇವೂರಿನಲ್ಲಿ ಮೂರು ವೀರಗಲ್ಲುಗಳು ಮತ್ತು ಒಂದು ಮಾಸ್ತಿ ಶಿಲ್ಪಗಳಿವೆ. ರಾಮಲಿಂಗೇಶ್ವರ ಗುಡಿ ಬದಿಯ ಮಾಸ್ತಿ ಶಿಲ್ಪದಲ್ಲಿ ಇಬ್ಬರು ಸತಿಯರ ನಡುವೆ ಗಂಡ ನಿಂತಿದ್ದಾನೆ. ಎಲ್ಲರನ್ನು ಒಂದೇ ಆಕಾರದಲ್ಲಿ ತೋರಿಸಲಾಗಿದೆ. ಸತಿಯರಿಬ್ಬರು ತನ್ನ ಬಲಗೈಯನ್ನು ಮೇಲಕ್ಕೆತ್ತಿ ಹಿಡಿದು ನಿಂತಿದ್ದಾರೆ. ಮೇಲ್ಗಡೆ ಆಕಳು, ಶಿವಲಿಂಗಗಳಿವೆ. ಈ ಮಾಸ್ತಿಗಲ್ಲು ೧೫ನೆಯ ಶತಮಾನದ್ದಾಗಿದೆ.

ಬಾದಾಮಿ ತಾಲೂಕಿನ ಹಂಸನೂರಿನ ಮಹಾಸತಿ ಶಿಲ್ಪದಲ್ಲಿ ಸತಿ ತನ್ನ ಬಲಗೈಯನ್ನು ಎತ್ತಿ ಹಿಡಿದು ನಿಂತಿದ್ದಾಳೆ. ಬದಿಗೆ ನಿಂತ ವ್ಯಕ್ತಿ ಆಕೆಯ ಗಂಡನಿರಬೇಕು.

# ಅಧ್ಯಾಯ : ೮

# ತುರುಗೋಳ್ ವೀರಗಲ್ಲುಗಳು

---

೮.೧. ತುರುಗೋಳ್ ವೀರಗಲ್ಲುಗಳು ಶಾಸನಸಹಿತ

೮.೨. ತುರುಗೋಳ್ ವೀರಗಲ್ಲುಗಳು ಶಾಸನರಹಿತ

೮.೩. ಪೆಣ್ಬುಯ್ಯಲ್ ವೀರಗಲ್ಲುಗಳು

೮.೪. ಆತ್ಮಬಲಿಗಲ್ಲುಗಳು

೮.೫. ಗೋಸಾಸ ಶಾಸನಶಿಲ್ಪಗಳು

೮.೬. ನಿಸಿಧಿಗಲ್ಲುಗಳು

೮.೭. ಹುಲಿಬೇಟೆ ವೀರಗಲ್ಲುಗಳು

೮.೮. ಆನೆಬೇಟೆ ವೀರಗಲ್ಲು

೮.೯. ದಾರಿಗಳ್ಳರೊಡನೆ ಹೋರಾಡಿ ಮಡಿದ ವೀರಗಲ್ಲುಗಳು

೮.೧೦. ಕಳ್ಳರೊಡನೆ ಹೋರಾಡಿ ಮಡಿದ ವೀರಗಲ್ಲು

೮.೧೧. ಕುರಿಗಳ ರಕ್ಷಣೆಗಾಗಿ ಹೋರಾಡಿ ಮಡಿದ ವೀರಗಲ್ಲುಗಳು

## ಅಧ್ಯಾಯ : ಎಂಟು

# ತುರುಗೋಳ್ ವೀರಗಲ್ಲು

### ೮.೧. ಶಾಸನಸಹಿತ ತುರುಗೋಳ್ ವೀರಗಲ್ಲುಗಳು :

ಪ್ರಾಚೀನ ಕರ್ನಾಟಕದ ಯುದ್ಧಗಳಲ್ಲಿ ತುಱುಗೋಳ್ ಬಹಳ ಪ್ರಸಿದ್ಧವಾದ ಯುದ್ಧವಾಗಿತ್ತು. ಪ್ರತಿ ವೀರರು, ಕಳ್ಳರು ಒಂದು ಗ್ರಾಮದ ಅಥವಾ ಒಬ್ಬ ವ್ಯಕ್ತಿಯ ದನಗಳನ್ನು ಅಪಹರಿಸುವ ಘಟನೆಗೆ ತುಱುಗೋಳ್ ಎಂದು ಕರೆಯಲಾಗಿದೆ. ಘಟನೆಯಷ್ಟೇ ಅಲ್ಲದೆ ಈ ಕಾರಣಕ್ಕೆ ನಡೆಯುವ ಯುದ್ಧವನ್ನು ಅಥವಾ ಸಂಘರ್ಷವನ್ನು ತುಱುಗೋಳ್ ಎಂದು ಕರೆಯಲಾಗಿದೆ. ತುಱು ಕೊಳ್ ಅಂದರೆ ಆಕಳುಗಳನ್ನು ತೆಗೆದುಕೊ, ಹಿಡಿದುಕೊ ಎಂದು ಅರ್ಥ. (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಚಿದಾನಂದಮೂರ್ತಿ ಎಂ., ೨೦೦೨, ಪುಟ-೨೮೨) ಇಂತಹ ಸಮಯದಲ್ಲಿ ತುರುಗಳ ರಕ್ಷಣೆಗೆ ಹೋರಾಡದವನು ಹೇಡಿಯೆನಿಕೊಳ್ಳುತ್ತಿದ್ದನು. ಕನ್ನಡದ ಕವಿ ರನ್ನ ತನ್ನ ಗದಾಯುದ್ಧ ಕಾವ್ಯದಲ್ಲಿ

ತುಱುಗೋಳೊಳ್ ಪೆಣ್ಬುಯ್ಯಲೊ
ಳೆಱೆವೆಸದೊಳ್ ನಂಟನೆಡಜೊಳರಜೆವಿನೊಳಂ॥
ತಱೆಸಂದು ಗಂಡುತನಮನೆ
ನೆಱೆಪದವಂ ಗಂಡನಲ್ಲನೆಂತುಂ ಪಂಡಂ (೧೯)

ಎಂದು ಹೇಳಿರುವನು. ಮೂರು ಕಾರಣಗಳಿಂದ ತುರುಗಾಳಿಗವು ಮಹತ್ವ ಪಡೆದುಕೊಂಡಿದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ ಮೊದಲನೆಯದಾಗಿ ಗೋವು ಪೂಜನೀಯವಾದುದು. ಎರಡನೆಯದಾಗಿ ಅದು ಕಳೆದುಕೊಳ್ಳಲಾಗದ ಆಸ್ತಿ. ಮೂರನೆಯದಾಗಿ ಅವುಗಳನ್ನು

ಕಳೆದುಕೊಳ್ಳುವುದರಲ್ಲಿ ಊರಿನ ವ್ಯಕ್ತಿಯ ಮಾನವಮಾನದ ಪ್ರಶ್ನೆಯೂ ಇದೆ. (ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಚಿದಾನಂದಮೂರ್ತಿ ಎಂ., ೨೦೦೨, ಪುಟ-೩೧೨) ಈ ಕಾರಣಗಳಿಂದ ಯೋಧನೊಬ್ಬ ಮಡಿದರೆ ಮರ ಮರುಗುತ್ತಿದ್ದ ಸಮಾಜ ಅದು ಪುಣ್ಯ ಮರಣ, ಆತ ದೇವಮಾನವನೆಂದೂ ಭಾವಿಸುತ್ತಿದ್ದರು. ಹೀಗೆ ಇಹಲೋಕದಲ್ಲಿ ಜೀವಧಾರಣ ಮಾಡಲು ಅವಶ್ಯಕವೆನಿಸಿದ ಯುಗ ಮೌಲ್ಯವಾಗಿ ಪರಿಣಮಿಸಿದ ವೀರತನ ಪರಲೋಕ ಸಾಧ್ಯತೆಯ ಸಾಧನವೆನಿಸಿ ಜೀವನದ ಪರಮ ಆದರ್ಶವಾಗಿ ಪರಿಣಿಸಿತು. (ಕರ್ನಾಟಕ ವೀರಗಲ್ಲುಗಳು, ಶೇಷಶಾಸ್ತ್ರೀ ಆರ್. ೨೦೦೪, ಪುಟ-೧೧೯) ತುರುಳುಗಾಳಗಳನ್ನು ನಾವು ಕೇವಲ ಒಂದು ಯುದ್ಧದ ಪ್ರಭೇದವೆಂದೂ ಪರಿಗಣಿಸಬಾರದು. ಇದು ಗ್ರಾಮ ಸಮಾಜ ಮತ್ತು ಆರ್ಥಿಕ ವ್ಯವಸ್ಥೆಯ ನಡುವಿನ ಸಂಬಂಧವನ್ನು ಪ್ರತಿಬಿಂಬಿಸುತ್ತದೆ. ಒಬ್ಬರ ಬಳಿ ಲಕ್ಷಾಂತರ ದನಗಳಿವೆಯೆಂದರೆ ಅವುಗಳ ಪಾಲನೆ-ಪೋಷಣೆ ಸುಲಭದ ಮಾತಲ್ಲ. ಅವುಗಳಿಂದ ಲಾಭವಿದ್ದರೆ ಮಾತ್ರ ಹೀಗೆ ಪೋಷಿಸಲು ಸಾಧ್ಯ. ಎತ್ತುಗಳು ವ್ಯವಸಾಯಕ್ಕೆ ಮುಖ್ಯವಾದರೆ, ಇತರ ಆರ್ಥಿಕ ಮೂಲವಾಗಿ ಮತ್ತು ಹಾಲು, ಮೊಸರು, ಬೆಣ್ಣೆಗಾಗಿ ಹಸುಗಳು ಅತ್ಯಾವಶ್ಯವಾಗಿದ್ದವು. ಇವು ಆಯಾ ಕುಟುಂಬಗಳ ಮತ್ತು ಗ್ರಾಮ ಸಮುದಾಯಗಳ ಆರ್ಥಿಕ ಮೂಲಗಳೂ ಆಗಿದ್ದವು. ಈ ಆರ್ಥಿಕ ಮೂಲಗಳು ಕೆಲವು ವೇಳೆ ವೈಷಮ್ಯಕ್ಕೆ ಕಾರಣವಾಗಿ ಸಂಘರ್ಷಗಳಾಗಿರಬಹುದು, ಒಬ್ಬನ ಅರ್ಥವ್ಯವಸ್ಥೆಯನ್ನು ಕೆಡಿಸಿದರೆ ಅವನ ಬಲವನ್ನು ಕುಗ್ಗಿಸಿದಂತೆ; ಕೃಷಿಯನ್ನು ಹೊರತುಪಡಿಸಿರೆ ಹೈನುಗಾರಿಕೆಯೇ ನಮ್ಮ ಪ್ರಾಚೀನರ ಮುಖ್ಯ ಆದಾಯದ ಮೂಲವಾಗಿತ್ತು. ಆಗಿನವರ ಪ್ರಮುಖ ಕಸುಬೇ ಕೃಷಿಯಾಗಿತ್ತು. ಈ ಕೃಷಿಗೆ ಸಂಬಂಧಿಸಿದ ಪರಿಕರಗಳ ನಿರ್ಮಾಣ, ನಿರ್ವಹಣೆ ಕೆಲವರ ಕಸುಬಾಗಿತ್ತು. ವ್ಯಾಪಾರ-ವಹಿವಾಟು ಇನ್ನಿತರ ಕಸುಬಾಗಿತ್ತು. ಈ ಕಾರಣದಿಂದಾಗಿಯೇ ಶಾಸನಗಳಲ್ಲಿ ಕೃಷಿ ಚಟುವಟಿಕೆ ಮತ್ತು ಧಾರ್ಮಿಕ ಚಟುವಟಿಕೆಗಳ ಮಾಹಿತಿ, ಅಧಿಕ ಜನರ ಬದುಕು ಇವುಗಳ ಸುತ್ತವೇ ಸುತ್ತುತ್ತಿತ್ತು.

ವೀರತ್ವ ಮತ್ತು ತ್ಯಾಗದ ವಿಷಯಗಳನ್ನು ಜನಸಮುದಾಯಕ್ಕೆ ತಿಳಿಸಲು ತುಱುಗೋಳ್ ಶಾಸನಗಳು ಪ್ರಭಾಯುತ ಮಾಧ್ಯಮವಾಗಿತ್ತು. ಅಲ್ಲದೆ ಈ ಶಾಸನಗಳು ಒಂದು ರೀತಿಯಲ್ಲಿ ದಾನ ನೀಡದವರಿಗೆ ಹಾಗೂ ದಾನ ಪಡೆದವರಿಗೆ ಹಾಗೂ ದಾನ ಪಡೆದವರಿಗೆ ಇಬ್ಬರಿಗೂ ಖಾಯಂ ದಾಖಲೆಗಳಾಗಿದ್ದವು. ತುಱುಗೋಳ್ ಶಾಸನಗಳಲ್ಲಿ ವಿಷಯವನ್ನು ಜನಸಮುದಾಯ ಭಕ್ತಿ-ಭಯದಿಂದ ಗೌರವಿಸುತ್ತಿತ್ತು.

ಅದರಲ್ಲಿನ ದಾನದ ನಿರ್ದೇಶನದಂತೆ ನಡೆಯುತ್ತಿತ್ತು. ಆದರೆ ಶಾಸನ ಹಾಕಿಸುವವರು ಮತ್ತು ದಾನ ಪಡೆಯುವವರ ಸಂಖ್ಯೆ ಹೆಚ್ಚಿದಂತೆಲ್ಲ ಶಾಸನ ನೆಡಿಸುವ ಪದ್ಧತಿ ಸಂಪ್ರದಾಯಗೊಂಡಂತೆಲ್ಲ ಜನಸಮುದಾಯಕ್ಕೆ ಶಾಸನಗಳಲ್ಲಿದ್ದ ಭಕ್ತಿ-ಗೌರವಗಳು ಕಡಿಮೆಯಾದವು. ಶಾಸನಗಳು ಬೆಲೆ ಕಳೆದುಕೊಂಡವು. ನೀಡಿದ ಮತ್ತು ಪಡೆದ ದಾನಗಳನ್ನು ಕೆಲವರು ಪ್ರಶ್ನಿಸತೊಡಗಿದರು.

ಮುಂದುವರಿದು ದಾನದ ಭೂಮಿಯನ್ನು ಅಪಹರಿಸತೊಡಗಿದರು. ಹೀಗಾಗಿ ಶಾಸನ ಹಾಕಿಸಿದರೂ ಅದಕ್ಕೆ ಮಾನ್ಯತೆಯಿಲ್ಲವೆಂಬಂತಾಯಿತು. ಇದರ ಪರಿಣಾಮವಾಗಿ ದನಗಳನ್ನು ಅಪಹರಿಸುವವರನ್ನು ಹೆದರಿಸುವ ಸಲುವಾಗಿ ಶಾಸನಗಳ ಜೊತೆ ಶಾಪ ಕೊಡುವುದು ಹೆಚ್ಚಾಯಿತು. ಅಶ್ಲೀಲ ಪದಗಳನ್ನು ಮತ್ತು ಚಿತ್ರಗಳನ್ನು ಬಳಸಲು ಪ್ರಾರಂಭಿಸಿದರು. ಆಯಾ ಧರ್ಮಗಳು ನಿಷೇಧಿಸಿದ ಚಟುವಟಿಕೆಗಳ ಮುಖಾಂತರ ಜನರನ್ನು ಹೆದರಿಸಬಯಸಿದರು. ಬ್ರಾಹ್ಮಣರಾದರೆ ಕಾಶಿಯಲ್ಲಿ ಗೋವನ್ನು ಕೊಂದ ಪಾಪ, ಇತರರಾದರೆ ಕಾಶಿಯಲ್ಲಿ ಬ್ರಾಹ್ಮಣರನ್ನು ಕೊಂದ ಪಾಪ, ತಂದೆ–ತಾಯಿಗಳನ್ನು ಕೊಂದ ಪಾಪ, ದೇವರಿಗೆ ಕೆಡುಕನ್ನು ಮಾಡಿದ ಪಾಪ, ಮುಸ್ಲಿಮರಾದರೆ ಮೆಕ್ಕಾದಲ್ಲಿ ಹಂದಿಯನ್ನು ಕೊಂದ ತಿಂದ ಪಾಪ ಇದರ ಜೊತೆಗೆ ಎಲ್ಲರಿಗೂ ಅನ್ವಯಿಸುವಂತೆ ಮಕ್ಕಳನ್ನು ಕೊಂದ ಪಾಪ, ಮಾತೃಗಮನ ಪಾಪ, ಸತಿಯನ್ನು ಪರರಿಗೆ ನೀಡಿದ ಪಾಪ, ಕೆಳಜಾತಿಯಲ್ಲಿ ಹುಟ್ಟಿದ ಪಾಪ ಹೀಗೆ ಹಲವಾರು ಬಗೆಯ ಪಾಪ ಭೀತಿಗಳನ್ನು ಹುಟ್ಟಿಸಿದರು.

ರಾಷ್ಟ್ರಕೂಟರ ಅವಧಿಯಲ್ಲಿ ತುಜುಗೋಳ್ ಶಾಸನ ಶಿಲ್ಪವು ಒಂದು ಹೆಜ್ಜೆ ಮುಂದುವರಿಯುವುದರ ಮೂಲಕ ಶಾಸನ ಶಿಲ್ಪದ ಬೆಳವಣಿಗೆಗೆ ಚಾಲನೆ ನೀಡಿತು. ಸ್ಮಾರಕ ಶಿಲೆಗಳ ಶಿಲ್ಪವಂತು ರಾಷ್ಟ್ರಕೂಟರ ಕಾಲದಲ್ಲಿ ಆಶ್ಚರ್ಯಕರ ಬೆಳವಣಿಗೆಯನ್ನು ಪಡೆಯಿತು. ಬೆಟಗೇರಿಯ ವೀರಗಲ್ಲುಗಳನ್ನು ಗಮನಿಸಿದಾಗ ಇಲ್ಲಿನ ಹೆಚ್ಚು ವೀರಗಲ್ಲುಗಳ ಅರ್ಧಭಾಗ ವೀರನ ಹೋರಾಟ ಹಾಗೂ ಅಪ್ಸರೆಯರ ಚಿತ್ರಣಕ್ಕೂ, ಮಿಕ್ಕ ಅರ್ಧಭಾಗವನ್ನು ವೀರನು ಸ್ವರ್ಗದಲ್ಲಿ ಕುಳಿತಿರುವ ಚಿತ್ರಣ ಹಾಗೂ ಗೋಪುರದ ಚಿತ್ರಣಕ್ಕೂ ಬಳಸಿದ್ದಾರೆ. ವೀರನು ಸ್ವರ್ಗದಲ್ಲಿ ಅಪ್ಸರೆಯರ ಸೇವೆಯನು ಸ್ವೀಕರಿಸುತ್ತ ಎತ್ತರವಾದ ವೇದಿಕೆಯ ಮೇಲೆ ಕೈಯಲ್ಲಿ ಕಮಲದ ಮೊಗ್ಗನ್ನು ಹಿಡಿದು ಕುಳಿತಿರುತ್ತಾನೆ. ಈ ರೀತಿ ಕುಳಿತ ಚಿತ್ರಣ ಇಲ್ಲಿನ ವೀರಗಲ್ಲುಗಳಲ್ಲಿ ಸಾಮಾನ್ಯವಾಗಿದೆ. ಇಲ್ಲಿನ ವೀರಗಲ್ಲುಗಳ ಮೇಲೆ ಬಾದಾಮಿ ಚಾಲುಕ್ಯರ ಶಿಲ್ಪಶೈಲಿಯು ದಟ್ಟವಾದ ಪ್ರಭಾವವನ್ನು ಬೀರಿದೆ. ರಾಷ್ಟ್ರಕೂಟರ ಕಾಲದ ಬಹುತೇಕ ವೀರಗಲ್ಲುಗಳಲ್ಲಿ ವೀರನು ಸ್ವರ್ಗಕ್ಕೆ ಹೋಗುವಾಗ ಹಾರುತ್ತಿರುವಂತೆ ಚಿತ್ರಿಸಲಾಗಿದೆ. ಕೆಲವು ಕಡೆ ಮೋಡಗಳ ನಡುವೆ ಹಾರುತ್ತಿರುವಂತೆಯೂ ಚಿತ್ರಿಸಲಾಗಿದೆ. ಈ ರೀತಿಯ ಚಿತ್ರಣ ಬಾದಾಮಿಯ ಒಂದನೇ ಗುಹೆಯ ಮೇಲ್ಛಾವಣಿಯಲ್ಲಿ ಕಾಣಬಹುದು. ಇಲ್ಲಿ ಗಂಧರ್ವ ದಂಪತಿಗಳು ಮೋಡದ ನಡುವೆ ಹಾರುತ್ತಿರುವ ಚಿತ್ರಣವಿದೆ. ಇದೇ ರೀತಿಯ ಚಿತ್ರಣವನ್ನು ರಾಷ್ಟ್ರಕೂಟರ ತುಜುಗೋಳ್ ವೀರಗಲ್ಲುಗಳಲ್ಲಿ ಕಾಣಬಹುದು. ರಾಷ್ಟ್ರಕೂಟ ಕಾಲದ ಶಾಸನಗಳ ಮತ್ತೊಂದು ವೈಶಿಷ್ಟ್ಯವೆಂದರೆ ಬೃಹದಾಕಾರ. ಅವು ಸುಮಾರು ಐದರಿಂದ ಎಂಟು ಅಡಿ ಎತ್ತರದವರೆಗೂ, ಮೂರರಿಂದ ಆರು ಅಡಿ ಅಗಲದವರೆಗೂ, ದಪ್ಪ ಒಂದುವರೆ ಅಡಿಯವರೆಗೂ ಇರುತ್ತವೆ. ಬೃಹದಾಕಾರವಾಗಿದ್ದರೂ ಕೂಡ ಶಿಲ್ಪದ ವಿವರಗಳನ್ನು ಮತ್ತು ಅವು ವ್ಯಕ್ತಪಡಿಸುವ ಭಾವನೆಗಳನ್ನು ಶಿಲ್ಪಿಯು ಸಮರ್ಥವಾಗಿ ಕಂಡರಿಸಿದ್ದಾನೆ. ಹೋರಾಟದ ಹಂತದಲ್ಲಿ ವೀರ ಜೊತೆ ಹಾಗೂ ಎದುರಾಳಿಯ ಜೊತೆಗೆ ಯೋಧರ ಸಂಖ್ಯೆ ಹೆಚ್ಚಾಗಿರುತ್ತದೆ. ಅಪ್ಸರೆಯರ

ಹಾಗೂ ವಾದ್ಯಕಾರರ ಸಂಖ್ಯೆಯೂ ಹೆಚ್ಚಾಗಿರುತ್ತದೆ. ಅಪ್ಸರೆಯರ ಹೆಗಲ ಮೇಲೆ ಎರಡೂ ಕೈಗಳನ್ನು ಹಾಕಿಕೊಂಡು ವೀರನು ಮೋಡಗಳ ನಡುವೆ ಸ್ವರ್ಗಕ್ಕೆ ಹಾರುತ್ತಿರುವ ರೀತಿಯ ಚಿತ್ರಣ ಮುಂದಿನ ಕಾಲದ ವೀರಗಲ್ಲುಗಳಲ್ಲಿ ಕಂಡುಬರುವುದಿಲ್ಲ. ಇವರ ಕಾಲದ ಮತ್ತೊಂದು ವಿಶೇಷವೆಂದರೆ ಶಾಸನಗಳಲ್ಲಿ ತಮ್ಮ ಲಾಂಛನವಾದ ನೇಗಿಲನ್ನು ಚಿತ್ರಿಸಿರುವುದು ಕಂಡುಬರುತ್ತದೆ. ಕಲ್ಯಾಣ ಚಾಲುಕ್ಯರ ಹಾಗೂ ಕಲಚೂರಿಗಳ ಕಾಲದ ಶಾಸನ ಶಿಲ್ಪಗಳು ಒಂದೇ ರೀತಿಯಲ್ಲಿರುತ್ತವೆ. ಈ ಅವಧಿಯಲ್ಲಿ ದಾನ ಶಾಸನಗಳ ಲಲಾಟವು (ಮೇಲ್ಭಾಗ) ಒಂದು ನಿಶ್ಚಿತ ರೂಪವನ್ನು ಪಡೆಯಿತು. ಅಲ್ಲದೆ ಈ ಅವಧಿಯಲ್ಲಿ ಶಾಸನ ನೆಡುವ ಪದ್ಧತಿ ಸರ್ವವ್ಯಾಪಿಯಾಯಿತು. ರಾಜರು ಮತ್ತು ಪ್ರಮುಖರು ಮಾತ್ರವೇ ಶಾಸನ ನೆಡಿಸಬೇಕೆಂಬ ಪದ್ಧತಿ ಬದಲಾಯಿತು. ಜನಸಾಮಾನ್ಯರೂ ಕೂಡ ಶಾಸನ ಹಾಕಿಸುವುದಕ್ಕೆ ಮುಂದಾದರು. ಹೀಗಾಗಿ ಸಹಜವಾಗಿಯೇ ಶಾಸನಗಳ ಸಂಖ್ಯೆ ಹೆಚ್ಚಿತು. ವೈವಿಧ್ಯತೆಯುಳ್ಳ ವಿಷಯಗಳು ಶಾಸನದಲ್ಲಿ ಸ್ಥಾನ ಪಡೆದವು. ಸಮಾಜದಲ್ಲಿದ್ದ ವಿವಿಧ ಪದ್ಧತಿಗಳು ಈ ವೇಳೆಯಲ್ಲಿ ಹೆಚ್ಚಾಗಿ ಶಾಸನ ಶಿಲ್ಪದಲ್ಲಿ ಕಾಣಿಸಿಕೊಂಡಿತು. ಮಹಾಸತಿ ಆಚರಣೆ, ಆತ್ಮಬಲಿ ಪದ್ಧತಿ, ತುರುಗಾಳಗ ಮೊದಲಾದವುಗಳ ವಿವಿಧ ಮುಖಗಳ ಪರಿಚಯವನ್ನು ನೀಡಿದವು. ದಾನ ಶಾಸನದಲ್ಲಿ ಶಿವಲಿಂಗ, ಅದರ ಬಳಿ ಕುಳಿತ ದಾನಿ, ಶಿವಲಿಂಗವನ್ನು ಪೂಜಿಸುತ್ತಿರುವ ಮುನಿಯ ಚಿತ್ರ ಸಾಮಾನ್ಯವಾಯಿತು. ತುಱುಗೋಳ್ ಸ್ಮಾರಕ ಶಿಲೆಗಳ ಹಂತಗಳಲ್ಲಿ ವಿಷಯವನ್ನು ನಿರೂಪಿಸುವ ರೂಢಿ ಹೆಚ್ಚಾಯಿತು. ಘಟನೆಗೆ ನೈಜತೆಯನ್ನು ತರಲು ಪ್ರಯತ್ನಿಸಲಾಯಿತು. ವಿಷಯವನ್ನು ಕಾವ್ಯಾತ್ಮಕವಾಗಿ ನಿರೂಪಣೆ ಮಾಡುವುದರ ಜೊತೆಗೆ ಶಾಸನಗಳನ್ನೂ ಕೂಡ ಕಲಾತ್ಮಕವಾಗಿ ಕಾಣುವಂತೆ ಮಾಡಲು ಪ್ರಯತ್ನಿಸಿದರು. ತುಱುಗೋಳ್ ಶಾಸನಗಳಲ್ಲಿ ಕಲೆಗಾರಿಕೆ ಮೈದಾಳಿತು. ಒಂದೊಂದು ಶಾಸನ ಪ್ರಕಾರಕ್ಕೂ ಒಂದೊಂದು ಸೂತ್ರವನ್ನು ಅನುಸರಿಸಿದರು. ತುಱುಗೋಳ್ ವೀರಗಲ್ಲುಗಳಲ್ಲಿ ವೀರನ ಹಿಂದೆ ದನಗಳನ್ನು ಕಡ್ಡಾಯವಾಗಿ ಚಿತ್ರಿಸುತ್ತಿದ್ದರು. ಅದೂ ಹೋರಾಟದ ಹಂತದಲ್ಲೇ ಚಿತ್ರಿಸುತ್ತಿದ್ದರು. ಇದರಿಂದಾಗಿ ಲಿಪಿ ಇಲ್ಲದಿದ್ದರೂ ಆ ಶಾಸನ ಶಿಲ್ಪ ತುಱುಗೋಳ್ ಯುದ್ಧದ ವೀರಗಲ್ಲೆಂದು ಗುರುತಿಸಲು ಸುಲಭವಾಯಿತು.

ಹಿಂದಿನ ಅರಸರ ಅವಧಿಯಲ್ಲಿದ್ದ ದನಗಳನ್ನು ಸಾಂಕೇತಿಕವಾಗಿ ಚಿತ್ರಿಸಿ ವೀರನನ್ನು ಮಾತ್ರ ಚಿತ್ರಿಸುವ ರೀತಿ ಈ ಅರಸರ ಅವಧಿಯಲ್ಲಿ ಬದಲಾಯಿತು. ವೀರನ ಜೊತೆ ಇತರ ವಿವರಗಳಿಗೂ ಆಸ್ಪದ ನೀಡಲಾಯಿತು. ಹೀಗೆ ಕೆಲವು ತಱುಗೋಳ್ ಶಾಸನಗಳಲ್ಲಿ ವೀರನಷ್ಟೇ ಪ್ರಾಧಾನ್ಯವನ್ನು ದನಗಳಿಗೂ ನೀಡಿರುವರು. ಸೈನಿಕರನ್ನು, ದನಗಳನ್ನು ವೀರನಿಗೆ ಸರಿಸಮಾನವಾಗಿ ಚಿತ್ರಿಸುವ ಪರಿಪಾಠ ಆರಂಭವಾಯಿತು. ಈ ಅಂಶಗಳಿಂದಾಗಿ ತುಱುಗೋಳ್ ಶಾಸನ ಶಿಲ್ಪಗಳಲ್ಲಿ ಆರೋಗ್ಯಪೂರ್ಣ ಬೆಳವಣಿಗೆ ಕಂಡುಬಂದಿತು. ತರುಗಾಳಿಗದ ಸಮಯದಲ್ಲಿ ದನಗಳನ್ನು ಅಪಹರಿಸುವ ಚಿತ್ರಣದ ಜೊತೆಗೆ ಸ್ತ್ರೀಯರನ್ನು ಮಾನಭಂಗಗೊಳಿಸುವ ದೃಶ್ಯದ ಚಿತ್ರಣವೂ ಇರುತ್ತದೆ.

ಕಲ್ಯಾಣ ಚಾಲುಕ್ಯರ ಹಾಗೂ ಕಲಚೂರಿಗಳಿಂದ ಬೆಳೆದ ತುಱುಗೋಳ್ ಶಾಸನ ಶಿಲ್ಪದ ಕಲೆಗಾರಿಕೆಗ ಹೊಯ್ಸಳರ ಕಾಲಕ್ಕೆ ಸೂಕ್ಷ್ಮತೆಯ ಪರಕಾಷ್ಠೆಯನ್ನು ಮೀರಿತು. ಹೊಯ್ಸಳರ ದೇವಾಲಯಗಳ ಶಿಲ್ಪಗಳಂತೆಯೇ ಶಾಸನಗಳ ಶಿಲ್ಪವೂ ಕೂಡ ಸೂಕ್ಷ್ಮ ಕೆತ್ತನೆಗಳಿಂದ ಮೂಡತೊಡಗಿತು. ವಿಜಯನಗರ ಅರಸರ ಕಾಲದಲ್ಲಿ ತುರುಗಾಳಗದ ಶಾಸನ ಶಿಲ್ಪಗಳ ಚಿತ್ರಣ ಬದಲಾಯಿತು. ಶಾಸನಗಳಲ್ಲಿ ಶಿಲ್ಪವನ್ನು ಸೂಕ್ಷ್ಮವಾಗಿ ಬಿಡಿಸುವ ಗೋಜಿಗೆ ಹೋಗದೆ ಸ್ಥೂಲವಾಗಿ ಚಿತ್ರಿಸುವ ವಿಧಾನ ಬೆಳೆಯಿತು. ಕಲೆಗಾರಿಕೆ ಮರೆಯಾಯಿತು. ವಿಷಯವನ್ನು ತಿಳಿಸುವುದಷ್ಟೇ ಶಿಲ್ಪಿಗೆ ಮುಖ್ಯವಾಗಿ ಕಲೆಗಾರಿಕೆ ಶೂನ್ಯವಾಯಿತು. ದಾನ ಶಾಸನಗಳಲ್ಲಿ ಧಾರ್ಮಿಕ ಚಿಹ್ನೆಗಳನ್ನು ಮಹಾಸತಿ ಕಲ್ಲುಗಳಾಗಿದ್ದರೆ, ಸತಿಯನ್ನು ಅಥವಾ ಅವಳ ತೋಳನ್ನು, ವೀರಗಲ್ಲಾದರೆ ವೀರ ಹಾಗೂ ಎದುರಾಳಿಯನ್ನು ಮಾತ್ರ ಕೆತ್ತುವ ರೂಢಿ ಬೆಳೆಯಿತು. ಈ ಅವಧಿಯಲ್ಲಿ ಲಿಪಿಯಿಲ್ಲದ ಸ್ಮಾರಕ ಶಿಲೆಗಳು ಹೆಚ್ಚಾದವು. ಶಾಸನ ಕಲೆಯು ನಶಿಸಿ ಶಾಸನ ನೆಡುವ ಪದ್ಧತಿ ಕೇವಲ ಒಂದು ಸಂಪ್ರದಾಯವಾಯಿತು. ಆದರೂ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲುಗಳ ಸಂಪ್ರದಾಯವನ್ನು ಹೋಲುವ ಕೆಲವು ವೀರಗಲ್ಲುಗಳು ಉತ್ತರ ಕರ್ನಾಟಕ ಭಾಗದ ಹಳ್ಳಿಗಳಲ್ಲಿ ಕಾಣಸಿಗುತ್ತವೆ. ಇವರ ಅವಧಿಯಲ್ಲಿ ತುಱುಗೋಳ್ ಶಿಲ್ಪಗಳು ಬಹಳ ಅಪರೂಪ. ದೊರಕಿರುವ ಕೆಲವೇ ವೀರಗಲ್ಲುಗಳಲ್ಲಿ ದನಗಳನ್ನು ಸಾಂಕೇತಿಕವಾಗಿ ಚಿತ್ರಿಸಲಾಗಿದೆ.

ಉತ್ತರ ಕರ್ನಾಟಕ ಭಾಗದ ತುಱುಗೋಳ್ ವೀರಗಲ್ಲುಗಳು ಶೈಲಿ ಹಾಗೂ ವಿನ್ಯಾಸದ ದೃಷ್ಟಿಯಿಂದ ಒಂದು ತೆರನಾಗಿವೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಬಹುದಾಗಿದೆ. ಈ ತುಱುಗೋಳ್ ವೀರಗಲ್ಲುಗಳು ಅಗಲ ಜಾಸ್ತಿ, ಎತ್ತರ ಕಡಿಮೆ. ಇವು ಸುಮಾರು ಏಳು ಅಡಿ ಅಗಲದಿಂದ ಹತ್ತು ಅಡಿ ಅಗಲದವರೆಗೂ ಇದ್ದು, ನಾಲ್ಕು ಅಡಿಯಿಂದ ಆರು ಅಡಿಯವರೆಗೂ ಎತ್ತರವಾಗಿರುತ್ತವೆ. ಕೆಳಗಿನ ಎರಡು ಅಥವಾ ಮೂರು ಹಂತಗಳಲ್ಲಿ ವೀರನ ಮೆರವಣಿಗೆ, ಯುದ್ಧಕ್ಕೆ ಹೊರಟ ಚಿತ್ರಣ ನಂತರದ ಹಂತಗಳಲ್ಲಿ ಶತ್ರುಗಳೊಂದಿಗೆ ಹೋರಾಟದ ಚಿತ್ರಣ ಇರುತ್ತದೆ. ಈ ಹೋರಾಟದ ಹಂತದಲ್ಲಿ ಕುದುರೆಗಳನ್ನು, ತುಱುಗಳನ್ನು ಮತ್ತು ಕಾಲಾಳುಗಳನ್ನು ಹೆಚ್ಚು ಸಂಖ್ಯೆಯಲ್ಲಿ ಚಿತ್ರಿಸುತ್ತಾರೆ. ಹಲವಾರು ಬಗೆಯ ಆಯುಧಗಳು ಈ ಭಾಗದಲ್ಲಿ ಕಂಡುಬರುತ್ತವೆ. ಮೇಲಿನ ಎರಡು ಹಂತಗಳಲ್ಲಿ ಮಂಟಪಗಳ ನಡುವೆ ಹೋರಾಟದಲ್ಲಿ ಮಡಿದ ವೀರರ ಜೊತೆಯಲ್ಲಿ ಅವರ ಪತ್ನಿಯರನ್ನು ಚಿತ್ರಿಸುತ್ತಾರೆ. ಕೆಲವು ವೀರಗಲ್ಲುಗಳಲ್ಲಿ ಮೂರರಿಂದ ನಾಲ್ಕು ಜನ ವೀರರ ಚಿತ್ರಣವಿರುತ್ತದೆ.

ಉತ್ತರ ಕರ್ನಾಟಕ ಭಾಗದ ತುಱುಗೋಳ್ ವೀರಗಲ್ಲುಗಳು ಹೆಚ್ಚಾಗಿ ಒಂದರಿಂದ ಮೂರು ಹಂತದವರೆಗೆ ಕಾಣಬಹುದು. ಈ ಭಾಗದಲ್ಲಿ ಸುಮಾರು ಶಾಸನವಿರುವ ೪೦, ಶಾಸನರಹಿತ– ೨೦ ವೀರಗಲ್ಲುಗಳಿವೆ. ಕೆಲವು ಸ್ಥಳಗಳಲ್ಲಿ ಒಂದರ ಮೇಲೆ ಒಂದರಂತೆ ಸೇರಿಸಿರುವರು. ಬಹುತೇಕ ವೀರಗಲ್ಲುಗಳು ಅರ್ಧ ಅಡಿ ಅಗಲ ಒಂದು ಅಡಿ ಎತ್ತರವಾಗಿರುತ್ತವೆ. ಈ ಪ್ರದೇಶದ

ತುಳುಗೋಳ್ ವೀರಗಲ್ಲುಗಳು ಒಂದರಿಂದ ಮೂರು ಹಂತಗಳವರೆಗೆ ಇದ್ದು, ಒಂದೊಂದು ಹಂತವು ಎರಡು ಅಥವಾ ಮೂರು ಮಂಟಪಗಳನ್ನು ಒಳಗೊಂಡಿವೆ.

ವೀರರನ್ನು ಆ ಮಂಟಪಗಳ ಒಳಗೆ ಕುಳಿತಿರುವಂತೆ ಚಿತ್ರಿಸುತ್ತಾರೆ. ಒಂದರ ಮೇಲೊಂದರಂತೆ ಸೇರಿಸಿರುವ ಕಾರಣದಿಂದಾಗಿ ಹಲವು ವೀರಗಲ್ಲುಗಳು ಒಡೆದು ಹೋಗಿವೆ. ಈ ವೀರಗಲ್ಲುಗಳಲ್ಲಿ ದನಗಳ ಶಿಲ್ಪಗಳು ಆಕರ್ಷಕವಾಗಿರುವುದಿಲ್ಲ. ಮುಖ, ಕಾಲುಗಳು ವಕ್ರವಾಗಿರುತ್ತವೆ. ವೀರರ ಕಣ್ಣು, ಕಿವಿ, ಮೂಗು, ಬಾಯಿ, ಬೆರಳುಗಳು ವ್ಯತ್ಯಾಸಗಳಿಲ್ಲದೆ ಸಮತಟ್ಟಾಗಿರುತ್ತವೆ. ಒಟ್ಟಿನಲ್ಲಿ ಇಡೀ ಚಿತ್ರ ಎಳೆಯ ಹುಡುಗರು ರಚಿಸಿದ ಚಿತ್ರದಂತೆ ಕಾಣುತ್ತವೆ. ಈ ವೀರಗಲ್ಲುಗಳು ದೇವಾಲಯಗಳ ಬಳಿ ಅಥವಾ ಊರ ಬಳಿಯ ಪ್ರಾಚೀನ ವೃಕ್ಷದ ಬಳಿ ನೆಟ್ಟಿರುತ್ತಾರೆ. ಹಲವು ಗ್ರಾಮಗಳಲ್ಲಿ ನಾಗರ ಕಲ್ಲುಗಳು ಮತ್ತು ತುಳುಗೋಳ್ ವೀರಗಲ್ಲುಗಳ ಜೊತೆಯಲ್ಲೇ ಇರುತ್ತವೆ. ಆಯಾ ಗ್ರಾಮದ ಜನಸಾಮಾನ್ಯರು ಇವುಗಳಿಗೆ ಹಬ್ಬಗಳಂದು ಪೂಜೆ ಮಾಡುವ ಸಂಪ್ರದಾಯ ಈಗಲೂ ಕಂಡುಬರುತ್ತದೆ. ಕ್ರಿ.ಶ. ೮೮೫ರ ಶಿರುಂಜದ ಶಾಸನವು ಎರಡನೇ ಕೃಷ್ಣನ ಕಾಲದ್ದಾಗಿದ್ದು, ಅದು "ಕಿಡಲೆ ಗಧಿಪಾಣ್ಣನ್ ಎರೆಯಮ್ಮಂನಿವುದಿ ತೊರುಗೊಳೊಳ್ಗಾದಿ ಸತೋನ್ ಈ ಕಲ್ಲು ಶ್ರೀ ಬುತೇಂದ್ರಗಾವ್ಯಣ್ಥಂ ಕೋಮ್ಮಗುರೆಯಮ್ಮನಿರಿಸಿದೋರ್" (ಎಸ್.ಐ.ಐ. ೧೧ ಶಿರುಂಜ ಶಾ.ಸಂ.೧೯) ಎಂದು ಹೇಳುತ್ತದೆ. ಎರೆಮ್ಮ ಎಂಬುವನು ತುಳುಗೋಳ್ ಕದನದಲ್ಲಿ ಹೋರಾಡಿ ಮಡಿದ ಅವನ ನೆನಪಿಗಾಗಿ ಶ್ರೀಬುತೇಂದ್ರಗೌಡನು ವೀರಗಲ್ಲನ್ನು ನಿಲ್ಲಿಸಿದ ಎಂಬ ವಿಚಾರವನ್ನು ತಿಳಿಸುತ್ತದೆ.

ಈ ಶಿಲ್ಪದಲ್ಲಿ ಮೂರು ಹಂತಗಳಿವೆ. ಮೊದಲನೆಯ ಹಂತ ವೀರನು ಕಳ್ಳರ ಜೊತೆ ಹೋರಾಡಿ ಕದ್ದೊಯ್ದ ಆಕಳುಗಳನ್ನು ಬಿಡಿಸಿಕೊಂಡ ಚಿತ್ರಗಳಿವೆ. ವೀರ ಮತ್ತು ಕಳ್ಳರ ಕೈಗಳಲ್ಲಿ ಬಿಲ್ಲುಗಳಿವೆ. ಅವರು ಎದುರುಬದುರಾಗಿ ಬಾಣಗಳನ್ನು ಬಿಡುತ್ತಿದ್ದಾರೆ. ತಮ್ಮೊಂದು ಕಾಲನ್ನು ಎತ್ತರದ ವೇದಿಕೆಯ ಮೇಲೆ ಇಟ್ಟು ವೀರಾವೇಶದಿಂದ ಹೋರಾಡುತ್ತಿದ್ದಾರೆ. ಕಳ್ಳನ ಪರಿವಾರದವರು ಹಿಡಿದೊಯ್ದ ಆಕಳುಗಳನ್ನು ಮರಳಿಸುತ್ತಿರುವುದನ್ನು ಶಿಲ್ಪದಲ್ಲಿ ಎಡದಿಂದ ಬಲಗಡೆಗೆ ಹೋಗುವುದರಲ್ಲಿ ತೋರಿಸಲಾಗಿದೆ. ಮಡಿದ ವೀರ ಎರೆಯಮ್ಮನ ಕೈಗಳನ್ನು ಹಿಡಿದುಕೊಂಡು ಅಪ್ಸರೆಯರಿಬ್ಬರು ಆಕಾಶದಲ್ಲಿ ಹಾರುತ್ತಿರುವರು. ಅವರ ಇನ್ನೊಂದು ಕೈಯಲ್ಲಿ ತುಂಬಿದ ಕುಂಭಗಳಿವೆ. ಅವರ ತಲೆಯ ಮೇಲೆ ಮುಂಚಾಚಿದ ಅಲಂಕಾರ ಪಟ್ಟಿಕೆಗಳಿರುವುದು ಗಮನೀಯ. ಮೂರನೆಯ ಹಂತದಲ್ಲಿ ವೀರ ವೇದಿಕೆಯ ಮೇಲೆ ಕುಳಿತಿರುವನು. ಬದಿಗಳಲ್ಲಿ ಅಪ್ಸರೆಯರಿಬ್ಬರು ಚೌರಿ ಹಾಕುತ್ತ ನಿಂತಿದ್ದಾರೆ. ವೀರನು ಕುಳಿತಿರುವ ಭಂಗಿ ಈ ಪ್ರದೇಶದ ವೀರಗಲ್ಲುಗಳಲ್ಲಿಯೇ ವಿಶಿಷ್ಟ ರೀತಿಯದಾಗಿದೆ. ಆತನ ತಲೆಯ ಮೇಲೆ ಕಿರಿದಾದ ಶಿವಲಿಂಗವನ್ನು ಎರಡು ಆರೆಗಂಬಗಳ ನಡುವೆ ಚಿತ್ರಿಸಲಾಗಿದೆ. ಈ ಆರೆಗಂಬಗಳುಳ್ಳ ವಿಮಾನ ಶಿಖರ ಮಾದರಿಯದು. ಅದರಲ್ಲಿ ಎರಡು ರೀತಿಗಳಿವೆ. ಸ್ತೂಪಿಯು ನಾಗರ ಶೈಲಿಯಲ್ಲಿದೆ. ಈ ಶಿಲ್ಪದ ಬದಿಗೆ ಇದೇ ಮಾದರಿಯ

ಮತ್ತೊಂದು ಕಿರಿದಾದ ವೀರಗಲ್ಲಿದೆ. ಅದರ ಕೆಳಹಂತ ಮಣ್ಣಲ್ಲಿ ಹೂತಿದೆ. ಕೇವಲ ಯುದ್ಧ ಮಾಡುವವರ ತಲೆಗಳು ಮಾತ್ರ ಕಾಣಿಸುತ್ತವೆ. ಎರಡನೆಯ ಹಂತದಲ್ಲಿ ವೀರನನ್ನು ಅಪ್ಸರೆಯರು ಕೈ ಹಿಡಿದು ಬಲಗಡೆಗೆ ಹಾರುತ್ತಿರುವುದು ಗಮನೀಯ. ಮೂರನೆಯ ಹಂತದಲ್ಲಿ ವೇದಿಕೆಯ ಮೇಲೆ ಕುಳಿತ ವೀರನು ತನ್ನ ಬಲಗಾಲನ್ನು ಮಡಚಿ, ಎಡಗಾಲನ್ನು ಕೆಳಕ್ಕೆ ಇಳಿಬಿಟ್ಟಿದ್ದಾನೆ. ಮೇಲ್ಗಡೆ ವಿಮಾನ ಮಾದರಿಯಿದೆ. (ಕನ್ನಡ ಶಾಸನ ಶಿಲ್ಪ, ಪರಮಶಿವಮೂರ್ತಿ ಡಿ.ವಿ., ೧೯೯೯, ಪುಟ-೮೬)

ಕ್ರಿ.ಶ. ೯೨೮-೨೯ರ ಶಿರಂಜದ ಶಾಸನವು ಎರಡನೇ ಅಮೋಘವರ್ಷನ ಕಾಲದ್ದಾಗಿದ್ದು ಅದು ಬೆಳ್ವೊಲ-೩೦೦ನ್ನು ಕೆಲಿವಿಟ್ಟರಸರು ಆಳುತ್ತಿದ್ದಾಗ ತುಱುಗೋಳ್ ಕಾಳಗದಲ್ಲಿ ಮಡಿದ ಯಾರೋ ಒಬ್ಬ ವೀರನ ಬಗ್ಗೆ ತಿಳಿಸುತ್ತದೆ. (ಎಸ್.ಐ.ಐ. ೧೧ ಶಿರುಂಜ ಶಾ.ಸಂ.೪೯)

ಕ್ರಿ.ಶ. ೧೦೪೯ರ ಶಾಸನವು ಬೆಂತೂರಿನಲ್ಲಿದ್ದು, ಇದು ಒಂದನೇ ಸೋಮೇಶ್ವರನ ಕಾಲಕ್ಕೆ ಸೇರಿದ್ದು ಅತಿ ತ್ರುಟಿತವಾಗಿದೆ. ಇದರಲ್ಲಿ "ಸಕ ವರ್ಷ ೯೭೦ನೆಯ ಸರ್ವ್ವಧಾರಿ (ಚ) ಸಂವತ್ಸರದ ಫಾಲ್ಗುಣ ಸುದ್ಧ ಪಂಚಮಿ ಸೋಮವಾರದನ್ದು ॥ಕ॥ ಎರಡರನೂ ಱಱ ಪೆರ್ಗ್ಗಡೆ ವರಪುತ್ರಂ ಮಾದಿರಾಜನತಿ ಕೋಪದಿನ (ನ್ತು)ರ(ದೆ) ಬೆನತೂರ ತುಱುವಂ (ತಜ್ದೆ) ಸಿದನನ್ದಣ್ಣಿಗೆಜೆಗೆ ತ (ಜೆ) ಸಲ ನಿನ್ದಂ ಇನ್ತನ್ಯಾಯದಿಂ ತುಱುವಂ ಕೊಣ್ಡು ಪೋಗಲು...ಯೋಧ ಮಹಾಜನಮಂ ಬಡಿದೊಡೆ ॥ಕ॥ ಬಡಿಕೊಳೆ ಮಾಣ್ಡ...ಮಾರ್ಪ್ಪನೆನ್ದು ತಳ್ವಿಲ್ಲದೆ ಇರ್ತ್ತಡೆ ತಿ (ವಿದು) ಸತ್ತಂ" ಎಂದು ಎರಡನೂರರ ಪೆಗ್ಗಡೆಯವರ ವರಪುತ್ರ ಮಾದಿರಾಜನು ಗೋಗ್ರಣದಲ್ಲಿ ಆಕಳುಗಳನ್ನು ರಕ್ಷಿಸಿದ. ಈ ಸಮಯದಲ್ಲಿ ಮಾದಿಮಯ್ಯಂಗೆ ಮೂವತ್ತಾರುವರುಂ ಭೂಧಾನ ಬಿಟ್ಟ ವಿಚಾರವನ್ನು ತಿಳಿಸುತ್ತದೆ. (ಎಸ್.ಐ.ಐ. ೧೧ ಬೆಂತೂರು ಶಾ.ಸಂ. ೮೧)

ಚಿಂಚೋಳಿ ತಾಲೂಕಿನ ಮಿರ್ಯಾಣ ಗ್ರಾಮದ ಹನುಮಾನ್ ಗುಡಿ ಊರೊಳಗೆ ೮ನೇ ಶತಮಾನದ ತುರುಗೋಳ್ ವೀರಗಲ್ಲು ಇದೆ. ಕರ್ನಾಟಕ ಸರ್ಕಾರ ಗೆಜೆಟಿಯರ್ ಕಲಬುರ್ಗಿ ಜಿಲ್ಲೆಯಲ್ಲಿ ಇದು ವೀರಗಲು ಎಂದಿದ್ದಾರೆ. ಆದರೆ ಇದೊಂದು ತುರುಗೋಳ್ ವೀರಗಲ್ಲಾಗಿದೆ. ಕೆಳಸ್ತರದ ಎಡಕ್ಕೆ ಮೇಲ್‌ಭಾಗದ ಮೂಲೆಗೆ ಗೋವುಗಳ ಶಿಲ್ಪಗಳಿವೆ. ವೀರನ ತಲೆ ಹಿಂಬದಿಯಲ್ಲಿ ಮುಡಿ ಕಟ್ಟಿಕೊಂಡಿರುವ ಕಂಠಾಭರಣ, ಸೊಂಟಕ್ಕೆ ಕತ್ತಿ, ಕಟಿವಸ್ತು ಮತ್ತು ಕಾಚಾ ಧರಿಸಿರುವನು. ವೀರ ಖಡ್ಗ ಮತ್ತು ಗುರಾಣಿ ಹಿಡಿದಂತೆ ತೋರುತ್ತದೆ. ಎರಡನೆ ಸ್ತರದಲ್ಲಿ ಚಾಮರ ಹಿಡಿದ ಸುರಾಂಗನೆಯರು ವಿಮಾನದಲ್ಲಿ ವೀರನನ್ನು ದೇವಲೋಕಕ್ಕೆ ಕರೆದೊಯ್ಯುತ್ತಿರುವ ಶಿಲ್ಪವಿದೆ. ಮೇಲ್‌ಸ್ತರದಲ್ಲಿ ಲಿಂಗೈಕ್ಯವಾದ ವೀರನನ್ನು ಬಿಂಬಿಸಿದೆ. (ಕರ್ನಾಟಕ ರಾಜ್ಯ ಗೆಜೆಟಿಯರ್ ಕಲಬುರ್ಗಿ ಜಿಲ್ಲೆ ಸಂ. ಪಾಟೀಲ ಎಂ.ಬಿ., ೧೯೯೭, ಪುಟ-೭೫೭)

ಅದೇ ತಾಲೂಕಿನ ಬೇಡಕಪಳ್ಳಿ ಗ್ರಾಮದ ಅಗಸಿಯ ಬಳಿ ೮ನೇ ಶತಮಾನದ ತುರುಗೋಳ್ ವೀರಗಲ್ಲು, ಬೇಡಕಪಳ್ಳಿ ವೀರಗಲ್ಲು ಇದೆ. ಎರಡು ಸ್ತರದಲ್ಲಿದೆ. ಇದು ತುರುಗೋಳ್ ಗಳನ್ನು

ಸೂಚಿಸುವ ವೀರಗಲ್ಲಾಗಿದೆ. ಮೊದಲನೆಯ ಸ್ತರದಲ್ಲಿ ವೀರ ಹೋರಾಡುತ್ತಿರುವ ದೃಶ್ಯಾವಳಿ ಇದೆ ಮತ್ತು ಎರಡನೆಯ ಸ್ತರದಲ್ಲಿ ಸುರಾಂಗನೆಯರು ವೀರನನ್ನು ವಿಮಾನದಲ್ಲಿ ಒಯ್ಯುತ್ತಿರುವ ದೃಶ್ಯಾವಳಿಯನ್ನೊಳಗೊಂಡಿದೆ. ಈ ಶಿಲ್ಪದಲ್ಲಿ ವೀರ ಮತ್ತು ಶತ್ರು ಇಬ್ಬರು ಮಲ್ಲಯುದ್ಧ ಮಾಡುತ್ತಿರುವುದು ವಿಶೇಷವಾಗಿದೆ. ವೀರನು ಶತ್ರುವಿನ ಜಟ್ಟಿ ಹಿಡಿದು ಬಲಗಾಲನ್ನು ಅವನ ಸೊಂಟದ ಮೇಲಿಟ್ಟಿದ್ದಾನೆ. ವೀರನ ಬಲಕ್ಕೆ ಮೇಲಿನ ಮೂಲೆಯಲ್ಲಿ ಮತ್ತು ಎಡ ಹಿಂಬದಿಯಲ್ಲಿ ಗೋವುಗಳ ಶಿಲ್ಪವಿದೆ. (ಪ್ರಜಾವಾಣಿ, ಶೇರಿಕಾರ ಡಿ. ೦೨.೧೨.೨೦೧೧)

ರೋಣ ತಾಲೂಕಿನ ಬೆಳವಣಿಕೆಯ ಈಶ್ವರ ದೇವಾಲಯದ ಹೊರಗೋಡೆಯಲ್ಲಿರುವ ವೀರಗಲ್ಲು ಗೋಗ್ರಹಣವನ್ನು ಪ್ರತಿಬಿಂಬಿಸುವುದು. ಮೊದಲನೆಯ ಹಂತದಲ್ಲಿ ಶತ್ರುಗಳ ಜೊತೆ ಹೋರಾಡುತ್ತ ನಿಂತ ವೀರನು ಕಳ್ಳರು ಕದ್ದ ಹಸುಗಳನ್ನು ಬಿಡಿಸಿ ತನ್ನ ಕಡೆಗೆ ಇರಿಸಿಕೊಂಡು ಮಡಿದನೆಂದು ಕಾಣುವುದು. ವೀರನು ಕಳ್ಳರ ವಿರುದ್ಧ ಬಿಲ್ಲನ್ನು ಹಿಡಿದಿದ್ದಾನೆ. ಆತನ ದೇಹಕ್ಕೆ ಅನೇಕ ಬಾಣಗಳು ನೆಟ್ಟಿವೆ. ಎರಡನೆಯ ಹಂತದಲ್ಲಿ ವೀರನು ಕಳ್ಳರಿಂದ ಬಿಡಿಸಿದ ಹಸುಗಳು ಆತನ ಬಲಗಡೆಗಿವೆ. ಮಡಿದ ಈ ವೀರನನ್ನು ಅಪ್ಸರೆಯರು ಹೊತ್ತು ಆಕಾಶದಲ್ಲಿ ಹಾರುತ್ತಿದ್ದಾರೆ. ಸುತ್ತಲೂ ಮೋಡಗಳ ಸಂಕೇತವಿದೆ. ಮೂರನೆಯ ಹಂತದಲ್ಲಿ ಎರಡು ಅರೆಗಂಬಗಳ ನಡುವೆ ಇಬ್ಬರು ಅಪ್ಸರೆಯರ ನಡುವೆ ವೇದಿಕೆಯ ಮೇಲೆ ವೀರ ಕುಳಿತಿರುವನು. ಈ ಅರೆಗಂಬಗಳು ವಿಮಾನವನ್ನು ಹೊತ್ತಿವೆ. ಮೇಲಿನ ಕಪೋತದ ನಡುವೆ ಶಿವಲಿಂಗ, ಅದರ ಎಡಕ್ಕೆ ಕುಳಿತ ನಂದಿಯಿದೆ. ಮೇಲೆ ಶಾಲಾ ಮಾದರಿಯಿದೆ. ಈ ವೀರಗಲ್ಲಿನ ಕಾಲಮಾನ ಕ್ರಿ.ಶ. ೯ನೇ ಶತಮಾನದ ಅಂತ್ಯಗಿದೆ. (ಕನ್ನಡ ಶಾಸನ ಶಿಲ್ಪ, ಪರಮಶಿವಮೂರ್ತಿ ಡಿ.ವಿ., ೧೯೯೯, ಪುಟ-೮೨)

ಲಕ್ಕುಂಡಿಯ ವಸ್ತುಸಂಗ್ರಹಾಲಯದಲ್ಲಿರುವ ವೀರಗಲ್ಲು ಗೋಗ್ರಹಣ ಶಿಲ್ಪವಾಗಿದೆ. ವೀರನು ಕಳ್ಳರು ಕದ್ದ ದನಗಳನ್ನು ಹಿಡಿಯುತ್ತ ನಿಂತಿದ್ದಾನೆ. ಒಬ್ಬ ಕಳ್ಳ ನೆಲದ ಮೇಲೆ ಬಿದ್ದಿರುವನು. ಅವನ ಮೇಲೆ ಮತ್ತು ಬಲಗಡೆ ದನಗಳ ಮುಖಗಳನ್ನು ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ಚಲಿಸುವ ಮೋಡ ಪಟ್ಟಿಕೆಯ ನಡುವೆ ವೀರನು ಅಪ್ಸರೆಯರ ಹೆಗಲ ಮೇಲೆ ಕೈಗಳನ್ನು ಹಾಕಿ ನಿಂತಿದ್ದಾನೆ. ಮೂರನೆಯ ಪಟ್ಟಿಕೆಯಲ್ಲಿ ಎರಡು ಅರೆಗಂಬಗಳ ನಡುವೆ ವೇದಿಕೆಯ ಮೇಲೆ ವೀರ ಕುಳಿತಿದ್ದಾನೆ. ಆತನ ಸೇವೆ ಮಾಡಲು ಬದಿಗೆ ಚೌರಿ ಹಿಡಿದು ಸೇವಕಿಯರಿಬ್ಬರು ನಿಂತಿದ್ದಾರೆ. ಅದರ ಕಪೋತದ ಮೇಲೆ ವೀರನು ಶಿವಲಿಂಗಗದ ಮುಂದೆ ಕುಳಿತಿರುವನು. ಬುಡಕ್ಕೆ ನಂದಿ ಕುಳಿತಿದೆ. ಇದು ಕ್ರಿ.ಶ. ೯ನೇ ಶತಮಾನದ್ದಾಗಿದೆ.

ಕೌಜಗೇರಿಯ ಮತ್ತೊಂದು ಶಿಲ್ಪ ಅಲ್ಲಿಯ ಸಿದ್ದೇಶ್ವರ ಗುಡಿ ಆವರಣದಲ್ಲಿದೆ. ಈ ಸ್ಮಾರಕ ಶಿಲ್ಪವು ಗೋಗ್ರಹಣ ಸಂದರ್ಭದಲ್ಲಿ ಒಬ್ಬ ವ್ಯಕ್ತಿಯು ಚಿತೆಯಲ್ಲಿ ಹಾರಿ ತನ್ನ ಪ್ರಾಣವನ್ನು ಕಳೆದುಕೊಳ್ಳುವುದನ್ನು ಪ್ರತಿನಿಧಿಸುತ್ತದೆ. ಈ ಶಿಲ್ಪದಲ್ಲಿ ಒಟ್ಟು ನಾಲ್ಕು ಹಂತಗಳಿವೆ. ಕೆಳಗಿನ ಮೊದಲ ಹಂತದಲ್ಲಿ ಆಯಾತಾಕಾರದ ಶಿಲಾಸ್ತಂಭ ಮೇಲೆ ಒಂದು ಪಟ್ಟಿಕೆಯಿದೆ. ಅದಕ್ಕೆ ಒಂದು

ಜೋಕಾಲಿಯನ್ನು ಇಳಿಬಿಟ್ಟು ಕಟ್ಟಲಾಗಿದೆ. ಜೋಕಾಲಿಯ ಬುಡದಲ್ಲಿ ಕಟ್ಟಿಗೆಯ ಪಟ್ಟಿಕೆಯನ್ನು ಕಟ್ಟಲಾಗಿದೆ. ಅದರ ಮೇಲೆ ಒಬ್ಬ ವ್ಯಕ್ತಿ ನಿಂತಿದ್ದಾನೆ. ಈ ಜೋಕಾಲಿ ಮುಂದೆ ಕೆಳಗಡೆ ಅಗ್ನಿಕುಂಡ ಉರಿಯುತ್ತಿದೆ. ಆತನು ಬೆಂಕಿಗೆ ಹಾರಲು ನಿಂತಿದ್ದಾನೆ. ಶಿಲಾಸ್ತಂಭಗಳ ಬದಿಯಲ್ಲಿ ಉಯ್ಯಾಲೆಯಿಂದ ಹಾರಿ ಪ್ರಾಣಬಿಡುವ ವ್ಯಕ್ತಿಗೆ ಶುಭಕೋರಲು ನಾಲ್ವರು ವಾದ್ಯಮೇಳದವರು ನಿಂತಿದ್ದಾರೆ. ಒಬ್ಬನು ಮೃದಂಗವನ್ನು, ಇಬ್ಬರು ತಾಳಗಳನ್ನು, ಒಬ್ಬನು ನೃತ್ಯವನ್ನು ಮಾಡುತ್ತಿರುವರು. ಎರಡನೆಯ ಹಂತದಲ್ಲಿ ಅಪ್ಸರೆಯರು ಮಡಿದ ವ್ಯಕ್ತಿಯನ್ನು ಹೊತ್ತು ಹಾರುತ್ತಿದ್ದಾರೆ. ಮೂರನೆಯ ಹಂತದಲ್ಲಿ ಮಡಿದ ವ್ಯಕ್ತಿ ಸವ್ಯಲಲಿತಾಸನದಲ್ಲಿ ಕುಳಿತಿದ್ದಾನೆ. ಬದಿಗಳಲ್ಲಿ ಆತನ ಸೇವೆ ಮಾಡಲು ಅಪ್ಸರೆಯರು ಚೌರಿ ಹಿಡಿದು ಆತನನ್ನು ಸ್ವರ್ಗಲೋಕಕ್ಕೆ ಒಯ್ಯುತ್ತಿರುವರು. ನಾಲ್ಕನೆಯ ಹಂತವು ಕಮಾನಿನಾಕಾರದಲ್ಲಿದೆ. ಅದರ ನಡುವೆ ಸೂರ್ಯನು ಸಮಭಂಗಿಯಲ್ಲಿ ಪೀಠದ ಮೇಲೆ ಕಮಲಗಳನ್ನು ಹಿಡಿದು ನಿಂತಿದ್ದಾನೆ. ಬದಿಗಳಲ್ಲಿಬ್ಬರು ಚೌರಿ ಹಿಡಿದು ನಿಂತಿದ್ದಾರೆ. ಕಮಾನಿನ ಪಟ್ಟಿಕೆಯ ಮೇಲೆ ಬಲಕ್ಕೆ ಹಾವೊಂದು ಸೂರ್ಯನನ್ನು ನುಂಗುತ್ತಿದೆ. ಈ ಚಿಹ್ನೆಯು ಸೂರ್ಯಗ್ರಹಣವನ್ನು ಸೂಚಿಸುತ್ತದೆ. ಈ ಸಂದರ್ಭದಲ್ಲಿ ಪ್ರಾಣಾರ್ಪಣೆ ಮಾಡಿಕೊಳ್ಳುವುದನ್ನು ಈ ಶಿಲ್ಪ ಧ್ವನಿಸುತ್ತದೆ. ಈ ಶಿಲ್ಪವನ್ನು ಉಯ್ಯಾಲೆ ಸ್ಮಾರಕ ಶಿಲ್ಪವೆನ್ನಲಾಗಿದೆ. (ಕನ್ನಡ ಶಾಸನ ಶಿಲ್ಪ, ಪರಮಶಿವಮೂರ್ತಿ ಡಿ.ವಿ., ೧೯೯೯, ಪುಟ-೮೨)

ಚಿತೆಗೆ ಹಾರಿ ಪ್ರಾಣಾರ್ಪಣೆ ಮಾಡಿಕೊಳ್ಳುವ ಶಿಲ್ಪಗಳು ೧೧ನೇ ಶತಮಾನದಲ್ಲಿ ಕಂಡುಬರುತ್ತವೆ. ದಾನಕೊಟ್ಟ ಚಿತ್ರಫಲಕವೊಂದು ರೋಣ ತಾಲೂಕಿನ ಸವಡಿಯಲ್ಲಿದೆ. ಅದರಲ್ಲಿ ಮೂರು ಹಂತಗಳಿಗೆ ಗೂಡುಗಳನ್ನು ಕಂಡರಿಸಲಾಗಿದೆ. ಕೆಳಗಿನ ಗೂಡಿನಲ್ಲಿ ದಾನಕೊಟ್ಟ ವ್ಯಕ್ತಿಯು ವೇದಿಕೆ ಮೇಲೆ ಕುಳಿತಿದ್ದಾನೆ. ಬದಿಗಳಲ್ಲಿ ಇಬ್ಬರು ಸೇವಕಿಯರು ನಿಂತಿದ್ದಾರೆ. ಅದರ ಶಾಸನದಲ್ಲಿ ಬಲ್ಲಯ್ಯ ನೀಡಿದ ದತ್ತಿಯ ವಿವರಗಳಿವೆ. (ಎಸ್.ಐ.ಐ., ೧೧, ಸವಡಿ, ೪೨) ಎರಡನೆಯ ಹಂತದಲ್ಲಿ ದಂಪತಿಗಳು ಒಬ್ಬ ಯತಿಯ ಮುಂದೆ ಕುಳಿತಿದ್ದಾರೆ. ಶಾಸನದಲ್ಲಿ ಹೇಳಿದ ಬಲ್ಲಯ್ಯನು ಇಲ್ಲಿ ಪತ್ನಿ ಸಮೇತ ಸ್ಥಾನಪತಿಗೆ ದತ್ತಿಯನ್ನು ನೀಡುವುದನ್ನು ಸೂಚಿಸುತ್ತದೆ. ಮೇಲಿನ ಹಂತದಲ್ಲಿ ಸ್ಥಾನಪತಿಯು ಶಿವಲಿಂಗದ ಮುಂದೆ ಕುಳಿತಿದ್ದಾನೆ. ಶಿವಲಿಂಗಕ್ಕೆ ಮುಖಮಾಡಿ ಕುಳಿತ ನಂದಿಯಿದೆ. ಶಾಸನದಲ್ಲಿ ದತ್ತಿ ನೀಡಿದ ಬಲವರ್ಮನ ಮಗ ಬೆಂಗಿಳ್ಳುಗರಯ್ಯನನ್ನು ಹೊಗಳಲಾಗಿದೆ. ಶಾಸನವನ್ನು ಕ್ರಿ.ಶ. ೯೭೧ರಲ್ಲಿ ರಚಿಸಿದ್ದು ಕವಿನಾರಣ ಮತ್ತು ನಾಗನಾರ್ಯ ಎನ್ನಲಾಗಿದೆ. ಮೇಲಿನ ಮೂರನೆಯ ಹಂತ ಮುರಿದು ಹೋಗಿದೆ.

ಲಕ್ಕುಂಡಿಯ ವಸ್ತುಸಂಗ್ರಹಾಲಯದ ಹಿಂದಿರುವ ಗೋಗ್ರಹಣ ವೀರಗಲ್ಲು ಮೇಲಿನ ಭಾಗ ಒಡೆದಿದೆ. ಅದರಲ್ಲಿ ಕೆಳಹಂತದಲ್ಲಿ ವೀರನು ವೈರಿಗಳ ವಿರುದ್ಧ ಹೋರಾಡುತ್ತ ನಿಂತಿದ್ದಾನೆ. ಅದಕ್ಕಾಗಿ ಬಿಲ್ಲನ್ನು ವೈರಿಗಳ ಮುಂದಕ್ಕೆ ಹಿಡಿದಿದ್ದಾನೆ. ಅವನಿಗೆ ಸಾಲಾಗಿ ಬಾಣಗಳು ನೆಟ್ಟಿವೆ. ವೈರಿಗಳನ್ನು ಎರಡು ಸಾಲುಗಳಲ್ಲಿ ಕ್ರಮವಾಗಿ ಇಬ್ಬರು ಮಹಿಳೆಯರು ಮತ್ತು ಒಬ್ಬ ಅರೆಬೆತ್ತಲೆ

ಮಹಿಳೆ ಮತ್ತು ಬತ್ತಳಿಕೆಯನ್ನು ಎತ್ತಿ ಹಿಡಿದು ನಿಂತ ಇಬ್ಬರು ವೀರನ ಕಡೆಯವರಿದ್ದಾರೆ. ಮಹಿಳೆಯರ ಮಾನಭಂಗವನ್ನು ವೀರನು ರಕ್ಷಿಸಿದಂತೆ ಕಾಣುತ್ತದೆ. ವೀರನ ಕಾಲಿನ ಮುಂದೆ ಒಬ್ಬನು ಶರಣಾಗತನಾಗಿ ಕೈ ಮುಗಿದಿದ್ದಾನೆ. ವಸ್ತ್ರಾಭರಣ ಧರಿಸಿದ್ದಾನೆ. ಅದರ ಶಾಸನದಲ್ಲಿ ವೀರನು ವೈರಿಗಳಿಂದ ತುರುಗಳನ್ನು ಮತ್ತು ಮಹಿಳೆಯರನ್ನು ರಕ್ಷಿಸಿದನೆನ್ನಲಾಗಿದೆ. ಮೇಲಿನ ಮುರಿದ ಭಾಗದಲ್ಲಿ ಮಡಿದ ವೀರನನ್ನು ಅಪ್ಸರೆಯರು ಸ್ವರ್ಗಲೋಕಕ್ಕೆ ಒಯ್ಯುತ್ತಿರುವುದನ್ನು ಕಾಣಬಹುದು. ಕಾಲ ಕ್ರಿ.ಶ. ೧೦ನೇ ಶತಮಾನ. (ಎಸ್.ಐ.ಐ., ೧೧, ಲಕ್ಕುಂಡಿ, ಶಾ.ಸಂ-೫೧೮)

ಹಳೆಗೊಬ್ಬೂರು ಹನುಮಂತದೇವರ ಗುಡಿಯ ಬಳಿ ಗೋಗ್ರಹಣದ ವೀರಗಲ್ಲು ಇದೆ. ಈ ವೀರಗಲ್ಲಿನ ಶಾಸನವನ್ನು ಕರಿಕಲ್ಲಿನಲ್ಲಿ ಕೆತ್ತಲಾಗಿದೆ. ಕೆಳಭಾಗದಲ್ಲಿ ನಾಲ್ಕು ಆಕಳುಗಳಿದ್ದು, ವೀರರಿಬ್ಬರು ಬಿಲ್ಲು-ಬಾಣಗಳೊಂದಿಗೆ ಹೋರಾಡುತ್ತಿದ್ದಾರೆ. ಒಬ್ಬ ಬಲಭಾಗದ ವೀರನ ಹಿಂದಿದ್ದಾನೆ. ಕಾಲ ಕೆಳಗೆ ವೀರನೊಬ್ಬ ಸತ್ತು ಬಿದ್ದಿದ್ದಾನೆ. ಎರಡನೆ ಸ್ತರದಲ್ಲಿ ವೀರ ಎಡ-ಬಲಗಳಲ್ಲಿರುವ ಅಪ್ಸರೆಯರ ಹೆಗಲ ಮೇಲೆ ಕೈಹಾಕಿ ಸ್ವರ್ಗದೆಡೆಗೆ ಹಾರುತ್ತಿದ್ದಾನೆ. ಶಾಸನ ಅಕ್ಷರಗಳು ಮೇಲಿನ ಸ್ತರದಲ್ಲಿ ವೀರ ಕುಳಿತಿದ್ದು ಕಿವಿ, ಕೈ-ಕಾಲು, ಸೊಂಟದಲ್ಲಿ ಆಭರಣ ಧರಿಸಿದ ಇಬ್ಬರು ಅಪ್ಸರೆಯರು, ಎಡ-ಬಲಗಳಲ್ಲಿ ಸೊಂಟದ ಮೇಲೆ ಕೈ ಇಟ್ಟುಕೊಂಡು ನಿಂತು ಚಾಮರ ಹಿಡಿದಿದ್ದಾನೆ. ಸೊಂಟದವರೆಗೆ ನರಿಗೆಗಳುಳ್ಳ ವಸ್ತ್ರವನ್ನು ಧರಿಸಿದ್ದಾರೆ. ವೀರ ಚಲ್ಲಣ ಧರಿಸಿದ್ದು ಕಿವಿ, ಕೈ, ಕುತ್ತಿಗೆ, ಸೊಂಟದಲ್ಲಿ ಆಭರಣಗಳನ್ನು ಹಾಕಿಕೊಂಡಿದ್ದಾನೆ. ಅದರ ಮೇಲಿನ ಗೋಪುರದ ತ್ರಿಕೋನಾಕಾರದಲ್ಲಿಯೂ ಶಾಸನಾಕ್ಷರಗಳಿವೆ. ಈ ಶಾಸನವು ರಾಷ್ಟ್ರಕೂಟ ಚಕ್ರವರ್ತಿ ಕನ್ನರದೇವನು ಆಳುತ್ತಿರುವಾಗ ಕಜೆಮಚಿಯ ಮಗನಾದ ಸಿರಿವೆಗ ಎನ್ನುವವನು ಗೋಗ್ರಹಣದಲ್ಲಿ ಸತ್ತಿದ್ದನ್ನು ದಾಖಲಿಸುತ್ತದೆ. ಈ ವೀರಗಲ್ಲು ಶಾಸನದ ಕಾಲ ಕ್ರಿ.ಶ. ೯೫೦ (ಹುಬ್ಬಳ್ಳಿ ತಾಲೂಕಿನ ಶಾಸನಗಳು, ಹನುಮಾಕ್ಷಿ ಗೋಗಿ, ೨೦೦೪, ಪುಟ-೩೬)

ಅಂಬಳ್ಳಿ ಗ್ರಾಮ ಧಾರವಾಡದಿಂದ ಪಶ್ಚಿಮಕ್ಕೆ ಸುಮಾರು ೧೮ ಕಿ.ಮೀ. ದೂರದಲ್ಲಿದ್ದು, ಊರಿನಿಂದ ಈಶಾನ್ಯಕ್ಕೆ ೨ ಕಿ.ಮೀ. ದೂರದ ಹೊಲದಲ್ಲಿ ವೀರಗಲ್ಲೊಂದು ನಿಂತಿದೆ. ಅದರ ಒಂದು ಪಟ್ಟಿಕೆಯ ಮೇಲಿನ ಬರವಣಿಗೆ ತೀರ ತ್ರುಟಿತವಾಗಿದೆ. ಮಹಾರಾಜನೊಬ್ಬನು ಆಳುವಾಗ ನಡೆದ ಗೋಗ್ರಹಣ ಪ್ರಸಂಗದಲ್ಲಿ ಮಡಿದ ಮಾದಯ್ಯನೆಂಬುವನ ಸ್ಮಾರಕ ಶಿಲೆಯಿದು. ಲಿಪಿ ಸ್ವರೂಪವನ್ನು ಆಧರಿಸಿ ಇದರ ಕಾಲ ಕ್ರಿ.ಶ. ಸುಮಾರು ೯೫೦ ಎಂದು ಹೇಳಬಹುದು. (ಧಾರವಾಡ ತಾಲೂಕಿನ ಶಾನಗಳು, ಕಲಬುರ್ಗಿ ಎಂ.ಎಂ. ೧೯೭೬, ಪುಟ-೧)

ಮುಗದ ಗ್ರಾಮದ ಹೆಗ್ಗೆರೆಯ ಕಟ್ಟೆಯ ಮೇಲಿರುವ ವೀರಗಲ್ಲು ಗೋಗ್ರಹಣ ವಿಷಯಕ್ಕೆ ಸಂಬಂಧಿಸಿದ ಶಾಸನ ಅಲ್ಲಲ್ಲಿ ತ್ರುಟಿತವಾಗಿರುವ ಕಾರಣ ಮಿತಿ ಸ್ಥಳ. ಅರಸು ವೀರನ ಹೆಸರು ಮುಂತಾದ ವಿಷಯಗಳು ಅಸ್ಪಷ್ಟವೆನಿಸಿದೆ. ಇದು ಸುಮಾರು ೧೨ನೇ ಶತಮಾನಕ್ಕೆ ಸೇರಿದೆ. (ಧಾರವಾಡ ತಾಲೂಕಿನ ಶಾಸನಗಳು, ಕಲಬುರ್ಗಿ ಎಂ.ಎಂ., ೧೯೭೬, ಪುಟ-೫೯)

ಹೇರೂರಿನ ಕಲ್ಲೇಶ್ವರ ದೇವಾಲಯದ ಮುಂದೆ ೧೨ನೇ ಶತಮಾನದ ಎರಡು ವೀರಗಲ್ಲುಗಳಿವೆ. ಒಂದರ ಮೇಲಿರುವ ಶಾಸನದಿಂದ ದುಷ್ಟರು ಗೋವುಗಳನ್ನು ಅಪಹರಿಸುವಾಗ ಮಾದಿಗಾಮುಂಡನು ಅವುಗಳ ರಕ್ಷಣೆಗಾಗಿ ಹೋರಾಡಿ ಮಡಿದುದು ತಿಳಿಯುತ್ತದೆ. ಇಲ್ಲಿ ಕರ್ತ್ತಮೇಶ್ವರ ದೇವರ ಆಚಾರ್ಯ ಅಮಿತರಾಶಿಯ ಹೆಸರನ್ನು ಉಲ್ಲೇಖಿಸಲಾಗಿದೆ. ಮತ್ತೊಂದರ ಮೇಲಿನ ಶಾಸನದಿಂದ ಪೆರ್ಗ್ಗಡೆಜಿನಯ್ಯ ಯುದ್ಧದಲ್ಲಿ ವೀರ ಮರಣ ಹೊಂದಿದ್ದನ್ನು ಅನುಸರಿಸಿ ಆತನ ಮಡದಿ ಕಾವೆಬ್ಬ ಸತ್ತಿರುವ ವಿಷಯ ತಿಳಿಸುತ್ತದೆ. (ಶರಣಬಸಪ್ಪ ಕೋಲ್ಕಾರ್, ಅಕ್ಷಯ ಸವಿ ಸಂಚಿಕೆ, ಗಂಗಾವತಿ, ೨೦೦೨)

ಹಿರೇಜಂತಕಲ್ ಶಾಸನದಲ್ಲಿ ಯಾರಾದರೂ ಗೋವುಗಳನ್ನು ಕೊಂದರೆ ಮತ್ತು ಅಪಹರಿಸಿದರೆ ಅವರು ೫ ಮಹಾ ಪಾಪಕ್ಕೆ ಒಳಗಾಗುವವರು ಎಂದು ಉಲ್ಲೇಖವಿದೆ. (ಕವಿಹಂಪಿ. ಶಾ.ಸಂ-೨, ಗಂಗಾವತಿ-೪)

ವಿರೂಪಾಕ್ಷ ದೇವರಿಗೆ ಸೇರಿದ್ದು ಗುಡದಾಳ ಶಾಸನವೊಂದರಲ್ಲಿ ಇದಕ್ಕೆ ಯಾರಾದರೂ ತಪ್ಪಿ ನಡೆದರೆ ಗೋವು ಹತ್ಯ ಪಾಪಕ್ಕೆ ಗುರಿಯಾಗುವರು ಎಂಬ ಉಲ್ಲೇಖವಿದೆ. (ಕವಿಹಂಪಿ. ಶಾ.ಸಂ-೨, ಗಂಗಾವತಿ-೯)

ಐಹೊಳೆಯ ಮ್ಯೂಜಿಯಂನ ಗೋಗ್ರಹಣದ ವೀರಗಲ್ಲು ಶಿಲ್ಪದಲ್ಲಿ ಮೇಲ್ಗಡೆ ಆಕಳು ಹಾಲು ಕುಡಿಯುತ್ತ ಕರು ನಿಂತಿದೆ. ಉಳಿದ ಭಾಗ ಅಸ್ಪಷ್ಟ. ಪಟ್ಟದಕಲ್ಲಿನ ಒಂದು ವೀರಗಲ್ಲು ಶಿಲ್ಪದ ಕೇವಲ ಹೋರಾಟದ ದೃಶ್ಯ ಉಳಿದಿದೆ. ಈ ವೀರಗಲ್ಲುಗಳು ಕ್ರಿ.ಶ. ೧೧ನೇ ಶತಮಾನದ್ದಾಗಿದೆ. (ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೧೧, ಪುಟ-೩೧೯,

ಬಾಗಲಕೋಟೆ ತಾಲೂಕಿನ ಶಿರೂರು ಗ್ರಾಮದ ಸಿದ್ದೇಶ್ವರ ದೇವಾಲಯದ ಗೋಗ್ರಹಣ ವೀರಗಲ್ಲು ಸ್ವರ್ಗಾರೋಹಣದಲ್ಲಿ ಮಡಿದ ವೀರನನ್ನು ಒಯ್ಯುವ ಅಪ್ಸರೆಯರು ಮತ್ತು ಶಿವಲಿಂಗದ ಮುಂದೆ ಕುಳಿತ ವೀರ ಆರಾಧಿಸುವ ಯತಿ ಬದಿಗೆ ಕುಳಿತ ನಂದಿಯಿದೆ. ಈ ವೀರಗಲ್ಲು ಕ್ರಿ.ಶ. ೧೧ನೇ ಶತಮಾನದ್ದಾಗಿದೆ. (ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೧೧, ಪುಟ-೩೧೯,

ಹುನಗುಂದ ತಾಲೂಕಿನ ಚಿತ್ತವಾಡಿಯ ವೀರಗಲ್ಲಿನಲ್ಲಿ ಬಿಲ್ಲನ್ನು ಮುಂದೆ ಮಾಡಿ ನಿಂತ ವೀರ ಎದುರಿಗೆ ಅಪ್ಸರೆಯರಿಬ್ಬರೂ ಮಡಿದ ವೀರನನ್ನು ಒಯ್ಯುತ್ತಿದ್ದಾರೆ. ಮೇಲ್ಗಡೆ ಶಿವಲಿಂಗದ ಮುಂದೆ ಮಡಿದ ವೀರ ಕುಳಿತಿರುವನು. ಈ ವೀರಗಲ್ಲು ಕ್ರಿ.ಶ.ಸುಮಾರು ೧೧ನೇ ಶತಮಾನದ್ದಾಗಿದೆ. (ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೧೧, ಪುಟ-೩೨೦)

ಬಾದಾಮಿ ತಾಲೂಕಿನ ನೀಲಗುಂದದ ಎರಡು ವೀರಗಲ್ಲುಗಳಿವೆ. ಒಂದರಲ್ಲಿ ಸತಿ-ಪತಿಯರಿದ್ದಾರೆ. ಬದಿಗೆ ಹಂದಿ ನಿಂತಿದೆ. ಇಲ್ಲಿನ ಇನ್ನೊಂದು ವೀರಗಲ್ಲಿನಲ್ಲಿ ವಿಮಾನದಲ್ಲಿ ಮಡಿದ ವೀರ ಬದಿಗೆ ಅಪ್ಸರೆಯರಿದ್ದಾರೆ. ಕೆಳಗಡೆ ಕುದುರೆ ಸವಾರಿ ಮಾಡುವ ವೀರನಿದ್ದಾನೆ. ಮೇಲ್ಗಡೆ ಏಕಸಾಲಿನ ಮೂರು ಗೂಡುಗಳಲ್ಲಿ ಕ್ರಮವಾಗಿ ಕುಳಿತ ಮಡಿದ ವೀರ, ಯತಿ, ಶಿವಲಿಂಗ ಮತ್ತು ನಿಂತ ನಂದಿಯಿದೆ. ಇದು ೧೧ನೇ ಶತಮಾನದ್ದಾಗಿದೆ. (ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೧೧, ಪುಟ-೩೨೦)

ಬಾದಾಮಿಯ ಶಿಲ್ಪವೊಂದರಲ್ಲಿ ವೀರನನ್ನು ಕೆಳಗಿನ ಫಲಕದ ಮಧ್ಯ ಚಿತ್ರಿಸಲಾಗಿದೆ. ಬಲಕ್ಕೆ ಆಕಳುಗಳು, ಎಡಕ್ಕೆ ವೈರಿ ಪಡೆಯಿದೆ. ಸ್ವರ್ಗಾರೋಹಣದಲ್ಲಿ ವಿಮಾನದಲ್ಲಿ ವೀರ ಕುಳಿತಿರುವನು. ವಿಮಾನ ಹಿಡಿದು ಒಯ್ಯುವ ಅಪ್ಸರೆಯರಿಬ್ಬರೂ ಬದಿಗಿದ್ದಾರೆ. ಬದಿಗೆ ಸ್ವಾಗತಿಸಲು ಹಾರ ಹಿಡಿದು ಇಬ್ಬರಿದ್ದಾರೆ. ಮೇಲ್ಗಡೆ ವೀರನು ಶಿವಲಿಂಗದ ಮುಂದೆ ಕುಳಿತಿದ್ದು, ಬಲಕ್ಕೆ ಯತಿ ನಿಂತಿದ್ದಾನೆ. ಈ ಗೋಗ್ರಹಣದ ವೀರಗಲ್ಲು ಶಿಲ್ಪದ ಕಾಲಮಾನ ೧೨ನೇ ಶತಮಾನದ್ದಾಗಿದೆ. (ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೧೧, ಪುಟ-೩೧೮)

ಐಹೊಳೆಯ ವೀರಗಲ್ಲಿನಲ್ಲಿ ಯುದ್ಧ ದೃಶ್ಯದಲ್ಲಿ ಬಿಲ್ಲನ್ನು ಮುಂದೆ ಹಿಡಿದು ನಿಂತ ವೀರನ ಎದುರು ಕುದುರೆ ಸವಾರಿ ಮಾಡುವ ವೈರಿ ತನ್ನ ಈಟಿಯನ್ನು ಬಿಲ್ಲುಗೆ ತಿವಿದಿದ್ದಾನೆ. ವೀರನ ಕಾಲಿನ ಕೆಳಗಡೆ ಒಬ್ಬ ಬಿದ್ದಿರುವನು. ಎರಡನೇ ಫಲಕದಲ್ಲಿ ವೀರನು ವೈರಿ ಪಡೆ ವಿರುದ್ಧ ಹೋರಾಡುತ್ತ ನಿಂತಿದ್ದಾನೆ. ಆತನ ಬಲಕ್ಕೆ ದನಕರುಗಳಿರುವುದರಿಂದ ಇದೊಂದು ಗೋಗ್ರಹಣ ಶಿಲ್ಪವೆಂದು ತಿಳಿಯುತ್ತದೆ. ಸ್ವರ್ಗಾರೋಹಣದಲ್ಲಿ ನಡುವೆ ಮಡಿದ ವೀರ ಬದಿಗಳಲ್ಲಿ ಎರಡು ಅರೆಗಂಬಗಳಿಂದ ಪ್ರತ್ಯೇಕಿಸಲಾಗಿದೆ. ತಲಾ ಒಂದು ಕಡೆ ವಿಮಾದ ಅರೆಗಂಬ ಮತ್ತು ಚೌರಿ ಹಿಡಿದ ಅಪ್ಸರೆ ಮತ್ತು ಬದಿಗೆ ಇನ್ನಿಬ್ಬರು ನಿಂತಿದ್ದಾರೆ. ಮೇಲೆ ಶಿವಲಿಂಗ, ಬಲಕ್ಕೆ ಕುಳಿತ ವೀರ, ಎಡಕ್ಕೆ ಯತಿ ಮತ್ತು ಕುಳಿತ ನಂದಿಯಿದೆ. ಇದು ೧೨ನೇ ಶತಮಾನದ್ದಾಗಿದೆ. (ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೧೧, ಪುಟ-೩೧೯)

ಬೀಳಿಗಿ ತಾಲೂಕಿನ ಕೋಡಿಗದ್ದೆಯ ವೀರಗಲ್ಲಿನಲ್ಲಿ ಹೋರಾಟದ ದೃಶ್ಯದಲ್ಲಿ ಸ್ವಲ್ಪ ವಿಶೇಷತೆಯಿದೆ. ಸ್ವರ್ಗ ದೃಶ್ಯದಲ್ಲಿ ಮಡಿದ ವೀರನು ವಿಮಾನದಲ್ಲಿ ಕುಳಿತಿದ್ದ ಅದನ್ನು ಮತ್ತು ಚೌರಿ ಹಿಡಿದ ಅಪ್ಸರೆಯರಿದ್ದಾರೆ. ಬದಿಗೆ ಮತ್ತೊಬ್ಬರು ನಿಂತಿರುವರು. ಮೇಲ್ಗಡೆಯಲ್ಲಿ ಮೂರು ಮೋಡಗಳಲ್ಲಿ ಇಲ್ಲಿಯೂ ಕ್ರಮವಾಗಿ ಮಡಿದ ವೀರ ಯತಿ ಶಿವಲಿಂಗ ಮತ್ತು ಕುಳಿತ ನಂದಿಯನ್ನು ತೋರಿಸಲಾಗಿದೆ. ಇದರ ಮೇಲೆ ಕದಂಬ ನಾಗರ ಮಾದರಿ ಶಿಖರವಿದೆ. ಈ ವೀರಗಲ್ಲು ೧೨ನೇ ಶತಮಾನದ್ದಾಗಿದೆ. (ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೧೧, ಪುಟ-೩೨೦,

ಜಮಖಂಡಿ ತಾಲೂಕಿನ ಚುಂಗಳದ ಉಪ್ಪಿನಮಾಳಿ ಮತ್ತು ರಾಮಲಿಂಗ ಗುಡಿ ಬಳಿ ಒಟ್ಟು ಎರಡು ವೀರಗಲ್ಲುಗಳಿವೆ. ಮಹಿಳೆ ಕತ್ತಿ ಹಿಡಿದು ಕಾದಾಡುತ್ತಿದ್ದಾಳೆ. ಎರಡರಲ್ಲಿ ಸ್ವರ್ಗಲೋಕಕ್ಕೆ ಅಪ್ಸರೆಯರು ಒಯ್ಯುತ್ತಿದ್ದಾರೆ. ಮೇಲಿನ ಫಲಕದಲ್ಲಿ ಕುಳಿತ ವೀರ ಮಹಿಳೆ, ಯತಿ, ಶಿವಲಿಂಗ ಮತ್ತು ನಂದಿ ಚಿತ್ರಗಳಿವೆ. ಇನ್ನೊಂದರಲ್ಲಿ ಕುದುರೆ ಕಾಳಗ ದೃಶ್ಯ, ಕೆಳಗಡೆ ಕೆಲವರು ಬಿದ್ದಿರುವರು, ಮೇಲಿನ ಭಾಗ ಒಡೆದಿದೆ. ಇದು ೧೨ನೇ ಶತಮಾನದ್ದಾಗಿದೆ. (ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೧೧, ಪುಟ-೩೨೦)

ಜಮಖಂಡಿ ತಾಲೂಕಿನ ಕಟಗೇರಿಯ ದುರ್ಗಾ ದೇವಾಲಯದ ಮುಂಭಾಗದ ಗೋಗ್ರಹಣ ಶಿಲ್ಪ ಕೆಳಗಡೆ ವೀರನ ಬಲಕ್ಕೆ ದನಕರುಗಳಿವೆ. ವೈರಿಯನ್ನು ಬಿಲ್ಲಿನಿಂದ ತಡೆ ಹಿಡಿದು ನಿಂತಿದ್ದಾನೆ. ಎರಡರಲ್ಲಿ ವೀರನು ವಿಮಾನದಲ್ಲಿ ಕುಳಿತಿದ್ದು, ಬದಿಗೆ ಅದನ್ನು ಹಿಡಿದು ನಿಂತಿದ್ದಾನೆ. ಅಪ್ಸರೆಯರಿದ್ದಾರೆ. ಮೇಲ್ಗಡೆ ವೀರನು ಶಿವಲಿಂಗಕ್ಕೆ ಕೈಮುಗಿದು ಕುಳಿತಿದ್ದಾನೆ. ಬಲಕ್ಕೆ ಕುಳಿತ ನಂದಿಯಿದೆ. ಇದು ೧೨ನೇ ಶತಮಾನದ್ದಾಗಿದೆ. ಅಲ್ಲಿಯ ಇನ್ನೊಂದು ಲವ-ಕುಶರೆಂದು ಕರೆಯುವ ವೀರಗಲ್ಲಿನಲ್ಲಿ ವೀರ ಕುದುರೆ ಸವಾರಿ ಮಾಡುತ್ತ ವೈರಿ ಪಡೆಗಳ ವಿರುದ್ಧ ಕಾದಾಡುತ್ತಿದ್ದಾನೆ. ಟೊಂಕದಲ್ಲಿ ಕಠೋರಿಯನ್ನು ಕಟ್ಟಿದ್ದಾನೆ. ಇದು ೧೨ನೇ ಶತಮಾನದ್ದಾಗಿದೆ. (ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೧೧, ಪುಟ-೩೨೧)

ಗದಗ ಜಿಲ್ಲೆಯ ಬೆಟಗೇರಿಯಲ್ಲಿ ಗೋಗ್ರಹಣದ ವೀರಗಲ್ಲು ಶಿಲ್ಪದಲ್ಲಿ ವೀರನು ಗೋವುಗಳನ್ನು ಕದ್ದೊಯ್ಯುವ ಇಬ್ಬರು ಕಳ್ಳರ ವಿರುದ್ಧ ಹೋರಾಡುತ್ತಿರವನು. ವೀರನು ತನ್ನ ಮುಂದೆ ಬಿಲ್ಲನ್ನು ಹಿಡಿದು ಬಾಣ ಪ್ರಯೋಗಿಸುತ್ತಿದ್ದು, ವೈರಿ ಕಳ್ಳನು ಭರ್ಚಿಯಿಂದ ಬಿಲ್ಲಿಗೆ ಇರಿದು ನಿಂತಿದ್ದಾನೆ. ವೈರಿಗಳ ಕಡೆ ಎರಡು ಆಕಳು ಹೋಗುತ್ತಿವೆ. ಸ್ವರ್ಗಾರೋಹಣದಲ್ಲಿ ಮಡಿದ ವೀರನನ್ನು ಅಪ್ಸರೆಯರು ಒಯ್ಯಲು ಹಾರುತ್ತಿರುವರು. ಸ್ವರ್ಗದಲ್ಲಿ ವೀರ ಕೈಮುಗಿದು ಶಿವಲಿಂಗದ ಮುಂದೆ ಕುಳಿತಿದ್ದು, ಶಿವಲಿಂಗದ ಎಡಕ್ಕೆ ಮುಖಮಾಡಿ ನಿಂತಿರುವುದು ವಿಶೇಷವಾಗಿದೆ. (ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೦೬, ಪುಟ-೩೮೪)

ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರ ಶಿಲ್ಪದಲ್ಲಿ ವೀರನು ಬಿಲ್ಲನ್ನು ಹಿಡಿದು ಕಳ್ಳರಿಬ್ಬರ ಸಂಗಡ ಹೋರಾಡುತ್ತಿದ್ದು, ಆತನ ಬಲಗಡೆ ವೀರನು ಬಿಡಿಸಿದ ಆಕಳುಗಳು ನಿಂತಿವೆ. ಸ್ವರ್ಗಾರೋಹಣದಲ್ಲಿ ವಿಮಾನದಲ್ಲಿ ಮಡಿದ ವೀರ ಕುಳಿತಿದ್ದಾನೆ. ವಿಮಾನದ ಮೇಲ್ಭಾಗ ಅರ್ಧವೃತ್ತಾಕಾರವಾಗಿದೆ. ಈ ವಿಮಾನಕ್ಕೆ ಕೆಳಗಡೆ ಮತ್ತು ಮೇಲ್ಗಡೆ ಕೋಲುಗಳನ್ನು ಜೋಡಿಸಲಾಗಿದೆ. ಅಪ್ಸರೆಯರು ಅವುಗಳನ್ನು ಹೊತ್ತು ಹಾರುತ್ತಿರುವುದು ಗಮನೀಯ. ಸ್ವರ್ಗದಲ್ಲಿ ವೀರ, ಯತಿ, ಶಿವಲಿಂಗ, ನಿಂತ ಆಕಳುಗಳಿವೆ. ಅದರ ಒಳಗಿನ ಮೇಲ್ಭಾಗದಲ್ಲಿ ವಿಮಾನ ಮಾದರಿಯನ್ನು ತೋರಿಸಿರುವುದು ಗಮನೀಯವಾಗಿದೆ. (ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೦೬, ಪುಟ-೩೮೪)

ಇದೇ ತಾಲೂಕಿನ ನಿಡಗುಂದಿಯ ಒಂದು ಶಿಲ್ಪದಲ್ಲಿ ಕಳ್ಳರ ವಿರುದ್ಧ ಹೋರಾಡುವ ವೀರನ ಬಲಗಡೆ ಆಕಳುಗಳನ್ನು ಚಿತ್ರಿಸಲಾಗಿದೆ. ಕಳ್ಳರ ಗುಂಪಿನಲ್ಲಿ ಕುದುರೆ ಸವಾರರೂ ಇರುವುದು ಅಪ್ಸರೆಯರು ವಿಮಾನದ ಮೇಲ್ಭಾಗವನ್ನು ಹಿಡಿದು ಒಯ್ಯುತ್ತಿರುವುದು ಕಾಣಬಹುದು. ಇಲ್ಲಿಯ ಇನ್ನೊಂದು ಗೋಗ್ರಹಣದ ಶಿಲ್ಪದಲ್ಲಿ ಮಡಿದ ವೀರನನ್ನು ಅಪ್ಸರೆಯರು ತಮ್ಮ ಹೆಗಲಿಗೆ ಕೈಗಳನ್ನು ಹಾಕಿ ಹಾರುತ್ತಿರುವರು.

ಇದೇ ತಾಲೂಕಿನ ಲಕ್ಷ್ಮೇಶ್ವರ ವೀರಗಲ್ಲಿನಲ್ಲಿ ಬಿಲ್ಲುಗಳನ್ನು ಹಿಡಿದು ವೀರ-ಕಳ್ಳ ಕಾದಾಡುತ್ತಿದ್ದು, ವೀರನ ಬಲಗಡೆ ಹಸುಗಳು ನಿಂತಿವೆ. ಜೊತೆಯಲ್ಲಿ ಒಬ್ಬ ವೀರನ ಪರಿವಾರದವನಿರುವುದು ವಿಶೇಷವಾಗಿದೆ. ವಿಮಾನದಲ್ಲಿ ಮಡಿದ ವೀರನು ಕೈಮುಗಿದು ಕುಳಿತಿದ್ದಾನೆ. ಒಬ್ಬಳು ಇನ್ನೊಂದು ಕೈಯಲ್ಲಿ ಪಾನ ಕೊಡುವನ್ನು ಹಿಡಿದಿರುವುದು ವಿಶೆಷವಾಗಿದೆ. (ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೦೬, ಪುಟ-೩೮೪) ಈ ಜಿಲ್ಲೆಯ ಒಂದು ಶಿಲ್ಪದಲ್ಲಿ ಹೋರಾಟದ ಎರಡು ದೃಶ್ಯಗಳಿವೆ. ಕೆಳಹಂತದಲ್ಲಿ ಕಳ್ಳರಿಂದ ಹೋರಾಡಿ ಬಿಡಿಸಿಕೊಂಡ ನಾಲ್ಕು ಆಕಳುಗಳು ವೀರನ ಬಲಗಡೆಯಲ್ಲಿವೆ. ಕಳ್ಳರ ವಿರುದ್ಧ ತನ್ನ ಬಿಲ್ಲನ್ನು ಹಿಡಿದಿದ್ದಾನೆ. ಎರಡನೆಯ ಹಂತದಲ್ಲಿ ವೀರ ತನ್ನ ಪರಿವಾರದೊಂದಿಗೆ ಕಳ್ಳರೊಂದಿಗೆ ಹೋರಾಡುತ್ತಿದ್ದಾನೆ. ಕಳ್ಳರ ಬಿಟ್ಟ ಬಾಣಗಳು ಅವನು ಅವರ ವಿರುದ್ಧ ಹಿಡಿದ ಬಿಲ್ಲುಗೆ ನೆಟ್ಟಿವೆ. ಅವನು ಸೊಂಟಕ್ಕೆ ಪಂಚೆಯನ್ನು ತೊಡೆಯ ಮೇಲಿನವರೆಗೆ ಕಟ್ಟಿದ್ದಾನೆ. ಇನ್ನುಳಿದ ಎರಡು ಹಂತಗಳಲ್ಲಿ ಮಡಿದ ವೀರನನ್ನು ವಿಮಾನದಲ್ಲಿ ಕೂಡಿಸಿಕೊಂಡು ಅಪ್ಸರೆಯರು ಒಯ್ಯುವ ರೀತಿಯಲ್ಲಿ ನಿಂತಿದ್ದಾನೆ. ಮೇಲಿನ ಸ್ವಲ್ಪ ಭಾಗ ಒಡೆದಿದೆ.

ಚಿಕ್ಕಮಣ್ಣೂರಿನ ಶಿಲ್ಪದಲ್ಲಿ ವೀರನು ತನ್ನ ಪರಿವಾರದೊಂದಿಗೆ ಕಳ್ಳರ ವಿರುದ್ಧ ಹೋರಾಡುತ್ತ ನಿಂತಿದ್ದಾನೆ. ಕುದುರೆ ಸವಾರಿ ಮಾಡುವ ಒಬ್ಬ ಕಳ್ಳನ ಕುದುರೆಗೆ ಕತ್ತಿಯಿಂದ ಇರಿದು ನಿಂತಿದ್ದಾನೆ. ಆತನ ಪಾದದ ಕೆಳಗಡೆ ಕೆಲವರು ಸತ್ತು ಬಿದ್ದಿರುವರು. ಬಲಗಡೆಗೆ ಕೆಲವು ಆಕಳುಗಳ ಚಿತ್ರಗಳನ್ನು ತೋರಿಸಿರುವುದು ವಿಶೇಷವೆನ್ನಬಹುದು. ವಿಮಾನದಲ್ಲಿ ಮಡಿದ ವೀರನನ್ನು ಕೂಡಿಸಿ ಅಪ್ಸರೆಯರು ಅದನ್ನು ಹಿಡಿದು ಆಕಾಶದಲ್ಲಿ ಹಾರುತ್ತಿರುವುದು ಗಮನೀಯ. ಸ್ವರ್ಗದಲ್ಲಿ ವೀರನು ಕೈಮುಗಿದು ಶಿವಲಿಂಗ ಮತ್ತು ಯತಿಯ ಬಲಗಡೆ ಕುಳಿತಿದ್ದಾನೆ. ಶಿವಲಿಂಗಕ್ಕೆ ಮುಖಮಾಡಿ ನಂದಿ ಕುಳಿತಿದ್ದು ಮೇಲ್ಗಡೆ ಕುಳಿತ ಗಣೇಶನನ್ನು ಚಿತ್ರಿಸಲಾಗಿದೆ. ಮೇಲ್ಭಾಗದಲ್ಲಿ ವಿಮಾನವನ್ನು ಕಂಡರಿಸಲಾಗಿದೆ. ಅವರ ಬದಿಗಳಲ್ಲಿ ಎರಡು ವೃತ್ತಾಕಾರಗಳಿವೆ. (ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೦೬, ಪುಟ-೩೮೫)

ಕರಮಡಿ ಶಿಲ್ಪದಲ್ಲಿ ಮಡಿದ ವೀರ ಶಿವಲಿಂಗದ ಕಡೆ ಮುಖಮಾಡಿ ಕುಳಿತಿದ್ದಾನೆ. ಯತಿ ಶಿವಲಿಂಗದ ಎಡಕ್ಕೆ ನಿಂತು ಪೂಜಿಸುತ್ತಿರುವುದು ಗಮನೀಯವಾಗಿದೆ.

ಶಿರಹಟ್ಟಿ ತಾಲೂಕಿನ ದುಗ್ಗಸಹಳ್ಳಿ ಶಿಲ್ಪದಲ್ಲಿ ಕುದುರೆ ಸವಾರಿ ಮಾಡುತ್ತ ಕಳ್ಳರೊಂದಿಗೆ ನಿಂತ ವೀರ ಬಲಗಡೆಗೆ ಮತ್ತು ಈ ಪಟ್ಟಿಕೆಯ ಮೇಲೆ ಸಾಲಾಗಿ ಆಕಳುಗಳನ್ನು ಚಿತ್ರಿಸಿರುವುದು ನೋಡಬಹುದು.

ಬೆಂತೂರಿನ ವೀರಗಲ್ಲಿನಲ್ಲಿ ಕಲ್ಯಾಣ ಚಾಲುಕ್ಯ ದೊರೆ ಮೊದಲನೆಯ ಸೋಮೇಶ್ವರನ ಆಳ್ವಿಕೆಯಲ್ಲಿ ಗೋಗ್ರಹಣದಲ್ಲಿ ಮಡಿದ ವೀರನ ವಿಷಯವಿದೆ. ಕಲ್ಯಾಣ ಚಾಲುಕ್ಯ ದೊರೆ ಆರನೆಯ ವಿಕ್ರಮಾದಿತ್ಯ ಉತ್ತರ ಭಾರತದ ದಿಗ್ವಿಜಯದಿಂದ ಮರಳಿ ರಾಜಧಾನಿ ಕಲ್ಯಾಣಕ್ಕೆ ಬಂದನು. ಪುಲಿಗೆರೆ-೩೦೦ ನಾಡನ್ನು ಆಳುತ್ತಿದ್ದ ಲಕ್ಷ್ಮರಸನೆಂಬುವನು ಈ ಯುದ್ಧದಲ್ಲಿ ಭಾಗವಹಿಸಿದನು. ಅಲ್ಲಿ ತ್ರಿಪುರಿಯ ಕಳಚೂರ್ಯರನ್ನು ಸೋಲಿಸಿ ಅವರಿಂದ ವಶಪಡಿಸಿಕೊಂಡಿದ್ದ ವೈರಿ ಅರಸನ ಪಟ್ಟದ ಆನೆ, ಕುದುರೆ, ಬಿಳಿ ಛತ್ರಿ ಮುಂತಾದವನು ಅರಸ ವಿಕ್ರಮಾದಿತ್ಯನಿಗೆ ಅರ್ಪಿಸಿದ ಸಂಗತಿ ಕುತೂಹಲಕಾರಿಯಾಗಿದೆ. ವೈರಿಗಳಿಂದ ಸಂಗ್ರಹಿಸಿದ ಪಟ್ಟದ ಕುದುರೆ, ಆನೆ, ಛತ್ರಿ ಇತ್ಯಾದಿಗಳನ್ನು ಅರಸನಿಗೆ ಮರಳಿಸಬೇಕೆಂಬುದು ನಿಯಮ (ಭಾರತೀಯ ಧರ್ಮಶಾಸ್ತ್ರ, ಪಿ.ವಿ. ಕಾಣೆ) ಈ ಮಾತನ್ನು ಇಲ್ಲಿ ನೆನೆಯಬಹುದು.

ಕ್ರಿ.ಶ. ೧೦೦೯ರ ಹುಯಿಲಗೋಳ ವೀರಗಲ್ಲು ಶಾಸನದಲ್ಲಿ ವೀರನೊಬ್ಬ ಯುದ್ಧದಲ್ಲಿ ಮಡಿದ ವಿವರವಿದೆ. ಅಲ್ಲದೆಯೇ ಕ್ರಿ.ಶ. ೧೨ನೇ ಶತಮಾನದ ಶಾಸನದ ಯುದ್ಧದಲ್ಲಿ ಮಾರಸಿಂಗಯ್ಯನೆಂಬುವನು ಮಡಿದ ವಿವರವಿದೆ. ಹೊಂಬಳದಲ್ಲಿ ಕ್ರಿ.ಶ. ೧೨ನೇ ಶತಮಾನದ ಎರಡು ಶಾಸನಗಳಿವೆ. ಒಂದರಲ್ಲಿ ಮುಗುಡು ಮಲ್ಲಯ್ಯ ನಾಯಕನ ವೀರ ಮರಣದ ಉಲ್ಲೇಖವಿದೆ. (ಎಸ್.ಐ.ಐ. ೧೫, ೫೨೬, ೫೬೨, ೫೧೮) ಕ್ರಿ.ಶ. ೧೨೪೯ರ ಯಾದವ ಕನ್ನರ ವೀರಗಲ್ಲು ಶಾಸನದಲ್ಲಿ ಚಾವುಂಡ ದಂಡೇಶನ ಸೇವಕನಾದ ಆಚಿದೇವನ ಹೆಂಡತಿ ಲಕ್ಕಿಸೆ ಮತ್ತು ಆಕೆಯ ಮಕ್ಕಳ ವೀರ ಮರಣ ವಿವರವಿದೆ. (ಎಸ್.ಐ.ಐ., ೧೫, ೨೧೫) ಯಾದವರ ರಾಮಚಂದ್ರನ ಕಾಲ ಕ್ರಿ.ಶ. ೧೨೮೨ರ ವೀರಗಲ್ಲು ಶಾಸನದಲ್ಲಿ ಮುಮ್ಮಡಿ ಸಿಂಗೆ ನಾಯಕನ ವೀರಮರಣದ ವಿವರವಿದೆ. (ಎಸ್.ಐ.ಐ., ೧೫, ೨೨೨) ಕ್ರಿ.ಶ. ೧೧೮೪ ಮತ್ತು ಕ್ರಿ.ಶ. ೧೨೭೫ರ ಮುಳಗುಂದದ ವೀರಗಲ್ಲುಗಳಲ್ಲಿ ಕ್ರಮವಾಗಿ ಚಂದ್ರಯ್ಯ ಮತ್ತು ಅಮೃತಯ್ಯ ಎಂಬುವರ ವೀರಮರಣ ವಿವರವಿದೆ. (ಎಸ್.ಐ.ಐ., ೧೫,೬೧೫,೧೩೧) ಕ್ರಿ.ಶ. ೧೧೯೭ರ ನರೇಗಲ್ಲ ವೀರಗಲ್ಲಿನಲ್ಲಿ ಹೊಯ್ಸಳ ಇಮ್ಮಡಿ ವೀರ ಬಲ್ಲಾಳನ ಕಾಲದ ಹಂಪನಾಯಕನ ವೀರ ಮರಣದ ವಿವರವಿದೆ. (ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೦೬, ಪುಟ-೩೮೬)

ಕುಡಿತಿನಿ ಪ್ರದೇಶದ ಕುರುಗೋಡಿನ ಒಂದು ಶಾಸನದಲ್ಲಿ ದೇವಗಾವುಂಡ ಮತ್ತು ಮಲ್ಲಗಾವುಂಡ ಎಂಬುವವರು ದನಗಳನ್ನು ರಕ್ಷಿಸಲು ಹೋಗಿ ಪ್ರಾಣವನ್ನು ತೆರುತ್ತಾರೆ. ಇವರ ಹೆಣಗಳನ್ನು ತುಳಿದುಕೊಂಡೇ ದನಗಳು ಊರಿಗೆ ಮರಳುತ್ತವೆ. (ಕನ್ನಡ ಶಾಸನಶಿಲ್ಪ, ಪರಮಶಿವಮೂರ್ತಿ ಡಿ.ವಿ., ೧೯೯೯, ಪುಟ-೭೯)

ಚೊಳಚಗುಡ್ಡ ಕಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿರುವ ಕ್ರಿ.ಶ. ೧೪ನೇ ಶತಮಾನದ ತಜುಗಾಳಗ ವೀರಗಲ್ಲು ಶಾಸನವು ಭುವನಾಧೀಶ್ವರಿ (ಬನಶಂಕರಿ)ಯ ಮೂವರು ಗೊರವರು ಮತ್ತು ಜಂಗಮಯಿವೋಜುಗಳು ಅಡಿಕೆ ಫಲವನ್ನು ಕೊಂಡು ಸರ್ವಮಾನ್ಯವಾಗಿ ಯಾರಿಗೂ

ದಾನ ನೀಡಿದ ವಿಷಯವಿದೆ. ಬಹುಶಃ ಈ ದಾನವನ್ನು ಹೋರಾಟದಲ್ಲಿ ಮಡಿದ ವೀರನ ಕುಟುಂಬಕ್ಕೆ ನೀಡಿರಬಹುದು. ಹೆಚ್ಚಿನ ವಿವರ ಹಾಳಾಗಿದೆ. ಈ ವೀರಗಲ್ಲು ಮೂರು ಹಂತದ ಶಿಲ್ಪವನ್ನು ಹೊಂದಿದ್ದು, ಮೊದಲ ಹಂತದ ಬಲಭಾಗದಲ್ಲಿ ದನಗಳನ್ನು, ಎಡಭಾಗದಲ್ಲಿ ಶತ್ರುವಿನೊಂದಿಗೆ ಹೋರಾಡುತ್ತಿರುವ ವೀರನನ್ನು ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ವೀರನನ್ನು ಒಯ್ಯುತ್ತಿರುವ ಅಪ್ಸರೆಯರು ಮೂರನೆಯ ಹಂತದಲ್ಲಿ ಶಿವಲಿಂಗದ ಬಳಿ ಕುಳಿತಿರುವ ವೀರನನ್ನು ಚಿತ್ರಿಸಲಾಗಿದೆ. ಇಲ್ಲಿ ವೀರನ ಶೌರ್ಯದ ಭಂಗಿ, ಆಭರಣ, ಉಡುಪು ಮತ್ತು ಆಯುಧಗಳು ಸ್ಪಷ್ಟವಾಗಿ ಕಾಣುವಂತೆ ಚಿತ್ರಿಸಲಾಗಿದ್ದು, ಸುಂದರವಾದ ಶಿಲ್ಪವಿನ್ಯಾಸದಿಂದ ಕೂಡಿದೆ. (ಕವಿಹಂಪಿ. ಶಾ.ಸಂ-೯-ಬೀಳಗಿ, ೩೪)

ಚಿರಂತಿಗುಡಿಯ ಹನುಮಂತದೇವರು ಗುಡಿಯ ಮುಂದಿನ ಮೊದಲನೆಯ ವೀರಗಲ್ಲಿನ ಮೇಲೆ ಐಹೊಳೆ ಐನೂರ್ವ್ವರು ತುರುಗಾಳಗದಲ್ಲಿ ಸತ್ತ? ಬಿಲಯನಾಯಕನಿಗೆ ಊರ ಪಶ್ಚಿಮಕ್ಕೆ ೧೨ ಮತ್ತರು ಭೂಮಿ ಬಿಟ್ಟ ಉಲ್ಲೇಖವಿದೆ. (ಕವಿಹಂಪಿ.ಶಾ.ಸಂ-೯-ಹುನಗುಂದ,೩೮)

ರೋಣ ತಾಲೂಕಿನ ಚಿಕ್ಕಮಣ್ಣೂರಿನ ಗ್ರಾಮದ ಗೋಗ್ರಹಣದ ವೀರಗಲ್ಲು. ಇದು ಮೂರು ಹಂತಗಳಿಂದ ಕೂಡಿದ್ದು, ಕೆಳಗಿನ ಮೊದಲನೆಯ ಹಂತದಲ್ಲಿ ಬುದ್ಧನು ವೀರರ ನಡುವೆ ಧ್ಯಾನಾಸಕ್ತನಾಗಿ ಆಶೀರ್ವಾದ ಮುದ್ರೆಯಲ್ಲಿ ಕುಳಿತಿರುವನು. ಆತನ ಬದಿಗಳಲ್ಲಿ ನಿಂತ ವೀರರ ಕೈಗಳಲ್ಲಿ ಉದ್ದನೆಯ ಕತ್ತಿಗಳಿವೆ. ಎಡಅಂಚಿನಲ್ಲಿ ಮೂರು ಆಕಳುಗಳಿವೆ. ವೇದಿಕೆಯ ಮೇಲೆ ಬುದ್ಧ ಕುಳಿತಿರುವನು. ಎರಡನೆಯ ಮತ್ತು ಮೂರನೆಯ ಹಂತಗಳಲ್ಲಿ ಸಾಮಾನ್ಯ ಚಿತ್ರಗಳಿವೆ. ,ಮಡಿದ ವೀರನನ್ನು ವಿಮಾನದಲ್ಲಿ ಕೂಡಿಸಿಕೊಂಡು ಅಪ್ಸರೆಯರು ಒಯ್ಯುವುದು ಮತ್ತು ಮೇಲ್ಗಡೆ ಶಿವಲಿಂಗದ ಬದಿಗಳಲ್ಲಿ ಯತಿ ಮತ್ತು ಮಡಿದ ವೀರರಿರುವರು ಮೇಲೆ ಕುಳಿತ ನಂದಿಯಿದೆ. ಶಿವಲಿಂಗಕ್ಕೆ ಮೂರು ಚೌಕಾಕಾರದ ಪಾಣಿ ಬಟ್ಟಲುಗಳಿವೆ. (ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ ಆರ್., ೨೦೦೬, ಪುಟ-೩೯೩)

ಮುಂಡರಗಿ ತಾಲೂಕಿನ ಗುಮ್ಮಗೋಳದ ಗೋಗ್ರಹಣದ ವೀರಗಲ್ಲಿನಲ್ಲಿ ಕೆಳಹಂತದಲ್ಲಿ ಬಲಗಡೆಗೆ ಹಸುಗಳನ್ನು ಚಿತ್ರಿಸಲಾಗಿದೆ. ವೀರನು ವೈರಿಯ ವಿರುದ್ಧ ಹೋರಾಡುತ್ತ ನಿಂತಿದ್ದಾನೆ. ಇಬ್ಬರು ಬಿಲ್ಲುಗಳನ್ನು ಎದುರುಬದುರಾಗಿ ಹಿಡಿದಿದ್ದಾರೆ. ವೀರನ ಇನ್ನೊಂದು ಕೈಯಲ್ಲಿ ಬಾಗಿದ ಕತ್ತಿಯಿದೆ. ವೈರಿ ಬಾಣ ಪ್ರಯೋಗಿಸುತ್ತಿರುವನು. ಅವರು ಮುಡಿಗಳನ್ನು ತಲೆಯ ಮೇಲೆ ಕಟ್ಟಿದ್ದಾರೆ. ಮೇವುಂಡಿ ಗೋಗ್ರಹಣದ ವೀರಗಲ್ಲು ಶಿಲ್ಪದಲ್ಲಿ ವೀರ ಮತ್ತು ವೈರಿಗಳ ಹೋರಾಟದ ಬಲಗಡೆ ಆಕಳುಗಳಿವೆ. ಮೇಲೆ ವೀರನು ವಿಮಾನದಲ್ಲಿ ಕುಳಿತಿದ್ದಾನೆ. ಅಪ್ಸರೆಯರು ವಿಮಾನವನ್ನು ಒಯ್ಯಲು ನಿಂತಿದ್ದಾರೆ.

## ೮.೨. ಶಾಸನರಹಿತ ತುರುಗೋಳ್ ವೀರಗಲ್ಲುಗಳು :

ತುರುಗಾಳಗದ ವೀರಗಲ್ಲುಗಳ ಚರಿತ್ರೆಯನ್ನು ರಚಿಸುವಾಗ ಅತ್ಯಂತ ಪ್ರಾಚೀನ ತುರುಗಾಳಗದ ಶಿಲ್ಪಿಗಳು ಕೋಲಾರ ಪರಿಸರದಲ್ಲಿ ದೊರೆಯುತ್ತವೆ. ಕೋಲಾರ ತಾಲೂಕಿನ ವೆಲಗಲಬುರೆ ಮತ್ತು ನೆನಮನಹಳ್ಳಿ ಗ್ರಾಮಗಳ ಕ್ರಿ.ಶ.೬ನೇ ಶತಮಾನದ ಅವಧಿಯ ಪೂರ್ವದ ಹಳಗನ್ನಡದಲ್ಲಿರುವ ತುರುಗಾಳಗದ ವೀರಗಲ್ಲುಗಳು ಪ್ರಾಚೀನತೆಯ ದೃಷ್ಟಿಯಿಂದ ಮೊದಲಿನವುಗಳೆಂದು ಕರೆಸಿಕೊಳ್ಳುತ್ತವೆ. (ಎ.ಕ. ಸಂ–X, ಕೋಲಾರ ೧೮೨. ೨೨೬. ವೆಲಗಲಬುರೆ ನೆನಯನಹಳ್ಳಿ

ಚಿಂಚೋಳಿ ತಾಲೂಕಿನ ಹಲ್‌ಚೇರಾ ಗ್ರಾಮದ ಅಂಬಿಗರ ಚೌಡಯ್ಯ ಈಶ್ವರ ಮಂದಿರದೊಳಗೆಯಿರುವ ೭ನೆಯ ಶತಮಾನದ ತುರುಗೋಳ್ ವೀರಗಲ್ಲು. ಇದು ಬಾದಾಮಿ ಚಾಲುಕ್ಯರ ಕಾಲದ ಎರಡು ಸ್ತರದ ತುರುಗೋಳ್ ವೀರಗಲ್ಲಾಗಿದೆ. ಕೆಳಸ್ತರದಲ್ಲಿ ಎಡಗೈಯಲ್ಲಿ ಗುರಾಣಿ ಹಿಡಿದಂತೆ, ಬಲಗೈಯಲ್ಲಿ ಖಡ್ಗದಿಂದ ಶತ್ರುವಿಗೆ ಇರಿಯುತ್ತಿರುವ, ಉದ್ದನೆಯ ಚಾಕು ಸೊಂಟದಲ್ಲಿಟ್ಟು ಕೂದಲು ಇಳಿಬಿಟ್ಟಂತಿದೆ. ಎರಡನೇ ಸ್ತರದ ಮೇಲಿನ ಒಂದು ಸಾಲಿನಲ್ಲಿ ಆಕಳುಗಳನ್ನು ಸಾಲಾಗಿ ತೋರಿಸಿದೆ. ಅದರ ಮೇಲೆ ಲಿಂಗೈಕ್ಯವಾದ ಅಂಜಲಿ ಮುದ್ರೆಯ ವೀರ ಮತ್ತು ಲಿಂಗದ ಶಿಲ್ಪವಿದೆ.

ಗದಗ ಜಿಲ್ಲೆಯ ರೋಣ ತಾಲೂಕಿನ ಬೆಳವಣಿಕೆ ಗ್ರಾಮದ ರಾಷ್ಟ್ರಕೂಟರ ಕ್ರಿ.ಶ.೯೪೩ರ ಅವಧಿಯ ತುರುಗಾಳಗದ ವೀರಗಲ್ಲೊಂದು ಸುಮಾರು ೬ ಅಡಿ ಎತ್ತರವಿದ್ದು ನಾಲ್ಕು ಹಂತಗಳನ್ನು ಹೊಂದಿದೆ. ತೀರ ತಳಭಾಗದಲ್ಲಿ ನೇಗಿಲಿನ ಚಿಹ್ನೆ ಇದ್ದು ಅದರ ಮೇಲಿನ ಮೊದಲ ಪಟ್ಟಿಕೆಯಲ್ಲಿ ಬಿರಿಯ ಎಂಬುವನು ತುರುಗಾಳಗದಲ್ಲಿ ಹೋರಾಡುತ್ತಿರುವ ದೃಶ್ಯವಿದೆ. ಶತ್ರುವಿನ ಹೆಣದ ಮೇಲೆ ತನ್ನ ಬಲಗಾಲನ್ನು ಮೆಟ್ಟಿ ಇತರರೊಂದಿಗೆ ಹೋರಾಡುತ್ತಿರುವ ವೀರನು ಉದ್ದನೆಯ ಬಿಲ್ಲು ಬಾಣವನ್ನು ಹಿಡಿದಿದ್ದಾನೆ. ಶತ್ರುಗಳು ಕೂಡ ಬಿಲ್ಲು ಬಾಣಗಳನ್ನು ಪ್ರಯೋಗಿಸುತ್ತಿದ್ದಾರೆ. ವೀರನ ಹಿಂಭಾಗದಲ್ಲಿ ಏಳು ದನಗಳನ್ನು ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ವೀರನು ಇಬ್ಬರು ಅಪ್ಸರೆಯರ ಹೆಗಲ ಮೇಲೆ ಕೈಹಾಕಿಕೊಂಡು ಮೋಡಗಳ ನಡುವೆ ಸ್ವರ್ಗ ಪ್ರಯಾಣ ಮಾಡುತ್ತಿರುವ ದೃಶ್ಯವಿದೆ. ಮೂರನೇ ಹಂತದಲ್ಲಿ ಮಂಟಪದೊಳಗೆ ವೀರನು ಕುಳಿತಿದ್ದು. ಅವನ ಎಡಬಲದಿ ಚಾಮರಧಾರಿತ ಇರುವರು. ನಾಲ್ಕನೇ ಹಂತದಲ್ಲಿ ಶಿವಲಿಂಗ ನಂದಿ ಹಾಗೂ ದೇವಾಲಯದ ಶಿಖರದ ದೃಶ್ಯವಿದೆ. ಇಡೀ ಶಾಸನ ಶಿಲ್ಪವು ಹೋರಾಟದಲ್ಲಿ ಮಡಿದ ವೀರರನ್ನು ಪ್ರಧಾನವಾಗಿ ಚಿತ್ರಿಸಿರುವುದು. ಅವನ ಬಗೆಗಿನ ಗೌರವವನ್ನು ಸೂಚಿಸುತ್ತದೆ.

ಗದಗ ಜಿಲ್ಲೆಯ ರೋಣ ತಾಲೂಕಿನ ನರೇಗಲ್ಲು ಗ್ರಾಮದ ಒಂದು ತುರುಗೋಳ್ ವೀರಗಲ್ಲು ಶಿಲ್ಪದ ದೃಷ್ಟಿಯಿಂದ ಬಹಳ ಅಪರೂಪವಾದುದಾಗಿದೆ. ಮೊದಲ ಹಂತದಲ್ಲಿ ವೀರನು ಶತ್ರುಗಳ ಜೊತೆ ಹೋರಾಡುತ್ತಿದ್ದಾನೆ. ಇವನು ಹಾಗೂ ಇವನ ಕಡೆಯ ಇಬ್ಬರು ಬಿಲ್ಲು ಬಾಣಗಳನ್ನು ಹಿಡಿದಿದ್ದಾರೆ. ಶತ್ರುಪಕ್ಷದವರು ಆಕ್ರಮಣ ಮಾಡಲು ಕುದುರೆಗಳ ಮೇಲೆ ಬಂದಿದ್ದಾರೆ. ಒಂದು

ಕುದುರೆ ಸತ್ತುಬಿದ್ದಿದೆ. ಎಲ್ಲರ ಕೈಯಲ್ಲೂ ಈಟಿಗಳಿವೆ. ಎರಡನೇ ಹಂತದಲ್ಲಿ ಆರು ಜನರು ಎಂಟು ದನಗಳನ್ನು ಓಡಿಸಿಕೊಂಡು ಹೋಗುತ್ತಿದ್ದಾರೆ. ಇಲ್ಲಿ ದನಗಳು ದೊಡ್ಡದಾಗಿ ಚಿತ್ರಿತವಾಗಿವೆ. ಅವು ಓಡುತ್ತಿರುವ ಹಾಗೆ ಶಿಲ್ಪದಲ್ಲಿ ಬಿಡಿಸಲಾಗಿದೆ. ಮುಂದೆ ಓಡುತ್ತಿರುವ ದನದ ಬಳಿ ಒಂದು ಕರುವೂ ಇದೆ, ಆ ಕರುವನ್ನು ಒಂದು ದನವು ನೆಕ್ಕುತ್ತಿದೆ. ಶಿಲ್ಪಿಯ ಕಲ್ಪನೆ ಬಹಳ ಅಮೋಘವಾಗಿದೆ. ಮೂರನೇ ಹಂತದಲ್ಲಿ ಅನೇಕ ವಾದ್ಯಗಾರರೊಡನೆ ಅಪ್ಸರೆಯರೊಡನೆ ವೀರನು ಸ್ವರ್ಗಕ್ಕೆ ಹೊರಟಿದ್ದಾನೆ. ನಾಲ್ಕನೇ ಹಂತದಲ್ಲಿ ವೀರ ಸ್ವರ್ಗದಲ್ಲಿ ಕುಳಿತಿದ್ದಾನೆ.

ಗದಗ ಜಿಲ್ಲೆಯ ಲಕ್ಕುಂಡಿ ತಾಲೂಕಿನ ಕ್ರಿ.ಶ.ಸು. ೧೧ನೇ ಶತಮಾನದ ಒಂದು ತುಱುಗೋಳ್ ವೀರಗಲ್ಲಿನಲ್ಲಿ ಕೆಳಹಂತದಲ್ಲಿ ಹೋರಾಟದ ಚಿತ್ರವಿದ್ದು, ಹೋರಾಡುವವರ ತಲೆಯ ಮೇಲಿನ ಪಟ್ಟಿಕೆಯಲ್ಲಿ ದನಗಳನ್ನು ಚಿತ್ರಿಸಲಾಗಿದೆ. ವೀರನು ಶತ್ರುಗಳ ರುಂಡಗಳನ್ನು ಕಡಿದು ನೆಲಕ್ಕೆ ಚೆಲ್ಲಾಡಿದ್ದಾನೆ, ಎರಡನೇ ಹಂತದಲ್ಲಿ ವೀರನು ಅಪ್ಸರೆಯರೊಡನೆ ಸ್ವರ್ಗಕ್ಕೆ ಮೋಡಗಳ ನಡುವೆ ಹೋಗುತ್ತಿರುವಂತೆ ಚಿತ್ರಿಸಲಾಗಿದೆ.

ಗದಗ ಜಿಲ್ಲೆಯ ರೋಣ ತಾಲೂಕಿನ ಕೋಡಿಕೊಪ್ಪ ಗ್ರಾಮದಲ್ಲಿರುವ ಕ್ರಿ.ಶ. ೧೧ನೇ ಶತಮಾನದ ತುರುಗಾಳಗದ ಈ ವೀರಗಲ್ಲಿನಲ್ಲಿ ಮಧ್ಯದ ಎರಡು ಹಂತಗಳ ಶಿಲ್ಪ ಮಾತ್ರ ದೊರೆತಿದೆ. ಇಷ್ಟೊಂದು ಕ್ರಿಯಾತ್ಮಕವಾಗಿ ಕೆತ್ತಿರುವ ತುರುಗಾಳದ ವೀರಗಲ್ಲು ಮತ್ತೊಂದಿಲ್ಲ. ದನಗಳನ್ನು ಚಿತ್ರಿಸಿರುವ ಹಂತದಲ್ಲಿ ಪ್ರತಿಯೊಂದು ದನವೂ ಬೇರೆ–ಬೇರೆ ಭಂಗಿಗಳಲ್ಲಿ ಚಿತ್ರಿತವಾಗಿದ್ದು, ಒಟ್ಟು ೧೦ ದನಗಳಿವೆ. ಉತ್ಸಾಹದಿಂದ ಮೊಗವನ್ನು ಮತ್ತು ಬಾಲವನ್ನು ಮೇಲಕ್ಕೆತ್ತಿಕೊಂಡು ಓಡುತ್ತಿರುವ ದೃಶ್ಯವಂತೂ ಬಹಳ ಸುಂದರವಾಗಿದ್ದು, ಶಿಲ್ಪಿಯ ಕಲಾ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ. ಇವುಗಳನ್ನು ಹಿಂದೆ ಐದು ಜನ ವೀರರು ಇವುಗಳನ್ನು ಗ್ರಾಮದತ್ತ ತಿರುಗಿಸಿಕೊಂಡು ಹೋಗುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಮೇಲೇ ಹಂತದಲ್ಲಿ ನಾಲ್ಕು ಜನ ಅಪ್ಸರೆಯರೊಡನೆ ವೀರನು ಅವರ ಹೆಗಲ ಮೇಲೆ ಕೈಹಾಕಿಕೊಂಡು ಸ್ವರ್ಗಕ್ಕೆ ಪ್ರಯಾಣಿಸುತ್ತಿದ್ದಾನೆ. ಇವರೆಲ್ಲರೂ ಆಗಸದಲ್ಲಿ ಹಾರುತ್ತಿರುವಂತೆ ಚಿತ್ರಿಸಲಾಗಿದ್ದು ಎಡ ಬಲದಿಂದ ಅನೇಕ ವಾದ್ಯಕಾರರು ವಾದ್ಯ ಭಾರಿಸುತ್ತಿರುವರು. ಈ ವೀರಗಲ್ಲು ಪೂರ್ಣ ಪ್ರಮಾಣದಲ್ಲಿ ದೊರೆತಿಲ್ಲ ಅರ್ಧಭಾಗ ನೆಲದಲ್ಲಿ ಮುಳುಗಿದೆ.

ಚಿಂಚೋಳಿ ಅಗಸಿಕಟ್ಟೆ ಬಳಿಯಿರುವ ೧೧ನೇ ಶತಮಾನದ ತುರುಗೋಳ್ ವೀರಗಲ್ಲು. ತುರುಗೋಳ್ ಸೂಚಿಸುವ ವೀರಗಲ್ಲಾಗಿವೆ. ಬಿಲ್ಲು ಬಾಣಗಳನ್ನು ಹಿಡಿದು ವೀರನ ಶತ್ರುವಿನ ವಿರುದ್ಧ ಹೋರಾಡುತ್ತಿರುವಂತೆ ಕೆಳಸ್ತರದಲ್ಲಿ ಮೂಡಿ ಬಂದಿದೆ. ಚಾಮರಧಾರಿ ಸುರಾಂಗನೆಯರು ವೀರನನ್ನು ವಿಮಾನದಲ್ಲಿ ದೇವಲೋಕಕ್ಕೆ ಒಯ್ಯುವ ದೃಶ್ಯ ಎರಡನೆಯ ಸ್ತರದಲ್ಲಿದೆ. ವೀರನ ಗುರಾಣಿಗೆ ಅನೇಕ ಬಾಣಗಳು ಚುಚ್ಚಿ ಆ ಗುರಾಣಿ ಸೀಳಿ ವೀರನ ಹೊಟ್ಟೆಯಿಂದ ಬೆನ್ನಿಗೆ ತೂರಿಕೊಂಡುಬಂದ ಎರಡು ಬಾಣಗಳು ಶಿಲ್ಪದಲ್ಲಿ ಬಿಂಬಿಸಲಾಗಿದೆ. ಒಬ್ಬ ಶತ್ರುವಿನ ಶವ ಕಾಲ ಕೆಳಗೆ ಬಿದ್ದಂತಿದೆ ವೀರನ ಹಿಂದೆ ನಾಲ್ಕು ಹಸುಗಳ ಶಿಲ್ಪಗಳಿವೆ.

ಹಡಗಲಿ ತಾಲೂಕಿನ ಇಟಗಿಯ ಬೋಳದೇವರ ಗುಡಿಯ ವೀರಗಲ್ಲು ಹಸುಗಳನ್ನು ರಕ್ಷಿಸುವ ಸಲುವಾಗಿ ಶತ್ರುಗಳ ವಿರುದ್ಧ ಹೋರಾಡುತ್ತಿರುವ ವೀರನ ಚಿತ್ರಣವಿದೆ. ಶತ್ರುಗಳ ಚಿತ್ರಗಳು ಭಗ್ನವಾಗಿವೆ. ಹಿಂಭಾಗದಲ್ಲಿ ನಾಲ್ಕು ಹಸುಗಳು ನಿಂತಿವೆ.

ಇದೇ ತಾಲೂಕಿನ ಇಟಗಿ ಗ್ರಾಮದ ಊರ ಹೊರಗಿನ ಕಲ್ಲೇಶ್ವರ ದೇವಾಲಯದ ಮುಂದಿನ ಶ್ರೀಸಿದ್ಧನಗೌಡ ಅವರ ಹೊಲದಲ್ಲಿ ತುರುಗೋಳ್ ವೀರಗಲ್ಲು ಇದ್ದು ಎರಡು ಹಂತಗಳಿಂದ ಕೂಡಿದೆ. ಸುಮಾರು ಮುಕ್ಕಾಲು ಅಡಿ ಎತ್ತರವಿದೆ. ಕೆಳಗಿನ ಹಂತದಲ್ಲಿ ಸಾಲಾಗಿ ನಿಂತಿರುವ ಮೂರು ದನಗಳನ್ನು ಕಂಡರಿಸಲಾಗಿದೆ. ಮೇಲ್ಭಾಗದಲ್ಲಿ ಕುದುರೆಯ ಮೇಲೆ ಕುಳಿತು ಶತ್ರುವಿನ ಚಿತ್ರಣವಿದೆ. ವೀರನೊಬ್ಬ ಬಿಲ್ಲನ್ನು ಹಿಡಿದು ಶತ್ರುವಿನೊಂದಿಗೆ ಹೋರಾಡುತ್ತಿರುವ ಚಿತ್ರಣವಿದೆ.

ಇದೇ ತಾಲೂಕಿನ ಮುದೇನೂರು ರಾಮಲಿಂಗೇಶ್ವರ ದೇವಾಲಯದ ಹತ್ತಿರ ಮೂರು ಹಂತಗಳಿಂದ ಕೂಡಿದ ತುರುಗೋಳ್ ವೀರಗಲ್ಲಿದೆ. ಕೆಳಗಿನ ಹಂತದಲ್ಲಿ ಬಿಲ್ಲು ಬಾಣಗಳಿಂದ ಹೋರಾಡುತ್ತಿರುವ ವೈರಿಗಳ ದೃಶ್ಯ. ವೀರನ ಬಲಗಡೆ ನಾಲ್ಕು ಹಸುಗಳು ಸಾಲಾಗಿ ನಿಂತಿವೆ, ಕೆಳಗಡೆ ಬಿದ್ದ ವೈರಿಯ ಚಿತ್ರಣವಿದೆ.ಎರಡನೆ ಹಂತದಲ್ಲಿ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಿರುವ ದೃಶ್ಯ ಮತ್ತು ಮೂರನೇ ಹಂತದಲ್ಲಿ ಚಾಮರಧಾರಿಯರು ವೀರನನ್ನು ಪೀಠದ ಮೇಲೆ ಕುಳ್ಳಿರಿಸಿ ಉಪಚರಿಸುತ್ತಿರುವ ದೃಶ್ಯವಿದೆ.

ಇನ್ನೊಂದು ತುರುಗೋಳ್ ವೀರಗಲ್ಲಿನಲ್ಲಿ ಕೆಳಗಡೆ ಸಾಲಿನಲ್ಲಿ ಮೂರು ಜನ ವೀರರು ಅವರ ಮುಂದೆ ಎತ್ತು, ಎತ್ತಿನ ಹಿಂದೆ ವೈರಿಯು ಚಿತ್ರಣವಿದೆ. ಎರಡನೇ ಸಾಲಿನಲ್ಲಿ ಅಪ್ಸರೆಯರು ವೀರರನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ (ಹಾಕುತ್ತಿರುವ) ದೃಶ್ಯ. ಮೇಲಿನ ಸಾಲಿನಲ್ಲಿ ಚಾಮರಧಾರಿಯರು ವೀರರನ್ನು ಉಪಚರಿಸುತ್ತಿರುವ ಚಿತ್ರಣವಿದೆ.

ಇದೇ ತಾಲೂಕಿನ ಕತ್ತೆಬೆನ್ನೂರಿನ ಶಿಬಾರಕಟ್ಟೆಯ ಮೇಲೆ ಮೂರು ಹಂತಗಳಿಂದ ಕೂಡಿದ ಕಲ್ಯಾಣ ಚಾಲ್ಯುಕರ ಕಾಲದ ತುರುಗೋಳ್ ವೀರಗಲ್ಲಿದೆ. ಕೆಳಗಿನ ಹಂತದಲ್ಲಿ ವೀರನ ಬಲಭಾಗಕ್ಕೆ ಐದು ಹಸುಗಳ ಚಿತ್ರಣವಿದೆ. ಮುಂದುಗಡೆ ವೈರಿಗಳಿಬ್ಬರು ತಮ್ಮ ಬಲಗೈಯಲ್ಲಿ ಭರ್ಚಿಯನ್ನು ಎತ್ತಿ ಹಿಡಿದು ಹೋರಾಡುತ್ತಿರುವ ದೃಶ್ಯವಿದೆ. ಎರಡನೇ ಪಟ್ಟಿಕೆಯಲ್ಲಿ ಚೌರಿ ಹಿಡಿದ ಅಪ್ಸರೆಯರು ಅಂಜಲಿ ಮುದ್ರೆಯಲ್ಲಿ ಕುಳಿತು ವೀರನನ್ನು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಮೊದಲ ಹಂತದಲ್ಲಿ ನಂದಿ, ಸೂರ್ಯ, ಚಂದ್ರ, ಅಂಜಲಿ ಮುದ್ರೆಯಲ್ಲಿ ಕುಳಿತು ವೀರ ಶಿವಲಿಂಗ, ಶಿವಲಿಂಗವನ್ನು ಪೂಜಿಸುತ್ತಿರುವ ಮುನಿಯ ಚಿತ್ರಣವಿದೆ.

ಇದೇ ತಾಲೂಕಿನ ಹರವಿಯಲ್ಲಿರುವ ತುರುಗೋಳ್ ವೀರಗಲ್ಲು ಮೂರು ಪಟ್ಟಿಕೆಗಳಿಂದ ಕೂಡಿದೆ. ಕೆಳಗಿನ ಪಟ್ಟಿಕೆಯಲ್ಲಿ ವೀರನು ವೈರಿಯೊಡನೆ ಬಿಲ್ಲು-ಬಾಣದಿಂದ ಹೋರಾಡುತ್ತಿರುವ ದೃಶ್ಯವಿದೆ. ವೀರನ ಬಲಭಾಗದಲ್ಲಿ ಐದು ತುರುಗಳನ್ನು ಕೆತ್ತಲಾಗಿದೆ. ಎರಡನೇ ಪಟ್ಟಿಕೆಯಲ್ಲಿ

ವೀರನನ್ನು ವಾದ್ಯಗಳ ಸಂಗಡ ಅಪ್ಸರೆಯರು ತಮ್ಮ ತೋಳ್ತೆಕ್ಕೆಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಪಟ್ಟಿಕೆಯಲ್ಲಿ ಪದ್ಮಾಸನದಲ್ಲಿ ಕುಳಿತ ವೀರ ಹಾಗೂ ಅಪ್ಸರೆಯರ ಚಿತ್ರಣವಿದೆ.

ಇದೇ ತಾಲೂಕಿನ ಮಸಲವಾಡದ ವೀರಭದ್ರೇಶ್ವರ ದೇವಾಲಯದ ಆವರಣದಲ್ಲಿ ತುರುಗೋಳ್ ವೀರಗಲ್ಲಿದೆ. ಮೂರು ಹಂತಗಳನ್ನು ಹೊಂದಿದೆ. ಮೊದಲ ಕೆಳಹಂತ ನೆಲದಲ್ಲಿ ಹೂತು ಹೋಗಿದೆ. ಅಸ್ಪಷ್ಟವಾಗಿದೆ. ಯುದ್ಧನಿರತ ಸೈನಿಕರ ಚಿತ್ರಣವಿದೆ. ಎರಡನೆಯ ಹಂತದ ಪಟ್ಟಿಯ ಮೇಲೆ ಮೂರು ಹಸುಗಳ ಚಿತ್ರಣವಿದೆ. ಮಧ್ಯದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತು ವೀರನನ್ನು ಪಲ್ಲಕ್ಕಿಯಲ್ಲಿ ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತದಲ್ಲಿ ನಂದಿ, ಅಂಜಲಿ ಮುದ್ರೆಯಲ್ಲಿ ಕುಳಿತು ವೀರ, ಶಿವಲಿಂಗ, ಶಿವಲಿಂಗವನ್ನು ಪೂಜಿಸುತ್ತಿರುವ ಯುವತಿಯ ಚಿತ್ರಣವಿದೆ.

ಇದೇ ತಾಲೂಕಿನ ರಾಜುವಾಳದ ಕಲ್ಲೇಶ್ವರ ದೇವಾಲಯದ ಮುಂಭಾಗದಲ್ಲಿ ಸುಮಾರು ನಾಲ್ಕು ಅಡಿ ಉದ್ದದ ವೀರಗಲ್ಲಿದೆ. ಮೂರು ಪಟ್ಟಿಕೆಗಳನ್ನು ಹೊಂದಿದೆ. ಕೆಳಹಂತದಲ್ಲಿ ಗುರಾಣಿ, ಭರ್ಚಿಗಳಿಂದ ಯುದ್ದದಲ್ಲಿ ಹೋರಾಡುತ್ತಿರುವವರ ಚಿತ್ರಣ, ಮಧ್ಯದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರರಿಬ್ಬರನ್ನು ಪಲ್ಲಕ್ಕಿಯಲ್ಲಿ ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತದಲ್ಲಿ ಸೂರ್ಯ, ಚಂದ್ರರ ಚಿತ್ರಣವಿದೆ. ಶಿವಲಿಂಗವಿದೆ. ಅದರ ಕೆಳಭಾಗದಲ್ಲಿ ವೀರರಿಬ್ಬರು ಅಂಜಲಿ ಮುದ್ರೆಯಲ್ಲಿ ಕುಳಿತಿರುವರು ಪಕ್ಕದಲ್ಲಿ ನಂದಿಯ ಚಿತ್ರಣವಿದೆ.

ಇದೇ ತಾಲೂಕಿನ ಸೋಗಿಯ ವೀರಭದ್ರೇಶ್ವರ ದೇವಾಲಯದ ಆವರಣದಲ್ಲಿ ಎರಡು ವೀರಗಲ್ಲುಗಳಿವೆ. ವೀರಗಲ್ಲು ಮೂರು ಹಂತಗಳಿಂದ ಕೂಡಿದೆ. ಕೆಳಗಿನ ಹಂತದಲ್ಲಿ ವೀರನು ಕುದುರೆಯ ಮೇಲೆ ಕುಳಿತು ಭರ್ಚಿಯಿಂದ ತಿವಿಯಲು ಬರುತ್ತಿರುವ ವೈರಿಯನ್ನು ತನ್ನ ಎಡಗೈಯಲ್ಲಿರುವ ಗುರಾಣಿಯಿಂದ ತಡೆಹಿಡಿದಿರುವನು, ಬಲಗೈಯಲ್ಲಿ ಕತ್ತಿಯಿದೆ. ಇನ್ನು ಮಧ್ಯದ ಹಂತದಲ್ಲಿ ಅಪ್ಸರೆಯರು ವೀರನನ್ನು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ವೀರ ಶಿವಲಿಂಗವನ್ನು ಪೂಜಿಸುತ್ತಿರುವ ಮುನಿಯ ಚಿತ್ರಣವಿದೆ.

ಹಡಗಲಿ ವಸ್ತುಸಂಗ್ರಹಾಲಯದಲ್ಲಿರುವ ಮೈಲಾರದ ಕಲ್ಯಾಣ ಚಾಲುಕ್ಯರ ಕಾಲದ ಕ್ರಿ.ಶ. ೧೧ನೇ ಶತಮಾನದ ತುರುಗೋಳ್ ವೀರಗಲ್ಲಿದೆ. ಕೆಳಗಿನ ಪಟ್ಟಿಕೆಯಲ್ಲಿ ವೀರನು ಬಿಲ್ಲು ಬಾಣಗಳಿಂದ ವೈರಿಯೊಡನೆ ಕಾದಾಡುವ ದೃಶ್ಯ. ವೀರನ ಹಿಂದೆ ಹಸು-ಕರುವಿನ ಚಿತ್ರಣವಿದೆ. ಎರಡನೇ ಹಂತದಲ್ಲಿ ಚೌರಿ ಹಿಡಿದ ಅಪ್ಸರೆಯರು ಅಂಜಲಿ ಮುದ್ರೆಯಲ್ಲಿ ಕುಳಿತ ವೀರನನ್ನು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತದಲ್ಲಿ ನಂದಿ, ಸೂರ್ಯ, ಚಂದ್ರ, ಅಂಜಲಿ ಮುದ್ರೆಯಲ್ಲಿ ಕುಳಿತ ವೀರ ಶಿವಲಿಂಗ, ಶಿವಲಿಂಗವನ್ನು ಪೂಜಿಸುತ್ತಿರುವ ಮುನಿಯ ಚಿತ್ರಣವಿದೆ.

ಹಡಗಲಿ ವಸ್ತುಸಂಗ್ರಹಾಲಯದಲ್ಲಿರುವ ಮೈಲಾರದ ಕಲ್ಯಾಣ ಚಾಲುಕ್ಯರ ಕಾಲದ ಕ್ರಿ.ಶ. ೧೧ನೇ ಶತಮಾನದ ಇನ್ನೊಂದು ತುರುಗೋಳ್ ವೀರಗಲ್ಲಿದೆ. ಕೆಳಗಿನ ಪಟ್ಟಿಕೆಯಲ್ಲಿ ವೀರನು ಬಿಲ್ಲು ಬಾಣಗಳಿಂದ ವೈರಿಗಳೊಡನೆ ಕಾದಾಡುವ ದೃಶ್ಯ. ವೀರನ ಹಿಂದೆ ಹೆದರಿ ಓಡುತ್ತಿರುವ ಎತ್ತುಗಳ ಚಿತ್ರಣ, ಇನ್ನೊಬ್ಬ ವೀರನ ಚಿತ್ರಣವಿದ್ದು, ಕಾಲ ಕೆಳಗೆ ವೈರಿಯನ್ನು ತುಳಿಯುತ್ತಿರುವ ದೃಶ್ಯವಿದೆ. ಎರಡನೇ ಹಂತದಲ್ಲಿ ಚೌರಿ ಹಿಡಿದ ಅಪ್ಸರೆಯರು ಪಕ್ಕದಲ್ಲಿ ನೃತ್ಯಗಾರ್ತಿಯರಿದ್ದಾರೆ. ವಾದ್ಯಗಳ ಮೂಲಕ ಅಂಜಲಿ ಮುದ್ರೆಯಲ್ಲಿ ಕುಳಿತ ವೀರನನ್ನು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲಿನ ಹಂತದಲ್ಲಿ ನಂದಿ, ಸೂರ್ಯ, ಚಂದ್ರ, ಅಂಜಲಿ ಮುದ್ರೆಯಲ್ಲಿ ಕುಳಿತ ವೀರ, ಅಲಂಕೃತವಾದ ಮಂಟಪದಲ್ಲಿ ಶಿವಲಿಂಗವಿದ್ದು. ಶಿವಲಿಂಗವನ್ನು ಇಬ್ಬರು ಪೂಜಿಸುತ್ತಿರುವ ಯತಿ ಮತ್ತು ವೀರನ ಚಿತ್ರಣವಿದೆ.

ಹಡಗಲಿ ವಸ್ತುಸಂಗ್ರಹಾಲಯದಲ್ಲಿರುವ ಅಲ್ಲಿ ಇನ್ನೊಂದು ತುರುಗೋಳ್ ವೀರಗಲ್ಲು ಕ್ರಿ.ಶ. ೧೧ನೇ ಶತಮಾನದ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದುದಾಗಿದೆ. ವೀರಗಲ್ಲು ಮೂರು ಪಟ್ಟಿಕೆಗಳನ್ನು ಹೊಂದಿದೆ. ಮೇಲಿನ ಭಾಗ ತ್ರುಟಿತಗೊಂಡಿದೆ. ಕೇವಲ ಶಿವಲಿಂಗ ಮಾತ್ರ ಅಸ್ಪಷ್ಟವಾಗಿ ಕಾಣುತ್ತಿದೆ. ಕೆಳಗಿನ ಹಂತದಲ್ಲಿ ವೀರನು ಭರ್ಚಿಯಿಂದ ವೈರಿಯನ್ನು ಎದುರಿಸುತ್ತಿರುವ ದೃಶ್ಯವಿದೆ. ಅವನ ಬಲಗಡೆ ನಾಲ್ಕು ಹಸುವಿನ ಚಿತ್ರಣವಿದೆ. ಎರಡನೆಯ ಹಂತದಲ್ಲಿ ವೀರನನ್ನು ಅಪ್ಸರೆಯರು ಪಲ್ಲಕ್ಕಿಯಲ್ಲಿ ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ.

ಗದಗ ತಾಲೂಕಿನ ಶಿರೋಳ ಗ್ರಾಮದ ತುರುಗೋಳ್ ವೀರಗಲ್ಲು ಶಿಲ್ಪದ ದೃಷ್ಟಿಯಿಂದ ಪ್ರಮುಖವಾಗಿದೆ. ಮೊದಲ ಹಂತದಲ್ಲಿ ವೈರಿಗಳೊಡನೆ ವೀರನೊಬ್ಬನು ಹೋರಾಡುವ ಚಿತ್ರಣ, ವೀರನ ಹಿಂದೆ ಮೂರು ಜನ ಸ್ತ್ರೀಯರ ಶಿಲ್ಪಗಳಿವೆ. ಅಲ್ಲದೆ ಅನೇಕ ತುರುಗಳ ಚಿತ್ರವಿದ್ದು, ವೀರನ ಮೇಲೆ ಬಾಣಗಳನ್ನು ಬಿಡುವಂತೆ ಚಿತ್ರಸಲಾಗಿದೆ. ಆಕಾಶದಲ್ಲಿ ಬಾಣಗಳು ಏರಿಬರುವುದು ಕಂಡುಬರುತ್ತದೆ. ವೀರನ ಕಾಲಡಿಯಲ್ಲಿ ಸತ್ತ ವ್ಯಕ್ತಿಯ ಚಿತ್ರವಿದೆ. ಶಿಲ್ಪದಲ್ಲಿ ಪ್ರತಿ ವ್ಯಕ್ತಿಯ ತಲೆಯ ಮೇಲೆ ಮುಡಿ ಕಟ್ಟಿರುವುದು ಕಂಡುಬರುತ್ತದೆ. ಇದರಿಂದ ಪುರುಷರ ಕೂಡ ಉದ್ದವಾದ ಕೂದಲುಗಳನ್ನು ಬಿಡುತ್ತಿದ್ದರು ಎಂಬುದು ತಿಳಿಯುತ್ತದೆ.

ಗದಗ ತಾಲೂಕಿನ ಲಕ್ಕುಂಡಿಯ ಒಂದು ವೀರಗಲ್ಲಿನ ಕೆಳಹಂತದಲ್ಲಿ ಹೋರಾಟದ ಚಿತ್ರವಿದ್ದು, ಹೋರಾಡುವವರ ತಲೆಯ ಮೇಲಿನ ಪಟ್ಟಿಕೆಯಲ್ಲಿ ದನಗಳನ್ನು ಚಿತ್ರಸಲಾಗಿದೆ. ವೀರನು ಶತ್ರುಗಳ ರುಂಡವನ್ನು ಕಡಿದು ನೆಲಕ್ಕೆ ಚೆಲ್ಲಾಡಿದ್ದಾನೆ. ಎರಡನೇ ಹಂತದಲ್ಲಿ ವೀರನು ಮೋಡಗಳ ನಡುವೆ ಅಪ್ಸರೆಯರೊಡನೆ ಸ್ವರ್ಗಕ್ಕೆ ಹೋಗುತ್ತಿರುವಂತೆ ಚಿತ್ರಿಸಲಾಗಿದೆ.

**೮.೩. ಪೆಣ್ಬುಯ್ಯಲ್ ವೀರಗಲ್ಲು :**

ಪ್ರಾಚೀನ ಕರ್ನಾಟಕದ ರಾಜಕೀಯ ಚರಿತ್ರೆ ಮತ್ತು ಸಂಸ್ಕೃತಿಯನ್ನು ನಾವು ಎಷ್ಟೇ ವೈಭವೀಕರಿಸಿದರೂ ಆ ವ್ಯವಸ್ಥೆಯ ಚೌಕಟ್ಟಿನಲ್ಲಿ ಅಮಾನವೀಯ ಘಟನೆಗಳೂ ಜರಗುತ್ತಿದ್ದುದು

ಅಷ್ಟೇ ಸತ್ಯವೆಂಬುದನ್ನು ಮರೆಯಬಾರದು. ನಮ್ಮ ಪ್ರಾಚೀನ ರಾಜಕೀಯ ಚರಿತ್ರೆಯನ್ನು ಅವಲೋಕಿಸಿದಾಗ ರಾಜ್ಯದಾಹ, ಭೂಕಲಹಗಳ ಪರಿಣಾಮವಾಗಿ ಲಕ್ಷಾಂತರ ಜನ ಪ್ರಾಣತೆತ್ತ ಅಮಾಯಕರು ಬಲಿಯಾದ ಪ್ರಸಂಗಗಳು ನಮ್ಮ ಕಣ್ಮುಂದೆ ಸುಳಿಯುತ್ತದೆ. ಇದಕ್ಕೆ ಸಾವಿರಾರು ಶಾಸನಗಳು ಮತ್ತು ನೂರಾರು ಪ್ರತ್ಯಕ್ಷ ಸಾಕ್ಷಿಗಳು ನಮ್ಮೆದುರು ಇವೆ. ಎದುರಾಳಿಗಳೊಂದಿಗೆ, ಶತ್ರುಗಳೊಂದಿಗೆ ಹೋರಾಡುವುದು ನಮ್ಮ ಪ್ರಾಚೀನ ಸಾಮಾಜಿಕ ವ್ಯವಸ್ಥೆಯಲ್ಲಿ ಅನಿವಾರ್ಯ ಮೌಲ್ಯವಾಗಿ ಪರಿವರ್ತನೆಗೊಂಡಿದ್ದರೂ ಸಹ ಇದರ ಪರಿಣಾಮ ಭೀಕರವಾಗಿರುತ್ತಿತ್ತು. ಹೋರಾಟಗಳಲ್ಲಿ ಗೆದ್ದ ಸಂಭ್ರಮಕ್ಕಿಂತ ಸೋತು ಸತ್ತವರ ಕುಟುಂಬದ ರೋಧನ ಹೆಚ್ಚಾಗಿರುತ್ತಿತ್ತು. ಆದರೆ ಆಳುವವರ ಪರವಿದ್ದ ನಮ್ಮ ರಾಜಕೀಯ ವ್ಯವಸ್ಥೆಯಲ್ಲಿ ರೋಧನವನ್ನು ಕೇಳಿ ಸಾಂತ್ವನಗೊಳಿಸುವ ಕರುಣಾ ಹೃದಯವಿರಲಿಲ್ಲ. ಒಂದು ಯುದ್ಧ ನಡೆಯಿತೆಂದರೆ ಕೆಲವರಾದರೂ ವಿಧವೆಯರಾಗುತ್ತಿದ್ದರೆಂದೇ ಹೇಳಬೇಕಾಗುತ್ತದೆ.

ನಮ್ಮ ಪ್ರಾಚೀನ ಯುದ್ಧ ವ್ಯವಸ್ಥೆಯಲ್ಲಿ ವೀರತನದಿಂದ ಹೋರಾಡುವುದು ಮತ್ತು ಪ್ರಾಣವನ್ನು ಲೆಕ್ಕಿಸದೆ ತಮ್ಮವರನ್ನು ರಕ್ಷಿಸುವುದು ಒಂದು ಮೌಲ್ಯವೇ ಆಗಿತ್ತು. ಶತ್ರುಗಳು ಧಾಳಿ ಮಾಡಿದಾಗ ಗ್ರಾಮಗಳನ್ನು ದೋಚುತ್ತಿದ್ದುದೇ ಅಲ್ಲದೆ ಕೆಲವು ವೇಳೆ ಸುಡುತ್ತಿದ್ದರು. ಇಷ್ಟೇ ಅಲ್ಲದೆ ಸ್ತ್ರೀಯರನ್ನು ಅಪಮಾನಿಸುವುದು, ದನ-ಕರುಗಳನ್ನು ಅಪಹರಿಸುವುದೂ ಮಾಡುತ್ತಿದ್ದರು. ಇಂತಹ ಸಮಯದಲ್ಲಿ ಅನೇಕರು ತಮ್ಮ ಪ್ರಾಣವನ್ನು ಪಣಕ್ಕಿಟ್ಟು ಶತ್ರುಗಳೊಂದಿಗೆ ಹೋರಾಡಿ ಆಪತ್ತಿಗೆ ಒಳಗಾದ ಸ್ತ್ರೀಯರನ್ನು ಮತ್ತು ದನಕರುಗಳನ್ನು ರಕ್ಷಿಸುತ್ತಿದ್ದರು. ಹೀಗೆ ರಕ್ಷಣೆ ಮಾಡುವುದು ಬದುಕಿನ ಆದರ್ಶವಾಗಿತ್ತು. ಹೀಗೆ ರಕ್ಷಣೆ ಮಾಡಲು ಹೋಗಿ ಪ್ರಾಣವನ್ನು ತೆತ್ತರೆ ಸಮಾಜವು ಅವರ ಕುಟುಂಬಕ್ಕೆ ದಾನ-ಧರ್ಮಗಳನ್ನು ನೀಡಿ ಅವರ ಸಹಾಯಕ್ಕೆ ನಿಲ್ಲುತ್ತಿತ್ತು. ಮಡಿದವರನ್ನು ತ್ಯಾಗಿಗಳೆಂದು ಗೌರವಿಸಿ ಅವರ ನೆನಪಿಗೆ ಸ್ಮಾರಕ ಶಿಲೆಗಳನ್ನು ನಿಲ್ಲಿಸುತ್ತಿದ್ದರು. ಇಂತಹ ಸ್ಮಾರಕ ಶಿಲೆಗಳಲ್ಲಿ ಪಾಠ ಮತ್ತು ಶಿಲ್ಪ ಎರಡೂ ಮಾಧ್ಯಮಗಳಲ್ಲಿ ಮಡಿದವರ ಇತಿಹಾಸ ಅವರ ತ್ಯಾಗ ಮತ್ತು ಆದರ್ಶವನ್ನು ಚಿತ್ರಿಸುತ್ತಿದ್ದರು. ಶಾಸನ ಪ್ರಕಾರಗಳಲ್ಲಿ ಇಂತಹ ಸ್ಮಾರಕ ಶಿಲೆಗಳನ್ನು ವೀರಗಲ್ಲುಗಳೆಂದು ವಿಂಗಡಿಸಿ ಮಡಿದವರ ವೀರತನಕ್ಕೆ ಪೆಣ್ಬುಯ್ಯಲ್ ವೀರಗಲ್ಲುಗಳೆಂದು ಕರೆಯಲಾಗಿದೆ. ಕನ್ನಡದ ಪ್ರಸಿದ್ಧ ಕವಿ ರನ್ನನು ತನ್ನ ಗದಾಯುದ್ಧ ಕಾವ್ಯದಲ್ಲಿ

ತುಱುಗೋಳೊಳ್ ಪೆಣ್ಬುಯ್ಯಲೊ
ಳೆಱೆವೆಸದೊಳ್ ನಂಟನೆಡಱೊಳೂರಱುವಿನೊಳಂ
ತಱೆಸಂದು ಗಂಡುತನಮನೆ
ನೆಱೆಪದವಂ ಗಂಡನಲ್ಲನೆಂತುಂ ಪಂಡಂ॥ (೨.೨೪)

ಈ ಮೇಲಿನ ಪದ್ಯದ ಆಧಾರದಿಂದ ಆ ಕಾಲದಲ್ಲಿ ತುರುಗಳನ್ನು ರಕ್ಷಿಸುವುದು, ಸ್ತ್ರೀಯರ ಮಾನ ಕಾಪಾಡುವುದು, ಊರುಗಳನ್ನು ರಕ್ಷಿಸುವುದು ಗಂಡಸರ ಪರಮ ಕರ್ತವ್ಯವಾಗಿತ್ತು.

ಯಾವ ಕಾರಣದಿಂದಲಾದರೂ ಶತ್ರುಗಳು ದನಗಳನ್ನು ಅಪಹರಿಸಿದಾಗ ಆ ದನಗಳನ್ನು ರಕ್ಷಿಸಿಕೊಳ್ಳಲು ಪ್ರಾಣವನ್ನು ಲೆಕ್ಕಿಸದೆ ಹೋರಾಡುತ್ತಿದ್ದರು. ತುಱುಗೋಳ್, ಪೆಣ್ಬುಯ್ಯಲ್, ಎಜೆವೆಸ, ನೆಂಟನೆಡಱು ಊರಜವು ಪ್ರಸಂಗಗಳಲ್ಲಿ ಹೋರಾಡಿದವನು ಪಂಡನೆಂಬ ಮಾತು ಆ ಕಾಲದಲ್ಲಿ ಮೇಲ್ಕಂಡ ಘಟನೆಗಳಿಗೆ ಸಮಾಜ ಹೇಗೆ ಸ್ಪಂದಿಸುತ್ತಿತ್ತೆಂದು ತಿಳಿದುಬರುತ್ತದೆ. ಇಂತಹ ಪ್ರಸಂಗಗಳಲ್ಲಿ ಹೋರಾಡದೆ ಇರುವವನು ಗಂಡಸೇ ಅಲ್ಲವೆಂಬ ಕಟ್ಟು ಭಾವನೆಯು ಆ ಪ್ರಸಂಗಗಳ ಪರಿಣಾಮ ಸಮಾಜದ ಮೇಲೆ ಭೀಕರವಾಗಿರುತ್ತಿತ್ತೆಂಬ ವಾಸ್ತವ ಸತ್ಯವನ್ನೂ ಎತ್ತಿ ತೋರಿಸುತ್ತದೆ.

**ಪೆಣ್ಬುಯ್ಯಲ್ ಶಬ್ದ ಅರ್ಥ :**

ಪೆಣ್ಬುಯ್ಯಲ್ ಎಂಬ ಪದವು ಪೆಣ್+ಪುಯ್ಯಲ್ ಎಂಬ ಎರಡು ಶಬ್ದಗಳಿಂದ ಕೂಡಿದ್ದಾಗಿದ್ದು, ಹೆಣ್ಣಿನ ಕೂಗು, ಹೆಣ್ಣಿನ ಆಕ್ರಂದನ ಎಂಬುದನ್ನು ಹೇಳುತ್ತದೆ. ಆದರೆ ಯಾವ ಶಾಸನಗಳಲ್ಲೂ ಪೆಣ್ಬುಯ್ಯಲ್ ಎಂಬ ಪದ ಬಳಕೆಯಾಗಿಲ್ಲ. ಇದರ ಬದಲಿಗೆ ಪೆಣ್ಡಿರುಡೆಯುರ್ಚೆ, ಪೆಣ್ಡಿರ ಉಡೆ ಉರ್ಚ್ಚಲು, ಉಡೆಉರ್ಚ್ಚೆ, ಪೆಣ್ಡಿರ ಪೆರಗಿಕ್ಕಿ, ಹೆಂಡಿ ರುಡೆಯುರ್ಚ್ಚೆ ಎಂಬ ಶಬ್ದಗಳು ಬಳಕೆಯಾಗಿವೆ. ಉಡೆಉರ್ಚ್ಚು ಎಂದರೆ ಉಟ್ಟ ಬಟ್ಟೆಯನ್ನು ಸೆಳೆ, ನಗ್ನ ಮಾಡು ಎಂಬ ಅರ್ಥ. ವಿದ್ವಾಂಸರೊಬ್ಬರು ಈ ಶಬ್ದಕ್ಕೆ ವಿಧವೆಯನ್ನಾಗಿ ಮಾಡುವುದು ಎಂದೂ ಅರ್ಥೈಸಿದ್ದಾರೆ. (ಎ ನೋಟ್ ಆನ್ ದಿ ಟರ್ಮ್ ಉಡಿಯುರ್ಚ್ಚೆ ಆಫ್ ದ ಕನ್ನಡ ಇನ್‌ಸ್ಕ್ರಿಪ್ಷನ್ಸ್ ಜೆ.ಆ.ಎ.ಸೊ. ಇಸಂ-೧೧೧. ಸಿ.ಟಿ. ಕೊಟ್ರಯ್ಯ, ೧೯೭೦, ಪು-೩೯) ಆದರೆ ಕೆಲವು ಪೆಣ್ಬುಯ್ಯಲ್ ವೀರಗಲ್ಲುಗಳ ಶಿಲ್ಪಗಳಲ್ಲಿ ಸ್ತ್ರೀಯರು ತಮ್ಮ ಮಕ್ಕಳೊಂದಿಗೆ ನಗ್ನರಾಗಿ ಕೆದರಿದ ಕೇಶದೊಂದಿಗೆ ನಿಂತಿರುವುದನ್ನು ಮತ್ತು ನಾಚಿಕೆ ಅವಮಾನದಿಂದ ತಮ್ಮ ಮರ್ಮಾಂಗವನ್ನು ಕೈಗಳಿಂದ ಮುಚ್ಚಿಕೊಂಡು ನಿಂತಿರುವ ದೃಶ್ಯಗಳನ್ನು ಗಮನಿಸಿದರೆ ಶತ್ರುಗಳು ಅವರನ್ನು ಕೇವಲ ವಿಧವೆಯರನ್ನಾಗಿಸುತ್ತಿದ್ದುದೇ ಅಲ್ಲದೆ ಅವರ ಮೇಲೆ ಅತ್ಯಾಚಾರ ಮಾಡುವುದು ಮತ್ತು ಲೈಂಗಿಕ ಕಿರುಕುಳಗಳನ್ನೂ ನೀಡುತ್ತಿದ್ದರೆಂಬ ಕಠೋರ ಸತ್ಯ ಅರಿವಾಗುತ್ತದೆ.

(ತುರುಗಳನ್ನು ಕದಿಯಲು ಅಥವಾ ಊರನ್ನು ಕೊಳ್ಳೆ ಹೊಡೆಯಲು ಬಂದವರು ಆ ಊರಿನ ಹೆಂಗಸರ ವಸ್ತ್ರಗಳಿಗೆ ಕೈ ಹಾಕುತ್ತಿದ್ದರು. ಹೆಂಗಸರ ವಸ್ತ್ರಗಳಿಗೆ ಕೈ ಹಾಕುವುದು ಒಂದು ಬಗೆಯ ಸವಾಲು ಇದ್ದಂತೆ. ತಾವು ನಿರ್ಣಾಯಕವಾಗಿ ಸೋಲಿಸಿದ್ದಕ್ಕೆ ಅದು ಸ್ಪಷ್ಟವಾದ ಸಂಕೇತವೂ ಹೌದು (ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು. ಚಿದಾನಂದಮೂರ್ತಿ. ಎಂ. ೧೯೮೪. ಪು.೪೭) ಅಥವಾ ಸೀರೆ ಎಳೆಯುವುದರ ಮೂಲಕ ಯುದ್ಧವನ್ನು ಸಾರುತ್ತಿದ್ದರು. ಇಂಥ ಪ್ರಸಂಗದಲ್ಲಿ ಅಲಿಪ್ತನಾಗಿರ ಕೂಡದು ಎಂಬ ಮೌಲ್ಯಕ್ಕೆ ಕಟ್ಟುಬಿದ್ದು ಪ್ರಾಚೀನರು ಸ್ತ್ರೀವಿಮೋಚನೆಗೆ ಹೋರಾಡುತ್ತಿದ್ದರು. (ಸಮಾದಿ-ಬಲಿದಾನ-ವೀರಮರಣ ಸ್ಮಾರಕಗಳು, ಕಲಬುರ್ಗಿ ಎಂ.ಎಂ., ೧೯೮೦. ಪು.೭೮).)

**ಕಾವ್ಯಗಳಲ್ಲಿ ಪೆಣ್ಬುಯ್ಯಲ್ :**

ಅನೇಕ ಕನ್ನಡ ಕಾವ್ಯಗಳಲ್ಲೂ ಪೆಣ್ಬುಯ್ಯಲ್ಲಿನ ಪ್ರಸಂಗಗಳಿವೆ. ರಾವಣನು ಸೀತೆಯನ್ನು ಅಪಹರಿಸಿದಾಗ ಸತಿ ಪುಯ್ಯಲ್ಚಿದಪಳ್ ರಘೂದ್ವಹ ಕುಲಸ್ತ್ರೀ ಸೀತೆ ಪೆಣ್ಬುಯ್ಯಲಂ ಶ್ರುತಿ ಕಯ್ಕೊಂಡುದು ಕೇಳ್ದಿದಂ ತೆವಳೆಗಂಡಂದೆನ್ನೆ ವಿಖ್ಯಾತಿ ದೂಷಿತಮಕ್ಕುಂ ಸೆಱಗೊಂಡನಂ ಕದನದೊಳ್ ಬೆಂಕೊಂಡು ಬಾಹಾ ಬಲೋನ್ನತಿಯಂ ಬೀಱುವೆನೆಂದು ಘೂರ್ಮಿಸಿದನೇಂ ಗಂಡಂ ಪರಿಚ್ಛೇದಿಯೋ ಅಂತು ಪರಿಚ್ಛೇದಿಸಿ ರತ್ನಜಟ ಬದ್ಧ ಭ್ರುಕಟಿ ದಶಾನನ ವಿಮಾನಕ್ಕಡ್ಡಂ ಬುದು...ಎಂದು ರಾಮಚಂದ್ರ ಚರಿತೆ ಪುರಾಣದಲ್ಲಿ ಕವಿ ವರ್ಣಿಸಿರುವರು. ಶಾಸನಗಳಲ್ಲಿ ಅಂತರ್ಗತವಾದ ಪೆಣ್ಬುಯ್ಯಲ್‌ನ ಅತ್ ಇಲ್ಲಿಯೂ ಮೂಡಿದೆ. (ರಾಮಚಂದ್ರ ಚರಿತ ಪುರಾಣಂ. ೯.೧೪೪.ಕ.ಸಾ.ಪ.೧೯೭೬.ಪು.೨೪೮).

ಅಗ್ಗಳ ದೇವ ತನ್ನ ಕಾವ್ಯದಲ್ಲಿ ಪೆಣ್ಬುಯ್ಯಲ್ಲಿನ ಪ್ರಸಂಗಗಳನ್ನು ಈ ಕೆಳಗಿನಂತೆ ಚಿತ್ರಿಸಿದ್ದಾನೆ. "...ಮತ್ತೊಂದು ಸುರತಕರಣ ಚಿತ್ರ ಸಂದರ್ಭ ವಪ್ಪಗರ್ಭ ಗೃಹದೊಳಗೆ ನಿರ್ಭರ ಪ್ರಣಯ ಪರವಶತೆಯಿಂ ನೆರವ ಕಾದಲರ ಕಾಮಕೇಳೀ ಕೂಜಿತದೊಳ್ ಕೂಡಿ ಕಿವಿಯಂ ಪಳಂಚಲೆವ ಮಂಚದ ಶಕುನಿಯಂಚೆಯ ಗಿಳಿಯ ಪುರುಳಿಯ ಪಾರಿವದ ಕೊರಲುಲಿಯ ದಳವುಳವನಾಲಿಸಿ ಪೆಣ್ಬುಯ್ಯಲನಾರಯ್ಯ ದೋಸರಿಪುದೆನ್ನ ಗಂಡು ಗೂಸುತಕ್ಕೆ ಪಸುಗೆಯಿತ್ತಿಂದು ಪೀಠಮರ್ಥಕಂ ಬೆರಸು ಪರಿದು ಗವಾಕ್ಷೆ ನಿಕ್ಷಿಪ್ತಾಕ್ಷನಾಗಿ ನೋೞ್ಪನ್ನಗಂ ಎಂದಿರುವನು. (ಚಂದ್ರಪ್ರಭು ಪುರಾಣ.೮.೬೬(ಗದ್ಯ)ಕ.ಸಾ.ಪ.೧೯೭೭) ಗಿಳಿಯಂತೆ ಸಾರಿಕೆಯಂತೆ, ಪಾರಿವಾಳದಂತೆ ಚೀತ್ಕಾರ ಮಾಡುವ ಹೆಣ್ಣಿನ ಕೊರಳುಲಿಯ ಹುಯಿಲನ್ನು ಕೇಳಿ ಹಣ್ಣಿನ ಹುಯಿಲನ್ನು ಕೇಳಿ ವಿಚಾರಿಸದೆ ಹೋಗುವುದು ನನ್ನ ಗಂಡಸುತನಕ್ಕೆ ಭೂಷಣವಲ್ಲ ಎಂದು ಸಹಾಯಕನಾದ ಪೀಠಮರ್ದಕನೊಡನೆ ಹೋಗಿ ಗವಾಕ್ಷಿಯಲ್ಲಿ ನೋಡುವಾಗ ಎಂದು ಇದರ ಅರ್ಥ.

ಆದರೆ ಈ ಪೆಣ್ಬುಯ್ಯಲ್ ಸುರತದ ಆನಂದದ ಚೀತ್ಕಾರ, ವೀರಗಲ್ಲುಗಳಲ್ಲಿ ಕಾಣುವ ಅಸಾಹಯಕ ಹೆಣ್ಣುಗಳ ಪ್ರಾಣಾಂತಕ ಆಕ್ರಂದನವಲ್ಲ.

ಅನಂತನಾಥ ಪುರಾಣದಲ್ಲಿ ಪೆಣ್ಬುಯ್ಯಲ್ ಪ್ರಸಂಗ ಹೀಗಿದೆ.

'ಇನನಂ ವಂಚಿಸಿ ಚಂಡಶಾಸನನಿವಂ ಕಳ್ದೊಯ್ದಪಂ ನಾಥನಂ ಗನೆಯಿಂದೆನ್ನ ಸುನಂದೆಯಂ ಸುಭಟರಣ್ಮಿಂ ವೀರರ ಡ್ಡೆಸಿ ಮೆನ್ನಿನೆಯಂಗೆಯ್ದಿಸಿ ಮೂರನಾಡಜನಮೀ ಪೆಣ್ಬುಯ್ಯಲು ಹಾಸುಷೇಣನೃಪ ಹಾನೃಪ ನೀರ ನೆಂದಬಲೆ ಬಾಯ್ಬಿಟ್ಟಿರ್ತು ಪುಯ್ಯಲ್ಚಿದಳ್ (ಅನಂತನಾಥ ಪುರಾಣಂ ೧೧– ೪೫. ಮೈ.ವಿ.ವಿ.೧೬೭೨).

ಇದೇ ಪ್ರಸಂಗವನ್ನು ಅನಂತನಾಥ ಚರಿತೆಯಲ್ಲಿ ಹೀಗೆ ವರ್ಣಿಸಿದೆ.

ಗಂಡಸ ವಂಚಿಸಿ ಚಂಡಶಾಸನ ನನಿವ ಕೊಂಡೊಯ್ದುಪನೆಂದು ಕನಲಿ ಮಂಡೆಗೆ ಕೈಯಿಕ್ಕಿ ಪುಯ್ಯಲ್ಚಿದಳದ ಮಂಡಲದೊಳ ನೋಡೆಚೋದ್ಯಂ ವಸುಷೇಣ ನಂಗನೆಯೆನಿಪ ಸುನಂದೆಯನ

ಸಹಾಯ ಚಾಡಶಾಸನು ವಸುಧೆಯೊಳ್ ಕದ್ದು ಕೊಂಡೊಯ್ದುಪನೆಂದಾಗ ಶಶಿಮುಖಿ ಪುಯ್ಯಲ್ಗಿದಳ್ ದೆಸೆಯಾಳ್ವರು ದಿವಿಜರು ನಾಗವೆಂತರರೆಸೆವ ಜ್ಯೋತಿಷ್ಕ ಮಾನವರು ಅಸುವ ಕಾಯ್ದೆನ್ನ ರಕ್ಷಿಸುವುದೆಂದಾ ದೇವಿಯಿಸುರಿ ಪುಯ್ಯಲ ಮಾಡಿದಳು ವೀರರ ಡ್ಡೈಸಿ ಭಟ್ಟರು ಮಾರ್ಕೊಳ್ಳಿರೆಂದೋರಣದಿಂದಾ ದೇವಿ ಊರೂರು ನಾಡಜನಕೆ ಪುಯ್ಯಲಿಟ್ಟಳು ಕಾರುಣ್ಯವತಿ ಸೋಕದೋಳು ಎಂದು ವರ್ಣಿಸಲಾಗಿದೆ. (ಅನಂತನಾಥ ಚರಿತೆ ೧೭-೩೩-೩೯.ಮೈ.ವಿ.ವಿ.೧೯೮೧).

ಮಲ್ಲಿನಾಥ ಪುರಾಣದ ಒಂದು ಪ್ರಸಂಗದಲ್ಲಿ ರಾಜನು ವೇಶ್ಯಾವಾಟಿಕೆಗೆ ಬಂದಾಗ ಪೆಣ್ಬುಯ್ಯಲನ್ನು ಕೇಳುತ್ತಾನೆ. ಆಗ ಸಹಚರ ವಿದೂಷಕನು ದೇವ, ನಿಜಕ್ಷತ್ರಿಯ ಪವಿತ್ರನೆಂಬ ಪೆರ್ಮೆಗೆ ಪೆಣ್ಬುಯ್ಯಲನು ಪೇಕ್ಷಿಸುವುದು ಉಚಿತ ಮತ್ತಿಂದು ಹೇಳುತ್ತಾನೆ. (ಮಲ್ಲಿನಾಥ ಪುರಾಣ.೭.೬೩.೬೪.ಕರ್ನಾಟಕ .ವಿ.ವಿ.೧೯೭೪). ಚಂದ್ರಪ್ರಭಚರಿತೆಯಲ್ಲಿಯೂ ಕವಿ ಇದೇ ಭಾವವನ್ನು ಸ್ಫುರಿಸುವ ಚಿತ್ರಣ ನೀಡಿದ್ದಾನೆ. (ಚಂದ್ರಪ್ರಭು ಚರಿತೆ, ಚಂದ್ರಿಕಾ ವಿಹಾರ-೮೩. ಮೈ.ವಿ.ವಿ.೧೯೮೫) ಸ್ತ್ರೀಯರು ಪುಯ್ಯಲಿಡುತ್ತಿದ್ದರು ಎಂಬ ಮಾತನ್ನು ನೇಮಿನಾಥ ಪುರಾಣದಲ್ಲಿ ಎರಡು ಪ್ರಸಂಗದಲ್ಲಿ ವರ್ಣಿಸಲಾಗಿದೆ. (ನೇಮಿನಾಥ ಪುರಾಣಂ ೨-೬೪, ೭-೮೫. ಕರ್ನಾಟಕ.ವಿ.ವಿ.೧೯೬೮).

ಮೇಲ್ಕಂಡ ಎಲ್ಲ ಕಾವ್ಯ ಪ್ರಸಂಗಗಳನ್ನು ಗಮನಿಸಿದರೆ ಶಾಸನಗಳಲ್ಲಿನ ಪೆಣ್ಬುಯ್ಯಲ್‌ಗೂ. ಕಾವ್ಯಗಳಲ್ಲಿನ ಪೆಣ್ಬುಯ್ಯಲ್‌ಗೂ ಅಜಗಜಾಂತರ ವ್ಯತ್ಯಾಸವಿದೆ. ಎರಡೂ ಹೆಣ್ಣಿನ ಕೂಗೇ ಆದರೂ ಸಂದರ್ಭಗಳು ಬೇರೆ-ಬೇರೆಯಾಗಿವೆ. ಕಾವ್ಯಗಳಲ್ಲಿ ಸುಖದ ಪರಾಕಾಷ್ಠೆ ಮತ್ತು ಭಯದ ಕೂಗುಗಳಾದರೆ ಶಾಸನಗಳಲ್ಲಿ ಮಾನ ರಕ್ಷಣೆಯ ಮತ್ತು ಪ್ರಾಣ ರಕ್ಷಣೆಯ ಕೂಗಾಗಿದೆ. ಉಗ್ರತೆ ಮತ್ತು ಭೀಕರತೆಯ ಪರಿಣಾಮಗಳಿಂದ ಶಾಸನಗಳಲ್ಲಿನ ಪೆಣ್ಬುಯ್ಯಲ್ ಪದವು ಹೆಚ್ಚು ಗಂಭೀರವಾಗುತ್ತದೆ.

**ಪೆಣ್ಬುಯ್ಯಲ್ ಶಾಸನಗಳು :**

ಬಟ್ಟೆಕೆರೆಯ ಕಾಳಗದಲ್ಲಿ ಹೋರಾಡಿ ಮಡಿದ ಕಲಿಗಳ್ಳನೆಂಬ ವೀರನಿಗೆ ಆತನ ಹೆಂಡತಿಯೇ ವೀರಗಲ್ಲು ನಿಲ್ಲಿಸುವಳು (ಎಸ್.ಐ.ಎ. X, ಬೆಟಗೇರಿ,-೨೧.ಕ್ರಿ.ಶ.೮೯೩).

ಲಕ್ಕುಂಡಿ ವಸ್ತುಸಂಗ್ರಹಾಲಯ ತ್ರುಟಿತ ವೀರಗಲ್ಲಿನಲ್ಲಿ ಹೋರಾಡುತ್ತಿರುವ ವೀರನ ಹಿಂದೆ ದನಗಳನ್ನು ಮತ್ತು ಇಬ್ಬರು ಸ್ತ್ರೀಯರನ್ನು ಚಿತ್ರಿಸಲಾಗಿದೆ. ಶತ್ರುಗಳು ಬಿಟ್ಟ ಬಾಣಗಳು ವೀರನ ಕಾಲು, ಸೊಂಟ, ಹೊಟ್ಟೆ ಮತ್ತು ಮುಖಗಳಿಗೆ ಚುಚ್ಚಿಕೊಂಡಿವೆ. ಶತ್ರುವೊಬ್ಬನು ಸತ್ತು ಬಿದ್ದಿದ್ದಾನೆ. ಈ ಶಿಲ್ಪವೂ ಪೆಣ್ಬುಯ್ಯಲನ್ನು ಸೂಚಿಸುತ್ತದೆ. (ಲಕ್ಕುಂಡಿ ಗದಗ ತಾಲೂಕು, ಗದಗ ಜಿಲ್ಲೆ)

ಬಾದಾಮಿ ವಸ್ತುಸಂಗ್ರಾಹಾಲಯದಲ್ಲಿನ ವೀರಗಲ್ಲಿನಲ್ಲಿ ಮೂರು ಹಂತಗಳಿದ್ದು, ಮೊದಲ ಹಂತದಲ್ಲಿ ವೀರನು ಅನೇಕ ಶತ್ರುಗಳೊಂದಿಗೆ ಹೋರಾಡುತ್ತಿರುವಂತೆಯೂ ಅವನ ಹಿಂದೆ ಮೂವರು ನಗ್ನ ಸ್ತ್ರೀಯರನ್ನು ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ವೀರನು ಅಪ್ಸರೆಯರ

ಹೆಗಲ ಮೇಲೆ ಕೈ ಹಾಕಿಕೊಂಡು ಸ್ವರ್ಗಕ್ಕೆ ಹೋಗುತ್ತಿದ್ದಾನೆ. ಸುತ್ತಲೂ ಅನೇಕ ವಾದ್ಯಾಕಾರರ ವಾದ್ಯಗಳನ್ನು ನುಡಿಸುತ್ತಿದ್ದಾರೆ. ಮೂರನೇ ಹಂತದಲ್ಲಿ ವೀರನು ಸ್ವರ್ಗದಲ್ಲಿ ಕುಳಿತಿರುವಂತೆಯೂ ಚಿತ್ರಿಸಲಾಗಿದೆ. ವೀರನನ್ನು ದೊಡ್ಡದಾಗಿ ಚಿತ್ರಿಸಲಾಗಿದ್ದು, ಕೊರಳಿಗೆ ದಪ್ಪ ದಪ್ಪ ಮಣಿಗಳ ಸರವನ್ನು, ಕಿವಿಗಳಿಗೆ ದೊಡ್ಡದಾಗಿ ರಿಂಗುಗಳನ್ನು ಹಾಕಿಕೊಂಡಿರುವನು. ತನ್ನ ಬೆನ್ನ ಹಿಂಬದಿಗೆ ಕಟ್ಟಿಕೊಂಡಿರುವ ಬತ್ತಳಿಕೆಯಿಂದ ಬಾಣವನ್ನು ಹೊರಗೆಳೆಯುತ್ತಿದ್ದಾನೆ. ಶತ್ರುವಿನ ತಲೆಗೆ ವೀರನು ಬಿಟ್ಟ ಬಾಣವು ನಾಟಿಕೊಂಡಿದೆ. ವೀರನ ಹಿಂದಿರುವ ನಗ್ನ ಸ್ತ್ರೀಯರಲ್ಲಿ ಒಬ್ಬಳು ಬಿಚ್ಚಿದ ಬಟ್ಟೆಯನ್ನು ಕೈಯಲ್ಲಿ ಹಿಡಿದಿದ್ದು ಇದು ಮಾನಭಂಗಕ್ಕೆ ಒಳಗಾಗುತ್ತಿದ್ದ ಸ್ತ್ರೀಯರು ಕಳಚಿದ ಬಟ್ಟೆಯನ್ನು ಧರಿಸಲೂ ಸಮಯವಿಲ್ಲದೆ ಭಯದಿಂದ ದಿಕ್ಕೆಟ್ಟು ಓಡಿಬಂದಿರುವುದನ್ನು ಸೂಚಿಸುತ್ತದೆ. ಇಡೀ ಶಿಲ್ಪ ಪೆಣ್ಬುಯ್ಯಲ್ ಸನ್ನಿವೇಶವನ್ನು ಸಮರ್ಥವಾಗಿ ಚಿತ್ರಿಸಿದೆ. (ಪೆಣ್ಬುಯ್ಯಲ್, ಪರಮಶಿವ ಮೂರ್ತಿ ಡಿ.ವಿ. ೨೦೧೦. ಪು. ೧೮)

ಬಾದಾಮಿಯ ಎ.ಎಸ್.ಐ.ವಸ್ತುಸಂಗ್ರಹಾಲಯದಲ್ಲಿ ಒಂದು ವೀರಗಲ್ಲಿದೆ. ಈ ಶಿಲ್ಪದಲ್ಲಿ ಅಲ್ಲಿ ಬಾಳೆಗಿಡಗಳಿವೆ. ಇನ್ನೊಂದು ಶಿಲ್ಪದಲ್ಲಿ ಕೆಳಗಿನ ಫಲಕದಲ್ಲಿ ವೀರನು ವೈರಿ ಪಡೆ ವಿರುದ್ಧ ಕಾದಾಡಲು ನಿಂತಿದ್ದಾನೆ. ಎರಡರಲ್ಲಿ ಮಡಿದ ವೀರನು ಪೀಠದ ಮೇಲೆ ಕುಳಿತಿದ್ದು ಬದಿಗೆ ಅಪ್ಸರೆಯರು ನಿಂತಿದ್ದಾರೆ. ಮೇಲಿನ ಫಲಕದಲ್ಲಿ ಮಡಿದ ವೀರನು ಶಿವಲಿಂಗದ ಎದುರು ಬಲಗಡೆ ಕುಳಿತಿದ್ದಾನೆ. ಶಿವಲಿಂಗದ ಮೇಲೆ ಹೂವಿನ ಪಟ್ಟಿಕೆಯಿದೆ. ಇದು. ಸುಮಾರು ಕ್ರಿ.ಶ. ೯ನೇ ಶತಮಾನದ್ದಾಗಿದೆ.

ಪಟ್ಟದಕಲ್ಲಿನ ಪೆಣ್ಬುಯ್ಯಲ್ ವೀರಗಲ್ಲೊಂದರ ಮೇಲ್ಭಾಗದ ಫಲಕ ಹಾಳಾಗಿದೆ. ಕೆಳಗಿನ ಫಲಕದಲ್ಲಿ ಬಲಕ್ಕೆ ವೈರಿಪಡೆಯಿದೆ. ಇವರ ವಿರುದ್ಧ ಎಡಕ್ಕೆ ಬೆತ್ತಲೆಯಾಗಿ ನಿಂತ ಸ್ತ್ರೀಯರ ಬದಿ ವೀರ ನಿಂತಿದ್ದಾನೆ. ಬಹುಶಃ ಇವನು ಸ್ತ್ರೀಯರ ಮಾನ ರಕ್ಷಣೆ ಮಾಡಿ ಯುದ್ಧದಲ್ಲಿ ಮಡಿದಿರಬೇಕು. ಹೀಗಾಗಿ ಇದೊಂದು ಪೆಣ್ಬುಯ್ಯಲ್ ಶಿಲ್ಪವಾಗಿದೆ. ವೈರಿ ಪಡೆಯಲ್ಲಿಬ್ಬರು ಬಿಲ್ಲನ್ನು ಹಿಡಿದು ಬಾಣ ಪ್ರಯೋಗಿಸುತ್ತ ನಿಂತಿದ್ದಾರೆ. ಇನ್ನಿಬ್ಬರು ಕುದುರೆ ಸವಾರಿ ಮಾಡುತ್ತಿರುವರು. ವೀರನು ಬಲಗೈಯನ್ನು ನಡಕ್ಕಿಟ್ಟು ನಿಂತಿದ್ದಾನೆ. ಸೊಂಟಕ್ಕೆ ಕಠೋರಿಯನ್ನು ಕಟ್ಟಿಕೊಂಡಿದ್ದಾನೆ. ಎರಡನೇ ಫಲಕದಲ್ಲಿ ಮಡಿದ ವೀರನನ್ನು ಅಪ್ಸರೆಯರಿಬ್ಬರು (ಸ್ವರ್ಗಲೋಕಕ್ಕೆ ಹೋಗುವುದನ್ನು) ಆಕಾಶದಲ್ಲಿ ಹಾರುವಂತೆ ಚಿತ್ರಿಸಲಾಗಿದೆ. ಇಬ್ಬರ ರುಂಡ ಭಾಗಗಳು ಶಿಥಿಲವಾಗಿವೆ. ಇದು ಸುಮಾರು ಕ್ರಿ.ಶ. ೮ನೇ ಶತಮಾನದ್ದಾಗಿದೆ. ಇದೇ ರೀತಿ ಶಿಥಿಲಗೊಂಡ ಮತ್ತೊಂದು ಇಲ್ಲಿನ ವೀರಗಲ್ಲಿನಲ್ಲಿ ವೈರಿ ಪಡೆಗಳ ವಿರುದ್ಧ ವೀರನು ಗುರಾಣಿಯನ್ನು ಮುಂದಕ್ಕೆ ಹಿಡಿದು ನಿಂತಿದ್ದಾನೆ. ಎರಡನೇ ಫಲಕದಲ್ಲಿ ಮಡಿದ ವೀರನನ್ನು ಅಪ್ಸರೆಯರು ಹೊತ್ತೊಯ್ಯುವ ದೃಶ್ಯದಲ್ಲಿ ಬಲಗಡೆಯ ಅಪ್ಸರೆ ಮತ್ತು ಉಳಿದಿರುವ ರುಂಡಗಳು ಹಾಳಾಗಿವೆ. ಮೇಲಿನ ಭಾಗ ಹಾಳಾಗಿದೆ. ಇದು ಕ್ರಿ.ಶ.ಸುಮಾರು ೮ನೇ ಶತಮಾನದ್ದಾಗಿದೆ. (ಬಾಗಲಕೋಟೆಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ್‌ರಾವ್ ಆರ್., ೨೦೧೦, ಪು-೩೧೭)

ಪಟ್ಟದಕಲ್ಲಿನ ಮತ್ತೊಂದು ವೀರಗಲ್ಲಿನಲ್ಲಿ (ತುಂಡಾದ) ಕೆಳಗಿನ ಹಂತದಲ್ಲಿ ಒಬ್ಬ ವೀರನ ಅರ್ಧಭಾಗ ಉಳಿದಿದೆ. ಎರಡನೇ ಫಲಕದಲ್ಲಿ ಮಡಿದ ವೀರನನ್ನು ಅಪ್ಸರೆಯರು ಒಯ್ಯುವ ದೃಶ್ಯವಿದೆ. ಅಪ್ಸರೆಯರ ಇನ್ನೊಂದು ಕೈಯಲ್ಲಿ ಕುಂಭವಿದೆ. ಇದು ಕ್ರಿ.ಶ. ಸುಮಾರು ೮ನೇ ಶತಮಾನದ್ದಾಗಿದೆ. (ಬಾಗಲಕೋಟೆಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ್‌ರಾವ್ ಆರ್., ೨೦೧೦, ಪು-೩೧೮)

ಪಟ್ಟದಕಲ್ಲಿನಲ್ಲಿರುವ ಒಂದು ವೀರಗಲ್ಲಿನಲ್ಲಿ ವೀರನು ಇಬ್ಬರು ಶತ್ರುಗಳೊಂದಿಗೆ ಹೋರಾಡುತ್ತಿದ್ದಾನೆ. ಶತ್ರುಗಳು ವೀರನೆಡೆಗೆ ಬಾಣವನ್ನು ಪ್ರಯೋಗಿಸುತ್ತಿರುವವರು. ಮತ್ತಿಬ್ಬರು ಶತ್ರುಗಳು ಕುದುರೆಗಳ ಮೇಲೆ ಕುಳಿತಿರುವರು. ವೀರನ ಹಿಂದೆ ಇಬ್ಬರು ಸ್ತ್ರೀಯರು ನಿಂತಿರುವರು ಒಬ್ಬಳು ಸಣ್ಣ ಹುಡುಗನನ್ನು ಅಂದರೆ ತನ್ನ ಮಗನನ್ನು ಹಿಡಿದು ನಿಂತಿದ್ದು ಸ್ತ್ರೀಯರು ವೀರನೆಡೆಗೆ ನೋಡುತ್ತಿದ್ದಾರೆ. ಇದು ಅವರ ಆತಂಕವನ್ನು ಮತ್ತು ಅವರ ಮೇಲೆ ಆಕ್ರಮಣ ನಡೆದಾಗ ವೀರನು ಅವರನ್ನು ರಕ್ಷಿಸಲು ನಿಂತಿದ್ದನ್ನೂ ಸೂಚಿಸುತ್ತದೆ. ಎರಡನೇ ಹಂತದಲ್ಲಿ ವೀರನು ಅಪ್ಸರೆಯರೊಂದಿಗೆ ಸ್ವರ್ಗಕ್ಕೆ ಪ್ರಯಾಣಿಸುತ್ತಿದ್ದಾನೆ. ಇದು ಪೂರ್ಣವಾಗಿ ಚಾಲುಕ್ಯ ಶೈಲಿಯಲ್ಲಿದ್ದು ವೀರ ಅಪ್ಸರೆಯರು ಮತ್ತು ಆಗಸದಲ್ಲಿ ಹಾರುವ ಶೈಲಿಯಲ್ಲಿದ್ದಾರೆ. ಕಾಲದ ದೃಷ್ಟಿಯಿಂದ ಇದು ಕರ್ನಾಟಕದ ಪ್ರಾಚೀನ ಪೆಣ್ಬುಯ್ಯಲ್ ಸ್ಮಾರಕಶಿಲ್ಪವಾಗಿದೆ. (ಪೆಣ್ಬುಯ್ಯಲ್, ಪರಮಶಿವಮೂರ್ತಿ ಡಿ.ವಿ. ೨೦೧೦.ಪು. ೧೮).

ಲಕ್ಕುಂಡಿಯ ನನ್ನೇಶ್ವರ ಗುಡಿಯ ಪಕ್ಕದಲ್ಲಿನ ಈಗ ಲಕ್ಕುಂಡಿ ವಸ್ತು ಸಂಗ್ರಹಾಲಯದಲ್ಲಿರುವ ಲಿಪಿ ಸಾದೃಶ್ಯದಿಂದ ಸುಮಾರು ೧೦ನೆಯ ಶತಮಾನದ ಪೆಣ್ಬುಯ್ಯಲ್ ವೀರಗಲ್ಲು ನಾಲ್ಕು ಪಟ್ಟಿಕೆಯಿಂದ ಕೂಡಿದ್ದು, ಕೆಳಭಾಗದ ಮೊದಲ ಪಟ್ಟಿಯಲ್ಲಿ ಶಾಸನವಿದೆ. ಎರಡನೆಯ ಪಟ್ಟಿಯಲ್ಲಿ ವೀರನೊಬ್ಬ ಬಿಲ್ಲಿಗೆ ಬಾಣ ಹೋಡುತ್ತಿದ್ದಾನೆ. ಅವನ ಕೆಳಗೆ ಮನುಷ್ಯನ ಶವವಿದೆ. ವೀರನ ದೇಹದಲ್ಲಿ ಬಾಣಗಳು ಚುಚ್ಚಿಕೊಂಡಿವೆ. ಎದುರಿಗೆ ನಿಂತ ವೀರರು ಬಾಣ ಬೀಡುತ್ತಿದ್ದಾರೆ. ಹಿಂಭಾಗದಲ್ಲಿ ತುರುಗಳು ಮತ್ತು ಹೆಣ್ಣುಮಕ್ಕಳಿದ್ದಾರೆ. ಇವರ ರಕ್ಷಣೆಗಾಗಿ ವೀರನೊಬ್ಬ ಹೋರಾಡಿ ಮರಣ ಹೊಂದಿರುವ ವಿಷಯ ಇಲ್ಲಿ ಸ್ಪಷ್ಟವಾಗಿದೆ. ಮೂರನೆಯ ಪಟ್ಟಿಯಲ್ಲಿ ಶಾಸನವಿದ್ದು, ನಾಲ್ಕನೆಯ ಪಟ್ಟಿಯಲ್ಲಿ ವೀರನು ದೇವಕನ್ಯೆಯರೊಂದಿಗೆ ಸ್ವರ್ಗಕ್ಕೆ ಹಾರುತ್ತಿದ್ದಾನೆ. ಈ ಶಿಲ್ಪಗಳ ವಿವರಣೆಯಿಂದ ತುರುಗೋಳ್ ಹಾಗೂ ಪೆಣ್ಬುಯ್ಯಲ್‌ಗಾಗಿ ಹೋರಾಟ ನಡೆದದ್ದು ಸ್ಪಷ್ಟವಾಗುತ್ತದೆ. ಈ ವೀರಗಲ್ಲಿನಲ್ಲಿನ ತುರುಗಳು ಮತ್ತು ಹೆಣ್ಣುಮಕ್ಕಳ ಶಿಲ್ಪದಿಂದ ಇದು ಬಹುಶಃ ಪೆಣ್ಬುಯ್ಯಲ್‌ನಲ್ಲಿ ಹೋರಾಡಿ ಮಡಿದ ವೀರನ ಸ್ಮಾರಕವೇ ಇರಬೇಕೆಂದು ತಿಳಿದು ಬರುತ್ತದೆ.

ಬಾಗಲಕೋಟೆ ಜಿಲ್ಲೆಯ ಪಟ್ಟದಕಲ್ಲಿನಲ್ಲಿರುವ ವೀರಗಲ್ಲು ಮುಕ್ಕಾಗಿದ್ದು ಎರಡು ಹಂತಗಳಿಂದ ಕೂಡಿದೆ. ೬ನೇ ಶತಮಾನದ ಇದು ಕೆಳಹಂತದಲ್ಲಿ ವೀರನು ತನ್ನ ಕೈಯಲ್ಲಿ ಕಿರುಗತ್ತಿಯನ್ನು ಹಿಡಿದು ಶತ್ರುಗಳತ್ತ ಕಿರು ನಗೆಯಿಂದ ನೋಡುತ್ತಿದ್ದಾನೆ. ಶತ್ರುಗಳು ವೀರನತ್ತ ಬಾಣಗಳನ್ನು

ಪ್ರಯೋಗಿಸುತ್ತಿರುವರು. ಇಬ್ಬರು ಕುದುರೆಗಳ ಮೇಲೆ ಕುಳಿತಿರುವರು. ವೀರನ ಹಿಂದೆ ಇಬ್ಬರು ನಗ್ನ ಸ್ತ್ರೀಯರನ್ನು ಒಬ್ಬ ಸಣ್ಣ ಹುಡುಗನನ್ನು ಚಿತ್ರಿಸಲಾಗಿದೆ. ಇದು ಶತ್ರುಗಳೊದಿಗೆ ಮಾನಹಾನಿಗೆ ಒಳಗಾಗುತ್ತಿದ್ದ ಸ್ತ್ರೀಯರನ್ನು ಬಿಡಿಸಿದ ವಿಷಯವನ್ನು ಸಾಂಕೇತಿಕವಾಗಿ ತಿಳಿಸುತ್ತಿದೆ. ಮೇಲಿನ ಹಂತದಲ್ಲಿ ವೀರನು ಇಬ್ಬರು ಅಪ್ಸರೆಯರ ಮೇಲೆ ಕೈ ಹಾಕಿಕೊಂಡು ಸ್ವರ್ಗಕ್ಕೆ ಹಾರುತ್ತಿರುವಂತೆ ಚಿತ್ರಿಸಲಾಗಿದೆ. ಪಾಠವಿಲ್ಲದ ಪ್ರಾಚೀನ ವೀರಗಲ್ಲು ಇದಾಗಿದ್ದು ಪೆಣ್ಬುಯ್ಯಲ್‌ನ ಏಕೈಕ ಉದಾಹರಣೆಯಾಗಿದೆ.

ಹಡಗಲಿ ತಾಲೂಕಿನ ಸೋಗಿಯ ಕಲ್ಲೇಶ್ವರ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲು ಸ್ತ್ರೀಯರ ಮಾನ ರಕ್ಷಣೆಗಾಗಿ ಹೋರಾಡಿ ಮಡಿದ ವೀರನ ನೆನಪಿಗಾಗಿ ಹಾಕಿಸಿದಾಗಿದೆ. ಇದರಲ್ಲಿ ಮೂರು ಹಂತಗಳಿದ್ದು, ಕೆಳಹಂತದಲ್ಲಿ ವೀರನು ಶತ್ರುಗಳೊಡನೆ ಹೋರಾಡುತ್ತಿರುವುದು ಮತ್ತು ಅವನ ಹಿಂಬದಿಯಲ್ಲಿ ಸ್ತ್ರೀಯರನ್ನು ಚಿತ್ರಿಸಲಾಗಿದೆ. ಮಧ್ಯಭಾಗದಲ್ಲಿ ನಾಲ್ಕು ಜನ ಅಪ್ಸರೆಯರು ವೀರನನ್ನು ಪಲ್ಲಕ್ಕಿಯಲ್ಲಿ ಹೊತ್ತಿರುವುದು. ಮೇಲ್ಭಾಗದ ಹಂತದಲ್ಲಿ ಲಿಂಗ ಪೂಜೆಯಲ್ಲಿ ನಿರತನಾದ ವೀರ ಹಾಗೂ ನಂದಿಯನ್ನು ಚಿತ್ರಿಸಲಾಗಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿದೆ.

**೮.೪. ಆತ್ಮಬಲಿಗಲ್ಲುಗಳು :**

ಪ್ರಾಚೀನ ಕಾಲದಲ್ಲಿ 'ಆತ್ಮಬಲಿ' ಸಾಮಾಜಿಕ ಮತ್ತು ಧಾರ್ಮಿಕ ಮೌಲ್ಯವಾಗಿತ್ತು. ಆತ್ಮಬಲಿದಾನಗಳು ಸಹಜ ಮರಣವಲ್ಲವಾದರೂ ಆತ್ಮಹತ್ಯೆ ಎಂದು ಪರಿಗಣಿಸಲಾಗುವುದಿಲ್ಲ. ಆತ್ಮಹತ್ಯೆಗೆ ಅಶಕ್ತ ಮನಸ್ಸು ಕಾರಣ. ಆತ್ಮಬಲಿದಾನಕ್ಕೆ ಸದೃಢ ಗಟ್ಟಿ ಮನಸ್ಸು ಇರಬೇಕು. ಆತ್ಮಬಲಿದಾನದಿಂದ ಸ್ವರ್ಗ ಪ್ರಾಪ್ತಿಯಾಗುತ್ತದೆ ಎಂದು ನಮ್ಮ ಪ್ರಾಚೀನರ ನಂಬಿಕೆ. ನಮ್ಮ ಪೂರ್ವಜರು ಆತ್ಮಬಲಿದಾನಕ್ಕೆ ಧಾರ್ಮಿಕ ಲೇಪನವನ್ನು ಕೊಟ್ಟು ಅದನ್ನು ಸಮರ್ಥಿಸಿಕೊಂಡಿದ್ದಾರೆ. ಒಡೆಯನ ಅನ್ನದ ಋಣಕ್ಕಾಗಿ, ದೇವರ ಹರಿಕೆಗಾಗಿ ಸ್ವರ್ಗ ಪ್ರಾಪ್ತಿಯಾಗುವುದೆಂಬ ಕಲ್ಪನೆಯಿಂದ 'ಆತ್ಮಬಲಿ' ಎನ್ನುವ ಪದ್ಧತಿ ರೂಢಿಯಲ್ಲಿತ್ತು. ಇಂಥ ಪದ್ಧತಿಯನ್ನು ಅನುಸರಿಸಿದವರ ಸ್ಮರಣಾರ್ಥವಾಗಿ ನಿರ್ಮಿಸಿದ ಕಲ್ಲುಗಳೇ 'ಆತ್ಮಬಲಿ ಕಲ್ಲುಗಳು'.

ಈ ಆತ್ಮಬಲಿದಾನಗಲ್ಲುಗಳನ್ನು 'ಧಾರ್ಮಿಕ ಬಲಿದಾನ' ಮತ್ತು 'ಲೌಕಿಕ ಆತ್ಮಬಲಿದಾನ' ಎಂದು ಎರಡು ಬಗೆಯಾಗಿ ವಿಂಗಡಿಸಬಹುದು. ಮುಕ್ತಿಯನ್ನು ಪಡೆಯುವುದಕ್ಕಾಗಿ ದೇವರ ಹೆಸರಿನಲ್ಲಿ ಅಗ್ನಿ ಪ್ರವೇಶ, ಜಲ ಪ್ರವೇಶಗಳ ಮೂಲಕ ಪ್ರಾಣಾರ್ಪಣೆ ಮಾಡಿಕೊಳ್ಳುವುದೇ ಧಾರ್ಮಿಕ ಆತ್ಮಬಲಿದಾನ ಎಂದು ಕರೆಯಲಾಗಿದೆ. ತನ್ನನ್ನು ಪೋಷಿಸಿದ ಮತ್ತು ದೇವ ಸಮಾನರಾದ ವ್ಯಕ್ತಿಗಳ ಮರಣದ ಸಂದರ್ಭದಲ್ಲಿ ಪ್ರಾಣತ್ಯಾಗ ಮಾಡುವುದು ಲೌಕಿಕ ಆತ್ಮಬಲಿದಾನ ಎಂದು ಕರೆಯಲಾಗಿದೆ.

ವ್ಯಕ್ತಿಯು ತನಗೆ ಪ್ರಿಯವಾದ ವಸ್ತು, ಪ್ರಾಣಿ ಅಥವಾ ವ್ಯಕ್ತಿಯಿಂದ ಅಗಲಿಕೆ ತಡೆಯಲಾರದೆ ಪ್ರಾಣ ಕಳೆದುಕೊಳ್ಳುತ್ತಿದ್ದನು. ಇದರಲ್ಲಿ ಆತ್ಮತೃಪ್ತಿ ಹಾಗೂ ನಿಷ್ಠೆ ಬಲವಾಗಿ ಅಡಗಿರುತ್ತಿತ್ತು. ಈ ರೀತಿ ಆತ್ಮಬಲಿದಾನವನ್ನು ಮಾಡಿಕೊಳ್ಳುವುದು ಪರಮ ಪುಣ್ಯದ ಕೆಲಸವೆಂದು ನಂಬಲಾಗಿತ್ತು.

ಕ್ರಿ.ಶ. ೮೬೫ರ ಒಂದನೆಯ ಅಮೋಘವರ್ಷನ ಕಾಲಕ್ಕೆ ಸೇರಿದ ಮೇವುಂಡಿ ಶಾಸನವೊಂದು ವೇಳಾವಾಳಿತನವನ್ನು ಕುರಿತು ಪ್ರಸ್ತಾಪಿಸುವ ಈ ಭಾಗದ ಮೊಟ್ಟ ಮೊದಲ ಶಾಸನ. ಈ ಶಾನದಲ್ಲಿ "ಸ್ವಸ್ತಮೋಘವರ್ಷ ಶ್ರೀ ಪೃಥುವೀವಲ್ಲಭ ಮಹಾರಾಜಾಧಿ ರಾಜಂ ಪರಮೇಶ್ವರ ಭಟಾ (ರ) ಕ (ರ) ಪೃಥುವೀರಾಜ್ಯಂಗೆಯ...ಸಂಪನ್ನ ಯಾದವ ವಂಶೋ...(ರ್ವ್ವ) ಧವ ಜಿಡ್ಡುಣಾಳಂ...ದಿ ಶ್ರೀ ಮತ್ತುಪ್ಪೆಯರಸರ...ಮಗ ನಣ್ಣುಗ ರಟ್ಟೆಯ (ಣ್ನ) (ಸಂ) ಬೆಳಾ (ವ) ಡಿತ ಮೇಜೆಮಡು ವಿಜ್ದು ಅರ(ಸ) ನಮೆ (ಯ್ಗೆ) ಕರಮೆಂಬು (ದ)ಂ ಕೇಳ್ದುಲ್ಲ ಮುನ್ದನಿನ್ನು ಕೂಜೌತೂ ಅದು ಮೂವತ್ತು...ಗಾವುದ...ದೆವಸದೊಳಯ್ದಿ ಅರಸನಂ ಜಾಮಿಸಿ ನುರಿವುತ್ತಿಜ್ದುದಂ ಕಣ್ಣು ಕೀಜ್ದುಣ್ಟೆಯಾಗಲ್ಕು (ಡ) ದುದಮಂ ಕುಡುವೆನೆನ್ದು ಪಿಡಿಖಣ್ಡ (ಂ) ಗೊಣ್ಡು ದೆಸೆವಲಿಗೆ ಅ ಪೊಜ್ದುಕ (ರು)ಳ ಬೋ (ನಿಡಿ)ಗಲ್ಲೊಳಿಕ್ಕೆ...ಎಜ್ದ (ಯ)...ಮರೆಪಲ (ರ್ಮ್ಮ) ಡಿ ಆದಿತ್ಯಂಗೆತ್ತಿ ಇತ್ತಕ್ಕೆ ಮೆಳ್ಗೆಲ್ಲ ತೋಜೆಬೋರನ್ದಜೆಯಿಸಿ...ತೊ (ಟ್ಟಿರ್ದ್ದ) ತಂಬು...ಸೂಜು ಗುಜ್ದು ಆಕಿ ಮಾರಿ ವೆಚ್ಚ (ಡೆ)ರ್ವಿ... ಸಕವ...ಜ ಎಣ್ಭತ್ತಾವಿನೆಯ ವರ್ಷಂ ಪೋದ (ಬ) ಜೆಕ್ಕೆ ನಿನ್ದುದೀಕಲ್ಲಿ ಪುರಿಗಜೆಯಿಂ ಭನ್ದ ಪೊಲೆಯಣ್ಣನ ಶಿಲಾಕರ್ಮ್ಮ ಅರ(ಕು)ಳಿಯನ ಕಲ್ಲುಮಿಕಲ್ಲು" ಎಂದು ರೆಟ್ಟಿಯಣ್ಣ ಎಂಬುವನು ತನ್ನ ಅರಸನ ಆರೋಗ್ಯ ಸರಿ ಇಲ್ಲ ಎಂದು ತಿಳಿದು ಅರಸನನ್ನು ನೋಡಲು ತಕ್ಷಣವೇ ಅವನು ಖಡ್ಗದಿಂದ ತನ್ನ ಕತ್ತನ್ನು ಕತ್ತರಿಸಿಕೊಳ್ಳುತ್ತಾನೆ. ಈ ಶಾಸನ ಶಿಲ್ಪದ ಕೆಳಹಂತದ ಮೂಲೆಯಲ್ಲಿ ಒಬ್ಬ ವ್ಯಕ್ತಿಯ ಒಂದು ಆಳವಾದ ಗುಂಡಿಯೊಳಗೆ ಕುಳಿತಿದ್ದಾನೆ. ಇವನೇ ರೆಟ್ಟಿಯಣ್ಣನಿರಬಹುದು. ಈ ಗುಂಡಿಯು ಕಲ್ಲಿನ ಸಮಾಧಿಯಾಗಿದ್ದು, ಇವನು ಕೂಡ ಸಾಯಲು ಸಮಾಧಿಯಲ್ಲಿ ಕುಳಿತಿದ್ದಾನೆ. ಈ ಸಮಾಧಿಯ ಮರಣವನ್ನೇ ನಿಜವಾದ ಅರ್ಥದಲ್ಲಿ ಕಿಜ್ಗುಂಟೆ ಎಂದು ಕರೆಯುವುದು. ಇದು ಮುಂದೆ ಅಗ್ನಿಪ್ರವೇಶ ಮಾಡಿದವನಿಗೂ ಕ್ರಿಯಾಪದವಾಗಿ ಬಳಕೆಯಾಗಿರಬಹುದು. (ಎಸ್.ಐ.ಐ. ೧೧, ಮೇವುಂಡಿ ಶಾ.ಸಂ-೧೧)

ಧಾರವಾಡ ತಾಲೂಕಿನ ಅಳ್ನಾವರದ ಕಲ್ಮೇಶ್ವರ ಗುಡಿ ಆವರಣದಲ್ಲಿನ ಕ್ರಿ.ಶ. ೧೧ನೆಯ ಶತಮಾನದ ಆತ್ಮಬಲಿಗಲ್ಲು. ಇದು ಮೂರು ಪಟ್ಟಿಕೆಗಳಿಂದ ಕೂಡಿದೆ. ಕೆಳಗಿನ ಪಟ್ಟಿಕೆಯಲ್ಲಿ ವೀರ ಕೈಮುಗಿದು ಅರ್ಧ ಪದ್ಮಾಸನದಲ್ಲಿ ಕುಳಿತಿದ್ದಾನೆ. ತನ್ನ ಕೇಶವನ್ನು ತಲೆಯ ಮೇಲೆ ವೃತ್ತಾಕಾರವಾಗಿ ಕಟ್ಟಿದ್ದು, ಕಿವಿಯಲ್ಲಿ ಕುಂಡಲಗಳಿವೆ. ಈತನ ಬಲಕ್ಕೆ ಒಬ್ಬ ವ್ಯಕ್ತಿ ತನ್ನ ಕೈಯಲ್ಲಿ ಮಚ್ಚನ್ನು ಹಿಡಿದು ನಿಂತಿದ್ದಾನೆ. ಈತ ವೀರನನ್ನು ಬಲಿ ತೆಗೆದವನಾಗಿದ್ದಾನೆ. ಎರಡನೆಯ ಪಟ್ಟಿಕೆಯಲ್ಲಿ ಇಬ್ಬರು ಅಪ್ಸರೆಯರು ವೀರನನ್ನು ತಮ್ಮ ಭುಜದ ಮೇಲೆ ಹಾಕಿಕೊಂಡು ದೇವಲೋಕಕ್ಕೆ ಕರೆದೊಯ್ಯುತ್ತಿದ್ದಾರೆ. ಮೇಲಿನ ಪಟ್ಟಿಕೆಯಲ್ಲಿ ವೀರ ಸುಖಾಸನದಲ್ಲಿ ಪೀಠದ

ಮೇಲೆ ಕುಳಿತಿದ್ದಾನೆ. ಬಲಗೈಯಲ್ಲಿ ಕಮಲ ಹಿಡಿದು, ಎಡಗೈಯನ್ನು ತೊಡೆಯ ಮೇಲಿಟ್ಟುಕೊಂಡಿದ್ದಾನೆ. ವೀರನನ್ನು ಇಲ್ಲಿ ಕಿರೀಟಧಾರಿಯನ್ನಾಗಿ ತೋರಿಸಿರುವುದು ವಿಶೇಷವಾಗಿದೆ. ಈತನ ಇಕ್ಕೆಲಗಳಲ್ಲಿ ತ್ರಿಭಂಗಿಯಲ್ಲಿ ನಿಂತ ಚೌರಿಧಾರಿಯರಿದ್ದಾರೆ. (ಧಾರವಾಡ ಜಿಲ್ಲೆಯ ಪುರಾತತ್ವ, ಜಯಮ್ಮ ಬಿ., ೨೦೧೦, ಪುಟ-೨೪೮)

ಇದೇ ಗ್ರಾಮದ ಎರಡನೆಯ ಆತ್ಮಬಲಿಗಲ್ಲಿನಲ್ಲಿಯೂ ಇದೇ ರೀತಿಯ ದೃಶ್ಯಗಳಿವೆ. ಅಂದರೆ ಒಂದೆರಡು ಅಂಶಗಳು ಸ್ವಲ್ಪ ಭಿನ್ನವಾಗಿವೆ. ಇಲ್ಲಿ ಕೆಳಗಿನ ಪಟ್ಟಿಕೆಯಲ್ಲಿ ವೀರನ ಬದಿಯಲ್ಲಿ ನಿಂತ ಮತ್ತೊಬ್ಬ ವ್ಯಕ್ತಿಯನ್ನು ತೋರಿಸಲಾಗಿದೆ. ಈತ ತಲೆಗೆ ಪೇಟ, ರುಮಾಲು ಕಟ್ಟಿದ್ದಾನೆ. ಈತ ಬರಿ ಮೈಲಿ ಇದ್ದು, ಕೇವಲ ಕಚ್ಚೆಯನ್ನು ಉಟ್ಟಿದ್ದಾನೆ. ಬಹುಶಃ ಈ ವ್ಯಕ್ತಿ ಸೇವಕನಿರಬಹುದು. ಇನ್ನು ದೇವಲೋಕದ ಚಿತ್ರಣದಲ್ಲಿ ವೀರ ತನ್ನ ಎರಡೂ ಪಾದಗಳನ್ನು ಒಂದಕ್ಕೊಂದು ತಾಗಿಸಿಕೊಂಡು ಕುಳಿತಂತೆ ಕಂಡರಿಸಲಾಗಿದೆ. ಮೊದಲನೆಯ ವೀರಗಲ್ಲಿಗೆ ಹೋಲಿಸಿದರೆ ಇಲ್ಲಿಯ ಶಿಲ್ಪಗಳು ಅಷ್ಟು ಪ್ರಮಾಣಬದ್ಧವಾಗಿಲ್ಲ ಎನ್ನಬಹುದು. ಎರಡನೆಯ ವೀರಗಲ್ಲಿನ ಮೇಲಿನ ಭಾಗದಲ್ಲಿ ವೀರ ಮತ್ತು ಬಲಬದಿಯ ಅಪ್ಸರೆಯರ ಮುಖಗಳು ಭಗ್ನಗೊಂಡಿವೆ. ಈ ಆತ್ಮಬಲಿ ಕಲ್ಲು ಕ್ರಿ.ಶ. ೧೦ನೆಯ ಶತಮಾನದ್ದಾಗಿದೆ.

ಕುಷ್ಟಗಿ ತಾಲೂಕಿನ ಅಂಟೂರತಾಣ ಜಂಭುನಾಥೇಶ್ವರ ದೇವಾಲಯದಲ್ಲಿ ಕ್ರಿ.ಶ. ೧೨ನೆಯ ಶತಮಾನದ ಒಂದು ವೀರಗಲ್ಲು ಇದೆ. ಇದು ಮೂರು ಹಂತಗಳ ವೀರಗಲ್ಲಾಗಿದೆ. ಇದು ಸಾಮಾನ್ಯವಾದ ದೃಶ್ಯಗಳನ್ನು ಹೊಂದಿದೆ. ಕೆಳಹಂತದಲ್ಲಿ ಕೈಯಲ್ಲಿ ಬಿಲ್ಲನ್ನು ಹಿಡಿದುಕೊಂಡು ವೈರಿಗಳೊಂದಿಗೆ ಹೋರಾಡುತ್ತಿರುವ ದೃಶ್ಯ. ಮಧ್ಯ ಹಂತದಲ್ಲಿ ಮಂಟಪದ ಮಧ್ಯದಲ್ಲಿ ವೀರಯೋಧ ಶಿವಲಿಂಗ ಪೂಜೆಯಲ್ಲಿ ಮಗ್ನನಾಗಿರುವಂತೆ ಬಿಡಿಸಲಾಗಿದೆ.

ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಲಕ್ಷ್ಮೇಶ್ವರದಲ್ಲಿ ಪಾಟೀಲ ಕುಲಕರ್ಣಿ ಅವರ ಬಾವಿಯ ಹತ್ತಿರವಿರುವ ಆತ್ಮಬಲಿಗಲ್ಲು ೧೨ನೆಯ ಶತಮಾನದ್ದಾಗಿದ್ದು, ಚಾಲುಕ್ಯರ ಕಾಲಕ್ಕೆ ಸೇರುತ್ತದೆ. ಇದು ಐದು ಅಡಿ ಎತ್ತರ, ಎರಡು ಅಡಿ ಅಗಲವಾಗಿದ್ದು ಮೂರು ಹಂತಗಳಿಂದ ಕೂಡಿದೆ. ಎರಡನೇ ಪಟ್ಟಿಕೆಯಲ್ಲಿ ೧೨ನೆಯ ಶತಮಾನದ ಲಿಪಿಯಿದ್ದು, ಇದು "ಶ್ರೀಮತು ಮಲ್ಲಿದೇವನ ಡಿಂಗರಿಗ ಕೊಪ್ಪಯ್ಯನು ಜಾವಿಮಲೋವೆಯ ಕಾಲ ಕೆಳಗೆ ತಲೆಯಳಿವಿಸಿಕೊಂಡ" ಎಂದು ಹೇಳುತ್ತದೆ. (ಎಸ್.ಐ.ಐ. ೨೦, ಲಕ್ಷ್ಮೇಶ್ವರ ಶಾ.ಸಂ-೨೯) ಅಂದರೆ ಮಲ್ಲೇದೇವನ ಸೇವಕನಾದ ಕೊಪ್ಪಯ್ಯನು ಜಾವಿಲೋವೆಯ ಸನ್ನಿಧಿಯಲ್ಲಿ ತಲೆಯನ್ನು ಕತ್ತರಿಸಿಕೊಂಡು ಪ್ರಾಣ ಅರ್ಪಿಸಿದನು ಎಂಬುದಾಗಿ ವಿವರಿಸುತ್ತದೆ. ಈ ಶಾಸನ ಶಿಲ್ಪದಲ್ಲಿ ಮೂರು ಹಂತಗಳಿದ್ದು, ಕೆಳಗಿನ ಹಂತದಲ್ಲಿ ಕೊಪ್ಪಯ್ಯನು ಒಬ್ಬ ವ್ಯಕ್ತಿಯಿಂದ ತಲೆ ಕತ್ತರಿಸಿಕೊಳ್ಳುತ್ತಿರುವ ದೃಶ್ಯವಿದೆ. ಅವನ ಪಾದಗಳ ಕೆಳಗೆ ಬಿದ್ದಿದೆ. ಅವನ ಪಕ್ಕದಲ್ಲಿ ಅಲಂಕೃತಗೊಂಡ ಕುದುರೆ ಮತ್ತು ಛತ್ರಿಯನ್ನು ಹಿಡಿದು ವ್ಯಕ್ತಿಯೊಬ್ಬ ನಿಂತಿದ್ದಾನೆ. ಇದು ತಲೆಯನ್ನು ಕತ್ತರಿಸಿಕೊಂಡಿರುವ ಕೊಪ್ಪಯ್ಯನು ಒಬ್ಬ ಪ್ರಮುಖ ಅಧಿಕಾರಿ ಎಂಬುದನ್ನು ಸಂಕೇತಿಸುತ್ತದೆ. ತಲೆಯನ್ನು ಕತ್ತರಿಸಿರುವ ವ್ಯಕ್ತಿ ತನ್ನ ಕೈಯಲ್ಲಿ ಉದ್ದನೆಯ

ಖಡ್ಗವನಿಡಿದು ನಿಂತಿದ್ದಾನೆ. ತಲೆ ಕಡಿಸಿಕೊಂಡ ಕೊಪ್ಪಯ್ಯ ಪದ್ಮಾಸನದಲ್ಲಿ ಕುಳಿತಿದ್ದು, ಇದು ಅವನ ಧನ್ಯತಾಭಾವದಿಂದ ಬಲಿಯಾಗಿದ್ದನ್ನು ಸಂಕೇತಿಸುತ್ತದೆ. ಎರಡನೆಯ ಹಂತದಲ್ಲಿ ಕೊಪ್ಪಯ್ಯನು ಮಂಟಪದಲ್ಲಿ ಕುಳಿತಿದ್ದು, ಅವನ ಎರಡು ಬದಿಯಲ್ಲಿ ಅಪ್ಸರೆಯರು ಚಾಮರದಿಂದ ಗಾಳಿ ಬೀಸುತ್ತಾ ಪುಷ್ಪಕ ವಿಮಾನದಲ್ಲಿ ಸ್ವರ್ಗಕ್ಕೆ ಕರೆದೊಯ್ಯುತ್ತಿದ್ದಾರೆ. ಮೂರನೆಯ ಹಂತದಲ್ಲಿ ಕೊಪ್ಪಯ್ಯನು ಶಿವಲಿಂಗದ ಬದಿಯಲ್ಲಿ ಭಕ್ತಿಯಿಂದ ಕೈಮುಗಿದು ಕುಳಿತಿದ್ದಾನೆ. ಯತಿಯೊಬ್ಬ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿದ್ದಾನೆ. ಇದು ಅವನು ಸ್ವರ್ಗಕ್ಕೆ ಸೇರಿರುವುದನ್ನು ಧ್ವನಿಸುತ್ತದೆ. ಇದು ಅತ್ಯಂತ ಅಪರೂಪದ ಆತ್ಮಬಲಿ ಶಾಸನವಾಗಿದ್ದು, ಒಡೆಯನ ಮರಣದ ನಂತರ ತಮ್ಮ ಪ್ರಾಣವನ್ನು ಅರ್ಪಣೆ ಮಾಡುತ್ತಿದ್ದ ಆತ್ಮಬಲಿ ಸಂಪ್ರದಾಯವನ್ನು ತಿಳಿಸುತ್ತದೆ.

ಗದಗ ತಾಲೂಕಿನ ಬೆಳದಡಿಯ ಬಸವಣ್ಣ ದೇವರ ಗುಡಿಯ ಗೋಡೆಗೆ ನಿಲ್ಲಿಸಿರುವ ಸಿಡಿತಲೆ ಶಿಲ್ಪವನ್ನು ಇಲ್ಲಿ ಗುರುತಿಸಬಹುದು. ಈ ಶಿಲ್ಪವು ಮೂರು ಹಂತಗಳಲ್ಲಿದ್ದು, ಮೊದಲನೆಯ ಹಂತದಲ್ಲಿ ಸ್ತ್ರೀಯೊಬ್ಬಳು ಧ್ಯಾನಭಂಗಿಯಲ್ಲಿ ಕುಳಿತಿದ್ದಾಳೆ. ಎದುರಿಗೆ ವ್ಯಕ್ತಿಯೊಬ್ಬ ಖಡ್ಗವನ್ನು ಮೇಲಕ್ಕೆತ್ತಿ ಹಿಡಿದು ನಿಂತಿದ್ದಾನೆ. ಎರಡನೆಯ ಹಂತದಲ್ಲಿ ಅಪ್ಸರೆಯರು ಆಕೆಯನ್ನು ಹೆಗಲ ಮೇಲೆ ಹೊತ್ತು ಸ್ವರ್ಗಕ್ಕೆ ಸಾಗುತ್ತಿದ್ದಾರೆ. ಮೂರನೆಯ ಹಂತದಲ್ಲಿ ಸ್ತ್ರೀಯು ಸ್ವರ್ಗದಲ್ಲಿ ಧ್ಯಾನಾಸಕ್ತಳಾಗಿ ಕುಳಿತಿರುವಂತೆ ಚಿತ್ರಿಸಲಾಗಿದ್ದು, ಇದು ೧೨ನೆಯ ಶತಮಾನದ್ದಾಗಿದೆ.

ಕುಷ್ಟಗಿ ತಾಲೂಕಿನ ಗೋತಗಿ ಹನುಮಂತ ದೇವಾಲಯದಲ್ಲಿ ಕ್ರಿ.ಶ. ೧೬ನೆಯ ಶತಮಾನದ ಎರಡು ವೀರಗಲ್ಲು ಇದೆ. ವೀರಗಲ್ಲಿಗೆ ಸುಣ್ಣ ಹಚ್ಚಲಾಗಿದೆ. ಇದು ಮೂರು ಹಂತಗಳನ್ನು ಹೊಂದಿದೆ. ಕೆಳಹಂತ ಅಸ್ಪಷ್ಟವಾಗಿದ್ದು, ಮಧ್ಯದಲ್ಲಿ ವೀರನನ್ನು ಕರೆದುಕೊಂಡು ಹೋಗುತ್ತಿರುವ ಅಪ್ಸರೆಯರು ಮತ್ತು ಲಲಾಟ ಭಾಗದಲ್ಲಿ ಶಿವಲಿಂಗದ ಆರಾಧನೆಯಲ್ಲಿ ತಲ್ಲೀನನಾಗಿರುವ ವೀರನನ್ನು ಕೆತ್ತಲಾಗಿದೆ.

ಗೋತಗಿಯಲ್ಲಿರುವ ಇನ್ನೊಂದು ವೀರಗಲ್ಲು ಒಂದೇ ಮಾದರಿಯಲ್ಲಿವೆ. ಕೆಳಹಂತದಲ್ಲಿ ಬಿಲ್ಲು-ಬಾಣಗಳೊಂದಿಗೆ ವೈರಿಯೊಂದಿಗೆ ಹೋರಾಡುತ್ತಿದ್ದು, ಮಧ್ಯದಲ್ಲಿ ಮರಣ ಹೊಂದಿದ ವೀರನನ್ನು ಕರೆದುಕೊಂಡು ಹೋಗುತ್ತಿರುವ ಅಪ್ಸರೆಯರು, ಮೇಲಿನ ಹಂತದಲ್ಲಿ ಶಿವಲಿಂಗದ ಆರಾಧನೆಯಲ್ಲಿ ತೊಡಗಿಕೊಂಡಿರುವಂತೆ ಚಿತ್ರ ಬಿಡಿಸಲಾಗಿದೆ.

ಯರಗೇರಿ ಹನುಮಂತ ದೇವಾಲಯದಲ್ಲಿನ ವೀರಗಲ್ಲಿನ ಮೇಲೆ ಪ್ರಕಟಿತ ಶಾಸನವಿದೆ. ಈ ಶಾಸನದಲ್ಲಿ ಯರಗೇರಿಯ ಮೆಲಗಿರಗೌಡ ಮಗ ಮಾಚಕ? ಗೌಡ...ಕಟ್ಟಿಸಿದ ಮುಂದೆ ಅಸ್ಪಷ್ಟವಾಗಿದೆ. ಈ ವೀರಗಲ್ಲಿನ ಮೇಲಿರುವ ವೀರನು ಕುದುರೆಯ ಮೇಲೆ ಕುಳಿತಿದ್ದು, ಕೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ಯುದ್ಧಕ್ಕೆ ಸನ್ನದ್ಧನಾಗಿ ಹೋಗುತ್ತಿರುವಂತೆ ಕಾಣುತ್ತದೆ. ತಾವರಗೆರೆಯಿಂದ ನಾರಿನಾಳ ಗ್ರಾಮಕ್ಕೆ ಹೋಗುವ ಮಾರ್ಗದಲ್ಲಿ ತಾವರಗೆರೆಯಿಂದ ಸುಮಾರು ಎರಡು ಕಿ.ಮೀ. ದೂರದಲ್ಲಿ ಮಲ್ಲಪ್ಪ ಜಾಮಲಾಪುರ ಎಂಬುವವರ ಹೊಲದ ಪಕ್ಕದಲ್ಲಿ ಒಂದಿದೆ. ಇದರಲ್ಲಿ ವೀರನು ಎಡಗೈಯಲ್ಲಿ ಬಿಲ್ಲನ್ನು ಹಿಡಿದು, ಬಲಗೈಯಲ್ಲಿ ಬಾಣವನ್ನು ಹಿಡಿದುಕೊಂಡು ಹೋಗುತ್ತಿರುವಂತೆ ಚಿತ್ರಿಸಲಾಗಿದೆ.

ಜಾಲಿಹಾಳ ಶಿವಲಿಂಗಪ್ಪ ಬಾಗಾವಿ ಅವರ ಮನೆಯ ಹಿಂದೆ ಇರುವ ವೀರಗಲ್ಲಿನಲ್ಲಿ ವೀರನು ಎಡಗೈಯಿಂದ ಕುದುರೆಯನ್ನು ಹಿಡಿದು, ಬಲಗೈಯಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ವೀರ ಯುದ್ಧಕ್ಕೆ ಸನ್ನದ್ಧರಾಗಿ ಹೊರಟಿರುವಂತೆ ಕಾಣಿಸುತ್ತದೆ.

ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ಹೊರ ಆವರಣದಲ್ಲಿ ವಿಜಯನಗರ ಕಾಲದ ಆತ್ಮಬಲಿದಾನ ಶಿಲ್ಪ ಇದೆ. ಈ ಶಿಲ್ಪದಲ್ಲಿ ಮಹಿಳೆಯೊಬ್ಬಳು ತನ್ನ ತಲೆಯನ್ನು ಕತ್ತರಿಸಿಕೊಂಡು ಆತ್ಮಬಲಿಗೈದ ಸುಂದರವಾದ ಉಬ್ಬುಶಿಲ್ಪವಿದೆ. ಅಂಜಲಿ ಮುದ್ರೆಯಲ್ಲಿ ಕುಳಿತ ಭಂಗಿಯ ಮಹಿಳೆಯ ದೇಹ ಮತ್ತು ಕತ್ತರಿಸಿದ ಅವಳ ಶಿರವನ್ನು ಬೇರೆ ಬೇರೆಯಾಗಿ ಅಂದರೆ ಮುಂಡದಿಂದ ಶಿರವನ್ನು ಪ್ರತ್ಯೇಕವಾಗಿ ಮುಂಡದ ಮೇಲ್ಭಾಗ ಬಲಭಾಗದಲ್ಲಿ ಕತ್ತರಿಸಲಾಗಿದೆ. ಕಿವಿಯಲ್ಲಿ ವರ್ತುಲಾಕಾರ ಓಲೆ, ತಲೆಯ ಮೇಲೆ ಕೇಶದ ದೊಡ್ಡ ಮಂಡಿಯಂತಹ ಜುಟ್ಟು ಕಟ್ಟಿದಂತೆ ಕೆತ್ತಲಾಗಿದೆ. ಈ ಶಿಲೆಯ ಮೇಲ್ಭಾಗದಲ್ಲಿ ಬಲಬದಿಯಲ್ಲಿ ಸೂರ್ಯ ಹಾಗೂ ಎಡಬದಿಯಲ್ಲಿ ಚಂದ್ರರನ್ನು ಕೆತ್ತಲಾಗಿದೆ. ಸೀರೆಯ ಕೆತ್ತನೆ ತುಂಬಾ ಕಲಾತ್ಮಕವಾಗಿದೆ. ಕಾಲಲ್ಲಿ ಕಡಗ ಧರಿಸಿದ್ದಾಳೆ. ಈ ಶಿಲ್ಪ ಶಿರಚ್ಛೇಧನ ಮಾಡಿಕೊಂಡ ಸರಳವಾದ ಬಲಿದಾನ ಶಿಲ್ಪವಾಗಿದ್ದು, ಈ ಆತ್ಮಬಲಿದಾನ ಶಿಲ್ಪದ ವಸ್ತು ಬೆಣಚುಕಲ್ಲು.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿ ಕ್ರಿ.ಶ. ೧೫ನೆಯ ಶತಮಾನದ ಆತ್ಮಬಲಿದಾನಗಲ್ಲು ಇದೆ. ಇದರಲ್ಲಿ ವೀರ ತನ್ನ ತಲೆಯನ್ನು ಕಡಿದು ತಾನೇ ಎಡಗೈಯಲ್ಲಿ ಹಿಡಿದಿದ್ದಾನೆ. ಬಲಗೈ ಕಟ್ಟಾವಲಂಬಿತವಾಗಿದೆ. ವೀರ ಸೊಂಟಪಟ್ಟಿ ಕಟ್ಟಿದ್ದಾನೆ. ಶಿಲ್ಪದ ವಸ್ತು ಬೆಣಚಕಲ್ಲು.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿ ಕ್ರಿ.ಶ. ೧೫ನೆಯ ಶತಮಾನದ ಆತ್ಮಬಲಿದಾನ ಶಾಸನವಿದೆ. (ಗರುಡ–ವೀರ ಸ್ಮಾರಕ) ಇದರಲ್ಲಿ ವೀರ ತನ್ನ ರುಂಡವನ್ನು ತಾನೇ ಕತ್ತರಿಸಿಕೊಂಡು ಕತ್ತರಿಸಿದ ಶಿರವನ್ನು ತಾನೇ ತನ್ನ ಎಡಗೈಯಲ್ಲಿ ಹಿಡಿದು ಸ್ಥಾನಿಕ ಭಂಗಿಯಲ್ಲಿದ್ದಾನೆ. ಬಲಗೈಯನ್ನು ಇಳಿಬಿಟ್ಟಿದ್ದಾನೆ. ಇದು ವೀರನ ಆತ್ಮಸ್ಥೈರ್ಯ ತ್ಯಾಗದ ಸಂಕೇತವಾಗಿದೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿ ಕ್ರಿ.ಶ. ೧೬ನೆಯ ಶತಮಾನದ ಆತ್ಮಬಲಿದಾನಗಲ್ಲು ಇದೆ. ಈ ಶಿಲ್ಪದಲ್ಲಿ ವೀರನ ಶಿರವು ಛೇದಿಸಲಾಗಿದ್ದು, ಸ್ಥಾನಿಕ ಭಂಗಿಯಲ್ಲಿದ್ದಾನೆ. ವೀರ ತನ್ನ ರುಂಡವನ್ನು ತಾನೇ ಕತ್ತರಿಸಿಕೊಂಡಿದ್ದಾನೆ. ಕತ್ತರಿಸಿದ ಶಿರವನ್ನು ವೀರ ಬಲಗೈಯಲ್ಲಿ ಹಿಡಿದುಕೊಂಡಿರುವುದು ಇಲ್ಲಿ ವೀರನ ಆತ್ಮಸ್ಥೈರ್ಯ ಹಾಗೂ ತ್ಯಾಗದ ಸಂಕೇತವನ್ನು ಪ್ರತಿಬಿಂಬಿಸುತ್ತದೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯಲ್ಲಿರುವ ಕ್ರಿ.ಶ. ೧೬ನೆಯ ಶತಮಾನದ ಆತ್ಮಬಲಿದಾನ ಶಾಸನ ಶಿಲ್ಪದ ಸ್ತಂಭದ ಕೆಳಭಾಗ ಚೌಕಾಕಾರವಾಗಿದ್ದು, ಅದರ ಮೇಲ್ಭಾಗ ದುಂಡಾಕಾರವಾಗುತ್ತಾ ಹೋಗುತ್ತದೆ. ಚೌಕಾಕಾರದ ನಾಲ್ಕು ದಿಕ್ಕುಗಳಲ್ಲಿ ವೀರ

ಬಲಗೈಯಿಂದ ಕತ್ತಿಯನ್ನು ಎತ್ತಿ ತನ್ನ ಕುತ್ತಿಗೆಗೆ ಕತ್ತಿ ಹಿಡಿದು ನಿಂತಿದ್ದಾನೆ. ಇದು ಆತ್ಮಬಲಿದಾನ ಶಿಲ್ಪ ಇದಾಗಿದೆ.

**೮.೫. ಗೋಸಾಸ ಶಾಸನ ಶಿಲ್ಪ :**

ದಾನ ಶಾಸನಗಳಲ್ಲಿ ಗೋಸಾಸಗಲ್ಲು ಒಂದಾಗಿದ್ದು, ದಾನಗಳಲ್ಲಿ ಅನ್ನದಾನ ಶ್ರೇಷ್ಠವಾಗಿದ್ದರೂ ಪ್ರಾಚೀನ ಕಾಲದಲ್ಲಿ ಗೋದಾನಕ್ಕೆ ಮಹತ್ವದ ಸ್ಥಾನವಿತ್ತು. ಗೋವು ಪ್ರಾಚೀನ ಕಾಲದ ಧಾರ್ಮಿಕ ಜೀವನದಲ್ಲಿ ಶ್ರೇಷ್ಠ ಸ್ಥಾನ ಗಳಿಸಿಕೊಂಡಿತ್ತು. ಇದನ್ನು ಸಂಪತ್ತಿನ ಸಾಧನವೆಂದೂ ಪರಿಗಣಿಸಲಾಗಿತ್ತು. ಗೋವುಗಳನ್ನು ದಾನ ಮಾಡಿದ ಸಂದರ್ಭದಲ್ಲಿ ಪರೋಕ್ಷವಾಗಿ ಅವರ ನೆನಪಿಗಾಗಿ ನಿಲ್ಲಿಸಿದ ಶಿಲಾಸ್ತಂಭಗಳನ್ನು ಗೋಸಾಸಗಳು ಎಂದು ಕರೆಯಲಾಗುತ್ತದೆ.

'ಗೋಸಾಸ' ಎಂಬುದು ಸಂಸ್ಕೃತದ ಗೋಸಹಸ್ರ ಎಂಬ ಪದದ ರೂಪ. ಈ ಪದದ ಅರ್ಥದ ಬಗ್ಗೆ ಡಾ. ಫ್ಲೀಟ್, ಎನ್. ಲಕ್ಷ್ಮೀನಾರಾಯಣರಾವ್, ಡಾ. ಎಂ. ಚಿದಾನಂದಮೂರ್ತಿ, ಡಾ. ಎಂ.ಎಂ. ಕಲಬುರ್ಗಿ ಇವರು ಸಾಕಷ್ಟು ಚರ್ಚೆ ನಡೆಸಿದ್ದಾರೆ. ಇಲ್ಲಿ ವಾದ ವಿವಾದಗಳು ಏನೇ ಇದ್ದರೂ 'ಗೋಸಾಸ'ವೆಂಬುದು ಗೋ ಸಹಸ್ರದ ತದ್ಭವ ರೂಪವೆಂದು ಉಲ್ಲೇಖಿಸಿದ್ದಾರೆ. (ಕನ್ನಡ ಶಾಸನ ಶಿಲ್ಪ, ಪರಮಶಿವಮೂರ್ತಿ ಡಿ.ವಿ. ೧೯೯೯, ಪು-೬೮)

ಜೊತೆಗೆ ರನ್ನನ 'ಅಜಿತನಾಥ ಪುರಾಣ'ದಲ್ಲಿ, ಮನಸ್ಮೃತಿಯಲ್ಲಿ, ಮತ್ಸ್ಯ ಪುರಾಣ ಮತ್ತು ಲಿಂಗ ಪುರಾಣದಲ್ಲಿ ಉಲ್ಲೇಖಿಸಲಾಗಿದೆ. ಕರ್ನಾಟಕದಲ್ಲಿ ಇದರ ಪ್ರಾಚೀನತೆ ನೋಡಿದರೆ ಕ್ರಿ.ಶ. ಸುಮಾರು ೮ನೆಯ ಶತಮಾನದಿಂದ ೧೦ನೆಯ ಶತಮಾನದ ಉತ್ತರಾರ್ಧದ ಕಾಲಘಟ್ಟದಿಂದ ಗುರುತಿಸಬಹುದಾಗಿದೆ. ಅಂದರೆ ಬಾದಾಮಿ ಚಾಲುಕ್ಯರ ಮನೆತನದ ಉತ್ತರಾರ್ಧದ ಕಾಲಘಟ್ಟದಿಂದ ಪ್ರಾರಂಭವಾಗಿ ರಾಷ್ಟ್ರಕೂಟರ ಮನೆತನದ ಕಾಲದಲ್ಲಿ ಬೆಳವಣಿಗೆಯನ್ನು ಕಂಡಿತು. ಎಂ.ಎಂ. ಕಲಬುರ್ಗಿಯವರು ಭೌಗೋಳಿಕವಾಗಿ ಬೆಳ್ವಲ ಮುನ್ನೂರು, ಪುಲಿಗೆರೆ ಮುನ್ನೂರು, ಬನವಾಸಿ ಪನ್ನಿರ್ಚ್ಛಾಸಿರ ಪ್ರಾಂತ್ಯಗಳಲ್ಲಿ ಕಂಡುಬರುತ್ತವೆಂದು ಸೂಚಿಸಿದ್ದಾರೆ. (ಗೋಸಾಸ, ಮಾರ್ಗ-೨, (ಸಂ) ಕಲಬುರ್ಗಿ ಎಂ.ಎಂ., ೧೯೯೫, ಪು-೧೪)

ಅದೇ ರೀತಿಯಲ್ಲಿ ನಾಗರಖಂಡ ಎಪ್ಪತ್ತು ಮತ್ತು ನೂರುಂಬಾಡ ಪ್ರಾಂತ್ಯಗಳಲ್ಲಿಯೂ ಹೆಚ್ಚಿನ ಪ್ರಮಾಣದಲ್ಲಿ ಕಂಡುಬಂದಿದೆ. (ನಾಗರಖಂಡ-೭೦ : ಒಂದು ಅಧ್ಯಯನ, ಭೋಜರಾಜ ಪಾಟೀಲ, ೧೯೯೫, ಪು-೧೮೭-೧೯೦)

**ಗೋಸಾಸ ದಾನದ ವಿಧಾನ :**

ದಾನ ನೀಡುವ ವ್ಯಕ್ತಿ ಮೂರು ದಿನ ಅಥವಾ ಒಂದು ದಿನ ಮೊದಲೇ ಕೇವಲ ಹಾಲನ್ನು ಮಾತ್ರ ಸ್ವೀಕರಿಸುತ್ತ ಉಪವಾಸವಿದ್ದು, ದಾನದ ಮೊದಲು ಧ್ಯಾನ, ಹವನ ಹೋಮಗಳನ್ನು ಕೈಗೊಳ್ಳಬೇಕು. ಹೋಮ ಕಾರ್ಯ ಪೂರ್ಣಗೊಂಡ ನಂತರ ಬಲಿಷ್ಠವಾದ ಒಂದು ಗೂಳಿಯನ್ನು

ಕರೆತಂದು ಅದರ ಮೈಗೆ ಸುಗಂಧ ದ್ರವ್ಯಗಳನ್ನು ಹಚ್ಚಿ, ಅಲಂಕರಿಸಿ ನಂತರ ಆ ಗೂಳಿಯನ್ನು ಒಂದು ಎತ್ತರವಾದ ವೇದಿಕೆಯಲ್ಲಿ ನಿಲ್ಲಿಸಿ ದಾನ ಮಾಡಲು ತಂದಿರುವ ಸಾವಿರ ಹಸುಗಳಲ್ಲಿ ಸುಲಕ್ಷಣವುಳ್ಳ ಹತ್ತು ಹಸುಗಳನ್ನು ಆರಿಸಿ ಅವುಗಳ ಮೈಮೇಲೆ ಬಣ್ಣದ ಬಟ್ಟೆಯನ್ನು ಹೊದಿಸಿ, ಅವುಗಳ ಕೊಂಬುಗಳಿಗೆ ಚಿನ್ನದ ಕಳಸಗಳನ್ನು ಜೋಡಿಸಿ, ಅವುಗಳ ಕಾಲಿನ ಗೊರಸಿಗೆ ಬೆಳ್ಳಿಯ ತಗಡನ್ನು ಹೊಂದಿಸಬೇಕು. ಆ ನಂತರ ಅವುಗಳನ್ನು ವೇದಿಕೆಯ ಬಳಿ ನಿಲ್ಲಿಸಿ ಅವುಗಳಿಗೆ ಗೌರವಯುತವಾಗಿ ಪೂಜೆ ಸಲ್ಲಿಸಿ ಅವುಗಳ ಮಧ್ಯ ಒಂದು ಬಂಗಾರದ ನಂದಿಯ ವಿಗ್ರಹವನ್ನು ಇಟ್ಟು, ಅದರ ಕೊರಳಿಗೆ ಚಿನ್ನದ ಗಂಟೆಯನ್ನು ಕಟ್ಟಿ ಅದರ ಬೆನ್ನಿನ ಮೇಲೂ ರೇಷ್ಮೆ ವಸ್ತುವನ್ನು ಹೊದಿಸಿ ಸುಗಂಧ ದ್ರವ್ಯಗಳನ್ನು ಸಿಂಪಡಿಸಿ, ಹೂವಿನಿಂದ ಅಲಂಕರಿಸಿ, ನಂತರ ದಾನ ಮಾಡುವವನು. ಸರ್ವ ಔಷಧಯುಕ್ತ ಉದಕದಿಂದ ಸ್ನಾನವನ್ನು ಮಾಡಿ, ತನ್ನ ಬೊಗಸೆಯ ತುಂಬ ಹೂವನ್ನು ಹಿಡಿದುಕೊಂಡು ಮಂತ್ರವನ್ನು ಉಚ್ಚರಿಸುತ್ತ ಆ ಹತ್ತು ಹಸುಗಳನ್ನು ಪುಣ್ಯ ನೀಡುವಂತೆ ಪ್ರಾರ್ಥಿಸಬೇಕು. ಅನಂತರ ನಂದಿಯ ಪ್ರತಿಮೆಯನ್ನು ಬ್ರಾಹ್ಮಣರ ಮುಖ್ಯ ಗುರುವಿಗೆ ನೀಡಬೇಕು. ಅದರ ಜೊತೆಯಲ್ಲಿ ಹತ್ತು ಹಸುಗಳಲ್ಲಿ ಎರಡು ಹಸುಗಳನ್ನು ನೀಡಬೇಕು. ಉಳಿದ ಎಂಟು ಹಸುಗಳನ್ನು ಇತರ ಎಂಟು ಮಂದಿ ಬ್ರಾಹ್ಮಣರಿಗೆ ಹಂಚಬೇಕು. ಉಳಿದ ೯೯೦ ಹಸುಗಳನ್ನು ಎಲ್ಲ ಬ್ರಾಹ್ಮಣರಿಗೂ ೧೦ ಅಥವಾ ೫ರಂತೆ ಹಂಚಬೇಕು. ದಾನ ನೀಡಿದವನು ದಾನ ನೀಡಿದ ನಂತರ ಮತ್ತೆ ಒಂದು ದಿವಸ ಕೇವಲ ಹಾಲನ್ನು ಮಾತ್ರ ಸೇವಿಸಿ ಆ ಮೂಲಕ ಇಂದ್ರಿಯಗಳನ್ನು ನಿಗ್ರಹಿಸಬೇಕು. ಹೀಗೆ ದಾನ ಮಾಡಿದವನು ಶಿವನ ಆಶೀರ್ವಾದವನ್ನು ಹೊಂದಬೇಕು. ಈ ರೀತಿ ಮಾಡುವುದರಿಂದ ದಾನ ಮಾಡಿದವನ ತಂದೆ ಮತ್ತು ತಾಯಿಯ ಕಡೆಯ ಸ್ವರ್ಗದಲ್ಲಿರುವ ಹಿರಿಯರನ್ನು ಶಿವನು ಕಾಪಾಡುತ್ತಾನೆ ಎಂದು ವಿವರಿಸಲಾಗಿದೆ.

ಗೋಸಹಸ್ರ ದಾನ ಶಾಸನಗಳು ಸ್ವರೂಪದ ದೃಷ್ಟಿಯಿಂದ ಬಹಳ ವಿಶಿಷ್ಟವಾದುದಾಗಿದೆ. ಇತರೆ ದಾನ ಶಾಸನಗಳಿಗಿಂತ ಪಾಠ ನಿರೂಪಣೆಯಲ್ಲಿ ಹಾಗೂ ಶಿಲ್ಪ ವಿನ್ಯಾಸದಲ್ಲಿ ಗೋಸಾಸ ಕಲ್ಲುಗಳು ಭಿನ್ನವಾಗಿರುತ್ತವೆ. ಗೋಸಾಸ ಕಲ್ಲುಗಳು ಫಲಕದ ಆಕಾರದಲ್ಲಿರದೇ ಸ್ತಂಭದ ಮಾದರಿಯಲ್ಲಿರುತ್ತವೆ. ಆದರೂ ಈ ಶಾಸನಗಳು ಆಕಾರವನ್ನು ಸ್ತಂಭದ ಆಕಾರವೆಂದು ಕರೆಯಲು ಮನಸ್ಸು ಬರುವುದಿಲ್ಲ. ಏಕೆಂದರೆ ಇವು ಕಂಬಗಳಂತೆ ಎತ್ತರವಾಗಿರುವುದಿಲ್ಲ. ಅಲ್ಲದೇ ಕಂಬಗಳಂತೆ ಕೆಳಗಿನಿಂದ ಮೇಲಿನವರೆಗೂ ಒಂದೇ ಆಕಾರದಲ್ಲಿಯೂ ಇರುವುದಿಲ್ಲ. ನೆಲಕ್ಕೆ ಹೂಳುವ ಭಾಗವು ಚೌಕಾಕಾರದಲ್ಲಿ ಅಥವಾ ಆಯತಾಕಾರದಲ್ಲಿ ದೊರೆಯುತ್ತದೆ. ಮೇಲ್ಭಾಗವು ಸುಮಾರು ಮೂರರಿಂದ ನಾಲ್ಕು ಅಡಿ ಎತ್ತರವಾಗಿದ್ದು, ಅರ್ಧ ವೃತ್ತಾಕಾರದ ತುದಿಯನ್ನು ಹೊಂದಿರುತ್ತವೆ. ನೆಲಕ್ಕೆ ಹೂಳುವ ಮತ್ತು ಮೇಲ್ಭಾಗದ ಮಧ್ಯ ಚೌಕಾಕಾರವಾಗಿದ್ದು ಮೇಲ್ಭಾಗವು ಅಷ್ಟಕೋನಾಕೃತಿಯಲ್ಲಿವೆ. ಪ್ರಸ್ತುತ ಈ ಅಧ್ಯಯನ ವ್ಯಾಪ್ತಿಯಲ್ಲಿ ಕೆಲವು ಗೋಸಾಸನಗಳನ್ನು ಗುರುತಿಸಬಹುದು.

ಕರ್ನಾಟಕದಲ್ಲಿ ಇದುವರೆಗೂ ದೊರೆತಿರುವ ಪ್ರಾಚೀನ ಗೋಸಾಸ ಶಾಸನವೆಂದರೆ ಪಟ್ಟದಕಲ್ಲಿನ ಕ್ರಿ.ಶ. ೭೭೮ರ ಶಿಲಾಸ್ತಂಭ ಶಾಸನವನ್ನು ಗುರುತಿಸಬಹುದಾಗಿದ್ದು, ಬಾದಿ ಪೊಟ್ಟಿ ಎಂಬ ಸೂಳೆ ಸಾವಿರ ಗೋವುಗಳನ್ನು ದಾನ ಮಾಡಿದ ವಿವರಗಳನ್ನು ಕಾಣುತ್ತೇವೆ. ಜೊತೆಗೆ ಸಮಕಾಲೀನ ಶಾಸನಗಳಲ್ಲಿ 'ಗೋಸಾಸ' ಎಂದು ಕರೆಯಲಾಗುತ್ತದೆ. (ಕನ್ನಡ ಶಾಸನ ಶಿಲ್ಪ, ಡಾ. ಡಿ.ವಿ. ಪರಮಶಿವಮೂರ್ತಿ, ೧೯೯೯, ಪು-೬೮) ಆದರೆ ೨ನೆಯ ಕೀರ್ತಿವರ್ಮನ ೬ನೆಯ ವರ್ಷದ ಆಳ್ವಿಕೆಯಲ್ಲಿ ಅಂದರೆ ಕ್ರಿ.ಶ. ೭೫೦ ಅಣ್ಣಿಗೇರಿ ಶಾಸನವೊಂದರಲ್ಲಿ

"ಕುಲರ ಕುಪ್ಪ ಕೀತಿವರ್ಮ
ಗೋಸಾಸಿಯಾ (ನಿ) ಚೆಸಿದಾ
ಕೀರ್ತ್ತನಂ"

ಎಂದು ತಿಳಿದುಬರುವುದರಿಂದ ಅಣ್ಣಿಗೇರಿ ಗೋಸಾಸ ದಾನ ಶಾಸನವೇ ಪ್ರಾಚೀನವಾದುದೆಂದು ತಿಳಿದುಬರುತ್ತದೆ. (ಎಸ್.ಐ.ಐ.-೧೧, ಅಣ್ಣಿಗೇರಿ, ಶಾ.ಸಂ-೫)

ಕ್ರಿ.ಶ. ೮೮೩ರ ೨ನೆಯ ಕೃಷ್ಣನ ಆಳ್ವಿಕೆಯ ಕಾಲದ ಶಾಸನವೊಂದರಲ್ಲಿ

"ಇನ್ದಾ ಪಾಯ್ಯಾನಾಡಾನಾಳುತ್ತಿರೆ ಪುರಿಗೆಜೆನಾಡ
ಸರಟರವುರ ದಾಯ್ಯದಿಂ (ಬ)ರು ಮಿಜ್ಜು
ನಾಡಾಯಿಸ ಮಾಸಿಗರ ಚಿದಾಣ್ಣ
ಗೋಸಾಸ(ಂ) ಮೀದ್ದೋಂ ಸ್ತಭಿನಾವೃದ್ದಿ"

(ಎಸ್.ಐ.ಐ.-೧೧, ಸೊರಟೂರು, ಶಾ.ಸಂ-೨೦)

ಪುಲಿಗೆರೆ ನಾಡಿನ ಸೊರಟೂರಿನಲ್ಲಿ ಯಿಂದಪಯ್ಯನು ಆಳುತ್ತಿರುವಾಗ ಮಾಗಸಿಗರ ಚಿದಣ್ಣನು ಸೊರಟೂರಿನ ೫೦ ಮಹಾಜನರ ಸಮ್ಮುಖದಲ್ಲಿ ಗೋಸಾಸ ದಾನ ನೀಡಿದನೆಂದು ತಿಳಿದುಬರುತ್ತದೆ. ರಾಷ್ಟ್ರಕೂಟ ಅರಸ ಪ್ರಭೂತ ವರ್ಷ ಜಗತ್ತುಂಗನ ಆಳ್ವಿಕೆಯ ಕಾಲದಲ್ಲಿ ಶಾಸನವೊಂದರಲ್ಲಿ "ಬೆಳ್ವೊಡೆ ವೆಸಕ ಎಚಮ್ಮನೂ ಎರೆವಾಸನೂ ಗೋಸಹಸ್ರ ಕೊಟ್ಟೊನ್" ಎಂದು ಉಲ್ಲೇಖವಿದೆ. (ಎಸ್.ಐ.ಐ.-೧೧, ಗದಗ, ಶಾ.ಸಂ-೬)

ರಾಷ್ಟ್ರಕೂಟ ವಂಶದಲ್ಲಿ ೨ನೆಯ ಗೋವಿಂದ, ೩ನೆಯ ಗೋವಿಂದ ಮತ್ತು ೪ನೆಯ ಗೋವಿಂದರು 'ಪ್ರಭೂತವರ್ಷ ಜಗತ್ತುಂಗ" ಎಂಬ ಬಿರುದನ್ನು ಹೊಂದಿದ ದೊರೆಗಳಾಗಿದ್ದರು. ಆದರೆ ಗೋಸಾಸ ದಾನ ಶಾಸನವನ್ನು ಗಮನಿಸಿದರೆ ೪ನೆಯ ಗೋವಿಂದನ ಮೊದಲೇ ಶಾಸನ ರಚಿಸಿದ್ದಿರಬೇಕು. ಅಂದರೆ ೨ನೆಯ ಗೋವಿಂದನ ಮತ್ತು ೩ನೆಯ ಗೋವಿಂದನ ಕಾಲದಲ್ಲಾಗಲಿ ಇಲ್ಲವೇ ನಂತರದಲ್ಲಿ ಆಗಲಿ ಶಾಸನ ರಚಿಸಿರಬೇಕು. ಒಟ್ಟಿನಲ್ಲಿ ಬೆಳಹೋಡದಲ್ಲಿ ಗೋಸಾಸ ದಾನ ನೀಡಲಾಗಿತ್ತೆಂದು ಈ ಶಾಸನದಿಂದ ತಿಳಿದುಬರುತ್ತದೆ.

ರಾಷ್ಟ್ರಕೂಟ ದೊರೆ ೧ನೆಯ ಅಮೋಘವರ್ಷನ (ಕ್ರಿ.ಶ. ೮೧೪-೮೭೮) ಆಳ್ವಿಕೆಯ ಶಕ ವರ್ಷ ೭೯೩ ಅಂದರೆ ಕ್ರಿ.ಶ. ೮೭೧ರಲ್ಲಿ

"ಚೆಞ್ಚಲದಯ್ಯತ್ತಜುವರುಂ
ಮಹಾಜನದ ಕಾಲಂ ಕಜ್ಜೆಕೊಟ್ಟು
ಗೋಸಾಸ(ಂ) ಮೀಟೋ(ಂ) ಸೋದಕ
ಪೂರ್ವ(ಕ)...ಜೆಯಮ್ಮ ಗೋಸಾಸಮಿ...
ಜೊರ್ಡ್ಕೆಜೆ ಅರಮೆಸಹಿತ ದೇವಣ್ಣಯ್ಯ

(ಎಸ್.ಐ.ಐ.-೧೧, ಚಿಂಚಲಿ, ಶಾ.ಸಂ-೧೫)

ದೇವನಯ್ಯನು ಬೆಳ್ವಲ-೩೦೦ನ್ನು ಆಳುವಾಗ ಚಿಂಚಲಿಯ ೫೬ ಮಹಾಜನರ ಕಾಲನ್ನು ತೊಳೆದು ಖಾಸಗಿ ವ್ಯಕ್ತಿಯೊಬ್ಬ (ಹೆಸರು ನಾಶಗೊಂಡಿದೆ) ಗೋಸಾಸನವನ್ನು ಒಂದು ನೀರಿನ ತೊಟ್ಟಿ ಮತ್ತು ಹೂತೋಟದೊಂದಿಗೆ ದಾನ ನೀಡಿದ ಬಗ್ಗೆ ಶಾಸನದಿಂದ ತಿಳಿದುಬರುತ್ತದೆ.

ರಾಷ್ಟ್ರಕೂಟ ದೊರೆ ೨ನೆಯ ಕೃಷ್ಣನ ಆಳ್ವಿಕೆಯಲ್ಲಿ ಕ್ರಿ.ಶ. ೯೧೨ರ ಕೌಜಗೇರಿ ತ್ರುಟಿತ ಗೋಸಾಸ ದಾನ ಶಾಸನದಲ್ಲಿ

"ಆಯ್ಯ (ತು)...
ಳ್ಗೋಸಸ...ಮುತ...
ಯ್ಯನ ಮ(ಗ)...ಯ್ಯಮ್ಬ..."

(ಎಸ್.ಐ.ಐ.-೧೧, ಕೌಜಗೇರಿ, ಶಾ.ಸಂ-೨೯)

ಈ ಶಾಸನವು ತ್ರುಟಿತವಾಗಿರುವುದರಿಂದ ಸ್ಪಷ್ಟತೆ ಇಲ್ಲದಿದ್ದರೂ ಇದೊಂದು ಗೋಸಾಸ ದಾನ ಶಾಸನವಾಗಿದೆ.

ರಾಷ್ಟ್ರಕೂಟ ಪ್ರಭೂತವರ್ಷನ (ಮುಮ್ಮಡಿ ಗೋವಿಂದ) ಕಾಲದ ಒಂದು ಗೋಸಾಸ ಕಂಬವು ಬೆಲ್ಡೋಡ (ಗದಗ ತಾಲೂಕು)ದಲ್ಲಿದೆ. ಅದರಲ್ಲಿ ಬಚಮ್ಮ ಮತ್ತು ಎರೆವಾಸನು ಗೋಸಹಸ್ರ ಕೊಟ್ಟರೆಂದು ಹೇಳಲಾಗಿದೆ. (ಎಸ್.ಐ.ಐ.-೧೧, ಬೆಲ್ಡೋಡ, ಶಾ.ಸಂ-೬)

ಚಿಂಚಲಿ (ಗದಗ ತಾಲೂಕು)ಯಲ್ಲಿ ಮೊದಲನೆಯ ಅಮೋಘವರ್ಷನ ಆಳ್ವಿಕೆಯ ಕ್ರಿ.ಶ. ೮೭೧ರಲ್ಲಿ ದೇವಣ್ಣಯ ಆಳುವಾಗ ಚಿಂಚಲದ ೫೮ ಮಹಾಜನರ ಪಾದವನ್ನು ತೊಳೆದು ದತ್ತಿಯನ್ನು ಗೋಸಾಸ ಒಂದು ಕೆರೆ ಮತ್ತು ತೋಟಕ್ಕೆ ದತ್ತಿ ನೀಡಲಾಯಿತೆಂದು ಗೋಸಾಸ ಸ್ತಂಭ ಶಾಸನದಲ್ಲಿ ಹೇಳಲಾಗಿದೆ. (ಎಸ್.ಐ.ಐ.-೧೧, ಚಿಂಚಲಿ, ಶಾ.ಸಂ-೧೫)

ಸೊರಟೂರಿನ ಗೋಸಾಸ ಸ್ತಂಭ ಶಾಸನದಲ್ಲಿ ಕ್ರಿ.ಶ. ೮೮೩ರಲ್ಲಿ ಆ ಕಾಲ ವರ್ಷ ಕನ್ನರ ಭಟಾರ ಅಂದರೆ ಇಮ್ಮಡಿ ಕೃಷ್ಣನು ಆಳುವಾಗ ಪುಲಿಗೆರೆ ನಾಡನ್ನು ಇಂದಪ್ಪಯ್ಯನೆಂಬವನು

ಆಳುತ್ತಿದ್ದನು. ಅದರಲ್ಲಿ ಸರಟವುರ ಇದ್ದಿತು. ಈ ಗ್ರಾಮವು ೫೦ ಮಹಾಜನರ ಸಮ್ಮುಖದಲ್ಲಿ ಮಾಸಿಗರ ಚಿದಣ್ಣನೆಂಬವನು ಗೋಸಾಸ ದತ್ತಿ ನೀಡಿದನೆನ್ನಲಾಗಿದೆ. (ಎಸ್.ಐ.ಐ.–೧೧, ಸೊರಟೂರು ಶಾ.ಸಂ–೨೦)

ಕೌಜಗೇರಿ (ರೋಣ ತಾಲೂಕು) ಗೋಸಾಸ ಸ್ತಂಭ ಶಾಸನವು 'ಆಕಳ ವರ್ಷ' ಅಂದರೆ ಇಮ್ಮಡಿ ಕೃಷ್ಣನ ಕಾಲದ್ದಾಗಿದೆ. ಕ್ರಿ.ಶ. ೯೧೨ ಈ ಕಾಲದಲ್ಲಿ ಗೋಸಾಸ ದತ್ತಿ ನೀಡಲಾಗಿದೆ. (ಎಸ್.ಐ.ಐ.–೧೧, ಕೌಜಗೇರಿ, ಶಾ.ಸಂ–೨೯)

ಐಹೊಳೆಯ ಹುಚ್ಚಿಮಲ್ಲಿ ಗುಡಿಯ ಮುಂದೆ ನೆಟ್ಟ ೧ನೆಯ ಗೋಸಾಸನಕಲ್ಲು. ತ್ರುಟಿತ ಶಾಸನ ಕ್ರಿ.ಶ. ೯೪೫ರಲ್ಲಿ ಬದಿಯ ಗೋಸಾಸಿ ಮೊಮ್ಮಗ ರಯ್ದಯನು ಗೋಸಹಸ್ರದಾನ ಮಾಡಿದ ಉಲ್ಲೇಖವಿದೆ. (ಕ.ವಿ.ವಿ.ಶಾ.ಸಂ–೯, ಹುನಗುಂದ–೨೪) ಅದೇ ಸ್ಥಳದಲ್ಲಿ ನೆಟ್ಟ ಎರಡನೆಯ ಗೋಸಾಸ ಕಲ್ಲಿನ ಮೇಲೆ ಕೊಟ್ಟಿಗದೇವನ ಉಲ್ಲೇಖವಿದೆ. ಉಳಿದ ವಿವರಗಳು ಲಭ್ಯವಿಲ್ಲ. ಇದು ಕ್ರಿ.ಶ. ೯೭೨ಕ್ಕೆ ಸಮನಾಗುತ್ತದೆ. (ಕವಿಹಂ. ಶಾ.ಸಂ–೯, ಹುನಗುಂದ–೨೫)

ಧಾರವಾಡ ತಾಲೂಕಿನ ಅಂಬಳ್ಳಿ ಗ್ರಾಮದ ಸಮೀಪದ ಗದ್ದೆಯಲ್ಲಿರುವ ಕ್ರಿ.ಶ. ೧೦ನೆಯ ಶತಮಾನದ ಗೋಸಾಸಗಲ್ಲು ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಲಿಪಿಯ ದೃಷ್ಟಿಯಿಂದ ಕ್ರಿ.ಶ. ೧೦ನೆಯ ಶತಮಾನ ಮಹಾರಾಜಾವೆಂದಷ್ಟೇ ಉಲ್ಲೇಖವಿದ್ದು, ರಾಜನ ಹೆಸರು ಅಸ್ಪಷ್ಟವಾಗಿದೆ. ಮಹರಾಜನು ರಾಜ್ಯವನ್ನಾಳುತ್ತಿದ್ದಾಗ ಗೊಗೆಯಹಳ್ಳಿಯ ಗಾವುಂಡ ಮಾದಯ್ಯನು ತುರುಮಂದಿ (ತುರುಗೋಳ್)ಯಲ್ಲಿ ಮರಣದ ಮಾಹಿತಿಯನ್ನು ತಿಳಿಸುತ್ತದೆ. ಮಾದಯ್ಯನ ಸ್ಮರಣಾರ್ಥ ಇದನ್ನು ನಿಲ್ಲಿಸಲಾಗಿದೆ.

ಕಲಘಟಗಿ ತಾಲೂಕಿನ ಮಾವಳ್ಳಿ ಗ್ರಾಮದಲ್ಲಿರುವ ೧೨ನೆಯ ಶತಮಾನದ ಗೋಸಾಸ ಶಾಸನದಲ್ಲಿ ಶತ ಕಾಲವನ್ನು ತಿಳಿಸುವ ಭಾಗವು ನಶಿಸಿದ್ದು, 'ಪರಾಭವ' ಸಂವತ್ಸರವೆಂದಷ್ಟೆ ತಿಳಿಯುತ್ತದೆ. ರಾಜನು ರಾಜ್ಯವನ್ನಾಳುತ್ತಿರಲು ಏಚ(?)ನೆಂಬುವವನು ತುರುಗೋಳ್ ಕಾಳಗದಲ್ಲಿ ಮರಣ ಹೊಂದಿದ ವಿಚಾರವು ಇದರಲ್ಲಿದೆ. ಆತನ ಸ್ಮರಣಾರ್ಥವಾಗಿ ರವಿಗನೆಂಬುವವನು ಈ ಕಲ್ಲನ್ನು ಇರಿಸಿದ ವಿಷಯವಿದೆ. (ಎಸ್.ಐ.ಐ. ೧೫, ಮಾವಳ್ಳಿ, ಶಾ.ಸಂ–೫೧೦)

ನವಲಗುಂದ ತಾಲೂಕಿನ ಶಿಶುವಿನಹಳ್ಳಿ ಹನುಮಂತ ದೇವಾಲಯದ ಬಳಿ ಇರುವ ಕ್ರಿ.ಶ. ೧೨ನೆಯ ಶತಮಾನದ ಗೋಸಾಸ ಕಾಲದ ಉಲ್ಲೇಖವಿರದ ಈ ಶಾಸನದಲ್ಲಿ ಲಿಪಿಯ ದೃಷ್ಟಿಯಿಂದ ೧೨ನೆಯ ಶತಮಾನವೆಂದು ಊಹಿಸಬಹುದು. ಈ ಶಾಸನವು ತುರುಗೋಳ್ ಶಾಸನವಾಗಿದ್ದು, ಮಾಹಿತಿ ಅಸ್ಪಷ್ಟವಾಗಿದೆ. (ಎಸ್.ಐ.ಐ. ೧೫, ಶಿಶುವಿನಹಳ್ಳಿ, ಶಾ.ಸಂ–೩೨)

೮.೬. ನಿಸಿಧಿಗಲ್ಲು :

ಸಲ್ಲೇಖನ ವ್ರತವನ್ನು ತೆಗೆದುಕೊಂಡು ಪ್ರಾಣತ್ಯಾಗ ಮಾಡಿದ ಜೈನಧರ್ಮಿಯರ ಸ್ಮರಣಾರ್ಥವಾಗಿ ನಿಲ್ಲಿಸಿದ ಶಿಲೆಗಳೇ ನಿಸಿದಿಗಲ್ಲುಗಳು (ವೀರಗಲ್ಲು ಮತ್ತು ಮಾಸ್ತಿ ಕಲ್ಲುಗಳು, ಚಿದಾನಂದಮೂರ್ತಿ

ಎಂ., ೧೯೮೪, ಪು-೩) ಇದು 'ಸದ' ಧಾತುವಿನಿಂದ ವ್ಯುತ್ಪನ್ನವಾಗುವ 'ನಿಷತ್ತಿ', 'ನಿಷಾದಿನ್' ಪದಗಳಿಗೆ ಕುಳಿತುಕೊಳ್ಳುವಿಕೆ. ವಿಶ್ರಮಿಸುವಿಕೆ ಎಂದು ಅರ್ಥ. (ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಕಲಬುರ್ಗಿ ಎಂ.ಎಂ., ೧೯೮೦, ಪು-೧೦) ಬೋಧಿಸುವ ಗುರು, ಆಲಿಸುವ ಶಿಷ್ಯ ಇಬ್ಬರ ಮಧ್ಯ ಪುಸ್ತಕ ಹೊತ್ತ ವ್ಯಾಸ ಪೀಠ. ಈ ಚಿತ್ರವೇ ಸಾಮಾನ್ಯವಾಗಿ ನಿಸಿಧಿ ಶಿಲೆಗಳ ಶಿಲ್ಪವಾಗಿದೆ. (ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಕಲಬುರ್ಗಿ ಎಂ.ಎಂ., ೧೯೮೦, ಪು-೧೫)

ಉತ್ತರ ಕರ್ನಾಟಕದ ಭಾಗದಲ್ಲಿ ಕೆಲವು ನಿಸಿಧಿ ಶಿಲೆಗಳಿರುವುದನ್ನು ಕಾಣುತ್ತೇವೆ. ಆದರೆ ಇವು ಕಾಣಸಿಗುವುದು ತುಂಬ ವಿರಳ. ಇಲ್ಲಿಯ ನಿಸಿಧಿ ಶಿಲೆಗಳು ಎರಡು ಹಾಗೂ ಮೂರು ಹಂತದವುಗಳಾಗಿದ್ದು, ಕೆಲವು ಸ್ಮಾರಕಗಳು ಶಾಸನ ಸಹಿತ ನಿಸಿಧಿ ಶಿಲೆಯಾಗಿದ್ದರೆ, ಮತ್ತೆ ಕೆಲವು ಶಾಸನ ರಹಿತ ನಿಸಿಧಿ ಶಿಲೆಗಳಾಗಿವೆ. ಅವುಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ.

ತೋರಣಗಲ್ಲು ಗ್ರಾಮದ ಶಂಕರದೇವಿ ಬೆಟ್ಟದ ಮೇಲಿನ 'ತುಂಗಮ್ಮನ ಗುಂಡ' ಎಂದು ಕರೆಯುವ ಗುಂಡಿನ ಮೇಲಿನ ಶಾಸನವು (ಎ.ಆರ್.ಐ.ಇ.-೧೯೨೨-೨೩, ಸಂ-೧೯೨೨೮, ಪು-೭೨೯) ಆಕಳಂಕ ದೇವನ ಶಿಷ್ಯ ಬಯಿಚಿ ಸೆಟ್ಟಿಯ ನಿಸಿಧಿಯನ್ನು ಉಲ್ಲೇಖಿಸುವುದು.

ರಾಷ್ಟ್ರಕೂಟರ ಕಾಲದ ಒಂದು ನಿಸಿಧಿಗಲ್ಲು ಸುಕ್ಷೇತ್ರ ಇಟಗಿ (ರೋಣ ತಾಲೂಕು) ಶಂಭುಲಿಂಗ ದೇಗುಲದ ಹೊರಗೋಡೆಯಯಲ್ಲಿದೆ. ಅದರಲ್ಲಿ ಎರಡು ಹಂತಗಳಿವೆ. ಒಬ್ಬಳು ಜೈನ ಮುನಿಯ ಉಪದೇಶವನ್ನು ಕೇಳುತ್ತಿರುವುದನ್ನು ಕೆಳಹಂತದಲ್ಲಿ ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ಜಿನನು ಯೋಗಾಸನದಲ್ಲಿ ಕುಳಿತಿದ್ದು, ಬದಿಗೆ ಸೇವಕರು ಚೌರಿ ಹಿಡಿದು ನಿಂತಿದ್ದಾರೆ. ಜಿನನ ತಲೆಯ ಮೇಲೆ ಮುಕ್ಕೊಡೆ ಛತ್ರಿಯಿದೆ. ಇದರ ಕಾಲ ಕ್ರಿ.ಶ. ೧೦ನೆಯ ಶತಮಾನ. (ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ್ ಆರ್., ೨೦೦೯, ಪು-೩೭೮)

ಬಾಗಲಕೋಟೆ ಜಿಲ್ಲೆಯಲ್ಲಿ ಒಂದೇ ಒಂದು ನಿಸಿಧಿ ಶಾಸನ ದೊರಕಿದ್ದು, ಅದರಲ್ಲಿ ಶ್ರಿ ಮೂಲ ಸಂಘ ಬಳೊಲತ್ಕಾರ ಗುಣದ ಕುಮದಂದುಗಳ ಗುಡ್ಡ ಐಭಸೆಟ್ಟಿಯರ ಮಗ ಯೆರಂಬರಗೆನಾಡ ಸೆಟ್ಟಿಗುತ್ತ ರಾಮಿಸೆಟ್ಟಿಯರ ನಿಸಿಧಿ ಎಂದಿದೆ. ಯೆರಂಬರಗೆನಾಡ ರಾಮಸೆಟ್ಟಿಯೆಮಯೆಂಬುವನು ನಿಸಿಧಿಗೆ ಸಂಧ ವಿಷಯವಿದೆ. (ಕವಿಹಂ.ಶಾ.ಸಂ-೯, ಹುನಗುಂದ, ೮೨)

ನವಲಗುಂದ ತಾಲೂಕಿನ ಮೊರಬ ಗ್ರಾಮದ ಹನುಮಂತ ದೇವಾಲಯ ಬಳಿಯಿರುವ ಕ್ರಿ.ಶ. ೧೦೫೯ರ ನಿಸಿಧಿ ಶಾಸನದಲ್ಲಿ ಕಾಲವನ್ನು ಶಾಕಾಬ್ದೇ ಭೂಗಜಾಂಕ ಪ್ರಮಿತ ವತ್ಸರೇ ಸದ್ವಿಕಾರ್ಯಂ ಶುಕ್ಲ ದ್ವಿತಿಯಾ ಹನನಂತ ಕರುಣೇ ಕಾಲವೇ ಸೌಮ್ಯವಾರೇ, ಪೂರ್ವಾಷಾಡಾಭಿದಾಭೇ ಸತಿ ಗಂಡಯೋಗೇ ಎಂದು ನೀಡಲಾಗಿದ್ದು, ಇದು ಕ್ರಿ.ಶ. ೧೦೫೯ ನವೆಂಬರ್ ೧೦ಕ್ಕೆ ಸರಿ

ಹೊಂದುತ್ತದೆ. ಇದು ಅರ್ಧಭಾಗ ಸಂಸ್ಕೃತ ಮತ್ತು ಅರ್ಧಭಾಗ ಕನ್ನಡದಿಂದ ಕೂಡಿದೆ. ಯಾಪನೀಯ ಸಂಘದ ಮೈಳಾಪತೀರ್ಥ ಕಾರೇಯಗಳದಲ್ಲಿ ಶ್ರೀ ಜಯಕೀರ್ತಿದೇವ ಈತನು ಜೈನ ಸಿದ್ಧಾಂತದಲ್ಲಿ ಪ್ರಚಂಡ ಪಂಡಿತನಾಗಿದ್ದನು. ಈತನ ಶಿಷ್ಯ ನಾಗಚಂದ್ರಯತಿ; ಈತನನ್ನು ಮಹಾಗುಣ ನಿಧಿಯು ವಿಜ್ಞಾನ ವಿದ್ಯಾಧರನೂ ಎಂದು ಬಹಳವಾಗಿ ಶಾಸನವು ಕೊಂಡಾಡಿದೆ. ಈತನು ಪೂರ್ವೋಕ್ತ ದಿನದಂದು ಮೊರಬದಲ್ಲಿರುವ ಘಟಾಂತಕೀಯ ಬಸದಿಯಲ್ಲಿ ಸನ್ಯಾಸ ವಿಧಿಯಿಂದ ಸ್ವರ್ಗಸ್ಥನಾದನೆಂದು ಆತನ ಶಿಷ್ಯನಾದ ಕನಕ ಶಕ್ತಿ ಸಿದ್ಧಾಂತದೇವನು ನಿಸಿಧಿಕಲ್ಲನ್ನು ನಿಲ್ಲಿಸಿದನು. ಸರಸ್ವತೀ ಗಣದಾಸಿ ಬಮ್ಮೋಜನು ಶಾಸನವನ್ನು ನಿಲ್ಲಿಸುವಂತೆ ಕೋರಿದ್ದನೆಂಬ ಮಾಹಿತಿ ಶಾಸನದಲ್ಲಿದೆ. (ಎಸ್.ಐ.ಐ. ೧೫, ಮೊರಬ, ಶಾ.ಸಂ-೫೩೦)

ಕ್ರಿ.ಶ. ೧೦೭೭-೭೮ರ ಆರನೆಯ ವಿಕ್ರಮಾದಿತ್ಯನ ಕಾಲದ ಲಕ್ಷ್ಮೇಶ್ವರದ ಶಾಸನವು “ಶ್ರೀ ಶ್ರೀ ನನ್ದಿ ಪಣ್ಡಿತ ದೇವರ್ಜ್ಜಿವಿತಾರಾಧನಾಪುರಸ್ಸರ...ಮಾಸಸಲ್ಲೆಖನೆ (ಯಿಂ)..:ದ್ವದಿನ ಸನ್ಯಾವಸಾನದೊಳ್ ಶಕನ್ನಪಕಾಳಾತೀತ ಸಂವತ್ಸರ (ಗಳೊಂ) ಬಯ್ಯೂ ಱತೊಂಬತೌಗೆ ವಿಕ್ರಮಾಭ್ಯುದಯ ದೆರಡೆನೆಯ ಪಿಂಗಳ ಸಂವತ್ಸರ (ದಾ)...ಪಾಡ ಸುದ್ಧದ್ವಾದಶಿ ಬುಧುವಾರದನ್ದು...ಕುನ್ತಳ ವಿಷಯದ ಪುರಿಕರ ನಗರೀ (ಬಾಳ)...ಲೀಳಾತಿಳ ಕಾಳಿಂಕಾರ...ಮಾದಾನೆ ಸೆಜ್ಜೆಯ...ಬಸದಿಯೊಳ್ ಚತುರ್ವ್ವಿಧಾರಾಧ (ನೆಯಿ) ನಾದಾರಿಸಿ ಗುರು ಪರಮೇಷ್ಠಿಚರಣಾನು ಸ್ಮರಣ ಪೂರ್ವ್ವಕಮರ್ಹ (ದ್ವೀ) ಜಮಂ ಹೃತ್ಪದ್ಮ ಸದ್ಮದೋಳ್...ನಿಶ್ಚಳಮಿರಿಸಿ...ಯೋಗ ಸಮಾಧಾನಾಧೀನ ಚಿತ್ತಾರಾಗಿ (ಶ) (ಮೀತ) ಪರಿತ್ಯಾಗದಿನ ಮರಲೋಕಾವಳೋಕನ ಕೌತುಕದಿಂ...ದೇವಲೋಕಕ್ಕೆ ವಿಜಯಂಗೊಯ್ದರ್” ಎಂದು ನಂದಿ ಪಂಡಿತ ದೇವನು ಸಲ್ಲೇಖನ ವೃತವನ್ನು ಕೈಗೊಂಡು ಶಕನೃಪ ಕಾಳಾತೀತ ಸಂವತ್ಸರದ ೯೯೯ರ ಪಿಂಗಳ ಸಂವತ್ಸರದ ಆಷಾಡ ಶುದ್ಧ ದ್ವಾದಶಿ ಬುಧವಾರದಂದು ಕುಂತಳ ವಿಷಯದ ಪುರಿಕರ ನಗರದ ಮಾದನೆ ಸೆಜ್ಜೆಯ ಬಸದಿಯಲ್ಲಿ ಸಲ್ಲೇಖನ ವ್ರತವನ್ನು ಆಚರಿಸಿ ಮರಣ ಹೊಂದಿದರು ಎಂಬುದಾಗಿ ತಿಳಿಸುತ್ತದೆ. (ಎಸ್.ಐ.ಐ. ೨೦, ಲಕ್ಷ್ಮೇಶ್ವರ. ಶಾ.ಸಂ-೫೨)

ಗುಲಬರ್ಗಾ ಜಿಲ್ಲೆಯ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದಂತೆ ಅಫ್ಜಲಪುರ ತಾಲೂಕಿನ ಆತನೂರು ಗ್ರಾಮದ ತ್ರಿಕೂಟ ಬಸದಿಯ ಪ್ರವೇಶ ದ್ವಾರದ ಹತ್ತಿರವಿರುವ ನಿಸಿಧಿಗಲ್ಲನ್ನು ದಾಖಲಿಸಿದೆ. (ಗುಲಬರ್ಗಾ ಜಿಲ್ಲೆಯ ಜೈನ ಪರಂಪರೆ, ಅಕ್ಕಿ ಎನ್. ಗೋಗಿ, ೨೦೧೦, ಪು-೭೪)

ಜೇವರ್ಗಿ ತಾಲೂಕಿನ ಕುಳಗೇರಿ ಗ್ರಾಮದ ಬಯಲಲ್ಲಿ ಚದುರಿದ ಕ್ರಿ.ಶ. ೧೧೩೮ರ ನಿಸಿಧಿಗಲ್ಲು ನರೇಂದ್ರ ಕೀರ್ತಿ ಮುನಿಗಳು ಸಲ್ಲೇಖನ ಹೊಂದಿದ್ದನ್ನು ತಿಳಿಸುತ್ತದೆ. (ಗುಲಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ್ ಆರ್., ೨೦೦೭, ಪು-೩೧೦) ಕ್ರಿ.ಶ. ೧೧೫೭ರ ಇನ್ನೊಂದು ನಿಸಿಧಿಗಲ್ಲು ಕನಕನಂದಿ ಮುನೀಂದ್ರರು ಸಲ್ಲೇಖನ ಹೊಂದಿದ್ದನ್ನು ದಾಖಲಿಸುತ್ತದೆ. (ಗುಲಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ (ಸಂ), ಗೋಪಾಲ್

ಆರ್., ೨೦೦೭, ಪು-೩೧೦) ಇಲ್ಲಿನ ಕ್ರಿ.ಶ. ೧೭ನೆಯ ಶತಮಾನದ ನಿಸಿಧಿಗಲ್ಲು ಸಮಸ್ತ ಗುಣಸಂಪನ್ನೆ ಕನಕಸಿರಿಯವ್ವೆಯ ಸಮಾಧಿ ಮರಣವನ್ನು ಸಾಧಿಸಿದಾಗ ಗುಡ್ಡ ಮಾಧವ ನಿಸಿಧಿ ಪ್ರತಿಮೆಯನ್ನು ಮಾಡಿಸಿದ್ದನ್ನು ಹೇಳುತ್ತದೆ. (ಗುಲಬರ್ಗಾ ಜಿಲ್ಲೆಯ ಶಾಸನಗಳು, ಹನುಮಾಕ್ಷಿ ಗೋಗಿ, ೧೯೯೬, ಶಾ.ಸಂ-೨, ಪು-೩೦೭)

ಸೇಡಂ ಬಸದಿಯ ಬಳಿ ಇರುವ ನಿಸಿಧಿ ಶಾಸನ ಮೂಲ ಸಂಘದ ನೇಮಿಚಂದ್ರ ಪಂಡಿತರ ಸಮಾಧಿ ಮರಣವನ್ನು ಉಲ್ಲೇಖಿಸುತ್ತದೆ. (ಗುಲಬರ್ಗಾ ಜಿಲ್ಲೆಯ ಗ್ಯಾಜಿಟಿಯರ್, (ಸಂ) ಪಾಟೀಲ ಎಂ.ಬಿ., ೧೯೯೭, ಪು-೭೮೮)

ಹಲಸಿ ಮಾರುತಿ ಗುಡಿ ಸಮೀಪದಲ್ಲಿರುವ ನಿಸಿಧಿಗಲ್ಲಿನ ಮೇಲೆ ಶಾಸನ ಬಹುಭಾಗ ತ್ರುಟಿತವಾಗಿದೆ. ಕ್ರಿ.ಶ. ೧೨ನೆಯ ಶತಮಾನದ ಶಾಸನ. ಸೂರ್ಯದೇವ ಬಸದಿಗಳ ಉಲ್ಲೇಖವಿದೆ. (ಕವಿಹಂ. ಶಾ.ಸಂ-೮, ಬಾಲ್ಕಿ-೧೪)

ನರೇಂದ್ರ ಗುಡ್ಡದ ಮಠದ ದಿಬ್ಬದ ಮೇಲಿರುವ ಈ ಶಾಸನ ಎರಡು ತುಣುಕಾಗಿದ್ದು, ನಾಗಚಂದ್ರ ಸಿದ್ಧಾಂತದೇವಿ, ಕನಕಶಾಂತಿ ಮುನಿಗಳ ವರ್ಣನೆ ಮತ್ತು ಕನಕಶಾಂತಿ ಮುನಿಯ ಸಮಾಧಿ ಮರಣದ ಸ್ಮರಣಾರ್ಥವಾಗಿ ಬಾಹುಬಲಿ ಮುನಿ ನಿಸಿಧಿಕಲ್ಲನ್ನು ನಿಲ್ಲಿಸಿದ ವಿಷಯಗಳು ಇದರಲ್ಲಿವೆ. ಲಿಪಿಯ ದೃಷ್ಟಿಯಿಂದ ಇದು ಸುಮಾರು ೧೨ನೆಯ ಶತಮಾನದ ಶಾಸನವೆಂದು ಪರಿಭಾವಿಸಬಹುದು. (ಧಾರವಾಡ ತಾಲೂಕಿನ ಶಾಸನಗಳು, (ಸಂ) ಕಲಬುರ್ಗಿ ಎಂ.ಎಂ., ಪು-೭೮)

ಚಂದ್ರಬಂಡೆ ಕಲ್ಲಿನಲ್ಲಿ ಕೆತ್ತಿರುವ ೧೩ನೆಯ ಶತಮಾನದ ಕೊಪಣದ ಚಂದ್ರಸೇನ ದೇವರ ಶಿಷ್ಯ ಚಂದ್ರಪ್ಪನು ನಿಸಿಧಿಯಾದದ್ದನ್ನು ತಿಳಿಸುತ್ತದೆ. ಕವಿಹಂ. ಶಾ.ಸಂ-೨, ಕೊಪ್ಪಳ-೪೧)

ಅಳ್ನಾವರದ ಶಾಸನ ಅರಣ್ಯ ಇಲಾಖೆಯ ಸುಂಕದಕಟ್ಟೆಯ ಎದುರಿಗಿರುವ ಕಟ್ಟೆಯ ಕೊರೆಯುವ ಗಿರಿಣಿಯ ಆವರಣದಲ್ಲಿದೆ. ಇದು ನಿಸಿಧಿಗಲ್ಲು ಹುಬ್ಬಳ್ಳಿಯ ಸಿದ್ಧಾಣಾಂಕನ ಮಗ ಚಿಕ್ಕಮಲ್ಲಿ ಸೆಟ್ಟಿಯ ಸಲ್ಲೇಖನ ಮರಣವನ್ನು ತಿಳಿಸುತ್ತದೆ. (ಧಾರವಾಡ ತಾಲೂಕಿನ ಶಾಸನಗಳು, (ಸಂ) ಕಲಬುರ್ಗಿ ಎಂ.ಎಂ., ಪು-೨೪)

ಹಿರೇಸಿಂದೋಗಿ ಗ್ರಾಮದ ಗೋವಿಂದರೆಡ್ಡಿ ಓಣಿಯಲ್ಲಿಯ ನಿಸಿಧಿಕಲ್ಲು ತ್ರುಟಿತವಾಗಿದ್ದು, ಆದಿನಾಥನನ್ನು ಹೆಸರಿಸುತ್ತದೆ. ಈ ಶಾಸನ ಕಾಲ ಸುಮಾರು ಕ್ರಿ.ಶ. ೧೬ನೆಯ ಶತಮಾನ. (ಕವಿಹಂ. ಶಾ.ಸಂ-೨, ಕೊಪ್ಪಳ-೧೩)

ಹುಬ್ಬಳ್ಳಿ ತಾಲೂಕಿನ ಮಂಟೂರು ಗ್ರಾಮದಲ್ಲಿ ವಲ್ಲಭೇಶ್ವರ ದೇವಾಲಯದ ಮುಂಭಾಗದಲ್ಲಿರುವ ಕ್ರಿ.ಶ. ೧೨ನೆಯ ಶತಮಾನದ ಒಂದು ನಿಸಿಧಿ ಶಿಲ್ಪವಿದೆ. ಈ ನಿಸಿಧಿಯ ಕೆಳಗಿನ ಭಾಗದಲ್ಲಿ ಶಾಸನವನ್ನು ಹೊಂದಿದೆ. ಮೇಲಿನ ಎರಡು ಪಟ್ಟಿಕೆಗಳಲ್ಲಿ ಚಿತ್ರಗಳನ್ನು ಹೊಂದಿದೆ. ಮೊದಲನೆಯ

ದೃಶ್ಯದ ಮಧ್ಯದಲ್ಲಿ ವ್ಯಾಸ ಪೀಠವಿದೆ. ಅದರಲ್ಲಿ ಪುಸ್ತಕವಿದೆ. ಈ ಪೀಠದ ಎಡಬದಿಯಲ್ಲಿ ಜೈನ ಮುನಿಯು ತನ್ನ ಬಲಗೈಯನ್ನು ಪುಸ್ತಕದ ಕಡೆ ಮಾಡಿ, ಎಡಗೈಯನ್ನು ತೊಡೆಯ ಮೇಲಿಟ್ಟುಕೊಂಡು ಸಲ್ಲೇಖನ ವ್ರತವನ್ನು ಉಪದೇಶಿಸಿದ್ದಾನೆ. ವ್ಯಾಸ ಪೀಠದ ಮತ್ತೊಂದು ಮಗ್ಗುಲಲ್ಲಿ ವ್ರತಾಧಾರಿಯು ಕೈಮುಗಿದು ಕುಳಿತು ಉಪದೇಶವನ್ನು ಕೇಳುತ್ತಿದ್ದಾನೆ. ಈ ದೃಶ್ಯದ ಮೇಲಿನ ಪಟ್ಟಿಕೆಯಲ್ಲಿ ಜಿನನು ಪದ್ಮಾಸನದಲ್ಲಿ ಕುಳಿತಿದ್ದಾನೆ. ಮೇಲ್ಭಾಗದಲ್ಲಿ ಮುಕ್ಕೊಡೆಯಿದೆ. ಜಿನನ ಪಾರ್ಶ್ವಗಳಲ್ಲಿ ಚಾಮರಧಾರಿಣಿಯರು ತ್ರಿಭಂಗಿಯಲ್ಲಿ ನಿಂತಿದ್ದಾರೆ. ಇಲ್ಲಿ ಸಲ್ಲೇಖನವನ್ನು ಕೈಗೊಂಡ ವ್ಯಕ್ತಿಯು ಜೀವನ ಸಾನಿಧ್ಯಕ್ಕೆ ಹೋಗುವನು ಎಂಬ ಅರ್ಥದಲ್ಲಿ ಎರಡನೆಯ ದೃಶ್ಯದಲ್ಲಿ ಜಿನನನ್ನು ತೋರಿಸಲಾಗಿದೆ. (ಧಾರವಾಡ ಜಿಲ್ಲೆಯ ಪುರಾತತ್ವ, ಜಯಮ್ಮ ಬಿ. ಪು-೨೭೪)

ನವಲಗುಂದ ತಾಲೂಕಿನ ಭದ್ರಾಪುರ ಗ್ರಾಮದ ದ್ಯಾಮವ್ವನ ಗುಡಿ ಎದುರಿರುವ ಕ್ರಿ.ಶ. ೧೨೪೮ರ ನಿಸಿಧಿ ಶಾಸನ ತ್ರುಟಿತವಾಗಿದ್ದು, ಮೂಲಸಂಘ, ದೇವಗಣದ ರತ್ನಸೇನ ಸಿದ್ಧಾಂತ ದೇವನ ಮರಣವನ್ನು ಶಾಸನ ದಾಖಲಿಸುತ್ತದೆ. (ಧಾರವಾಡ ಜಿಲ್ಲೆಯ ಶಾಸನಗಳ ಸೂಚಿ, (ಸಂ) ಕಲಬುರ್ಗಿ ಎಂ.ಎಂ., ೧೯೭೫, ಪು-೨೨)

ಧಾರವಾಡ ತಾಲೂಕಿನ ಗರಗ ಗ್ರಾಮದ ಕೆರೆಯ ಏರಿ ಬಳಿಯಿರುವ ಕ್ರಿ.ಶ. ೧೨೯೦ರ ನಿಸಿಧಿಗಲ್ಲು ಶಾಸನದಲ್ಲಿ ವಿಕೃತ ಸಂವತ್ಸರದ ಶ್ರಾವಂ ಮಾಸದಲ್ಲಿ ಬಹುಳ ಚವುತಿ ಬ್ರಹಸ್ಪತಿ ವಾರದೆಂದು ಕಾಲದ ಉಲ್ಲೇಖವಿದೆ. ಆದರೆ ಲಿಪಿಯ ಆಧಾರದ ಮೇಲೆ ವಿಕೃತ ಸಂವತ್ಸರವು ೧೨೧೨ನೆಯ ಶಕ ವರ್ಷದಲ್ಲಿ ಬಂದಿರುವುದರಿಂದ ಇದರ ಕಾಲವನ್ನು ಕ್ರಿ.ಶ. ೧೨೯೦ ಜುಲೈ ೨೭ ಗುರುವಾರಕ್ಕೆ ಸಮಾನಾಗುತ್ತದೆ. ಇದು ಶ್ರೀ ಯಾಪನಿಯ ಸಂಘದ ಕುಂಮಡಿಗಣದ ಆಚಾರ್ಯ್ಯಶಾಂತಿ ವೀರದೇವರ ಪೂರ್ವೋಕ್ತ ದಿನದಂದು ಸಮಾಧಿಯನ್ನು ಹೊಂದಿ ಮೋಕ್ಷ ಪದವಿಯನ್ನು ಪಡೆದರೆಂದು ಈ ಶಾಸನ ದಾಖಲಿಸುತ್ತದೆ. (ಎಸ್.ಐ.ಐ. ೧೫, ಗರಗ, ಶಾ.ಸಂ, ೬೧)

ಕ್ರಿ.ಶ. ೧೨ನೆಯ ಶತಮಾನದ ಸೊರಟೂರಿನ ಶಾಸನವು ಸ್ವಸ್ತಿ ಶ್ರೀಮತು ನರೇಂದ್ರ ಸೇನ ಭಟ್ಟರಾಕರ ಗುಡ್ಡ ಹೆಬ್ಬಾಗೆಯ ನಗಗಾಉಂಡನ ಹೆಂಡತಿಯಾದ ಪಮಿಗ ಉಡತಿಯು ಸ್ವರ್ಗಸ್ತಳಾದಳು ಎಂಬುದಾಗಿ ತಿಳಿಸುತ್ತದೆ. (ಎಸ್.ಐ.ಐ. ೧೫೬, ಸೊರಟೂರು, ಶಾ.ಸಂ-೬೨೩)

ಧಾರವಾಡ ತಾಲೂಕಿನ ಗರಗ ಗ್ರಾಮದ ಕೆರೆಯ ಏರಿ ಬಳಿಯಿರುವ ಕ್ರಿ.ಶ. ೧೩ನೆಯ ಶತಮಾನದ ನಿಸಿಧಿಗಲ್ಲು ಶಾಸನ ಅಪೂರ್ಣವಾಗಿದ್ದು, ಕೇವಲ ೩ ಸಾಲುಗಳಷ್ಟೇ ಕಂಡುಬರುತ್ತದೆ. ಶ್ರೀ ಯಾಪನೀಯ ಸಂಘ ಕಮ್ಮಡಿಗಣದ ಬಳೆದಿಗೆಯ ವಿಷಯವಿದ್ದು, ಬಹುಶಃ ನಿಸಿಧಿಯನ್ನೇ ಸೂಚಿಸುತ್ತದೆ. (ಧಾರವಾಡ ಜಿಲ್ಲೆಯ ಶಾಸನಗಳ ಸೂಚಿ, (ಸಂ) ಕಲಬುರ್ಗಿ ಎಂ.ಎಂ., ೧೯೭೫, ಪು-೧೫)

ಆನೆಗೊಂದಿ ಗ್ರಾಮದ ಚಿಂತಾಮಣಿ ಮಠದ ಮುಂದೆ ನದಿಯ ಮಧ್ಯದ ಗುಂಡಿನ ಮೇಲಿನ ಶಾಸನವು ಕ್ರಿ.ಶ. ೧೩೫೭ರ ಕಾಲದ್ದಾಗಿದೆ. ಇದು ಬುಳ್ಳರಾಜನ ಪತ್ನಿ ಕಾಳುಬಾಯಿಯು ಸಮ್ಯಕ್ತ್ವವುತ ಪೂರ್ವಕವಾಗಿ ಬಾಲಚಂದ್ರಯೋಗೀಂದ್ರನ ಪಾದ ಕಮಲಗಳಲ್ಲಿ ದೀಕ್ಷೆ ಸ್ವೀಕರಿಸಿ ಮುಡುಪಿದುದನ್ನು ತಿಳಿಸುತ್ತದೆ, (ಕವಿಹಂ. ಶಾ.ಸಂ–೨)

ಗವಿರಂಗನಾಥ ದೇವಾಲಯದ ಬಳಿ ರಸ್ತೆಯ ಎಡಕ್ಕೆ ದೊಡ್ಡಗುಂಡಿನ ಮೇಲಿನ ಕ್ರಿ.ಶ.ಸುಮಾರು. ೧೩೭೧ರ ಶಾಸನವು ಮೂಲಸಂಘ ಬಲತ್ಕಾರಗಣದ ಧರ್ಮಭೂಷಣ ಭಟ್ಟಾರಕರ ಪ್ರಿಯ ಶಿಷ್ಯ ಬೂಚಣನು ನಿಸಿಧಿಯಾದುದನ್ನು ತಿಳಿಸುತ್ತದೆ. (ಕವಿಹಂ.ಶಾ.ಸಂ–೨, ಗಂಗಾವತಿ, ೪೬)

ಗವಿರಂಗನಾಥಸ್ವಾಮಿ ದೇವಾಲಯಕ್ಕೆ ಹತ್ತುವ ಮೆಟ್ಟಲು ಬಲಬಂಡೆಯಲ್ಲಿರುವ ಶಾಸನವು ಕ್ರಿ.ಶ. ೧೩೬೦ರ ಕಾಲಮಾನದ್ದಾಗಿದ್ದು, ಉಳಿದ ವಿವರಗಳು ನಷ್ಟವಾಗಿದೆ. ಅಲ್ಲೆ ಎರಡನೆಯ ಶಾಸನವು ವ್ಯಕ್ತಿಯೊಬ್ಬ ನಿಸಿಧಿಯಾಗಿದ್ದನ್ನು ದಾಖಲಿಸುತ್ತದೆ. (ಕವಿಹಂ. ಶಾ.ಸಂ–೨, ಗಂಗಾವತಿ, ೪೬)

ಅದೇ ಸ್ಥಳದಲ್ಲಿರುವ ಮೂರನೆಯ ಶಾಸನವು ಕ್ರಿ.ಶ. ೧೩೭೫ರ ಕಾಲದ್ದಾಗಿದೆ. ಇದು ಮೂಲಸಂಘ ಬಲಾತ್ಕಾರಗಣದ ಮದನ ಕೀರ್ತಿರವುಳನ ಪ್ರಿಯಶಿಷ್ಯ ಬ್ಯಂನುರ ಚಿಕ್ಕಣನ ಮಗ ನಾಗಪ್ಪ ನಿಸಿಧಿಯಾದದ್ದನ್ನು ತಿಳಿಸುತ್ತದೆ. (ಕವಿಹಂ. ಶಾ.ಸಂ–೨, ಗಂಗಾವತಿ, ೪೮)

ಅಲ್ಲಿಯೇ ಇರುವ ನಾಲ್ಕನೆಯ ಶಾಸನವು ಕ್ರಿ.ಶ. ೧೩೬೬ ಕಾಲದ್ದಾಗಿದ್ದು, ಇದು ಮೂಲಸಂಘ ದೇಸಿಗಣದ ನರೇಂದ್ರ ಸೇನನ ಪ್ರಿಯಶಿಷ್ಯ ಹಾನೀಯ ಲಖ್ಖಿಸೆಟ್ಟಿಯ ಮಗ ಗೋಪಿಸೆಟ್ಟಿ ನಿಸಿಧಿಯಾದದ್ದನ್ನು ತಿಳಿಸುತ್ತದೆ. ಹಾಗೆಯೇ ಇಲ್ಲಿಯ ಮತ್ತೊಂದು ಶಾಸನವು ಕ್ರಿ.ಶ. ೧೪೪೯ರ ಕಾಲವನ್ನು ಮಾತ್ರ ಸೂಚಿಸುತ್ತದೆ. ಉಳಿದ ವಿವರಗಳು ಹಾಳಾಗಿವೆ. ಇಲ್ಲಿಯೇ ಇರುವ ಮತ್ತೊಂದು ಶಾಸನವು ಕ್ರಿ.ಶ. ೧೩೭೧ರ ಕಾಲದಾಗಿದ್ದು, ಇದು ಹೊನ್ನಹಟ್ಟಿಯ ಸಯಿತಿಯ ಮಗಳು ಸೊಯಿಸೆಟ್ಟಿಯ ನಿಸಿಧಿಯನ್ನು ತಿಳಿಸುತ್ತದೆ. (ಕವಿಹಂ. ಶಾ.ಸಂ–೨, ಗಂಗಾವತಿ, ೪೯)

ಆನೆಗೊಂದಿ ಉತ್ತರಕ್ಕೆ ೬೪ ಕಂಬಗಳ ಮಂಟಪದ ಈಶಾನ್ಯಕ್ಕಿರುವ ಬಂಡೆಯಲ್ಲಿರುವ ಕ್ರಿ.ಶ. ೧೩೨೫ರ ಶಾಸನವು ಹುಂಗದ ಗೋವಿನ ಸೆಟ್ಟಿಯ ಸೊಸೆ ಸೋವಿಯಕ್ಕನ ನಿಸಿಧಿಯನ್ನು ತಿಳಿಸುತ್ತದೆ. (ಕವಿಹಂ. ಶಾ.ಸಂ–೨, ಗಂಗಾವತಿ, ೫೮)

ಕ್ರಿ.ಶ. ೧೪೨೦ರ ಮುಳಗುಂದದ ಶಾಸನವು "ಶ್ರೀ ಮದಾಯರಾಜ ಗುರು ಮಂಡಲಾಚಾರ್ಯ್ಯನಾದಿ ವಾದೀ ಸ್ವರರಾಯವದಿಸಿತಾಮಹ ಸಕಲವಿ(ಬಂ) ಧಜನ ಚಕ್ರರ್ವ್ತಗ (ಳ) (ಪ್ಪ) ಸೇನಗಣದೆ ಹೇಮಸೇನ ಗುರುಗಳ ಪ್ರಿಯ ಗುಡ್ಡ (ಮು*)ಳ ಗುಂದದ ಬುಳಿ ಸೆಟ್ಟಿಯ ಕೇ(ಷ)ಪ್ಪನು ಸ್ವರ್ಗಸ್ಥನಾದ ನಿಸ್ತಿಕೆಯ ಕಲ್ಲು ನಿಲಿಸಿದೆರು ಮಂಗಳ ಮಹಾಶ್ರೀ" ಎಂದು ಅವನ ನೆನಪಿಗೆ ನಿಲ್ಲಿಸಿದ ನಿಸಿಧಿ ಎಂದು ಈ ಶಾಸನದಿಂದ ತಿಳಿದುಬರುತ್ತದೆ. (ಎಸ್.ಐ.ಐ. ೧೫. ಮುಳಗುಂದ, ಶಾ.ಸಂ. ೬೬೬)

ಧಾರವಾಡ ತಾಲೂಕಿನ ಅಳ್ನಾವರ ಗ್ರಾಮದ ಲಿಂಗಾಯತ ಮಠದ ಹೊಲದಲ್ಲಿರುವ ಕ್ರಿ.ಶ. ೧೫೦೫ನೆಯ ಶತಮಾನದ ನಿಸಿಧಿಗಲ್ಲು ಶಾಸನದಲ್ಲಿ 'ಸಕ ವರ್ಷ ಸಾವಿರದ ನಾನೂರ ಇಪ್ಪತ್ತೆಂಟನೆಯ ಕ್ರೋಧನ ಸಂವಛರದ ಅರ್ಶವಿಜಬಹುಳ ಚತುರ್ದಶಿ' ಎಂದು ಉಲ್ಲೇಖವಿದ್ದು, ಇದು ಕ್ರಿ.ಶ. ೧೫೦೫ನೆಯ ಅಕ್ಟೋಬರ್ ೨೬ ಆದಿತ್ಯವಾರಕ್ಕೆ ಸರಿ ಹೊಂದುತ್ತದೆ. ಪೂರ್ವೋಕ್ತ ದಿನದಂದು ಹುಬ್ಬಳ್ಳಿಯ ಚಿಕ್ಕಮಲ್ಲಿ ಸೆಟ್ಟಿಯು ಇಪ್ಪತ್ತೊಂದು ದಿನಗಳ ಕಾಲ ಸಲ್ಲೇಖನ ವ್ರತ್ತವನ್ನಾಚರಿಸಿ ಚತುರ್ದಶಿಯದಂದು ಸೂರ್ಯ ಉದಯದ ಒಂದನೆಯ ಜಾವದಲ್ಲಿ ಸ್ವರ್ಗಸ್ಥರಾದರು. ಅವರನ್ನು ಹೊಳೆಯ ದಂಡೆಯಲ್ಲಿ ದಹನ ಮಾಡಿದರು. ಅಲ್ಲದೇ ಈತನನ್ನು ಸಿದ್ಧೇಮದ್ರತನು ಸಂಜಾತ ಬಡವರ ಬೇಲಿ ಜೀವಧರ್ಮ ಪುರಾಯಣ ಎಂದು ಹೊಗಳಲಾಗಿದೆ. (ಎಸ್.ಐ.ಐ. ೧೫, ಅಳ್ನಾವರ, ಶಾ.ಸಂ. ೬೯೩)

ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಡೋಣಿಯ ಹೊಲವೊಂದರಲ್ಲಿ ಸರಳ ನಿಸಿಧಿ ಇದ್ದು, ಇದು ಧ್ಯಾನಾಸಕ್ತನಾಗಿರುವ ಜಿನಮೂರ್ತಿಯನ್ನು ಮಾತ್ರ ಹೊಂದಿದೆ. ಗದಗ ತಾಲೂಕಿನ ಸೊರಟೂರಿನ ಜೈನ ಬಸದಿಯ ಮುಂದೆ ಇರುವ ನಿಸಿಧಿ ಶಾಸನವು ನರೇಂದ್ರ ಸೇನನ ಶಿಷ್ಯೆ ಪಮಿಗೌಡತಿಯ ನಿಸಿಧಿಯು ಇದ್ದು, ಇದರಲ್ಲಿ ಮಧ್ಯದಲ್ಲಿ ಕುಳಿತ ತೀರ್ಥಂಕರನ ಮೂರ್ತಿ, ಅದರ ತಲೆ ಮೇಲೆ ಮುಕ್ಕೊಡೆ, ಎಡಭಾಗದಲ್ಲಿ ಸ್ತ್ರೀಯೊಬ್ಬಳು ಕೈಮುಗಿದು ಕುಳಿತುಕೊಂಡಿರುವ ಶಿಲ್ಪವನ್ನು ಚಿತ್ರಿಸಲಾಗಿದೆ.

ಹಳೆ ದರೋಜಿ ಗ್ರಾಮದ ರಾಮಲಿಂಗೇಶ್ವರ ಬೆಟ್ಟದ ಕೆಳಗಿನ ವೆಂಕಟೇಶ್ವರ ದೇವಾಲಯದ ಬಳಿ ಇರುವ ಶಾಸನವು ಕೆಸೆಣಿ ದೇವಮಗನು ಮಲಪನ ನಿಸಿಧಿಯನ್ನು ಉಲ್ಲೇಖಿಸುತ್ತದೆ. ಈ ನಿಸಿಧಿ ಶಿಲೆಯ ಮೂರು ಹಂತದ್ದಾಗಿದ್ದು ಕೆಳಗಿನ ಹಂತದಲ್ಲಿ ಮೂರು ಸಾಲಿನ ಲಿಪಿಯನ್ನು ಹೊಂದಿದೆ. ೧೩ನೆಯ ಶತಮಾನಕ್ಕೆ ಸೇರಿದ ಲಿಪಿಯನ್ನು ಹೋಲುತ್ತದೆ. ಮಧ್ಯದ ಹಂತದಲ್ಲಿ ಅಂಜಲಿ ಮುದ್ರೆಯಲ್ಲಿ ಕುಳಿತ ಭಕ್ತನ ಶಿಲ್ಪವಿದ್ದು, ಮೇಲಿನ ಹಂತದಲ್ಲಿ ಸಮಭಂಗಿಯಲ್ಲಿ ನಿಂತ ತೀರ್ಥಂಕರನ ಶಿಲ್ಪವಿದೆ.

ಇದೇ ಬೆಟ್ಟದಲ್ಲಿ ರಾಮಲಿಂಗೇಶ್ವರ ದೇವಾಲಯಕ್ಕೆ ಹೋಗುವ ಮಾರ್ಗದಲ್ಲಿ ಮತ್ತೊಂದು ನಿಸಿಧಿ ಶಿಲೆಯು ಕಾಣಿಸುತ್ತಿದೆ. ಇದು ಎರಡು ಹಂತದಲ್ಲಿದ್ದು, ಕೆಳಗಿನ ಹಂತದಲ್ಲಿ ಧ್ಯಾನಾಸಕ್ತನಾಗಿ ಕುಳಿತ ಭಕ್ತನ ಶಿಲ್ಪವಿದ್ದು, ಮೇಲಿನ ಹಂತದಲ್ಲಿ ಸಮಭಂಗಿಯಲ್ಲಿ ನಿಂತ ತೀರ್ಥಂಕರನ ಶಿಲ್ಪವಿದೆ.

ಕನ್ನಡ ವಿಶ್ವವಿದ್ಯಾಲಯದ ಹೊರ ಆವರಣದಲ್ಲಿ ಕ್ರಿ.ಶ. ೧೫, ೧೬ನೆಯ ಶತಮಾನದ ಒಂದು ನಿಸಿಧಿಗಲ್ಲು ಇದೆ. ಈ ನಿಸಿಧಿಗಲ್ಲಿನ ಶಿಲೆಯ ಮೇಲಿನ ಪಾದಗಳು ನಿಸಿಧಿಗಲ್ಲಿನ ಮತ್ತೊಂದು ರೂಪ. ಇವು ಮಡಿದ ಜೈನ ಪಾವಿತ್ರ್ಯತೆಯನ್ನು ತೋರಿಸುತ್ತದೆ. ಪಾದಗಳ ಜೈನ ಮುನಿಗಳ ದರ್ಶನದ ಸಂಕೇತ ಮಾರ್ಗ ಪಡೆದ ಮೋಕ್ಷ ಇವುಗಳ ಸಂಕೇತವಾಗಿಯೂ ಈ ಪಾದಗಳು ಕಂಡುಬರುತ್ತದೆ.

ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ೪ನೆಯ ಅಂಕಣದಲ್ಲಿ ಕ್ರಿ.ಶ. ೧೫ನೆಯ ಶತಮಾನದ ನಿಸಿಧಿಗಲ್ಲು ಇದೆ. ಇದು ಮೂರು ಹಂತದ ನಿಸಿಧಿಗಲ್ಲು. ಕೆಳಹಂತದಲ್ಲಿ ತಪಸ್ಸಿಗೆ ನಿಂತ ಮುನಿ, ಮಧ್ಯ ಹಂತದಲ್ಲಿ ತಪಸ್ಸಿಗೆ ಕುಳಿತಿರುವುದು, ಕೊನೆಯ ಹಂತದಲ್ಲಿ ದೇವರ ಸಾನಿಧ್ಯ ಸೇರಿರುವುದು. ಒಟ್ಟಾರೆಯಾಗಿ ನಿಸಿಧಿ ಶಿಲ್ಪಗಳು ಜೈನಧರ್ಮದ ಉನ್ನತಿ ಮತ್ತು ಮಹತ್ವವನ್ನು ತಿಳಿಸುತ್ತದೆ. ನಿಸಿಧಿಗಳಲ್ಲಿ ಜಿನ ಮೂರ್ತಿಯನ್ನು ಅತ್ಯಂತ ಗೌರವದಿಂದ ಚಿತ್ರಿಸಲಾಗಿದೆ. ಇವು ಜೈನಧರ್ಮದ ಅಧ್ಯಯನಕ್ಕೆ ಕೈಗನ್ನಡಿಯಾಗಿದೆ.

**೮.೭. ಹುಲಿಬೇಟೆ ವೀರಗಲ್ಲು ಶಿಲ್ಪ :**

ಪ್ರಾಚೀನ ಕಾಲದಲ್ಲಿ ಮಾನವನು ಬದುಕಲು ಕಲಿತ ವಿದ್ಯೆಯೇ ಬೇಟೆ. ಮನುಷ್ಯ ಮೊದಲು ಆಹಾರಕ್ಕಾಗಿ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದನು. ಮುಂದೆ ಹವ್ಯಾಸಕ್ಕಾಗಿ, ಮೋಜಿಗಾಗಿ, ಕಾಲಾಯಾಪನೆಗಾಗಿ ಅಥವಾ ತಮ್ಮ ಶೌರ್ಯವನ್ನು ಪ್ರದರ್ಶಿಸಲು ಬೇಟೆಯಾಡುತ್ತಿದ್ದರು. ಇಂತಹ ಬೇಟೆಯ ವಿಷಯಗಳು ನಮ್ಮ ಹಲವಾರು ಕಾವ್ಯಗಳಲ್ಲಿ ಚಿತ್ರಿಸಲಾಗಿದೆ. ಕೆಲವು ಕಾವ್ಯಗಳಲ್ಲಿ ಮೋಜಿಗಾಗಿಯಾದರೆ, ರಾಘವಾಂಕನ ಹರಿಶ್ಚಂದ್ರ ಕಾವ್ಯದಲ್ಲಿ ಜನರ ರಕ್ಷಣೆಗಾಗಿ, ಜನರ ಬೆಳೆಯನ್ನು ಉಳಿಸಲು ಬೇಟೆಯಾಡಲಾಗುತ್ತದೆ. ಹುಲಿಯನ್ನು ಬೇಟೆಯಾಡುವುದು ಹಿಂದಿನ ಕಾಲದಿಂದಲೂ ಬಂದ ಒಂದು ಧೀರತ್ವದ ಸಂಕೇತ. ಬೇಟೆಯಾಡುವವನು ನಿಜವಾಗಿಯೂ ಬಹಳ ಧೈರ್ಯಶಾಲಿಯಾಗಿರಬೇಕು. ಹಂದಿಯನ್ನು ಕೊಲ್ಲುವಷ್ಟು ಸುಲಭವಾಗಿ ಹುಲಿಯನ್ನು ಕೊಲ್ಲಲು ಸಾಧ್ಯವಿಲ್ಲ. ಕಾರಣ ಮನುಷ್ಯನಿಗಿಂತಲೂ ಅದು ಬಲಿಷ್ಠವಾದ ಪ್ರಾಣಿ. ಇಂತಹ ಬಲಿಷ್ಠವಾದ ಪ್ರಾಣಿಯೊಂದಿಗೆ ಹೋರಾಡಿದ ವಿಷಯವನ್ನು ತಿಳಿಸುವ ವೀರಗಲ್ಲುಗಳನ್ನು ನಾವು ಹುಲಿಬೇಟೆ ವೀರಗಲ್ಲು ಎಂದು ತಿಳಿಯಬಹುದು.

ದುಷ್ಟ ಮೃಗಗಳಾದ ಹುಲಿ, ಆನೆ, ಕಾಡು ಹಂದಿಗಳನ್ನು ಬೇಟೆಯಾಡಿದವರು ಇಲ್ಲವೇ ಬೇಟೆಯಾಡುವ ಸಮಯದಲ್ಲಿ ಮಡಿದವರಿಗಾಗಿ ಸ್ಮಾರಕಗಳನ್ನು ನಿಲ್ಲಿಸಿರುತ್ತಾರೆ. ಬೇಟೆಯ ವೀರಗಲ್ಲುಗಳಲ್ಲಿ ಮನುಷ್ಯರಿಗಾಗಿ ನಿಲ್ಲಿಸಿದ ವೀರಗಲ್ಲುಗಳಂತೆ ಮಾನವನ ಸಹಾಯಕ್ಕಾಗಿ ನಿಂತ ಪ್ರಾಣಿಗಳ ಸ್ಮಾರಕಗಳಿವೆ. ಆತಕೂರಿನ ಶಾಸನವು 'ಕಾಳಿ' ಎಂಬ ನಾಯಿಯ ಪರಾಕ್ರಮವನ್ನು ವರ್ಣಿಸಿದರೆ, ಯಲಹಂಕ ಗ್ರಾಮದ ಸ್ಮಾರಕವು 'ಚಾವುಂಡಿ' ಎಂಬ ನಾಯಿಯ ಬಗ್ಗೆ ತಿಳಿಸುತ್ತದೆ. ಕ್ರಿ.ಶ. ೯೭೫ರ ಕೋಲಾರ ಜಿಲ್ಲೆ ಮೇಲೂಗಣಿ ಗ್ರಾಮದ ಶಾಸನ 'ತೋಕ' ಎಂಬ ನಾಯಿ ೭೫ ಹಂದಿಗಳನ್ನು 'ಧಳಗ' ಎಂಬ ನಾಯಿ ೨೬ ಹಂದಿಗಳನ್ನು ಕೊಂದು ಮರಣ ಹೊಂದಿದ್ದನ್ನು ದಾಖಲಿಸಿದೆ. (ಕನ್ನಡ ದಾಖಲು ಸಾಹಿತ್ಯ, ರವೀಂದ್ರನಾಥ ಕೆ., ೨೦೦೦, ಪುಟ-೪೨)

ಗದಗ ಜಿಲ್ಲೆಯ ಮುಂಡರಗಿ ತಾಲೂಕಿನ ಕಲಕೇರಿಯಲ್ಲಿರುವ ಹುಲಿಬೇಟೆ ಕಲ್ಲಿನ ಕೆಳಭಾಗದಲ್ಲಿ ವೀರನು ಹುಲಿಯ ಜೊತೆ ಬಿಲ್ಲು-ಬಾಣಗಳನ್ನು ಹಿಡಿದು ಹೋರಾಡುತ್ತಿದ್ದು, ಆತನ ಹಿಂದಿನವರು ಕತ್ತಿ, ಗುರಾಣಿಯನ್ನು ಹಿಡಿದು ಹುಲಿಯ ಜೊತೆ ಹೋರಾಡಲು ಸಿದ್ಧವಾಗಿದ್ದಾರೆ. ಎರಡನೆಯ ಹಂತದಲ್ಲಿ ವೀರನನ್ನು ಅಪ್ಸರೆಯರು ಚಾಮರಗಳನ್ನಿಡಿದು ದೇವಲೋಕಕ್ಕೆ ಪುಷ್ಪಕ ವಿಮಾನದಲ್ಲಿ

ಕರೆತರುತ್ತಿದ್ದಾರೆ. ಮೂರನೆಯ ಹಂತದಲ್ಲಿ ವೀರನು ಶಿವಲಿಂಗದ ಮುಂದೆ ಕುಳಿತು ಧ್ಯಾನಾಸಕ್ತನಾಗಿದ್ದು, ಯತಿಯೊಬ್ಬ ಶಿವನನ್ನು ಪೂಜಿಸುತ್ತಿದ್ದು, ಎದುರಿಗೆ ನಂದಿ ವಿಗ್ರಹವಿದೆ.

ಇದೇ ತಾಲೂಕಿನ ಡೋಣಿಯ ಸಿದ್ಧಲಿಂಗೇಶ್ವರ ದೇವಾಲಯದ ಪಕ್ಕದಲ್ಲಿರುವ ಹುಲಿಬೇಟೆ ಕಲ್ಲು ವಿಶೇಷವಾಗಿದ್ದು, ಅದರಲ್ಲಿ ಕಾಡಿನ ಚಿತ್ರಣವನ್ನು ಸಹ ಚಿತ್ರಿಸಲಾಗಿದೆ. ಈ ಬೇಟೆ ಕಲ್ಲು ಮೂರು ಹಂತಗಳಲ್ಲಿದ್ದು, ಮೊದಲನೆಯ ಹಂತದಲ್ಲಿ ಕಾಡಿನಲ್ಲಿ ಇರುವ ಹುಲಿಯನ್ನು ಬಿಲ್ಲು-ಬಾಣಗಳನ್ನು ಹಿಡಿದು ವೀರನೊಬ್ಬನು ಅದನ್ನು ಕೊಲ್ಲಲು ಬಾಣವನ್ನು ಹೂಡಿದಂತೆ ಚಿತ್ರಿಸಲಾಗಿದೆ. ಸುತ್ತಲೂ ಮರ-ಗಿಡಗಳನ್ನು ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ಅಪ್ಸರೆಯರೀರ್ವರು ಚಾಮರಗಳನ್ನಿಡಿದು ವೀರನನ್ನು ತಮ್ಮ ಹೆಗಲ ಮೇಲೆ ಹೊತ್ತು ಹೋಗುತ್ತಿರುವಂತೆ ಚಿತ್ರಿಸಲಾಗಿದೆ. ಈ ಹುಲಿಬೇಟೆ ವೀರಗಲ್ಲು ೧೨ನೆಯ ಶತಮಾನಕ್ಕೆ ಸೇರಿದ್ದಾಗಿದೆ.

ಗದಗ ತಾಲೂಕಿನ ಹೊಸೂರಿನ ಪಾಳು ದೇವಾಲಯದ ಮುಂಭಾಗದಲ್ಲಿ ಇರುವ ಹುಲಿಬೇಟೆ ಕಲ್ಲು ವಿಶೇಷವಾದುದಾಗಿದೆ. ಲಿಪಿಯ ದೃಷ್ಟಿಯಿಂದ ೧೨-೧೩ನೆಯ ಶತಮಾನಕ್ಕೆ ಸೇರುತ್ತದೆ. ಇದರ ವಿಶೇಷವೆಂದರೆ ಹುಲಿಬೇಟೆಯಲ್ಲಿ ನಾಯಿಯನ್ನು ಬಳಸಿರುವುದು ಮೊದಲ ಹಂತದಲ್ಲಿ ವೀರನು ಕೈಯಲ್ಲಿ ಆಯುಧವನ್ನಿಡಿದು ಹುಲಿಯ ಜೊತೆ ಹೋರಾಡುತ್ತಿದ್ದಾನೆ. ಇವನಿಗೆ ಎರಡು ನಾಯಿಗಳ ಹೋರಾಟದಲ್ಲಿ ಸಹಕರಿಸುತ್ತಿವೆ. ನಾಯಿಗಳಿಗೆ ಹಗ್ಗವನ್ನು ಕಟ್ಟಲಾಗಿದೆ. ಈ ರೀತಿ ಹುಲಿಯನ್ನು ನಾಯಿಗಳ ಜೊತೆ ವೀರನು ಬೇಟೆಯಾಡುತ್ತಿರುವುದ ವಿಶೇಷ ಶಿಲ್ಪವಾಗಿದೆ. ಎರಡನೆಯ ಹಂತದಲ್ಲಿ ಚಾಮರವನ್ನಿಡಿದ ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಪುಷ್ಪಕ ವಿಮಾನದಲ್ಲಿ ಕರೆದೊಯ್ಯಲಾಗುತ್ತಿದೆ. ಮೂರನೆಯ ಹಂತದಲ್ಲಿ ವೀರನು ಶಿವಲಿಂಗದ ಮುಂದೆ ಕುಳಿತು ಧ್ಯಾನಾಸಕ್ತನಾಗಿದ್ದಾನೆ. ಯತಿಯೊಬ್ಬ ಎಡಗೈಯಲ್ಲಿ ಗಂಟೆಯನ್ನಿಡಿದು ಪೂಜಿಸುತ್ತಿದ್ದಾನೆ. ಶಿವಲಿಂಗಕ್ಕೆ ಹೂವಿನ ಕಿರೀಟವನ್ನು ಇಡಲಾಗಿದೆ. ಎದುರಿಗೆ ನಂದಿ, ಮೇಲ್ಭಾಗದಲ್ಲಿ ಸೂರ್ಯ-ಚಂದ್ರರನ್ನು ಚಿತ್ರಿಸಲಾಗಿದೆ. ಈ ಹುಲಿಬೇಟೆ ವೀರಗಲ್ಲು ೧೨ನೆಯ ಶತಮಾನದ್ದಾಗಿದೆ. ಕಲಘಟಗಿ ತಾಲೂಕಿನ ಹುಲ್ಲಂಬಿಯ ಊರ ಹೊರಗೆ ಹೊಲದಲ್ಲಿರುವ ವೀರಗಲ್ಲಿನ ಒಂದು ಪಟ್ಟಿಕೆ ಮಾತ್ರ ಕಂಡುಬರುತ್ತದೆ. ಮೇಲಿನ ಪಟ್ಟಿಕೆ ಭಗ್ನಗೊಂಡಿದೆ. ಚಿತ್ರದಲ್ಲಿ ಇಬ್ಬರು ವೀರರು ಒಂದು ಕಾಡುಹಂದಿಗೆ ಎರಡು ಬದಿಯಿಂದ ಈಟಿಯಿಂದ ಚುಚ್ಚುತ್ತಿದ್ದಾರೆ. ಈ ಹಂದಿಯನ್ನು ಮೇಲಿನಿಂದ ನಾಯಿಯೊಂದು ಕಿತ್ತು ತಿನ್ನುತ್ತಿರುವಂತಿದೆ. ಈ ವೀರರು ಅಪಾಯಕಾರಿಯಾದ ಕಾಡುಹಂದಿಯನ್ನು ಹೊಡೆದು ಸಾಯಿಸಿ ಪ್ರಾಣ ತೆತ್ತಿದ್ದಾರೆ. ಮತ್ತು ಇವರಿಗೆ ತಮ್ಮ ಸಾಕುನಾಯಿ ಸಹ ಸಹಾಯ ಮಾಡಿರುವುದನ್ನು ಈ ಚಿತ್ರದಲ್ಲಿ ನಿರೂಪಿಸಲಾಗಿದೆ. ಇದು ಕ್ರಿ.ಶ. ೧೨ನೆಯ ಶತಮಾನದ ಪ್ರಾಣಿ ಬೇಟೆಯ ವೀರಗಲ್ಲಾಗಿದೆ. (ಧಾರವಾಡ ಜಿಲ್ಲೆಯ ಪುರಾತತ್ವ, ಜಯಮ್ಮ ಬಿ., ೨೦೧೦, ಪುಟ-೨೫೮)

ಮುಂಡರಗಿ ತಾಲೂಕಿನ ಡೋಣಿ ಗ್ರಾಮದ ವೀರಗಲ್ಲಿನಲ್ಲಿ ವೀರನೊಬ್ಬ ಹುಲಿಯನ್ನು ಬಿಲ್ಲಿನಿಂದ ಬೇಟೆ ಆಡುತ್ತಿರುವನು. ಹುಲಿಯ ತಲೆಗೆ ಬಾಣವನ್ನು ಪ್ರಯೋಗಿಸುತ್ತ ನಿಂತಿದ್ದಾನೆ. ಹುಲಿಯ ಬಾಯಿ ತೆರೆದು ಅವನ ಎದುರಾಗಿ ನಿಂತಿದೆ. ವೀರ ಮತ್ತು ಹುಲಿಯ ಬದಿಗಳಲ್ಲಿ

ಎತ್ತರದ ಐದು ಈಚಲ ಅಥವಾ ತೆಂಗಿನ ಮರಗಳಿವೆ. ಕಾಡನ್ನು ಹೊಂದಿರುವ ಡೋಣಿ ಪ್ರದೇಶದಲ್ಲಿ ಈಚಲ ಮರಗಳು ಇಂದಿಗೂ ಇರುವುದನ್ನು ನೋಡಬಹುದು. ಮಡಿದ ವೀರನನ್ನು ಅಪ್ಸರೆಯರು ಹಿಡಿದುಕೊಂಡು ಹಾರುತ್ತಿರುವರು. ಮೇಲಿನ ಭಾಗದಲ್ಲಿ ವೀರ ಕೈಮುಗಿದು ಶಿವಲಿಂಗದ ಮುಂದೆ ನಿಂತಿದ್ದಾನೆ. ಶಿವಲಿಂಗಕ್ಕೆ ಆಯತಾಕಾರದ ಮೂರು ಪಾಣಿ ಪೀಠಗಳಿವೆ. ಎಡಗಡೆಗೆ ಯತಿ ನಿಂತು ಶಿವಲಿಂಗವನ್ನು ಆರಾಧಿಸುತ್ತಿರುವನು. ಶಿಲ್ಪದ ಮೇಲ್ಭಾಗದಲ್ಲಿ ಕಳಶವಿದೆ. ಈ ಶಿಲ್ಪದಲ್ಲಿ ವೀರ ಹುಲಿಬೇಟೆ ಆಡಿ ಪ್ರಾಣ ಕಳೆದುಕೊಂಡಿರುವುದು ತಿಳಿಯುತ್ತದೆ.

ಹಡಗಲಿ ತಾಲೂಕಿನ ಮಾನ್ಯರ ಮಸಲವಾಡ ವೀರಗಲ್ಲು ಹುಲಿಬೇಟೆಯದ್ದಾಗಿದೆ. ಹುಲಿಯಂಥ ಬಲಿಷ್ಠ ಪ್ರಾಣಿಯೊಂದಿಗೆ ಹೋರಾಡಿ ವೀರ ಮರಣ ಹೊಂದಿದ ವಿಷಯವನ್ನು ಇದು ತಿಳಿಸುತ್ತದೆ. ಈ ವೀರಗಲ್ಲಿನಲ್ಲಿ ಕೆಳಗಿನ ಹಂತವನ್ನು ಮಾತ್ರ ಕಾಣುತ್ತೇವೆ. ಮೇಲ್ಭಾಗ ತ್ರುಟಿತಗೊಂಡಿದೆ. ಈ ಕೆಳಗಿನ ಹಂತದಲ್ಲಿ ವೀರನು ಕೈಯಲ್ಲಿ ಭರ್ಚಿಯನ್ನು ಹಿಡಿದು ಬಲಿಷ್ಠವಾದ ಹುಲಿಯನ್ನು ಎದುರಿಸುತ್ತಿದ್ದಾನೆ. ಇವನ ಹಿಂದೆ ಸೈನಿಕರಿದ್ದು ಎಲ್ಲರ ಕೈಯಲ್ಲೂ ಖಡ್ಗಗಳಿವೆ.

ಗುಲಬರ್ಗಾ ತಾಲೂಕಿನ ಹರಸೂರು ಗ್ರಾಮದ ರಸ್ತೆಯಲ್ಲಿರುವ ವಿಜಯನಗರ ಕಾಲದ ಹುಲಿಬೇಟೆ ವೀರಗಲ್ಲು. ಈ ವೀರಗಲ್ಲಿನಲ್ಲಿ ಹುಲಿಯೊಂದಿಗೆ ಬೇಟೆಯಾಡುತ್ತಿರುವ ಸನ್ನಿವೇಶವಿದೆ. ವೀರನ ಮೇಲೆ ಹುಲಿಯು ಎರಗಿದಂತೆ ಕಂಡುಬರುತ್ತಿದೆ. ಹುಲಿಯು ತನ್ನ ಪ್ರಾಣ ರಕ್ಷಣೆಗೋಸ್ಕರ ತನ್ನ ಮುಂದಿನ ಎರಡು ಕಾಲುಗಳನ್ನು ವೀರನ ಮೇಲೇರಿ ಅವನನ್ನು ಕೊಲ್ಲುವ ಪ್ರಯತ್ನದ ಸನ್ನಿವೇಶವನ್ನು ಇಲ್ಲಿ ನೋಡಬಹುದು. ವೀರನು ತನ್ನ ಮೇಲೆ ಹುಲಿಯ ಎರಗಿದ ಸಂದರ್ಭದಲ್ಲಿ ತನ್ನ ಕೈಯಲ್ಲಿದ್ದ ಖಡ್ಗದಿಂದ ಅದರ ಹೊಟ್ಟೆಗೆ ಚುಚ್ಚಿ ಅದನ್ನು ಕೊಲ್ಲುತ್ತಿರುವ ದೃಶ್ಯವನ್ನು ನೋಡಬಹುದು. ಇಲ್ಲಿ ಇಬ್ಬರು ವೀರರನ್ನು ಚಿತ್ರಿಸಲಾಗಿದೆ. ಒಬ್ಬನು ಹುಲಿಯೊಂದಿಗೆ ಕಾದಾಡುತ್ತಿದ್ದರೆ, ಮತ್ತೊಬ್ಬನು ಅವನಿಗೆ ಸಹಾಯಕನಾಗಿ ಆತನ ಹಿಂದೆಯೇ ನಿಂತಿದ್ದಾನೆ. ಹುಲಿಗೆ ಮುಖ ಮಾಡಿ ನಿಂತ ವೀರನು ಒಂದು ಕೈಯಿಂದ ಹುಲಿಯನ್ನು ತನ್ನ ತೆಕ್ಕೆಗೆ ಹಿಡಿದುಕೊಂಡ ದೃಶ್ಯ ಕಂಡುಬರುತ್ತದೆ. ಹಿಂದೆ ನಿಂತಿದ್ದ ವೀರನ ಕೈಯಲ್ಲಿ ಖಡ್ಗಗಳು ಕಂಡುಬರುತ್ತವೆ.

ಗುಲಬರ್ಗಾ ತಾಲೂಕಿನ ಶ್ರೀನಿವಾಸ ಸರಗಡಿ ಗ್ರಾಮದ ಸಣ್ಣಬಸವನ ಗುಡಿ ಬಳಿಯಿರುವ ೧೫ನೆಯ ಶತಮಾನಾದ ವೀರಗಲ್ಲು. ಈ ವೀರಗಲ್ಲಿನಲ್ಲಿ ವೀರನು ಹಂದಿಯೊಂದಿಗೆ ಕಾದಾಡುತ್ತಿರುವ ಚಿತ್ರವಿದೆ. ವೀರನು ತನ್ನ ಬಲಗೈಯಲ್ಲಿ ಖಡ್ಗವನ್ನು ಹಿಡಿದು ಹಂದಿಯ ಕುತ್ತಿಗೆಗೆ ಇರಿಯುತ್ತಿರುವ ದೃಶ್ಯವಿದೆ.

ಗುಲಬರ್ಗಾ ತಾಲೂಕಿನ ಮಹಾಗಾಂವ ಗ್ರಾಮದ ಮಲ್ಲಿಕಾರ್ಜುನ ದೇವಾಲಯದ ಬಳಿ ಇರುವ ೧೬ನೆಯ ಶತಮಾನದ ವೀರಗಲ್ಲು. ಈ ವೀರಗಲ್ಲು ಮೂರು ಪಟ್ಟಿಕೆಗಳಿವೆ. ಮೊದಲನೆಯ ಪಟ್ಟಿಕೆಯಲ್ಲಿ ವೀರನು ತನ್ನ ಕೈಯಲ್ಲಿ ಭರ್ಚಿಯನ್ನು ಹಿಡಿದುಕೊಂಡು ತನ್ನ ಮೇಲೆ ಎರಗುತ್ತಿರುವ ಹುಲಿಯ ಗಂಟಲಿಗೆ ಚುಚ್ಚುತ್ತಿರುವ ದೃಶ್ಯವಿದೆ. ಹುಲಿ ಮತ್ತು ವೀರನ ಕಾಳಗದಲ್ಲಿ ವೀರನು ಮರಣ ಹೊಂದಿದ ಚಿತ್ರವಿದೆ. ಎರಡನೆಯ ಪಟ್ಟಿಕೆಯಲ್ಲಿ ಅಪ್ಸರೆಯರು ಆ ವೀರನನ್ನು ಸ್ವರ್ಗಕ್ಕೆ

ಒಯ್ಯುತ್ತಿರುವ ದೃಶ್ಯವಿದೆ. ಮೂರನೆಯ ಪಟ್ಟಿಕೆಯಲ್ಲಿ ವೀರನು ಕೈಮುಗಿದು ಕುಳಿತುಕೊಂಡಿದ್ದಾನೆ. ಅವನ ಪಕ್ಕದಲ್ಲಿಯೇ ಶಿವಲಿಂಗದ ಚಿತ್ರವಿದ್ದು, ವೀರ ಹುಲಿಯೊಂದಿಗೆ ಕಾದಾಡುತ್ತಿರುವ ದೃಶ್ಯವಿದೆ.

**೮.೮. ಆನೆಬೇಟೆ ವೀರಗಲ್ಲು ಶಿಲ್ಪ :**

ಶಾಸನಗಳಲ್ಲಿ ಆನೆಯೊಡನೆ ಯುದ್ಧ ಮಾಡುವ ವಿವರಗಳಿದ್ದರೂ ಆನೆಬೇಟೆ ಶಾಸನವಾಗುವುದಿಲ್ಲ. ಅಲ್ಲಿ ಆನೆ ಹೋರಾಟದ ಒಂದು ಮಾಧ್ಯಮವಾಗಿರುತ್ತದೆ. ಆನೆಬೇಟೆಯಲ್ಲಿ ವೀರನು ನೇರವಾಗಿ ಆನೆಯನ್ನು ಕೊಲ್ಲುವ ಉದ್ದೇಶವನ್ನು ಹೊಂದಿ ಅದರೊಂದಿಗೆ ಹೋರಾಡಿ ಮರಣ ಹೊಂದಿದ ವೀರನ ಸ್ಮಾರಕ ಶಿಲೆಗಳೇ ಆನೆಬೇಟೆ ಶಿಲ್ಪಗಳು. ಕನ್ನಡ ನಾಡಿನಾದ್ಯಂತ ಇಂಥ ಶಿಲ್ಪದ ವೀರಗಲ್ಲುಗಳ ಸಂಖ್ಯೆ ಬೆರಳೆಣಿಕೆಯಷ್ಟು ಕಂಡುಬರುತ್ತವೆ.

ಕುಷ್ಟಗಿ ತಾಲೂಕಿನ ಪುರದ ಸೋಮಶೇಖರಯ್ಯನವರ ಹೊಲದಲ್ಲಿ ಕ್ರಿ.ಶ. ೧೩ನೆಯ ಶತಮಾನದ ಆನೆಬೇಟೆ ವೀರಗಲ್ಲು ಕಂಡುಬಂದಿದೆ. ಇದು ಎರಡು ಹಂತದ್ದಾಗಿದೆ. ಕೆಳಗಿನ ಭಾಗ ಮಣ್ಣಲ್ಲಿ ಮುಚ್ಚಿದೆ. ಸ್ವಲ್ಪ ಮೇಲ್ಭಾಗದಲ್ಲಿ ಕುದುರೆಯ ಹಾಗೆ ಕಾಣುವ ರೇಖಾ ಚಿತ್ರವಿದೆ. ಮಧ್ಯದಲ್ಲಿ ವೀರನೊಬ್ಬ ಆನೆಯನ್ನು ಬೇಟೆಯಾಡುತ್ತಿರುವಂತೆ ಬಿಡಿಸಲಾಗಿದೆ. ವೀರನು ತನ್ನ ಬಲಗೈಯಲ್ಲಿ ಆಯುಧವನ್ನು ಹಿಡಿದು ಆನೆಯನ್ನು ತಿವಿಯುತ್ತಿರುವಂತೆ ಕೆತ್ತಲಾಗಿದೆ. ವೀರನ ಹಿಂಭಾಗದಲ್ಲಿ ಅವನ ಪತ್ನಿ ನಿಂತಿದ್ದಾಳೆ. ಇದರಿಂದ ಆನೆಬೇಟೆಯ ಸಂದರ್ಭದಲ್ಲಿ ವೀರನು ಮರಣ ಹೊಂದಿದ್ದು, ಅವನ ಪತ್ನಿ ಸಹಗಮನ ಅನುಸರಿಸಿರುವಳೆಂದು ಸ್ಪಷ್ಟವಾಗುತ್ತದೆ. ಮೇಲ್ಭಾಗದಲ್ಲಿ ಶಿವಲಿಂಗ, ನಂದಿ ಮತ್ತು ಸೂರ್ಯ-ಚಂದ್ರರ ಶಿಲ್ಪಗಳನ್ನು ಬಿಡಿಸಲಾಗಿದೆ.

**೮.೯. ದಾರಿಗಳ್ಳರೊಡನೆ ಹೋರಾಡಿದ ವೀರಗಲ್ಲು :**

ಪ್ರದೇಶದಿಂದ ಪ್ರದೇಶಕ್ಕೆ ವ್ಯಾಪಾರದ ಸಲುವಾಗಿಯೋ ಇಲ್ಲವೇ ಪ್ರಯಾಣದ ಉದ್ದೇಶದಿಂದಲೋ ಹೊರಟಾಗ ಪ್ರಯಾಣಿಕರ ಮೇಲೆ ದಾರಿಗಳ್ಳರು ಎರಗಿ ಬಂದು ಅವರ ಬಳಿಯಿರುವ ಒಡವೆ ವಸ್ತುಗಳನ್ನು ದೋಚುತ್ತಿದ್ದರು. ಇವರಿಗೆ ಹೆದರದೇ ಇವರನ್ನು ಪ್ರತಿಭಟಿಸಿ ನಿಂತು ಹೋರಾಡಿದ ವೀರರ ಸ್ಮಾರಕಗಳು ಇವಾಗಿವೆ.

ಕ್ರಿ.ಶ. ೧೯೧೧ರ ವೀರಗಲ್ಲು ಶಾವರಣ್ಣ ಹಾಗೂ ಸಾದಾ ಎಂಬುವವರು ಹನಿಯೂರು ಗ್ರಾಮದ ಸಂತೆಗೆ ಹೋಗಿ ಬರುವಾಗ ದಾರಿಯಲ್ಲಿ ಕಳ್ಳರು ಅವರನ್ನು ಮುತ್ತಿಗೆ ಹಾಕುತ್ತಾರೆ. ಇವರೀರ್ವರು ಕಳ್ಳರೊಂದಿಗೆ ವೀರಾವೇಶದಿಂದ ಹೋರಾಡುತ್ತಾರೆ. ಈ ಹೋರಾಟದಲ್ಲಿ ಶಾವರಣ್ಣ ಸಾಯುತ್ತಾನೆ. ಅವನ ಸ್ಮರಣಾರ್ಥ ತಂದೆ ಮತ್ತು ಸಹೋದರರು ವೀರಗಲ್ಲನ್ನು ಹಾಕಿಸುತ್ತಾರೆ. (ಕನ್ನಡ ದಾಖಲು ಸಾಹಿತ್ಯ, ರವೀಂದ್ರನಾಥ ಕೆ., ೨೦೦೦, ಪುಟ-೪೬)

**೮.೧೦. ಕಳ್ಳರೊಡನೆ ಹೋರಾಡಿ ಮಡಿದ ವೀರಗಲ್ಲು :**

ಕಳ್ಳರನ್ನು ಎದುರಿಸಲು ಬಂದ ಗ್ರಾಮಸ್ಥರ ಸಂಖ್ಯೆ ತಮಗಿಂತ ಕಡಿಮೆ ಇದ್ದಾಗ ಮಾತ್ರ ಕಳ್ಳರು ತಿರುಗಿ ಬೀಳುತ್ತಿದ್ದರು. ಇಲ್ಲವೆ ತಲೆಮರೆಸಿಕೊಂಡು ಓಡುವ ಪ್ರಯತ್ನ ಮಾಡುತ್ತಿದ್ದರು.

ದನಗಳನ್ನು ಕಳ್ಳರು ಓಡಿಸಿಕೊಂಡು ಹೋಗುತ್ತಿರುವಾಗ ಗ್ರಾಮಸ್ಥರು ಕಳ್ಳರನ್ನು ಬೆನ್ನತ್ತಿ ಹೋಗಿ ದನಗಳನ್ನು ಹಿಂದಿರುಗಿಸುತ್ತಿದ್ದರು. ಕ್ರಿ.ಶ. ೧೧೯೪ರ ಶಾಸನವೊಂದರಲ್ಲಿ ಬಸವೆಯ ನಾಯಕನ ಮಗ ಚೌಡೆಯ ನಾಯಕನಿಗೆ ಭೂದಾನ ನೀಡಿದ್ದನ್ನು ಉಲ್ಲೇಖಿಸಿದೆ. (ಕವಿಹಂ. ಶಾ.ಸಂ., ಹಡಗಲಿ–೩೫)

ಕಟಗೇರಿ ಗ್ರಾಮದ ಕೆ.ಎ.ವಿ.ಎಸ್. ಪ್ರೌಢಶಾಲೆ ಮುಂದೆ ನಿಲ್ಲಿಸಿರುವ ವೀರಗಲ್ಲು ತ್ರುಟಿತವಾಗಿದೆ. ಸುಂದರವಾದ ಶಿಲ್ಪವುಳ್ಳ ಮೂರು ಹಂತದ ಈ ವೀರಗಲ್ಲು ಕೆಳಭಾಗದ ಪಟ್ಟಿಯಲ್ಲಿ ಮಾತ್ರ ಪಾಠವನ್ನು ಹೊಂದಿದೆ. ಇದು ಕ್ರಿ.ಶ.ಸುಮಾರು. ೧೨ನೆಯ ಶತಮಾನದ ವೀರಗಲ್ಲಾಗಿದೆ. ತಳಾರು ಚಾವೆಯ ನಾಯ್ಕನ ಮಗ ಕಲ್ಲ ಅವನ ಅಣ್ಣನ ಮಗ ಸಾಕಯೆಖ್ಯರು ಬಾದಾಮಿಯ ದಾರಿಯಲ್ಲಿ ಕಡಕೆರೆಯ ಮಹಾಜನರ (ಕೋರಿಕೆಯಂತೆ) ಕಳ್ಳರೊಡನೆ ಕಾದಿ ಸತ್ತಾಗ ಅವರ ಧೈರ್ಯವನ್ನು ಮೆಚ್ಚಿದ ಮಹಾಜನರು ಭೂದಾನ ನೀಡಿದಂತೆ ಉಲ್ಲೇಖವಿದೆ. ಕಡಕೆರೆಯನ್ನು ಅನಾದಿ ಅಗ್ರಹಾರ ಬಣಂಜದ ಆದಿಪಟ್ಟಣವೆಂದು ಕರೆಯಲಾಗಿದೆ. (ಕವಿಹಂ.ಶಾ.ಸಂ–೯, ಬಾಗಲಕೋಟೆ–೩೨)

**೮.೧೧. ಕುರಿಗಳ ರಕ್ಷಣೆಗಾಗಿ ಹೋರಾಡಿ ಮಡಿದ ವೀರಗಲ್ಲು :**

ಹೊಳೆಗುಂದಿಯ ವೀರಣ್ಣ ದೇವಾಲಯದ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲು ಕುರಿಗಳ ರಕ್ಷಣೆಗಾಗಿ ಹೋರಾಡಿ ಮಡಿದ ವೀರನ ನೆನಪಿಗಾಗಿ ಹಾಕಿಸಿದುದಾಗಿದೆ. ಇದು ಮೂರು ಪಟ್ಟಿಕೆಗಳಿಂದ ಕೂಡಿದ್ದು, ಕೆಳಹಂತದ ಪಟ್ಟಿಕೆಯಲ್ಲಿ ಶತ್ರುಗಳ ನಡುವೆ ಹೋರಾಡುತ್ತಿರುವ ವೀರ, ಅವನ ಹಿಂಬದಿಯಲ್ಲಿ ಕುರಿಗಳಿವೆ. ಮಧ್ಯದ ಪಟ್ಟಿಕೆಯಲ್ಲಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೇಲ್ಭಾಗದ ಹಂತದಲ್ಲಿ ಲಿಂಗ ಪೂಜೆಯಲ್ಲಿ ನಿರತನಾಗಿರುವ ವೀರನ ಚಿತ್ರಗಳನ್ನು ಚಿತ್ರಿಸಲಾಗಿದೆ. ಪ್ರಸ್ತುತ ಕನ್ನಡ ವಿಶ್ವವಿದ್ಯಾಲಯದ ಆವರಣದಲ್ಲಿದೆ.

ಒಟ್ಟಾರೆಯಾಗಿ ಉತ್ತರ ಕರ್ನಾಟಕದ ರಾಜಕೀಯ ಚರಿತ್ರೆ ಮತ್ತು ಸಾಂಸ್ಕೃತಿಕ ಮಹತ್ವವನ್ನು ಗಮನಿಸಿದರೆ ವೀರಗಲ್ಲುಗಳು ಮತ್ತು ಮಹಾಸತಿಗಲ್ಲುಗಳ ಸಂಖ್ಯೆ ಬಹಳ ಕಡಿಮೆ. ಇದಕ್ಕೆ ಕಾರಣ ಹುಡುಕುವುದು ಬಹಳ ಕಷ್ಟ. ಏಕೆಂದರೆ

* ಉತ್ತರ ಕರ್ನಾಟಕ ಭಾಗದಲ್ಲಿ ಮಳೆಯ ಪ್ರಮಾಣ ಕಡಿಮೆ ಇರುವುದು
* ಕೃಷಿಯ ಚಟುವಟಿಕೆ ಇಲ್ಲದಿರುವುದು
* ಇಲ್ಲಿ ಜನ ವಸತಿ ಕಡಿಮೆ ಇರಬಹುದು. ಬೆಟ್ಟ–ಗುಡ್ಡಗಳ ಪ್ರದೇಶ
* ಸ್ಥಳೀಯವಾಗಿ ಯುದ್ಧಗಳ ನಡೆಯದಿರುವುದು
* ಬಾದಾಮಿ ಚಾಲುಕ್ಯರ ಅವಧಿಯಲ್ಲಿ ವೀರಗಲ್ಲು ನಿರ್ಮಾಣ ಇನ್ನೂ ಸಾರ್ವತ್ರಿಕವಾಗಿಲ್ಲದಿರುವುದು
* ಬಳಸಿದ ಮರಳುಗಲ್ಲಿನ ಕಾರಣದಿಂದ ನಾಶವಾಗಿರಬಹುದು
* ಗ್ರಾಮಗಳ ಜನಗಳಿಗೆ ಕಾರಣವಾಗುವ ಪಶು ಸಂಪತ್ತು, ಆರ್ಥಿಕ ಸಂಗ್ರಹ ಈ ಭಾಗದ ಗ್ರಾಮಗಳಲ್ಲಿ ಕಡಿಮೆ ಇದ್ದಿರಬಹುದು

* ಈ ಭಾಗದಲ್ಲಿ ಮಹಾಸತಿಗಲ್ಲುಗಳು ಬೆರಳೆಣಿಕೆಯಷ್ಟು ಮಾತ್ರ ಸಿಗುತ್ತವೆ. ಈ ಭಾಗದ ಮಹಾಸತಿಯಾಗುವ ಪದ್ಧತಿ ಕಡಿಮೆ ಪ್ರಮಾಣದಲ್ಲಿದ್ದಂತೆ ಕಾಣುತ್ತವೆ. ಅಲ್ಲದೆ ಮಹಾಸತಿ ಶಾಸನಗಳು ಕಾಲನ ಹೊಡಿತಕ್ಕೆ ಸಿಕ್ಕಿ ನಾಶವಾಗಿರಲೂಬಹುದು. ಜೊತೆಗೆ ಈ ಭಾಗದಲ್ಲಿ ಇಂತಹ ಪದ್ಧತಿಯನು ನಮ್ಮ ಜನರು ವಿರೋಧಿಸಿರಲೂಬಹುದು. ಆದಕಾರಣ ಇವುಗಳ ಸಂಖ್ಯೆ ಕಡಿಮೆಯಾಗಿರಬಹುದು. ಅಥವಾ ಸ್ತ್ರೀಯರ ತನ್ನ ಪತಿ ಸಾವನ್ನಪ್ಪಿದಾಗ ತಮ್ಮ ಮಕ್ಕಳ ಜವಾಬ್ದಾರಿಯನ್ನು ಯಾರಿಗೆ ನೀಡಬೇಕು? ಮನುಷ್ಯರಾಗಿ ಹುಟ್ಟಿರುವ ಈ ಜನ್ಮವನ್ನು ಹಾಳು ಮಾಡಿಕೊಳ್ಳದೆ ಮಕ್ಕಳ ಜೊತೆ ಅವರ ಲಾಲನೆ-ಪಾಲನೆ ಬಗ್ಗೆ ಯೋಚಿಸಿ ಈ ಪದ್ಧತಿಯನ್ನು ನಿರಾಕರಿಸಿರಬಹುದು. ಅಲ್ಲದೆ ಈ ಭಾಗದಲ್ಲಿ ಯುದ್ಧಗಳು ನಡೆಯದಿರುವುದು ಈ ಮಹಾಸತಿಗೆ ಕಾರಣವಾಗಿರಬಹುದು.

# ಅಧ್ಯಾಯ – ಒಂಬತ್ತು

# ಉತ್ತರ ಕರ್ನಾಟಕ ವೀರಗಲ್ಲುಗಳ ಪರಂಪರೆ

**ಪೀಠಿಕೆ :**

ಕರ್ನಾಟಕದ ಚಾರಿತ್ರಿಕ ಇತಿಹಾಸದಲ್ಲಿ ೧೦–೧೨ನೆಯ ಶತಮಾನವು ಅತ್ಯಂತ ಪ್ರಮುಖವಾದ ಕಾಲಘಟ್ಟವಾಗಿದೆ. ಇದು ಒಂದು ಸಂಕೀರ್ಣ ಸ್ಥಿತ್ಯಂತರ ಕಾಲಘಟ್ಟ, ಆರ್ಥಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಪಲ್ಲಟಗಳ ಪ್ರಧಾನ ಕೇಂದ್ರ ಆಗಿದೆ. ಬಲಿಷ್ಠ ರಾಜಕೀಯ ಮನೆತನಗಳಾದ ಶಾತವಾಹನ, ಕದಂಬ, ಚಾಲುಕ್ಯ ಹಾಗೂ ರಾಷ್ಟ್ರಕೂಟರ ಮನೆತನಗಳ ನಂತರದಲ್ಲಿ ಒಂದು ರೀತಿಯ ಸಾಮ್ರಾಜ್ಯ ಯುಗ ಅಂತ್ಯವಾಗಿ ಸಣ್ಣಮಟ್ಟ ರಾಜಕೀಯ ಮನೆತನಗಳ ಆಡಳಿತಕ್ಕೆ ಪಲ್ಲಟವಾಗುವ ಕಾಲಘಟ್ಟವಾಯಿತು. ತಮ್ಮ ತಮ್ಮಲ್ಲಿಯೇ ಒಳಜಗಳವಾಗಿ ಯುದ್ಧ ಮಾಡುವ ಪರಿಸ್ಥಿತಿ ಈ ಕಾಲದ್ದಾಗಿದೆ.

ಆರ್ಥಿಕವಾಗಿ ವ್ಯಾಪಾರಿಗಳ ಯುಗ ಅಂತ್ಯವಾಗಿ ಕೃಷಿ ಆಧಾರಿತ ಸಮಾಜ ರೂಪಗೊಳ್ಳುವ ಕಾಲವೂ ಇದಾಗಿದೆ. ಅಂದರೆ ಈವರೆಗೂ ಆಡಳಿತ ಮತ್ತು ಸಾಮಾಜಿಕ ಸೇವಾ ಕಾರ್ಯಗಳಲ್ಲಿ ವರ್ತಕ ಸಮುದಾಯ ತನ್ನ ಪ್ರಾಬಲ್ಯವನ್ನು ಮೆರೆದಿದ್ದು ಶಾಸನಗಳಲ್ಲಿ ಕಂಡುಕೊಳ್ಳಬಹುದು. ೧೦ನೆಯ ಶತಮಾನದ ನಂತರದಲ್ಲಿ ಇದಕ್ಕೆ ವ್ಯತಿರಿಕ್ತವಾಗಿ ಸ್ಥಳೀಯ ಆಡಳಿತ ವರ್ಗ ಅದರಲ್ಲಿ ಕೃಷಿ ಸಮುದಾಯ ರಾಜಕೀಯವಾಗಿ, ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ ಬಲಿಷ್ಠಗೊಳ್ಳುವುದನ್ನು ಕಾಣುತ್ತೇವೆ. ಇಲ್ಲಿಯ ದೇವಾಲಯಗಳಿಗೆ ಕೊಟ್ಟ ದಾನ–ದತ್ತಿಗಳನ್ನು ಗಮನಿಸಿದರೆ ಅದರಲ್ಲಿ ಮುಖ್ಯವಾಗಿ ಭೂದಾನದ ಉಲ್ಲೇಖಗಳು ಅತಿ ಹೆಚ್ಚು ಕಂಡುಬರುತ್ತವೆ. ಅಂದರೆ ಭೂಮಿಯ ಉತ್ಪಾದನೆ ಹೆಚ್ಚು ವೃದ್ಧಿಸುತ್ತ ಹೋಗಿರುವುದು ಈ ಕಾಲಘಟ್ಟದ ಒಂದು ಪ್ರಮುಖ ಬೆಳವಣಿಗೆಯಾಗಿದೆ. ಇಲ್ಲಿ ಕಾಣುವ ಕೆರೆಗಳ: ನಿರ್ಮಾಣ, ನಿರ್ವಹಣೆ, ಉತ್ಪಾದನೆ, ಅದರಿಂದ ಬರುವ ಆದಾಯ

ಈ ಎಲ್ಲವೂ ಈ ಮಾತುಗಳನ್ನು ಸಮರ್ಥಿಸುತ್ತವೆ. ಹೀಗೆ ರೂಪುಗೊಂಡ ಸಮುದಾಯ ಅದು ಬೀರುವ ಪರಿಣಾಮಗಳು ಕೂಡ ಸಮುದಾಯದ ಮೇಲೆ ಪ್ರಭಾವ ಬೀರುತ್ತವೆ. ಅದರ ಪ್ರತಿಫಲವಾಗಿ ದೇವಾಲಯಗಳ ನಿರ್ಮಾಣ, ಅದರಿಂದ ರೂಪುಗೊಂಡ ಧಾರ್ಮಿಕ ಪ್ರಭಾವಳಿ ಇವೆಲ್ಲವನ್ನು ೧೦ ರಿಂದ ೧೨ನೆಯ ಶತಮಾನದ ಕಾಲಾವಧಿಯಲ್ಲಿ ಅತ್ಯುನ್ನತ ಮಟ್ಟವನ್ನು ತಲುಪಿದ್ದನ್ನು ಕಾಣಬಹುದು. ಅದೇ ರೀತಿ ಪ್ರತಿ ಗ್ರಾಮವು ಒಂದು ಸ್ವಾತಂತ್ರ್ಯ ಆಡಳಿತದ ಭಾಗವಾಗಿ ಕಂಡುಬರುತ್ತದೆ. ಅಲ್ಲಿಯ ಗಾವುಂಡನೇ ಒಬ್ಬ ಸಾರ್ವಭೌಮನಾಗಿ ಕಾಣುತ್ತಾನೆ. ತನ್ನದೇ ಆದ ರಕ್ಷಣೆ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ ಹಾಗೂ ರಾಜಕೀಯ ವ್ಯವಸ್ಥೆಗಳನ್ನು ರೂಪಿಸಿಕೊಂಡು ಹೋಗುತ್ತಾನೆ.

ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದ ಭೌಗೋಳಿಕ ಪರಿಸ್ಥಿತಿಗಿಂತ ಭಿನ್ನವಾದ ಸ್ವರೂಪವನ್ನು ಹೊಂದಿದೆ. ಇಲ್ಲಿಯ ಸಮತಟ್ಟವಾದ ಭೂಮಿಯು ಬೆಟ್ಟಗುಡ್ಡಗಳಿಂದ ಆವೃತವಲ್ಲದ ಪ್ರಶಸ್ತ ಭೂಮಿಯಾಗಿರುವುದು ಒಂದು ಕಡೆಯಾದರೆ, ಮಳೆಯ ಪ್ರಮಾಣವು ಕೂಡ ಕಡಿಮೆಯಾಗಿರುವುದು ಕಂಡುಬರುತ್ತದೆ. ಇದು ರಾಜಕೀಯ ಹಾಗೂ ಆರ್ಥಿಕ ರೂಪಗಳನ್ನು ನಿರ್ಧರಿಸಲು ಕಾರಣವಾಗುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ದಕ್ಷಿಣ ಕರ್ನಾಟಕ ಹೆಚ್ಚು ಮಳೆಯಿಂದ ಹಾಗೂ ಬೆಟ್ಟಗುಡ್ಡ-ಕಾಡುಗಳಿಂದ ಕೂಡಿದ ಪ್ರದೇಶವಾಗಿದ್ದು, ಹೆಚ್ಚಾದ ಸಮೃದ್ಧತೆಯನ್ನು ಹೊಂದಿರುವುದು ಚಾರಿತ್ರಿಕ ಯುಗದಲ್ಲಿ ಕಾಣುತ್ತೇವೆ. ಎಡೆದೊರೆನಾಡು ಅಥವಾ ಕೃಷ್ಣ, ತುಂಗಭದ್ರದ ಆಜೂಬಾಜಿನ ಪ್ರದೇಶದ ಮೇಲೆ ರಾಜಕೀಯ ಪ್ರಭಾವವನ್ನು ಹೊಂದಲು ನಿರಂತರವಾದ ಘರ್ಷಣೆಗಳನ್ನು ಈ ಪ್ರದೇಶ ಹೊಂದಿತ್ತು. ಅಲ್ಲದೆ ಉತ್ತರ ಭಾಗದಲ್ಲಿ ಚಕ್ರವರ್ತಿಗಳ ಅಥವಾ ಸಾಮ್ರಾಟರನ್ನು ಹೊಂದಿರುವ ಅರಸು ಮನೆತನಗಳು ಕಂಡುಬಂದರೆ, ದಕ್ಷಿದಲ್ಲಿ ಸಣ್ಣ ಸಣ್ಣ ಅರಸು ಮನೆತನಗಳ ಉದಯವನ್ನು ಕಾಣುತ್ತೇವೆ. ಇದು ಆ ಪ್ರದೇಶದ ಭೌಗೋಳಿಕ ಸ್ವರೂಪವನ್ನೂ ಅವಲಂಬಿತವಾಗಿರುವುದು ಕಂಡುಬರುತ್ತದೆ. ಉದಾ: ಪುನ್ನಾಟದ ಅರಸರು, ಬಾಣರು, ಹೊಯ್ಸಳರು ಜೊತೆಯಲ್ಲಿ ಗಂಗರು ಮುಂತಾದವರು ಆಡಳಿತವನ್ನು ನಡೆಸಿರುವುದು ಕಾಣುತ್ತೇವೆ.

ಆರ್ಥಿಕವಾಗಿಯೂ ಸಹ ಕೆಳಗಣ ಕರ್ನಾಟಕ ಹೆಚ್ಚು ಪ್ರಭಾವಶಾಲಿಯಾಗಿ ಕಂಡುಬಂದರೆ, ಉತ್ತರ ಕರ್ನಾಟಕವು ಹೆಚ್ಚು ಸಮೃದ್ಧವಲ್ಲದ ಸಿರಿವಂತಿಕೆಯನ್ನು ಹೊಂದಿಲ್ಲ. ಈ ಪ್ರದೇಶದಲ್ಲಿ ದೊರಕಿರುವ ದೇವಾಲಯಗಳು, ವಿಗ್ರಹಗಳು, ವೀರಗಲ್ಲುಗಳು, ಮಾಸ್ತಿಗಲ್ಲುಗಳಲ್ಲಿ ಪ್ರತಿಫಲನವಾಗಿರುತ್ತದೆ. ದಕ್ಷಿಣ ಕರ್ನಾಟಕದಲ್ಲಿ ದೊರಕುವ ಸ್ಮಾರಕ ಶಿಲ್ಪಗಳ ಉಡುಗೆ-ತೊಡುಗೆಗಳು, ಅವರು ಧರಿಸುವ ಆಭರಣಗಳು ಸಮೃದ್ಧತೆಯನ್ನು ಸೂಚಿಸುತ್ತವೆ. ಆದರೆ ಉತ್ತರ ಕರ್ನಾಟಕದಲ್ಲಿ ದೊರಕುವ ವೀರಗಲ್ಲುಗಳು ಅದರಲ್ಲಿ ೧೨ನೆಯ ಶತಮಾನದ ವೀರಗಲ್ಲುಗಳಲ್ಲಿ ಅಥವಾ ಸ್ಮಾರಕ ಶಿಲ್ಪಗಳಲ್ಲಿ ಅತ್ಯಂತ ಕಡಿಮೆ ಅಲಂಕಾರ ಆಭರಣಗಳ ರಹಿತವಾದ ಶಿಲ್ಪಗಳನ್ನು ನಾವು ಕಾಣುತ್ತೇವೆ. ಇದು

ಅಂದಿನ ಆರ್ಥಿಕ ಸ್ಥಿತಿಗತಿಗಳನ್ನು ಸೂಚಿಸುತ್ತದೆ. ಇದನ್ನೆ ಡಾ. ಶಿವರಾಮ ಕಾರಂತರು ಹೊಯ್ಸಳರ ಕಾಲದ ಶಿಲ್ಪಗಳನು ಕುರಿತ ಹೇಳುವ ಮಾತು ಗಮನಿಸಲೇ ಬೇಕಾದದ್ದು. ಅವರು ಹೇಳುವಂತೆ ಆಭರಣಗಳ ಭಾರದಿಂದ ಭಾವ ಹಿಂದೆ ಸರಿದಿದೆ ಎನ್ನುವ ಮಾತು ಅಂದಿನ ಆರ್ಥಿಕ ಸ್ಥಿತಿಗತಿಗಳ ಪರಿಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ಆದರೆ ಉತ್ತರ ಕರ್ನಾಟಕದಲ್ಲಿ ದೊರಕುವ ಶಿಲ್ಪ ಮತ್ತು ಸ್ಮಾರಕ ಶಿಲ್ಪಗಳನ್ನು ಗಮನಿಸಿದಾಗ ನಿರಾಭರಣವಾಗಿ ಹಾಗೂ ನೈಜವಾಗಿ ಕಂಡುಬರಲು ಕಾರಣ ಇದೇ ಆಗಿರುವ ಸಾಧ್ಯತೆ ಇದೆ.

ಉತ್ತರ ಕರ್ನಾಟಕ ಪ್ರದೇಶದಾದ್ಯಂತ ಕಂಡುಬರುವ ಈ ರಾಜಕೀಯ ಪೈಪೋಟಿಯ ಹಿನ್ನೆಲೆಯಲ್ಲಿ ರಾಜನು ತನ್ನ ರಾಜಕೀಯ ಅಭಿವ್ಯಕ್ತಿಯನ್ನು ಸ್ಥಳೀಯ ಭಾಷೆಯ ಕನ್ನಡ ಸಾಹಿತ್ಯ ಕೃತಿಯಲ್ಲಿ ವ್ಯಕ್ತಪಡಿಸಿಕೊಂಡಿರುವಂತೆಯೇ ಶಾಸನಗಳಲ್ಲಿಯೂ ಸಹ ತನ್ನನ್ನು 'ಮಹಾರಾಧಿರಾಜ' 'ಪೃಥ್ವಿರಾಜ್ಯಂಗೆಯ್ಯುತ್ತಿರೆ' ಎಂಬಂತಹವು ಅವನ ರಾಜಕೀಯ ಅಭಿಲಾಷೆ ಮತ್ತು ತನ್ನನ್ನು ರಾಜಕೀಯವಾಗಿ ನ್ಯಾಯ ಸಮ್ಮತಗೊಳಿಸಿಕೊಂಡಿರುವುದನ್ನು ಕಾಣುತ್ತೇವೆ. ಜೊತೆಗೆ ವೀರರಿಗೆ ಹೆಚ್ಚು ಹೆಚ್ಚು ಉಡುಗೊರೆ (ಭೂದಾನ)ಗಳನ್ನು ನೀಡುತ್ತಾ ಅವರನ್ನು ಉತ್ತೇಜಿಸುವುದು ಒಂದು ಕಡೆಯಾದರೆ, ಆ ಹೋರಾಟ ಪ್ರದೇಶಗಳಲ್ಲಿ ತಮ್ಮ ಆದಿಪತ್ಯ ಮತ್ತು ಆ ಪ್ರದೇಶಗಳೊಂದಿಗಿನ ತಮ್ಮ ಸಂಪರ್ಕವನ್ನು ಸಮರ್ಪಕವಾಗಿ ಹೊಂದುವ ನಿಟ್ಟಿನಲ್ಲಿಯೂ ಈ ವೀರಗಲ್ಲುಗಳು ಹರಡಿಕೊಂಡಿರುವುದನ್ನು ಕಾಣಬಹುದು.

ಸ್ಥಳೀಯ ಆಡಳಿತದ ಈ ಪ್ರದೇಶದಲ್ಲಿ ತುರುಗಾಳಗಳಲ್ಲಿ ವೀರರು ಹೋರಾಡಿ ಸಾಹಸದಿಂದ ತುರುಗಳನ್ನು ರಕ್ಷಿಸಿ ಪ್ರಾಣವನ್ನು ಕೊಡುತ್ತಿದ್ದರು. ಹೀಗೆ ತುರುಗಳನ್ನು ಒಂದು ಮಹತ್ವದ ಸಂಪತ್ತಾಗಿದ್ದಂತೆಯೇ ಇಡೀ ಗ್ರಾಮದ ಮಾನವ ಸಂಪತ್ತನ್ನು ರಕ್ಷಿಸುವ ಹೊಣೆಯನ್ನು ಸ್ಥಳೀಯ ವೀರರಿಗೆ ನೀಡುತ್ತಿದ್ದರು.

ಹೆಚ್ಚಿನ ಪ್ರಮಾಣದ ಈ ವೀರಗಲ್ಲುಗಳನ್ನು ಹೋರಾಡುತ್ತಿರುವುದು ರಾಜ್ಯವೊಂದರ ಕೇಂದ್ರ ಭಾಗದಿಂದ ಹೊರಗೆ ಮತ್ತು ಗಡಿಯಂಚುಗಳಲ್ಲಿ. ಎಲ್ಲಿ ರಾಜ ಸಂಸ್ಥಾನವೊಂದು ಸುವ್ಯವಸ್ಥೆಯನ್ನು ಕಾಪಾಡುವಲ್ಲಿ ದುರ್ಬಲವಾಗಿದೆಯೋ ಅಲ್ಲಿ ತಮ್ಮ ಸಂಸ್ಥಾನದ ದೂರ ಮತ್ತು ಅತಿ ದೂರದ ಪ್ರದೇಶಗಳಲ್ಲಿ ಎಲ್ಲಿ ಯಶಸ್ವಿಯಾಗಿ ಮತ್ತು ಪರಿಣಾಮಕಾರಿಯಾಗಿ ಆಳ್ವಿಕೆ ನಡೆಸುವಂತಹ ಸುಸಜ್ಜಿತ ಆಡಳಿತ ಯಂತ್ರವನ್ನು ಹೊಂದಿರಲಿಲ್ಲವೋ ಅಂತಹ ಕಡೆಯಲ್ಲಿ ಈ ಸ್ಥಳೀಯ ವೀರರು ಮುಖ್ಯ ಪಾತ್ರವನ್ನು ವಹಿಸುತ್ತಾ ಬಂದಿದ್ದು, ಎಂತಹ ಸನ್ನಿವೇಶದಲ್ಲೇ ಆಗಲಿ ಎದೆಗುಂದದೆ ಎಲ್ಲ ರೀತಿಯ ಆಪತ್ತುಗಳಲ್ಲಿ ಹೋರಾಟ ನಡೆಸಿ ತಮ್ಮ ಪ್ರಾಣವನ್ನು ನೀಡಿಯಾದರೂ ಗ್ರಾಮಗಳನ್ನು ರಕ್ಷಿಸುತ್ತಿದ್ದರು. ಸ್ಥಳೀಯ ಆಡಳಿತದ ಪ್ರೀತಿಗೆ ಪಾತ್ರರಾಗುತ್ತಿದ್ದರು. ಜೊತೆಗೆ ಈ ಒಣ ಪ್ರದೇಶಗಳಲ್ಲಿ ವೀರಗಲ್ಲುಗಳು ಕಡಿಮೆ ಕಂಡುಬರುತ್ತವೆ.

ಇಲ್ಲಿ ಪಶು ಸಂಗೋಪನೆಯೇ ಜನರ ಮುಖ್ಯ ಕಸುಬಾಗಿದ್ದು, ಆರ್ಥಿಕ ವ್ಯವಸ್ಥೆಯಲ್ಲಿ ಮಹತ್ವದ ಪಾತ್ರವಹಿಸಿತ್ತು. ಮೇಲಿಂದ ಮೇಲೆ ದಾಳಿಗಳು ಸಂಭವಿಸುತ್ತಿರುವುದು ತುರುಗಳ ಅಪಹರಣಕ್ಕಾಗಿ ಆ ಪ್ರದೇಶದ ಜನರನ್ನು ಅರಣ್ಯ ಪ್ರದೇಶಗಳಿಂದ ಬಯಲುನಾಡುಗಳಿಗೆ ಮರು ಹಂಚುತ್ತಿರುವುದು ತಿಳಿದುಬರುತ್ತದೆ. ಅಂದರೆ ಕ್ರಿ.ಶ. ೮–೧೩ನೆಯ ಶತಮಾನದ ಕಾಲಾವಧಿಯಲ್ಲಿ ಹೆಚ್ಚಿನ ವಾಸ ಕೇಂದ್ರಗಳು ಕಂಡುಬರುತ್ತಿರುವುದು ಈ ಬಯಲು ಪ್ರದೇಶಗಳಲ್ಲಿ ಹೆಚ್ಚು ಹೆಚ್ಚು ವಾಸಸ್ಥಳಗಳು ನಿರ್ಮಾಣಗೊಳ್ಳುವಲ್ಲಿ ರಾಜ್ಯದ ಪಾತ್ರವು ಇದ್ದೇ ಇರುತ್ತದೆ.

ಕ್ರಿ.ಶ. ೧೩ನೆಯ ಶತಮಾನದ ನಂತರ ವೀರಗಲ್ಲುಗಳನ್ನು ಹೊರಡಿಸುವ ಪ್ರಮಾಣ ಕಡಿಮೆಯಾಗುತ್ತಾ ಬಂದು ೧೪–೧೬ನೆಯ ಶತಮಾನದ ವೇಳೆಗೆ ಅವು ತೀರ ನಗಣ್ಯಗೊಂಡಿವೆ. ದಕ್ಷಿಣ ಭಾರತದಾದ್ಯಂತ ಹರಡಿ ಹಂಚಿಹೋಗಿದ್ದ ರಾಜ ಸಂಸ್ಥಾನಗಳು ಕಣ್ಮರೆಗೊಂಡು ಆ ಸ್ಥಾನದಲ್ಲಿ ಕ್ರಿ.ಶ. ೧೩೩೬ರಲ್ಲಿ ಸ್ಥಾಪನೆಗೊಂಡ ವಿಜಯನಗರ ಸಾಮ್ರಾಜ್ಯವು ಬಹುತೇಕ ಇಡೀ ದಕ್ಷಿಣ ಭಾರತವನ್ನು ರಾಜಕೀಯವಾಗಿ ಆವರಿಸಿಕೊಂಡಿದೆ. ರಾಜಕೀಯ ನಕ್ಷೆಯ ಬದಲಾವಣೆಯ ಜೊತೆಗೆ ಆರ್ಥಿಕ ವ್ಯವಸ್ಥೆಯಲ್ಲಿಯೂ ಸಹ ೧೪ನೆಯ ಶತಮಾನದ ತರುವಾಯ ಆಮೂಲಾಗ್ರ ಬದಲಾವಣೆಗಳು ಕಂಡಿವೆ.

ಕ್ರಿ.ಶ. ೧೪–೧೬ನೆಯ ಶತಮಾನದ ವಿಜಯನಗರ ಸಾಮ್ರಾಜ್ಯವು ಬಹುತೇಕ ದಕ್ಷಿಣ ಭಾರತದಾದ್ಯಂತ ವ್ಯಾಪಿಸಿತು. ವಿಜಯನಗರದ ಅರಸರು ತಮ್ಮ ಬೃಹತ್ ಸಾಮ್ರಾಜ್ಯದ ಪರಿಣಾಮಕಾರಿ ಆಳ್ವಿಕೆಗಾಗಿ ಪ್ರಾಂತ್ಯಗಳಲ್ಲಿ ಪ್ರಾಂತೀಯ ನಾಯಕರನ್ನು ನೇಮಿಸುತ್ತಿದ್ದರು. ಈ ಪ್ರಾಂತೀಯ ನಾಯಕರು ಹಿಂದೆ ಹೋರಾಟಗಳಲ್ಲಿ ಹೋರಾಡಿ ವೀರ ಮರಣವನ್ನು ಅಪ್ಪುತ್ತಿದ್ದ ವೀರರ ಸಮುದಾಯಗಳಿಂದ, ಯುದ್ಧ ನಿಪುಣ ಸಮುದಾಯಗಳಿಂದ (ಬೇಡರು, ಗೊಲ್ಲರು, ಕುರುಬರು ಇತ್ಯಾದಿ ಸಮುದಾಯಗಳ) ಬಂದವರೇ ಆಗಿದ್ದು, ಈಗ ಪ್ರಾಂತೀಯ ನಾಯಕರಾಗಿ ಬಹುತೇಕ ಸ್ವಾಯುತ್ತ ಅಧಿಕಾರವನ್ನು ಹೊಂದಿದ್ದರು. ವಿಜಯನಗರ ಕಾಲದ ಈ ಪ್ರಾಂತೀಯ ನಾಯಕರನ್ನು ಅಮರ ನಾಯಕರು ಎಂದು ಕರೆಯಲಾಗುತ್ತಿತ್ತು. ಈ ಅಮರ ನಾಯಕರು ಮುಂದೆ ವಿಜಯನಗರದ ಪತನಾ ನಂತರ ಸ್ವತಂತ್ರ ಪಾಳೇಪಟ್ಟುಗಳಾಗಿ ಅಸ್ತಿತ್ವಕ್ಕೆ ಬಂದವು.

ವೀರಗಲ್ಲುಗಳ ಅಧ್ಯಯನಕ್ಕೆ ತೊಡಗಿಕೊಂಡಾಗ ಕನ್ನಡ ನಾಡು ಪ್ರಾಚೀನ ಕಾಲದಿಂದಲೂ ಶೂರರ ಮತ್ತು ಧೀರರ ನಾಡು. ಕನ್ನಡಿಗರು ತಾವಾಗಿಯೇ ಯಾರ ಮೇಲೂ ಕಾಲು ಕೆರೆದುಕೊಂಡು ಯುದ್ಧ ಮಾಡುತ್ತಿರಲಿಲ್ಲ. ಆದರೆ ತಮ್ಮನ್ನು ಕೆಣಕಿದವರನ್ನು ಸುಮ್ಮನೆ ಬಿಡುತ್ತಿರಲಿಲ್ಲ. ಹೋರಾಟ ನಡೆದರೆ ಅದು ಧರ್ಮಕ್ಕಾಗಿ ಮತ್ತು ಸತ್ಯಕ್ಕಾಗಿ. ಇಂತಹ ಹೋರಾಟಗಳನ್ನು ನಡೆಸುವಾಗ ಮಾತ್ರ ಶಕ್ತಿ ಮೀರಿ ಕಾದಾಡುತ್ತಿದ್ದರು. ಚೀನಿ ಯಾತ್ರಿಕನಾದ ಹ್ಯುಯೆನ್ ತ್ಸಾಂಗ್ ಹೀಗೆ ಹೇಳುತ್ತಾನೆ. ಕನ್ನಡದ ಜನಗಳನ್ನು ಹೊಗಳುತ್ತಾ, ಇವರಿಗೆ ಅವಮಾನ ಉಂಟಾದರೆ ಸೇಡನ್ನು ತೀರಿಸಿಕೊಳ್ಳದೆ ಬಿಡುವುದಿಲ್ಲ. ಆಗ ಇವರು ತಮ್ಮ ಪ್ರಾಣವನ್ನು ಲೆಕ್ಕಿಸುವುದಿಲ್ಲ. ಈ

ರೀತಿ ತಮ್ಮ ಪ್ರಾಣಗಳನ್ನು ಅರ್ಪಿಸಿದ ವೀರರನ್ನು, ಶೂರರನ್ನು ಮರೆತುಬಿಡದೆ ಅವರನ್ನು ನೆನಸಿಕೊಳ್ಳುವ ಒಂದು ಒಳ್ಳೆಯ ಸಂಪ್ರದಾಯವು ಕರ್ನಾಟಕದಲ್ಲಿದ್ದಿತು.

ಕರ್ನಾಟಕದಲ್ಲಿ ಸುಮಾರು ಇಪ್ಪತ್ತೈದು ಸಾವಿರಕ್ಕೆ ಮೇಲ್ಪಟ್ಟು ಶಾಸನಗಳು ದೊರಕಿವೆ. ಇವುಗಳಲ್ಲಿ ದಾನ ಶಾಸನಗಳೇ ಹೆಚ್ಚು. ದೇವಾಲಯ, ಮಠ, ಕೆರೆ ಇತ್ಯಾದಿ ಸಾರ್ವಜನಿಕ ಕಾರ್ಯಗಳಿಗಾಗಿ ಜನರು ಕೊಟ್ಟ ದತ್ತಿ ಅಥವಾ ದಾನಗಳ ವಿಷಯವನ್ನು ಅವು ತಿಳಿಸುತ್ತವೆ. ಇವುಗಳನ್ನು ಬಿಟ್ಟರೆ ಸಂಖ್ಯೆಯಲ್ಲಿ ವೀರಗಲ್ಲುಗಳು ಇತರ ಎಲ್ಲ ಬಗೆಯ ಶಾಸನಗಳನ್ನು ಮೀರಿಸುತ್ತವೆ.

ಉತ್ತರ ಕರ್ನಾಟಕದ ಭಾಗಗಳಲ್ಲಿ ಸುಮಾರು ೫೮೫ ವೀರಗಲ್ಲುಗಳನ್ನು ಗಮನಿಸಿದ್ದೇನೆ. ಇವುಗಳಲ್ಲಿ ಶಾಸನಸಹಿತ ಮತ್ತು ಶಾಸನರಹಿತವಾದ ವೀರಗಲ್ಲುಗಳನ್ನು ಗುರುತಿಸಲಾಗಿದೆ. ಈ ವೀರಗಲ್ಲುಗಳಲ್ಲಿ ಯುದ್ಧಮಾಡಿ, ಯುದ್ಧದಲ್ಲಿ ಮರಣ ಹೊಂದಿದ್ದ ವೀರಗಲ್ಲುಗಳನ್ನು ನಾವು ಹೆಚ್ಚಾಗಿ ಈ ಪ್ರದೇಶದಲ್ಲಿ ಕಾಣುತ್ತೇವೆ.

ಸ್ಥಳೀಯವಾಗಿ ನಡೆದ ಯುದ್ಧಗಳು, ಈ ಯುದ್ಧಗಳಲ್ಲಿ ಮಡಿದವರ ಮತ್ತು ಅವರ ಹೆಸರಿನಲ್ಲಿ ಸ್ಥಾಪಿಸಿದ ಸ್ಮಾರಕ ಶಿಲ್ಪಗಳೇ ವೀರಗಲ್ಲುಗಳು. ವೀರಗಲ್ಲು ಶಿಲ್ಪಗಳು ಮೂರು ಪಟ್ಟಿಕೆಗಳಿಂದ ಕೂಡಿದ್ದು, ನಡುವೆ ಮಡಿದ ವೀರರನ್ನು ಹೊತ್ತು ಅಪ್ಸರೆಯರು ಆಕಾಶದಲ್ಲಿ ಹಾರುವುದು ಮತ್ತು ಮೇಲ್ಗಡೆ ಒಬ್ಬ ಕುಳಿತಿದ್ದು, ಬದಿಗೆ ಸೇವಕಿಯರನ್ನು ತೋರಿಸಲಾಗಿದೆ. ಇಲ್ಲಿ ಎರಡನೆಯ ಫಲಕದಲ್ಲಿ ಅಪ್ಸರೆಯರು ಒಂದು ಕೈಯಲ್ಲಿ ವೀರರನ್ನು, ಇನ್ನೊಂದು ಕೈಯಲ್ಲಿ ಪೂರ್ಣಕುಂಭ ಹಿಡಿದಿದ್ದಾರೆ. ಆಳೇತ್ತರದ ಶಿಲ್ಪ ವೀರನನ್ನು ಹೊತ್ತು ಹಾರುವ ಇನ್ನೊಂದು ಕೈಗಳಲ್ಲಿ ಪೂರ್ಣಕುಂಭ ಹಿಡಿದಿರುವುದು ಮತ್ತು ಮೂರನೆಯ ಹಂತದಲ್ಲಿ ಕುಳಿತ ಮಡಿದ ವೀರನನ್ನು ತೋರಿಸಿದ ದೃಶ್ಯವು ಅದರಲ್ಲಿ ಬರೆದ ಆ ಕಾಲದ ಶಾಸನದಿಂದ ಈ ರೀತಿಯ ಕಲಾ ಲಕ್ಷಣವುಳ್ಳ ವೀರಗಲ್ಲುಗಳನ್ನು ರಚನಾ ವಿನ್ಯಾಸವನ್ನು ಗುರುತಿಸಬಹುದು.

ರಾಷ್ಟ್ರಕೂಟರ ಕಾಲದ ವೀರಗಲ್ಲುಗಳಲ್ಲಿ ಅಪ್ಸರೆಯರು ಒಂದು ಕೈಯಲ್ಲಿ ಪೂರ್ಣಕುಂಭವನ್ನು ಹಿಡಿಯದೆ ಚೌರಿಗಳನ್ನು ಹಿಡಿದಿರುವುದು ಹಾರುವಾಗ ಮೋಡ ಚಲನೆಯನ್ನು ಸಾಂಕೇತಿಕವಾಗಿ ಚಿತ್ರಿಸಿದ ಲಕ್ಷಣ ಕಾಣುತ್ತೇವೆ. ಈ ಕಾಲದ ಮಧ್ಯಭಾಗದಿಂದ ಕಾಣಸಿಗುವ ಉದಾಹರಣೆಗಳು ಗದಗ, ಬೇಟಗೇರಿ, ರೋಣ ಮುಂತಾದ ಕಡೆಗಳಲ್ಲಿವೆ. ಬಾದಾಮಿ, ಐಹೊಳೆ ಮತ್ತು ಪಟ್ಟದಕಲ್ಲಿನ ಕೆಲವು ವೀರಗಲ್ಲುಗಳನ್ನು ಮರುಳು ಶಿಲೆಯದ್ದಾಗಿವೆ. ಅದರಲ್ಲಿ ಸ್ವರ್ಗಾರೋಹಣದಲ್ಲಿ ಅಪ್ಸರೆಯರು ಒಂದು ಕೈಯಲ್ಲಿ ವೀರನನ್ನು ಇನ್ನೊಂದು ಕೈಯಲ್ಲಿ ಚೌರಿ ಹಿಡಿದು ಹಾರುತ್ತಿರುವುದು, ಕೆಳಗಡೆ ಯುದ್ಧದ ಮತ್ತು ಸ್ವರ್ಗ ಕಲ್ಪನೆಯ, ಮೂರನೆಯ ಫಲಕದಲ್ಲಿ ಮಡಿದ ವೀರನು ಪೀಠದ ಮೇಲೆ ಕುಳಿತಿದ್ದಾನೆ. ಈತನ ಸೇವೆಗೆ ಇಬ್ಬರು ಸೇವಕಿಯರು ಕೈಗಳಲ್ಲಿ ಚೌರಿ ಹಿಡಿದು ನಿಂತಿರುವುದನ್ನು ಕಾಣಬಹುದು. ಈ ಮಾದರಿಯ ಒಂದು ಶಿಲ್ಪದಲ್ಲಿ ವೀರನು ಅಶ್ವದಳದವರನ್ನು ತಡೆಹಿಡಿಯಲು

ಯತ್ನಿಸುತ್ತಾ ನಿಂತಿದ್ದಾನೆ. ಈತನನ್ನು ಆಳೆತ್ತರ ರೂಪದಲ್ಲಿ ಯುದ್ಧ ದೃಶ್ಯದ ಬಿಡಿಭಾಗದಲ್ಲಿ ಚಿತ್ರಿಸಲಾಗಿರುವುದು ಗಮನೀಯ.

ಯುದ್ಧದಲ್ಲಿ ಮಡಿದ ವೀರನನ್ನು ಸಾಮಾನ್ಯವಾಗಿ ಎತ್ತರವಾದ ಶಿಲ್ಪದಲ್ಲಿ ಚಿತ್ರಿಸುವರು. ಆತನನ್ನು ಯುದ್ಧ ದೃಶ್ಯದ ಎಡಭಾಗದಲ್ಲಿ ತೋರಿಸುವುದು ಸಾಮಾನ್ಯ. ಈ ರೀತಿಯ ಇಲ್ಲಿನ ಮತ್ತೊಂದು ವೀರಗಲ್ಲಿನಲ್ಲಿ ಅಪ್ಸರೆಯರು ಮಡಿದ ವೀರನನ್ನು ಸ್ವರ್ಗಲೋಕಕ್ಕೆ ಒಯ್ಯುವ ದೃಶ್ಯವನ್ನು ತೋರಿಸುತ್ತಾ, ಫಲಕಗಳಲ್ಲಿ ಯುದ್ಧ ದೃಶ್ಯ ಮತ್ತು ಇಬ್ಬರು ಸೇವಕಿಯರ ನಡುವೆ ಮಡಿದ ವೀರ ಕುಳಿತಿದ್ದು, ಅವರ ಮೇಲೆ ದ್ರಾವಿಡ ವಿಮಾನವನ್ನು ಕಂಡರಿಸಲಾಗಿದೆ. ಈ ಕಾಲಕ್ಕಿನ್ನು ಈ ಫಲಕದಲ್ಲಿ ದೇವರ ಚಿತ್ರವನ್ನು ಕಂಡರಿಸದಿರುವುದು ಕಾಣುತ್ತದೆ. ಇದರಿಂದ ಮಡಿದ ವೀರನೇ ದೈವ ಸಂಭೂತನಾಗಿದ್ದು ಸ್ವರ್ಗ ಪರಿಕಲ್ಪನೆ ಈ ಕಾಲದ ಆರಂಭಿಕ ಕಾಲದವರೆಗೆ ಹೆಣೆದಿರಬಹುದು ಅಥವಾ ಪ್ರಚಲಿತ ಪರಂಪರೆ ಅಸ್ತಿತ್ವದಲ್ಲಿರಬಹುದು.

ಮುಂದೆ ಈ ಕಾಲದ ಅಂತ್ಯದಲ್ಲಿ ಮಡಿದ ವೀರನ ಜೊತೆ ಶಿವಲಿಂಗ ಅಥವಾ ತ್ರಿಮೂರ್ತಿಗಳನ್ನು ಅಥವಾ ಶಿವಲಿಂಗವನ್ನು ಕಿರುದಾಗಿ ತೋರಿಸುವ ಪರಿಪಾಠಕ್ಕೆ ಕ್ರಮೇಣವಾಗಿ ಚಾಲನೆಯಲ್ಲಿ ಬಂದಿರಬೇಕು. ವಿಮಾನದಲ್ಲಿ ದ್ರಾವಿಡ ಮತ್ತು ಶಾಲಾ ಮಾದರಿ ಈ ಕಾಲದಲ್ಲಿ ಸಾಮಾನ್ಯ ಬಳಕೆಯಾದ ಉದಾಹರಣೆಗಳು ಅಲ್ಲಲ್ಲಿವೆ. ಈ ಲಕ್ಷಣದ ಶಿಲ್ಪದಲ್ಲಿ ಯುದ್ಧ ದೃಶ್ಯ ಫಲಕದಲ್ಲಿ ಮಡಿದ ವೀರನನ್ನು ಎಲ್ಲರ ನಡುವೆ ಎಲ್ಲರಿಗಿಂತ ಎತ್ತರವಾಗಿ ಚಿತ್ರಿಸಲಾಗಿದೆ. ವೈರಿಗಳು ಬಿಲ್ಲು ಹಿಡಿದು ಬಾಣ ಪ್ರಯೋಗಿಸುತ್ತಿರುವುದನ್ನು ಅದರ ಬಲಕ್ಕೆ ತೋರಿಸಲಾಗಿದೆ. ಸ್ವರ್ಗ ಪರಿಕಲ್ಪನೆಯಲ್ಲಿ ನೃತ್ಯ-ಸಂಗೀತ ಮೇಳದವರು ಅಪ್ಸರೆಯರು ಮಡಿದ ವೀರನನ್ನು ಒಯ್ಯಲು ಹಾರುತ್ತಿರುವವರ ಬದಿಗಳಲ್ಲಿ ಚಿತ್ರಿಸಲಾಗಿದೆ. ಇದು ಇಂದಿನ ಶವ ಸಂಸ್ಕಾರಕ್ಕೆ ಒಯ್ಯುವ ಮೆರವಣಿಗೆಯನ್ನು ನೆನಪು ಮಾಡುತ್ತದೆ.

ಕಲ್ಯಾಣ ಚಾಲುಕ್ಯರ ಆರಂಭ ಕಾಲದಲ್ಲಿ ಶಿಲ್ಪಿಗಳು ವೀರಗಲ್ಲುಗಳನ್ನು ಮಾಡಲು ಬಿಳಿಯ ಕಲ್ಲನ್ನು ಉಪಯೋಗಿಸುತ್ತಿದ್ದರು. ಆದರೆ ದೇವಾಲಯಗಳ ನಿರ್ಮಾಣಕ್ಕೆ ಕರಿಯಕಲ್ಲಿನ ಬಳಕೆ ಹೆಚ್ಚಾದಂತೆ ಅವುಗಳನ್ನು ವೀರಗಲ್ಲುಗಳಿಗಾಗಿ ಉಪಯೋಗಿಸುವ ಪರಿಪಾಠವು ಬೆಳೆದಂತೆ ತೋರುತ್ತದೆ. ಕರಿಯಕಲ್ಲು (ಬಳಪದ ಕಲ್ಲು) ಸೂಕ್ಷ್ಮವಾದ ವಿವರಗಳನ್ನು ಬಿಡಿಸುವುದಕ್ಕೆ ಸಹಾಯಕವಾಗಿರುವುದರಿಂದ ಶಿಲ್ಪಿಗಳು ತಮ್ಮ ಕುಸುರಿ ಕಲೆಯ ಪ್ರದರ್ಶನಕ್ಕಾಗಿ ಇದನ್ನು ಬಳಸಲು ಆರಂಭಿಸಿದರೆಂದು ತೋರುತ್ತದೆ. ವೀರನ ಹೋರಾಟದ ಚಿತ್ರಣವನ್ನು ನಿರೂಪಿಸುವಲ್ಲಿ ಚಲನೆ ಮತ್ತು ಕ್ರಿಯೆಯನ್ನು ಸಮರ್ಥವಾಗಿ ನಿರೂಪಿಸುವಲ್ಲಿ ಈ ಕಲ್ಲು ನೆರವಾಗಿದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಶೈವಧರ್ಮದ ಸಂಕೇತಗಳಾದ ಶಿವಲಿಂಗ, ನಂದಿಗಳನ್ನು ಸಾಮಾನ್ಯವಾಗಿ ತೋರಿಸಲಾಗುತ್ತದೆ. ಈ ಕಾಲದ ವೀರಗಲ್ಲುಗಳ ಶಿಲ್ಪದಲ್ಲಿ ಲಾಲಿತ್ಯ, ಮಾಧುರ್ಯ ಗುಣಗಳು ವ್ಯಕ್ತವಾಗಿವೆ. ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯು ಹಂತ, ವೀರನ ಸ್ವರ್ಗದಲ್ಲಿಯೋ

ಅಥವಾ ತನ್ನ ಇಷ್ಟ ದೈವದ ಸಾನಿಧ್ಯದಲ್ಲಿಯೋ ಇರುವ ಹಂತಗಳು ಸುಂದರವಾಗಿದ್ದು, ತಮ್ಮ ಪ್ರಶಾಂತ ವಾತಾವರಣವನ್ನು ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲುಗಳು ತೋರಿಸುತ್ತವೆ. ಈ ಕಾಲದ ವೀರಗಲ್ಲುಗಳು ಒಂದರಿಂದ ಮೂರು ಹಂತದವರೆಗೂ ಇರುವ ವೀರಗಲ್ಲುಗಳನ್ನು ಈ ಪ್ರದೇಶದಲ್ಲಿ ಕಾಣುತ್ತೇವೆ.

ಕಲ್ಯಾಣ ಚಾಲುಕ್ಯರ ವೀರಗಲ್ಲುಗಳು ಸಾಮಾನ್ಯವಾಗಿ ಕೆಳಗಿನ ಹಂತದಲ್ಲಿ ವೀರನು ಬಿಲ್ಲು-ಬಾಣಗಳನ್ನು ಹಿಡಿದು ಎದುರಿಗಿರುವ ಕುದುರೆಯ ಮೇಲೆ ಕುಳಿತು ಹೋರಾಡುತ್ತಿರುವ ಶತ್ರುವಿನ ಮೇಲೆ ಬಾಣ ಪ್ರಯೋಗ ಮಾಡುತ್ತಿದ್ದಾನೆ. ಎರಡನೆಯ ಹಂತದಲ್ಲಿ ಅಪ್ಸರೆಯರು ವೀರನನ್ನು ದೇವಲೋಕಕ್ಕೆ ಕರೆದುಕೊಂಡು ಹೋಗುತ್ತಿದ್ದಾರೆ. ಮೂರನೆಯ ಹಂತದಲ್ಲಿ ವೀರನು ಶಿವಲಿಂಗದ ಬಳಿ ಕುಳಿತು ಧ್ಯಾನಾಸಕ್ತನಾಗಿದ್ದಾನೆ. ಮೇಲಿನ ಹಂತದಲ್ಲಿ ಎಡ ಮತ್ತು ಬಲಕ್ಕೆ ಸೂರ್ಯ-ಚಂದ್ರರ ಶಿಲ್ಪಗಳಿವೆ.

ಈ ಕಾಲದ ವೀರಗಲ್ಲುಗಳ ಮತ್ತೊಂದು ಶೈಲಿಯೆಂದರೆ ಕೆಳಗಿನ ಹಂತದಲ್ಲಿ ವೀರ ಗುರಾಣಿ, ಕತ್ತಿ ಮತ್ತು ಸೈನಿಕರು ಬಿಲ್ಲು-ಬಾಣಗಳನ್ನು ಹಿಡಿದು ವೀರಗಾಸೆ ಧರಿಸಿ ಶತ್ರು ಸೈನ್ಯದ ಜೊತೆಗೆ ಯುದ್ಧದಲ್ಲಿ ನಿರತನಾಗಿರುವ ದೃಶ್ಯವಿದ್ದು, ಮಧ್ಯ ಪಟ್ಟಿಕೆಯಲ್ಲಿ ವೀರನು ಮಂಟಪದೊಳಗೆ ಅಂಜಲಿ ಮುದ್ರೆಯಲ್ಲಿ ಪದ್ಮಾಸನದಲ್ಲಿ ಕುಳಿತುಕೊಂಡಿರುತ್ತಾನೆ. ವೀರನು ಎರಡೂ ಬದಿಯಲ್ಲಿ ಅಂಗರಕ್ಷಕರು ಶ್ವೇತಛತ್ರಿ ಹಿಡಿದು ನಿಂತಿರುವುದು ಮೇಲ್ಭಾಗದ ಪಟ್ಟಿಕೆಯಲ್ಲಿ ಅಂಜಲಿ ಮುದ್ರೆಯಲ್ಲಿ ವೀರ ಶಿವಲಿಂಗಕ್ಕೆ ವಂದಿಸುತ್ತಿರುವ ಶೈಲಿ ಈ ಕಾಲದ ಸ್ಮಾರಕ ಶಿಲ್ಪಗಳ ವೈಶಿಷ್ಟ್ಯತೆಯಾಗಿದೆ.

ಹೊಯ್ಸಳರ ಕಾಲದ ವೀರಗಲ್ಲುಗಳನ್ನು ಬಿಳಿ ಮತ್ತು ಕೆಂಪು ಶಿಲೆಯಲ್ಲಿ ಕಂಡುಬರುತ್ತವೆ. ಈ ಕಾಲದ ವೀರಗಲ್ಲುಗಳು ಹೆಚ್ಚಾಗಿ ಒಂದು ಹಂತದಿಂದ ಕೂಡಿದ ವೀರಗಲ್ಲುಗಳನ್ನು ಈ ಪ್ರದೇಶದಲ್ಲಿ ಕಾಣುತ್ತೇವೆ. ವೀರನು ಕುದುರೆಯ ಮೇಲೆ ಕುಳಿತಿದ್ದು, ಕೈಯಲ್ಲಿ ಖಡ್ಗ ಹಿಡಿದು ಹೋರಾಡುತ್ತಿದ್ದಾನೆ. ಶತ್ರುಗಳ ವಿರುದ್ಧ ಹೋರಾಡುತ್ತಿರುವಂತೆ ದೃಶ್ಯವಿದೆ. ಮೇಲೆ ಸೂರ್ಯ ಮತ್ತು ಚಂದ್ರರ ಮಧ್ಯೆ ಶಿವಲಿಂಗವಿರುವ ಚಿತ್ರವನ್ನು ಈ ಕಾಲದ ವೀರಗಲ್ಲುಗಳಲ್ಲಿ ಹೆಚ್ಚಾಗಿ ಕಾಣುತ್ತೇವೆ.

ವಿಜಯನಗರ ಕಾಲದ ವೀರಗಲ್ಲುಗಳಲ್ಲಿ ಸ್ಪಷ್ಟವಾಗಿ ಎದ್ದು ಕಾಣುವುದು. ಒರಟಾದ ಬಿಳಿಯ ಕಲ್ಲಿನ ಉಪಯೋಗ ಮತ್ತು ಒರಟಾದ ಶಿಲ್ಪ ಈ ರೀತಿಯ ವ್ಯತ್ಯಾಸಕ್ಕೆ ಕಾರಣ ಕರಿಯಕಲ್ಲು ದೊರೆಯದಿದ್ದುದೋ ಅಥವಾ ಶಿಲ್ಪಗಳು ಉದ್ದೇಶಪೂರ್ವಕವಾಗಿ ಹೀಗೆ ಮಾಡಿದರೋ ಹೇಳುವುದು ಕಷ್ಟ. ಶಿಲೆಯ ಅಭಾವ ಇಂಥ ಬದಲಾವಣೆಗೆ ಕಾರಣ ಎಂಬ ತೀರ್ಮಾಣಕ್ಕೆ ಬರುವುದು ಸಮಂಜಸವಲ್ಲವೆಂದು ತೋರುತ್ತದೆ. ವೀರಗಲ್ಲುಗಳು ತಮ್ಮ ಸಮಕಾಲೀನ ವಾಸ್ತವ ಮತ್ತು ಮೂರ್ತಿ ಶಿಲ್ಪದ ರೀತಿಯನ್ನೇ ಅನುಸರಿಸಿವೆಂದು ಹೇಳಬೇಕು. ಏಕೆಂದರೆ ಇಂಥ ಬದಲಾವಣೆಯನ್ನು ಶಿಲೆಯ ಆಯ್ಕೆಯಲ್ಲಿ ಮಾತ್ರವಲ್ಲದೆ ಶಿಲ್ಪದ ವಿವರಗಳಲ್ಲಿಯೂ ಗಮನಿಸಬಹುದು.

ವಿಜಯನಗರ ಕಾಲದ ವೀರಗಲ್ಲುಗಳಲ್ಲಿ ವೀರನನ್ನು ಆಲೀಢಾಸನದಲ್ಲಿ ಬಿಡಿಸಲಾಗಿರುವುದಿಲ್ಲ. ವೀರಗಲ್ಲುಗಳು ಗಿಡ್ಡಾಗಿರುತ್ತವೆ ಮತ್ತು ಮೇಲ್ಭಾಗದಲ್ಲಿ ಸಾಮಾನ್ಯವಾಗಿ ಧಾರ್ಮಿಕ ಸಂಕೇತಗಳಾದ ಸೂರ್ಯ, ಚಂದ್ರ, ಶಿವಲಿಂಗ, ಬಸವ, ಶಂಖ, ಚಕ್ರ, ಪದ್ಮಗಳನ್ನು ಹೊಂದಿರುತ್ತವೆ. ಮತ್ತೊಂದು ಸೂಕ್ಷ್ಮವಾದ ವ್ಯತ್ಯಾಸವಿರುವುದು ವೀರನ ಉಡುಪುಗಳಲ್ಲಿ. ವಿಜಯನಗರ ಕಾಲದ ವೀರಗಲ್ಲುಗಳನ್ನು ಕಲ್ಲಿನ ಮೇಲೆ ಉಬ್ಬುಶಿಲ್ಪಗಳಾಗಿ ಬಿಡಿಸಿರುತ್ತಾರೆ. ವೀರನ ಬಲಗೈಯಲ್ಲಿ ಖಡ್ಗವಿದ್ದು, ಹೋರಾಡುವ ಭಂಗಿಯಲ್ಲಿ ನಿಂತಿದ್ದಾನೆ. ಎಡಗೈಯಲ್ಲಿ ಗುರಾಣಿ ಹಿಡಿದಿದ್ದು, ವೀರನ ಸೊಂಟದ ಬಲಭಾಗದಲ್ಲಿ ನೇತಾಡುವ ಕತ್ತಿ ಗೋಚರಿಸುತ್ತದೆ. ಕೊರಳಲ್ಲಿ ಉದ್ದನೆಯ ಸರಗಳು, ಕಿವಿಗೆ ಓಲೆಗಳು, ಕೈಗಡಗ, ತೋಳುಬಂಧಿ, ಕಾಲ್ಗಡಗಳನ್ನು ಧರಿಸಿದ್ದಾನೆ. ವೀರನು ಕಿರೀಟವನ್ನು ಧರಿಸಿರುವುದರಿಂದ ಇದು ರಾಜನನ್ನು ಸೂಚಿಸುತ್ತದೆ. ವೀರನ ಮುಖದಲ್ಲಿ ವೀರಕಳೆ ಎದ್ದು ಕಾಣುತ್ತದೆ. ವೀರನು ಉರಿ ಮೀಸೆಯನ್ನು ಹೊಂದಿರುತ್ತಾನೆ. ವೀರನು ಕುದುರೆ ಸಾವರನಾಗಿದ್ದರೆ, ಎಡಗೈಯಲ್ಲಿ ಕುದುರೆ ಲಗಾಮನ್ನು, ಬಲಗೈಯಲ್ಲಿ ಕತ್ತಿಯನ್ನು ಎತ್ತಿ ಹಿಡಿದಿದ್ದಾನೆ. ಬಲಗೈಯಲ್ಲಿ ಕತ್ತಿಯನ್ನು ಹಿಡಿದಿರುವ ಭಂಗಿಯೇ ಅವನೊಬ್ಬ ವೀರನೆಂದು ಬಿಂಬಿಸುತ್ತದೆ. ಕಾಲ್ದಳಕ್ಕೆ ಸೇರಿದ ಸಾಮಾನ್ಯ ಸೈನಿಕರು ಎಡಗೈಯಲ್ಲಿ ಗುರಾಣಿ, ಬಲಗೈಯಲ್ಲಿ ಖಡ್ಗ ಇಲ್ಲವೆ ಬಂದೂಕು ಹಿಡಿದಿದ್ದಾರೆ. ಈ ಬಂದೂಕಿನ ವೀರಗಲ್ಲುಗಳು ವಿಜಯನಗರ ಕಾಲದಲ್ಲಿ ನಾವು ನೋಡುತ್ತೇವೆ.

ಈ ಕಾಲದ ಬೇರೆ ಬೇರೆ ರೀತಿಯ ಶಿಲ್ಪಗಳನ್ನು ಗಮನಿಸಿದಾಗ ವೀರರು ಕೈಯಲ್ಲಿ ಭರ್ಚಿಯೊಂದನ್ನು ಹಿಡಿದುಕೊಂಡು ವೈರಿಯತ್ತ ತಿವಿಯಲು ಸಿದ್ಧವಾಗಿದ್ದಾನೆ. ಪರಿವಾರದ ಸೈನಿಕನೂ ಸೇರಿ ಕುದುರೆ ಸವಾರ ವೀರನೂ ಟೊಂಕದಿಂದ ಪಾದದವರೆಗೆ ಕಾಲುಗಳಿಂದ ಬಿಗಿಯಾಗಿ ಅಂಟಿಕೊಂಡಿರುವಂಥ ಚೂಡಿದಾರ, ಪೈಜಾಮ ಧರಿಸಿದ್ದಾನೆ. ಟೊಂಕಕ್ಕೆ ಟೊಂಕ ಪಟ್ಟಿಯನ್ನು ಕಟ್ಟಿಕೊಂಡು ಅಲ್ಲಿ ಒಂದು ಕಠಾರಿಯನ್ನು ಇಟ್ಟುಕೊಂಡಿದ್ದಾನೆ. ವೀರನು ಸಾಮಾನ್ಯವಾಗಿ ಎದೆಯಿಂದ ಕೆಳಕ್ಕೆ ವಕ್ಷಸ್ಥಳದವರೆಗೂ ಇಳಿಬಿದ್ದಿರುವ ಕಂಠಿಹಾರವನ್ನು ಧರಿಸಿದ್ದಾನೆ. ಕಿವಿಯಲ್ಲಿ ಕರ್ಣಕುಂಡಲ, ಕೈಗಳಲ್ಲಿ ಕಡಗ, ಕಾಲುಗಳಲ್ಲಿ ಕಡಗ, ರಟ್ಟೆಯಲ್ಲಿ ವಂಕಿಯನ್ನು ಧರಿಸಿದ್ದಾರೆ. ಈ ವೀರರು ತಲೆಯ ಕೂದಲನ್ನು ತುರುಬ ಕಟ್ಟಿಕೊಂಡಿದ್ದು, ಕೊಂಚ ಬಲಕ್ಕೆ ವಾಲಿದಂತೆ ಕೆತ್ತಲಾಗಿದೆ. ಕೆಲವು ವೀರಗಲ್ಲುಗಳಲ್ಲಿ ತಲೆಯ ಮೇಲೆ ರುಮಾಲನು ಕಟ್ಟಿಕೊಂಡಿರುವುದು ಕಾಣಬಹುದು.

ಈ ಕಾಲದ ವೀರಗಲ್ಲುಗಳ ಶಿಲಾ ಫಲಕದ ಮೇಲಿನ ತುದಿಯಲ್ಲಿ ಬಲಕ್ಕೆ ಸೂರ್ಯ, ಎರಡು ಕಮಲಗಳು ಮತ್ತು ಸಮೂಹದಲ್ಲಿಯೇ ಇರುವ ಅತ್ಯಂತ ಕಲಾತ್ಮಕವಾಗಿ ಸುಂದರವಾಗಿರುವ ವೀರಗಲ್ಲುಗಳನ್ನು ನಾವು ನೋಡಬಹುದು.

ಮಹಾಸತಿ ಸ್ಮಾರಕ ಶಿಲ್ಪಗಳಲ್ಲಿ ಮಹಾಸತಿಯು ಅಂದಿನ ಪ್ರಮುಖವಾದಂತಹ ಆತ್ಮಬಲಿದಾನದ ಸ್ವರೂಪವಾಗಿದ್ದು ಇದರಲ್ಲಿ ಎರಡು ವಿಧ 'ಸಹಗಮನ' ಗಂಡನ ಶವದೊಂದಿಗೆ ಚಿತೆಯೇರುವುದು

ಸಹಗಮನ. ಗಂಡ ದೂರದ ಸ್ಥಳದಲ್ಲಿ ಮಡಿದರೆ ಅವನ ಪ್ರಿಯ ವಸ್ತುಗಳನ್ನು ಹಿಡಿದು ಚಿತೆಯೇರುವುದು ಅನುಗಮನ. ಈ ಪ್ರದೇಶದಲ್ಲಿ ಮಹಾಸತಿಗಲ್ಲುಗಳನ್ನು ಎರಡು ರೀತಿಯಾಗಿ ಅಧ್ಯಯನ ಮಾಡಲಾಗಿದೆ. ಶಾಸನಸಹಿತ ಮಹಾಸತಿಗಲ್ಲು ಮತ್ತು ಶಾಸನರಹಿತ ಮಹಾಸತಿಗಲ್ಲು ಈ ಪ್ರದೇಶದಲ್ಲಿ ಸುಮಾರು ೫೭ ಶಾಸನರಹಿತವಾದ ಮಹಾಸತಿಗಲ್ಲುಗಳನು ಗಮನಿಸಲಾಗಿದೆ. ಇಲ್ಲಿಯ ಮಹಾಸತಿಗಲ್ಲುಗಳು ದಕ್ಷಿಣ ಕರ್ನಾಟಕದಲ್ಲಿ ನೋಡುವ ಹಾಗೇ ಸಮೃದ್ಧ ಮತ್ತು ಸಿರಿವಂತಿಕೆಯನ್ನು ಉತ್ತರ ಕರ್ನಾಟಕದಲ್ಲಿ ಕಾಣುವುದಿಲ್ಲ. ತುಂಗಭದ್ರಾ ಎಡಭಾಗದಲ್ಲಿ ದೊರಕುವ ಮಹಾಸತಿಗಲ್ಲು ಪೂರ್ಣ ರೂಪದ ಮಹಿಳೆಯ ಚಿತ್ರಗಳಾಗಿರುತ್ತವೆ. ಸಾಮಾನ್ಯವಾಗಿ ವೀರ ಮಹಾಸತಿಗಲ್ಲು, ಮಹಾಸತಿಗಲ್ಲು, ಒಕ್ಕೈ ಮಹಾಸತಿ, ಇಕ್ಕೈ ಮಹಾಸತಿ ಮುಂತಾದವುಗಳನ್ನು ದಕ್ಷಿಣ ಕರ್ನಾಟಕದಲ್ಲಿ ಪೂರ್ಣಪ್ರಮಾಣದಲ್ಲಿ ನೋಡುತ್ತೇವೆ. ಆದರೆ ಉತ್ತರ ಕರ್ನಾಟಕದಲ್ಲಿ ಮಹಾಸತಿಗಲ್ಲುಗಳು ಸಂಪೂರ್ಣವಾಗಿ ಕಲಾತ್ಮಕತೆಯಿಂದ ಕೂಡಿರುವುದಿಲ್ಲ. ಏಕೆಂದರೆ ಈ ಭಾಗದಲ್ಲಿ ಮಹಾಸತಿಗಲ್ಲುಗಳು ದೊರಕುವುದು ಬಹಳ ಕಡಿಮೆ. ಇಲ್ಲಿನ ಜನಸಾಮಾನ್ಯರು ಆರ್ಥಿಕವಾಗಿ ಕೆಳಮಟ್ಟದವರಾಗಿದ್ದು, ಈ ಭಾಗದಲ್ಲಿ ಮಹಾಸತಿಯಾಗುವ ಪದ್ಧತಿಯು ಕಡಿಮೆ ಪ್ರಮಾಣದಲ್ಲಿದ್ದಂತೆ ಕಾಣುತ್ತದೆ. ಅಲ್ಲದೆ ಈ ಭಾಗದಲ್ಲಿ ಮಹಾಸತಿ ಶಾಸನಗಳು ಕಾಲನ ಹೊಡೆತಕ್ಕೆ ಸಿಕ್ಕಿ ನಾಶವಾಗಿರಲುಬಹುದು. ಜೊತೆಗೆ ಈ ಭಾಗದಲ್ಲಿ ಇಂತಹ ಪದ್ಧತಿಯನ್ನು ನಮ್ಮ ಜನ ವಿರೋಧಿಸಿರಲೂಬಹುದು. ಆದ ಕಾರಣ ಇವುಗಳ ಸಂಖ್ಯೆ ಈ ಭಾಗದಲ್ಲಿ ಕಡಿಮೆಯಾಗಿರಬಹುದು. ಅಥವಾ ಸ್ತ್ರೀಯರು ತಮ್ಮ ಪತಿ ಸಾವನ್ನಪ್ಪಿದಾಗ ತಮ್ಮ ಮಕ್ಕಳ ಜವಾಬ್ದಾರಿಯನ್ನು ಯಾರಿಗೆ ನೀಡಬೇಕು? ಮನುಷ್ಯರಾಗಿ ಹುಟ್ಟಿರುವ ಈ ಜನ್ಮವನ್ನು ಹಾಳು ಮಾಡಿಕೊಳ್ಳದೆ ಮಕ್ಕಳ ಜೊತೆ ಅವರ ಲಾಲನೆ-ಪಾಲನೆ ಬಗ್ಗೆ ಯೋಚಿಸಿ ಈ ಪದ್ಧತಿಯನ್ನು ನಿರಾಕರಿಸಿರಬಹುದು. ಅಲ್ಲದೆ ಈ ಭಾಗದಲ್ಲಿ ಸ್ಥಳೀಯವಾಗಿ ಯುದ್ಧಗಳು ನಡೆಯದಿರುವುದು ಈ ಮಹಾಸತಿಗೆ ಕಾರಣವಾಗಿರಬಹುದು.

ತುರುಗೋಳ್ ವೀರಗಲ್ಲುಗಳು ಹೆಚ್ಚು ಉಪಲಬ್ದವಿದ್ದು, ತುರುಗೋಳ್ ಶಾಸನಗಳು ಈ ಪ್ರದೇಶದಲ್ಲಿ ದೊರಕುವುದು ಕಡಿಮೆ. ದಕ್ಷಿಣ ಭಾಗಕ್ಕಿಂತ ಅತ್ಯಂತ ಕಡಿಮೆ ಎಂದು ಹೇಳಬಹುದು. ಇದಕ್ಕೆ ಕಾರಣಗಳು ಏನು ಎನ್ನುವುದು ಹುಡುಕಬಹುದು. ಪ್ರಾಚೀನ ಕಾಲದಿಂದಲೂ ಹಸುಗಳನ್ನು ಸಂಪತ್ತೆಂದು ಭಾವಿಸಲಾಗಿದೆ. ಅದನ್ನು ಇಟ್ಟುಕೊಂಡು ಶ್ರೀಮಂತನೆಂದು ಪರಿಭಾವಿಸಲಾಗಿತ್ತು.

ಉತ್ತರ ಕರ್ನಾಟಕ ಪಶುಪಾಲನೆಗೆ ಅಷ್ಟೊಂದು ಒಗ್ಗಿಕೊಳ್ಳುವ ಗುಣವನ್ನು ಹೊಂದಿಲ್ಲ. ಇಲ್ಲಿ ಪಶುಪಾಲನೆಗಿಂತ ಕುರಿಗಾಯಿಗಳೇ ಹೆಚ್ಚಾಗಿ ಕಂಡುಬರುವುದು ಇಂದಿಗೂ ಕಾಣುತ್ತೇವೆ. ಪ್ರಾಚೀನ ಕಾಲದಲ್ಲಿ ಹಸುಗಳನ್ನು ಕಳ್ಳತನ ಮಾಡುವುದು, ವಶಪಡಿಸಿಕೊಳ್ಳುವುದು ಒಂದು ಹೆಮ್ಮೆಯ ಸಂಗತಿಯಾಗಿದೆ. ರಾಷ್ಟ್ರಕೂಟರ ಕಾಲದಲ್ಲಿ ಕಾಣುವ ಗೋವುಗಳ ದಾನ ಅರೆ ಮಲೆನಾಡಿನ ಪ್ರದೇಶದಲ್ಲಿ ಹೆಚ್ಚಾಗಿ ಕಾಣುತ್ತೇವೆ. ಆದರೆ ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ರಾಯಚೂರು,

ಬಳ್ಳಾರಿ, ಕಲಬುರಗಿ, ವಿಜಯಪುರ ಹಾಗೂ ಬೀದರ ಪ್ರದೇಶದಲ್ಲಿ ಹೆಚ್ಚಾಗಿ ಕಾಣುವುದಿಲ್ಲ. ಕಾರಣ ಹಸುಗಳ ಸಮೃದ್ಧತೆ ಕೊರತೆಯಾಗಿರುವುದೇ ಆಗಿರುವುದು. ಪಶು ಸಂಪತ್ತು ಎಂದು ಭಾವಿಸಿದಾಗಲು ಇಲ್ಲಿ ತುರುಗೋಳ್ ಶಾಸನಗಳ ಕಡಿಮೆ ದೊರಕಲು ಇದು ಮುಖ್ಯವಾದ ಕಾರಣವಾಗಿರಬಹುದು.

ವೀರತ್ವ ಮತ್ತು ತ್ಯಾಗದ ವಿಷಯಗಳನ್ನು ಜನಸಮುದಾಯಕ್ಕೆ ತಿಳಿಸಲು ತುರುಗೋಳ್ ಶಾಸನಗಳು ಒಂದು ರೀತಿಯಲ್ಲಿ ದಾನ ನೀಡಿದವರಿಗೆ ಹಾಗೂ ದಾನ ಪಡೆದವರಿಗೆ ಇಬ್ಬರಿಗೂ ಖಾಯಂ ದಾಖಲೆಗಳಾಗಿದ್ದವು. ತುರುಗೋಳ್ ಶಾಸನಗಳಲ್ಲಿನ ವಿಷಯವನ್ನು ಜನಸಮುದಾಯ ಭಕ್ತಿಯಿಂದ ಗೌರವಿಸುತ್ತಿತ್ತು. ಅದರಲ್ಲಿನ ದಾನದ ನಿರ್ದೇಶನದಂತೆ ನಡೆಯುತ್ತಿತ್ತು. ಆದರೆ ಶಾಸನ ಹಾಕಿಸುವವರು ಮತ್ತು ದಾನ ಪಡೆಯುವವರ ಸಂಖ್ಯೆ ಹೆಚ್ಚಾದಂತೆಲ್ಲಾ ಶಾಸನ ನಡೆಸುವ ಪದ್ಧತಿ ಸಂಪ್ರದಾಯಗೊಂಡಂತೆಲ್ಲಾ ಜನಸಮುದಾಯಕ್ಕೆ ಶಾಸನಗಳಲ್ಲಿದ್ದ ಭಕ್ತಿ, ಗೌರವಗಳು ಕಡಿಮೆಯಾದವು. ಶಾಸನಗಳು ಬೆಲೆಯನ್ನು ಕಳೆದುಕೊಂಡವು. ನೀಡಿದ ಮತ್ತು ಪಡೆದ ದಾನಗಳನ್ನು ಕೆಲವರು ಪ್ರಶ್ನಿಸಿತೊಡಗಿದರು. ಇನ್ನೂ ಮುಂದುವರಿದು ದಾನದ ಭೂಮಿಯನ್ನು ಅಪಹರಿಸತೊಡಗಿದರು. ಹೀಗಾಗಿ ಶಾಸನ ಹಾಕಿಸಿದರೂ ಅದಕ್ಕೆ ಮಾನ್ಯತೆಯಿಲ್ಲವೆಂಬತಾಯಿತು. ಇದರ ಪರಿಣಾಮವಾಗಿ ದಾನಗಳನ್ನು ಅಪಹರಿಸುವವರನ್ನು ಹೆದರಿಸುವ ಸಲುವಾಗಿ ಶಾಸನಗಳ ಜೊತೆ ಶಾಪ ಕೊಡುವುದು ಹೆಚ್ಚಾಯಿತು. ಅಶ್ಲೀಲ ಪದಗಳನ್ನು ಮತ್ತು ಚಿತ್ರಗಳನ್ನು ಬಳಿಸಲು ಪ್ರಾರಂಭಿಸಿದರು. ಆಯಾ ಧರ್ಮಗಳು ನಿಷೇಧಿಸಿದ ಚಟುವಟಿಕೆಗಳ ಮುಖಾಂತರ ಜನರನ್ನು ಹೆದರಿಸಬಯಿಸಿದರು. ಬ್ರಾಹ್ಮಣರಾದರೆ ಕಾಶಿಯಲ್ಲಿ ಗೋವನ್ನು ಕೊಂದ ಪಾಪ. ಇತರರಾದರೆ ಕಾಶಿಯಲ್ಲಿ ಬ್ರಾಹ್ಮಣರನ್ನು ಕೊಂದ ಪಾಪ ತಂದೆ-ತಾಯಿಗಳನ್ನು ಕೊಂದ ಪಾಪ. ದೇವರಿಗೆ ಕೆಡುಕನ್ನು ಮಾಡಿದ ಪಾಪ. ಮುಸ್ಲಿಂರಾದರೆ ಮೆಕ್ಕಾದಲ್ಲಿ ಹಂದಿಯನ್ನು ಕೊಂದ ಪಾಪ. ಇವರ ಜೊತೆಗೆ ಎಲ್ಲರಿಗೂ ಅನ್ವಯಿಸುವಂತೆ ಮಕ್ಕಳನ್ನು ಕೊಂದ ಪಾಪ. ವಿಜಯನಗರ ಹಾಗೂ ನಂತರದ ಕಾಲದಲ್ಲಿ ಅಶ್ಲೀಲ ಶಬ್ದಗಳ ಬಳಕೆ ಹೆಚ್ಚಾಯಿತು. ಚಿತ್ರದ ಮೂಲಕ ಶಾಪಾಶಯವನ್ನು ಪ್ರತಿಬಿಂಬಿಸಿದರು. ಪ್ರಾಣಿ ಸಂಭೋಗದ ದೃಶ್ಯವನ್ನು ಶಾಸನದ ತಳಭಾಗದಲ್ಲಿ ಬಿಡಿಸಿದರು. ಈ ಒಂದು ಅಂಶವೇ ಮಾನವನು ತನ್ನ ದುರಾಸೆಯ ಕಾರಣದಿಂದ ಶಾಸನಗಳಲ್ಲಿ ಉಲ್ಲೇಖಿತವಾದ ದಾನಗಳನ್ನು ಅಪಹರಿಸುತ್ತಿದ್ದ ಶಾಸನಗಳ ಬಗ್ಗೆ ಗೌರವ ಕಡಿಮೆಯಾಗಿದ್ದ ವಿಷಯವನ್ನು ವ್ಯಕ್ತಪಡಿಸುತ್ತದೆ. ಹೀಗಾಗಿ ಶಾಸನ ನಿರ್ಮಾಣದ ಮನೋಭಾವ ಶಿಥಿಲಗೊಂಡ ಶಾಸನ ಕಲೆಗೆ ಕಡಿವಾಣ ಹಾಕಿದಂತಾಯಿತು.

ತುರುಗೋಳ್ ಶಾಸನ ಶಿಲ್ಪಗಳ ಅವನತಿಗೆ ರಾಜಕೀಯ ಕಾರಣಗಳೂ ಕೂಡ ಪ್ರಬಲವಾದ ಒಂದು ಕಾರಣವಾಗಿದೆ. ವಿಜಯನಗರದ ಅರಸರು ಇಡೀ ದಕ್ಷಿಣ ಭಾರತವನ್ನು ಆಳುತ್ತಿದ್ದರು. ಅವರ ರಾಜ್ಯ ವಿಸ್ತಾರವಾದುದರಿಂದ ಹಲವಾರು ಪ್ರದೇಶಗಳಲ್ಲಿ ನೇರವಾಗಿ ಆಳದೆ, ಮಾಂಡಲಿಕರ

ಮೂಲಕ ಆಡಳಿತ ನಡೆಸಿದರು. ಇದರಿಂದಾಗಿ ರಾಜ್ಯದಲ್ಲಿ ಆಗಾಗ ಅಶಾಂತಿ, ಒಳಜಗಳ, ರಾಜ್ಯಕ್ಕಾಗಿ ಕಿತ್ತಾಟ, ಅನ್ಯರದಾಳಿ ಮೊದಲಾದವುಗಳ ಪರಿಣಾಮದಿಂದಾಗಿ ಶಾಸನ ಹಾಕಿಸುವ ಪದ್ಧತಿ ಕುಂಠಿತಗೊಂಡಿತು.

ಶಾಸನ ಶಿಲ್ಪಗಳ ಅವನತಿಗೆ ಪರಭಾಷೆಯವರು, ಪರಧರ್ಮದವರು ನಮ್ಮನ್ನು ಆಕ್ರಮಿಸಿ, ನಮ್ಮ ಸಂಸ್ಕೃತಿಯನ್ನು ಹಾಳುಗೆಡವಿದುದೂ ಕೂಡ ಒಂದು ಕಾರಣವಾಗಿದೆ. ಜೈನ ಹಾಗೂ ವೈಷ್ಣವ ಧರ್ಮಕ್ಕೆ ಪ್ರತಿಯಾಗಿ ವೀರಶೈವ ಧರ್ಮದ ಬೆಳವಣಿಗೆ, ವೀರಶೈವ ಧರ್ಮಕ್ಕೆ ಪ್ರತಿಯಾಗಿ ವೈಷ್ಣವಧರ್ಮದ ಬೆಳವಣಿಗೆ ಇವೆಲ್ಲವುಗಳ ಮೇಲೆ ಮುಸ್ಲಿಂ ಸಂಸ್ಕೃತಿಯ ಮೇಲಿನ ದಾಳಿಯಿಂದಾಗಿ ಜನಸಾಮಾನ್ಯರಲ್ಲಿ ಅಶಾಂತಿ ಉಂಟಾಗಿತ್ತು.

ಒಂದು ಸಮಾಜ ಬದಲಾದಂತೆ ಸಹಜವಾಗಿಯೇ ಆ ಸಮಾಜ ನಂಬಿಕೊಂಡು ಬಂದಿದ್ದ ರೀತಿ-ನೀತಿಗಳು, ಆದರ್ಶಗಳು, ಜೀವನ ಮೌಲ್ಯಗಳು ಬದಲಾವಣೆಯಾಗುತ್ತವೆ. ಧರ್ಮಗಳು ಬದಲಾದಂತೆ ಆಯಾ ಧರ್ಮದ ಮೌಲ್ಯಗಳೂ ಬದಲಾಗುತ್ತವೆ. ಬೌದ್ಧಧರ್ಮದ ಪ್ರಭಾವದಿಂದ ಅಶೋಕನು ಹಿಂಸೆಯನ್ನು ತ್ಯಜಿಸಿ ಅಹಿಂಸಾವಾದಿಯಾದನು. ಆದರೆ ಮುಂದೆ ವೈರಿಯೊಂದಿಗೆ ಹೋರಾಡುವುದು ಅರಸರಿಗೆ ಒಂದು ಘನಕಾರ್ಯವಾಯಿತು. ಶೌರ್ಯ, ವೀರತನವೇ ಒಂದು ಮೌಲ್ಯವಾಯಿತು. ತ್ಯಾಗ-ಬಲಿದಾನಗಳು ಆದರ್ಶವಾದವು. ನಂತರ ಮಧ್ಯಕಾಲಿನ ಕರ್ನಾಟಕದಲ್ಲಿ ಭಕ್ತಿ ಪ್ರಮುಖವಾದ ಜೀವನ ಮೌಲ್ಯವಾಯಿತು. ಹೀಗೆ ಹಲವಾರು ರೀತಿಯಲ್ಲಿ ಸಮಾಜದಲ್ಲಿ ಮೌಲ್ಯಗಳ ಬದಲಾವಣೆ ನಡೆಯುತ್ತಲೇ ಇರುತ್ತದೆ.

# ಅಧ್ಯಾಯ : ಹತ್ತು

# ಸಮಾರೋಪ

ಧರ್ಮಾರ್ಥಕಾಮ ಮೋಕ್ಷಾಣಾಂ ಉಪದೇಶ ಸಮನ್ವಿತಂ
ಪುರಾವೃತ್ತಂ ಕಥಾಯುಕ್ತ ಇತಿಹಾಸಂ ಪಚಕ್ಷತೇ।

ಇತಿಹಾಸವೆಂದರೆ ಕೇವಲ ಘಟನೆಗಳ ಸರಮಾಲೆಯಾಗಿ ಜೀವನದ ಮೌಲ್ಯಗಳನ್ನು ಬಿಂಬಿಸಿ ಜನರು ಅವುಗಳನ್ನು ರೂಢಿಸಿಕೊಳ್ಳುವಂತೆ ಪ್ರೇರೇಪಿಸುವುದಾಗಿದೆ. ತುಂಬಾ ವೈವಿಧ್ಯಮಯವಾದ ಉತ್ತರ ಕರ್ನಾಟಕದ ಪ್ರದೇಶದಲ್ಲಿ ರಾಷ್ಟ್ರಕೂಟರಿಂದ ವಿಜಯನಗರ–ವಿಜಯನಗರೋತ್ತರ ಕಾಲದವರೆಗೆ ವೀರಗಲ್ಲುಗಳು ಕಂಡುಬಂದಿವೆ. ವೀರಗಲ್ಲುಗಳ ಸಮಗ್ರ ಅಧ್ಯಯನ ಈ ಮಹಾಪ್ರಬಂಧದ ಶೀರ್ಷಿಕೆ "ಉತ್ತರ ಕರ್ನಾಟಕದ ವೀರಗಲ್ಲುಗಳ ಸಾಂಸ್ಕೃತಿಕ ಅಧ್ಯಯನ". ಪ್ರಸ್ತುತ ಮಹಾಪ್ರಬಂಧವು ಒಂಬತ್ತು ಅಧ್ಯಾಯಗಳನ್ನು ಒಳಗೊಂಡಿದೆ. ಇತಿಹಾಸದ ಪ್ರಮುಖ ಆಕರಗಳಲ್ಲಿ ಒಂದಾದ ಶಾಸನಗಳಿಗೆ ಹೆಚ್ಚಿನ ಮಹತ್ವವನ್ನು ನೀಡಿ ನಮ್ಮ ವೀರ ಪರಂಪರೆಯ ಆಳವಾದ ಅಧ್ಯಯನಕ್ಕೆ ಸ್ಪಷ್ಟವಾದ ರೂಪ ಕೊಡುವ ಪ್ರಯತ್ನವನ್ನು ಈ ಮಹಾಪ್ರಬಂಧದಲ್ಲಿ ಮಾಡಲಾಗಿದೆ.

ಜನಸಾಮಾನ್ಯರ ಜೀವನ್ನು ತಮ್ಮ ಪಾಠ ಮತ್ತು ಶಿಲ್ಪದ ಮೂಲಕ ವ್ಯಕ್ತಮಾಡುವ ವೀರಗಲ್ಲುಗಳು ಇತಿಹಾಸ ನಿರ್ಮಾಣ ಕಾರ್ಯದಲ್ಲಿ ಅವಶ್ಯವಾದ ಮಹತ್ವದ ದಾಖಲೆಗಳಾಗಿವೆ. ಇತರ ಮೂಲಸಾಮಗ್ರಿಗಳಿಗಿಂತಲೂ ಅಧಿಕೃತವಾಗಿ, ಖಚಿತವಾಗಿ ಅವು ನಮ್ಮ ಜನ, ತಾವು ನಂಬಿದ ಜೀವನ ಮೌಲ್ಯಗಳಿಗೆ ತಮ್ಮ ಜೀವನವನ್ನು ಪಣತೊಟ್ಟು ಹೇಗೆ ಬದ್ಧರಾಗಿದ್ದರು ಎಂಬ ಅಂಶವನ್ನು ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ.

ಶಾಸನಾಧ್ಯಾಯಿಗಳು ಪಾಠವಿಲ್ಲದ ವೀರಗಲ್ಲುಗಳ ಮಹತ್ವವನ್ನು ಗಮನಿಸದಿರುವುದು ಶೋಚನೀಯ. ಅವುಗಳ ಮೇಲೆ ಶಾಸನವಿಲ್ಲದಿದ್ದರೂ ಅವು ತಮ್ಮ ಶಿಲ್ಪದ ಮೂಲಕ ನೀಡುವ ಮಾಹಿತಿಗಳನ್ನು

ಗಮನಿಸಬೇಕಾದುದು ಅವಶ್ಯವಾಗಿದೆ. ಇವು ಹಲವಾರು ಅಪೂರ್ವ ಸಂಗತಿಗಳನ್ನು ಕಲಾತ್ಮಕವಾಗಿ ಹೇಳುವಂಥವು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಈ ಮಹಾಪ್ರಬಂಧದಲ್ಲಿ ಹಲವಾರು ಕಡೆ ಪ್ರಸ್ತಾಪ ಮಾಡಲಾಗಿರುವ ರಾಯಚೂರು, ಬೆಟಗೇರಿ, ರೋಣ, ಗುಲಬರ್ಗಾ, ಹುಬ್ಬಳ್ಳಿ, ಕೊಪ್ಪಳ, ಬಳ್ಳಾರಿ, ಬೆಳಗಾವಿ ಮುಂತಾದ ಕಡೆಗಳಲ್ಲಿ ದೊರೆತಿರುವ ವೀರಗಲ್ಲುಗಳನ್ನು ಇಲ್ಲಿ ಸ್ಮರಿಸಬಹುದು. ವೀರಗಲ್ಲು ಶಾಸನಸಹಿತವಾಗಿರಲಿ, ಶಾಸನ ರಹಿತವಾಗಿರಲಿ ಅದು ಮಡಿದ ವೀರನ ಸ್ಮಾರಕವೇ. ಈ ಕಾರಣದಿಂದಾಗಿಯೇ ಅವು ಅಧ್ಯಯನಾರ್ಹ ಶಾಸನರಹಿತವಾದ ವೀರಗಲ್ಲುಗಳನ್ನು ಶಾಸನಸಹಿತವಾದ ವೀರಗಲ್ಲುಗಳಂತೆ ಖಚಿತವಾದ ವ್ಯಾಖ್ಯಾನ ಮಾಡುವುದು ಕೆಲವೊಮ್ಮೆ ಕಷ್ಟಸಾಧ್ಯವಾಗಬಹುದು. ಆದರೂ ಅವುಗಳನ್ನು ಶಾಸನಸಹಿತವಾದ ವೀರಗಲ್ಲುಗಳ ಶಿಲ್ಪದೊಡನೆ ಮತ್ತು ಪಾಠದೊಡನೆ ತುಲನೆಮಾಡಿ ಅವುಗಳ ಶೈಲಿಯ ಆಧಾರದ ಮೇಲೆ ಅವುಗಳ ಕಾಲವನ್ನೂ, ಶಿಲ್ಪದ ವಿವರಗಳ ಮೂಲಕ ಅವುಗಳು ಹೇಳುತ್ತಿರುವ ವಿಷಯವನ್ನೂ ಗ್ರಹಿಸುವುದು ಸಾಧ್ಯವಾಗುತ್ತದೆ.

ಶಿಲ್ಪದ ಶೈಲಿಯ ಆಧಾರದ ಮೇಲೆ ವಿಜಯನಗರದ ಕಾಲದ್ದೆಂದು ಖಚಿತವಾಗಿ ಊಹಿಸಬಹುದಾದ ವೀರಗಲ್ಲುಗಳು ರಾಯಚೂರು ಜಿಲ್ಲೆಯಲ್ಲಿ ವಿಪುಲವಾಗಿ ದೊರೆಯುತ್ತಿದ್ದು, ಅವು ನಮ್ಮ ನಾಡಿನಲ್ಲಿ ಸಿಡಿಮದ್ದು, ಬಂದೂಕಿನ ವೀರಗಲ್ಲುಗಳ ಬಳಕೆಗೆ ಅಂಶಗಳನ್ನು ಹೇಳುತ್ತವೆ.

ಉತ್ತರ ಕರ್ನಾಟಕದ ಪ್ರದೇಶದಲ್ಲಿ ಕಂಡುಬರುವ ವೀರಗಲ್ಲುಗಳ ವೀರನೊಬ್ಬ ಜೀವದ ಹಂಗು ತೊರೆದು ಸಮಾಜದ ಅಥವಾ ರಾಜ್ಯದ ರಕ್ಷಣೆಗಾಗಿ ಅಥವಾ ಇತರರ ನೆರವಿಗಾಗಿ ನಡೆಸಿದ ಹೋರಾಟವನ್ನು ದಾಖಲಿಸುವ ಈ ವೀರಗಲ್ಲುಗಳು ಕನ್ನಡ ಸಾಂಸ್ಕೃತಿಕ ಪರಂಪರೆಯಲ್ಲಿ ಹಾಸುಹೊಕ್ಕಾಗಿವೆ.

ಈ ಪ್ರದೇಶದಲ್ಲಿ ಹೋರಾಡಿಸಿರುವ ವೀರಗಲ್ಲುಗಳು ವೀರರು ತಮ್ಮ ಗ್ರಾಮಗಳಿಗೆ ಎದುರಾಗುತ್ತಿದ್ದ ಆಪತ್ತುಗಳಿಗೆ ಎದೆಯೊಡ್ಡಿ ತಮ್ಮ ಪ್ರಾಣವನ್ನೇ ನೀಡಿಯಾದರೂ ಎಲ್ಲ ರೀತಿಯಿಂದಲೂ ತಮ್ಮ ಗ್ರಾಮಗಳನ್ನು ರಕ್ಷಿಸಿಕೊಳ್ಳುವುದೇ ಅವರ ಧ್ಯೇಯವಾಗಿತ್ತು. ಈ ರೀತಿಯಾಗಿ ಕಂಡ ಹೋರಾಟಗಳನ್ನು ಹಲವು ಧ್ಯೇಯಗಳಲ್ಲಿ ಕಾಣಬಹುದು.

ಒಂದು ರೀತಿಯಲ್ಲಿ ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು ಅವಿಭಾಜ್ಯವೆಂದೇ ಭಾವಿಸಬೇಕಾಗುತ್ತದೆ. ಆದರೆ ಕೆಲವು ಮಾಸ್ತಿಕಲ್ಲುಗಳು ವೀರಗಲ್ಲುಗಳಿಂದ ಪ್ರತ್ಯೇಕವಾಗಿ ಉಳಿಯುತ್ತವೆ. ಮಹಾಸತಿಗಲ್ಲು, ಗಂಡ ಸತ್ತ ನಂತರ ಅವನ ಚಿತೆಯಲ್ಲಿ ಹಾರಿ ಪ್ರಾಣತ್ಯಾಗ ಮಾಡುವ ಸ್ತ್ರೀಯನ್ನು ಮಹಾಸತಿ ಅಥವಾ ಮಾಸ್ತಿ ಎಂದು ಕರೆಯುತ್ತಾರೆ. ಹೀಗೆ ಪ್ರಾಣತ್ಯಾಗ ಮಾಡಿದವರ ಸ್ಮರಣಾರ್ಥವಾಗಿ ನಿಲ್ಲಿಸುವ ಕಲ್ಲುಗಳೇ ಮಹಾಸತಿಕಲ್ಲುಗಳು.

**ತುರುಗೋಳ್** : ಶತ್ರು ಪಡೆಯು ದಾಳಿ ಇಟ್ಟು ತುರುಗಳನ್ನು ಅಪಹರಿಸುತ್ತಿತ್ತು. ಈ ತುರುಗಳ ಅಪಹರಣ ಸಂದರ್ಭದಲ್ಲಿ ರಕ್ಷಿಸಿ ಆ ಹೋರಾಟದಲ್ಲಿ ಅಸುನೀಗಿದಲ್ಲಿ ಈ ತುರುಗೋಳ್

ವೀರಗಲ್ಲುಗಳನ್ನು ಹಾಕಿಸುತ್ತಿದ್ದರು. ಈ ತುರುಗೋಳನ್ನು ಗೋ-ಗ್ರಹಣ ಎಂದು ಶಾಸನಗಳು ಉಲ್ಲೇಖಿಸಿದೆ.

**ಪೆಣ್ಬುಯ್ಯಲ್** : ಪೆಣ್ಬುಯ್ಯಲ್ ಎಂದರೆ ಹೆಣ್ಣಿನ ಆರ್ತಧ್ವನಿ. ಶತ್ರುಪಡೆಗಳು ದಾಳಿ ಇಡುತ್ತಿದ್ದ ಸಂದರ್ಭದಲ್ಲಿ ನೆರ ಗ್ರಾಮಗಳಿಗೂ ನುಗ್ಗಿ ಅಲ್ಲಿನ ಮಾನಿನಿಯರ ಮೇಲೆ ಅತ್ಯಾಚಾರವೆಸಗುತ್ತಿದ್ದರು. ಇಂತಹ ಉಡೆಉಜ್ಜ್ ಲ್ (ಹೆಣ್ಣನ್ನು ವಿವಸ್ತ್ರಗೊಳಿಸಲು ಮುಂದಾಗುತ್ತಿದ್ದ ಕೃತ್ಯ) ಈ ಕೃತ್ಯದ ಸಂದರ್ಭದಲ್ಲಿ ಗ್ರಾಮದ ವೀರರು ಶತ್ರುಗಳ ಮೇಲೆ ಎರಗಿ, ಅವರೊಂದಿಗೆ ಸೆಣಸಿ, ಆ ಮಾನಿನಿಯರನ್ನು ರಕ್ಷಿಸುವ ವೇಳೆ ಮರಣ ಹೊಂದಿದಲ್ಲಿ ಪೆಣ್ಬುಯ್ಯಲ್ ವೀರಗಲ್ಲುಗಳನ್ನು ಹಾಕಿಸುತ್ತಿದ್ದರು. ಆತ್ಮಬಲಿ ಕಲ್ಲುಗಳ ಒಡೆಯ ಉಪ್ಪಿನ ಋಣಕ್ಕಾಗಿ ಒಡೆಯನ ಆಜ್ಞೆಯಂತೆ ತಮ್ಮ ರಾಜ್ಯ ಸಂಸ್ಥಾನದ ರಕ್ಷಣೆಗಾಗಿ ಹೋರಾಡಿ, ದೇವರ ಹರಿಕೆಗಾಗಿ ಸ್ವರ್ಗ ಪ್ರಾಪ್ತಿಯಾಗುವುದೆಂಬ ಕಲ್ಪನೆಯಿಂದ ಆತ್ಮಬಲಿ ಎನ್ನುವ ಪದ್ಧತಿ ರೂಢಿಯಲ್ಲಿತ್ತು. ಇಂಥ ಪದ್ಧತಿಯನ್ನು ಅನುಸರಿಸಿದವರ ಸ್ಮರಣಾರ್ಥವಾಗಿ ನಿರ್ಮಿಸಿದ ಕಲ್ಲುಗಳೇ ಆತ್ಮಬಲಿ ಕಲ್ಲು.

ತಮ್ಮ ಕುಟುಂಬ ಸದಸ್ಯರು ಅಥವಾ ಆತ್ಮೀಯರು ಹೋರಾಟವೊಂದರಲ್ಲಿ ತೊಡಗುವ ಸಂದರ್ಭದಲ್ಲಿ ಅವರಿಗೆ ನೆರವಾಗುತ್ತಿದ್ದ. ವೀರರು ಗತಿಸಿದರೆ ಅಥವಾ ತಮ್ಮ ಆತ್ಮೀಯರು ಯುದ್ಧದಲ್ಲಿ ಮಡಿದ ಸಂದರ್ಭದಲ್ಲಿ ಅವರೂ ಸೆಣಸಾಡಿ ಹುತಾತ್ಮರಾದರೆ ಅಂಥವರ ನೆನಪಿಗಾಗಿ ವೀರಗಲ್ಲುಗಳನ್ನು ಪ್ರತಿಷ್ಠಾಪಿಸುತ್ತಿದ್ದರು.

ಒಟ್ಟಾರೆ ಈ ಪ್ರದೇಶದ ವೀರಗಲ್ಲುಗಳು ಹೋರಾಟದ ಹಿನ್ನೆಲೆಯಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡವು. ಯುದ್ಧದಲ್ಲಿ ಗೆದ್ದರೆ ಸಂಪತ್ತು, ಸತ್ತರೆ ಸುರಾಂಗನೆಯರೊಂದಿಗೆ ಸ್ವರ್ಗ ಎಂಬ ನಂಬಿಕೆ ಸಮಾಜದಲ್ಲಿ ಬಲವಾಗಿತ್ತು. ಇದೇ ಮೊದಲಾದ ಉದ್ದೇಶಗಳಿಗೆ ಆಗಿಂದಾಗ್ಗೆ ಸಂಭವಿಸುತ್ತಿದ್ದ ಹೋರಾಟಗಳಲ್ಲಿ ಹುತಾತ್ಮರಾಗುತ್ತಿದ್ದ ವೀರರ ಸ್ಮರಣೆಗಾಗಿ ರಾಜ್ಯದ ಆಣತಿಯಂತೆ ವೀರರ ಸ್ಮರಣಾರ್ಥ ವೀರಗಲ್ಲುಗಳನ್ನು ನೆಡಿಸಲಾಗುತ್ತಿತ್ತು.

ಕೊನೆಯದಾಗಿ ಈ ಪ್ರದೇಶಲ್ಲಿ ದೊರೆತ ಹಲವಾರು ವೀರಗಲ್ಲುಗಳು ದೊರೆತಿದ್ದರಿಂದ ಉತ್ತರ ಕರ್ನಾಟಕದ ಪ್ರದೇಶದ ಶೌರ್ಯ, ಸಾಹಸ, ವೀರತ್ವ, ಶೌರ್ಯಪ್ರಧಾನ, ಸಮಾಜ ವ್ಯವಸ್ಥೆ, ಸಾಮಾಜಿಕ ಕರ್ತವ್ಯ, ನಿಷ್ಠೆ, ಅನಿವಾರ್ಯ ಮತ್ತು ಅನಿಶ್ಚಿತತೆಯ ಹೋರಾಟ ಮತ್ತು ಸರ್ವೇಸಾಮಾನ್ಯ ಜನತೆ ಎದುರಿಸಿದ ಅಸುರಕ್ಷತೆಯನ್ನು ಅವು ಸಾರಿ ಹೇಳುವಂತಿವೆ.

ಒಟ್ಟಿನಲ್ಲಿ ಉತ್ತರ ಕರ್ನಾಟಕದ ವೀರಗಲ್ಲುಗಳ ಸಾಂಸ್ಕೃತಿಕ ಅಧ್ಯಯನ ಎಂಬ ಮಹಾಪ್ರಬಂಧ ಈ ಪ್ರದೇಶದಲ್ಲಿನ ವೀರಗಲ್ಲುಗಳ ಸಮಗ್ರ ಅಧ್ಯಯನವಾಗಿದ್ದರೂ, ಈ ಭಾಗದಲ್ಲಿ ಇನ್ನೂ ಸಂಶೋಧನೆಗೆ ಅವಕಾಶವಿದೆ. ಉತ್ತರ ಕರ್ನಾಟಕದ ಪ್ರದೇಶದ ಬೀದರ್, ಬಿಜಾಪುರ, ಬೆಳಗಾವಿ, ಬಾಗಲಕೋಟೆ ಮುಂತಾದ ಊರುಗಳಲ್ಲಿನ ವೀರಗಲ್ಲುಗಳ ಸಂಶೋಧನಾ ಕಾರ್ಯ ನಡೆಯಬೇಕಿದೆ.

ಕೇವಲ ವೀರಗಲ್ಲುಗಳನ್ನು ವಿಷಯವಾರು ವಿಂಗಡಿಸಿ ಅಂದರೆ ಸಾಮಾಜಿಕ, ರಾಜಕೀಯ, ಆರ್ಥಿಕ ಹಿನ್ನೆಲೆಯಲ್ಲಿ ಸಮಗ್ರ ಅಧ್ಯಯನ ಮಾಡಲು ಮುಂದಿನ ಸಂಶೋಧಕರಿಗೆ ಅವಕಾಶವಿದೆ.

ವೀರಗಲ್ಲುಗಳನ್ನು ಸಂಗ್ರಹಿಸಿದ ಮಾತ್ರಕ್ಕೆ ಅಧ್ಯಯನವಾದಂತೆ ಅಲ್ಲಿ ಪ್ರತಿಯೊಂದು ಪ್ರದೇಶದಲ್ಲಿ ವೀರಗಲ್ಲುಗಳ ವಿವರವಾದ ಸಾಂಸ್ಕೃತಿಕ ಅಧ್ಯಯನವಾಗಬೇಕು. ಎಲ್ಲಕ್ಕೂ ಹೆಚ್ಚಾಗಿ ಈ ಪ್ರದೇಶದಲ್ಲಿ ವೀರಗಲ್ಲುಗಳ ರಕ್ಷಣೆ ಕಾರ್ಯ ಆಗಬೇಕಿದೆ. ಹಳ್ಳಿಗಳಲ್ಲಿ ವೀರಗಲ್ಲುಗಳ ಸ್ಥಿತಿಯಂತೂ ಶೋಚನೀಯವಾಗಿದೆ. ಎಷ್ಟೋ ವೀರಗಲ್ಲುಗಳು ಕಸದ ಗುಂಡಿಯೊಳಗೆ, ಹಾಲೂಬಾವಿಯೊಳಗೆ ಇದ್ದರೆ ಇನ್ನೂ ಕೆಲವು ವೀರಗಲ್ಲುಗಳು ಊರ ಜನರ ಮನೆಯ ಮುಂದಿನ ಬಟ್ಟೆ ಒಗೆಯುವ ಕಲ್ಲುಗಳಾಗಿವೆ. ಒಟ್ಟಿನಲ್ಲಿ ವೀರಗಲ್ಲುಗಳನ್ನು ಗುರುತಿಸಿ ಅಧ್ಯಯನ ಮಾಡುವುದರ ಜೊತೆಗೆ ಅವುಗಳ ರಕ್ಷಣೆ ಕಾರ್ಯ ನಡೆಯಬೇಕು. ಎಲ್ಲಕ್ಕೂ ಹೆಚ್ಚಾಗಿ ಪ್ರತಿಯೊಂದು ಹಳ್ಳಿಯಲ್ಲಿನ ವೀರಗಲ್ಲುಗಳ ಬಗ್ಗೆ ಕನಿಷ್ಟ ಜ್ಞಾನವನ್ನಾದರೂ ಹಳ್ಳಿಗರಿಗೆ ಇಂದು ಸಂಶೋಧಕರು ತಿಳಿಸಿಕೊಡಬೇಕು. ಅಂದಾಗ ಮುಂದಿನ ಪೀಳಿಗೆಗೆ ನಮ್ಮ ಸಂಸ್ಕೃತಿ ಮತ್ತು ಪರಂಪರೆಯ ಅರಿವಾದಿತು. ಇಲ್ಲವಾದಲ್ಲಿ ನಮ್ಮ ಮುಂದಿನ ಪೀಳಿಗೆ ನಮ್ಮನ್ನು ಶಪಿಸಬಹುದು. ಸರಕಾರವಾಗಲಿ, ಪುರಾತತ್ವ ಇಲಾಖೆಯವರಾಗಲಿ ಈ ಕಾರ್ಯವನ್ನು ಪ್ರಾಮಾಣಿಕವಾಗಿ ಮಾಡಬೇಕು. ಇಲ್ಲವೆ ಸರಕಾರ ಈ ಕೆಲಸವನ್ನು ವಿಶ್ವವಿದ್ಯಾಲಯಗಳಾಗಲಿ ಅಥವಾ ಖಾಸಗಿಯವರಾಗಲಿ ವಹಿಸಿದರೆ ವೀರಗಲ್ಲುಗಳನ್ನು ರಕ್ಷಿಸಬಹುದು.

# ಅಧ್ಯಯನದ ಫಲಿತಗಳು

ಉತ್ತರ ಕರ್ನಾಟಕ ಪ್ರದೇಶದಲ್ಲಿ ದೊರೆತ ಒಟ್ಟು ವೀರಗಲ್ಲುಗಳ ಸಂಖ್ಯೆ ೫೮೫. ಇದರಲ್ಲಿ ಪ್ರಕಟವಾಗಿದ್ದು ೨೫೯, ಅಪ್ರಕಟಿತವಾಗಿದ್ದು ೩೨೬ ಅಪ್ರಕಟಿತವಾದ ೩೨೬ ಶಾಸನರಹಿತವಾದ ಈ ವೀರಗಲ್ಲುಗಳನ್ನು ನನ್ನ ಮಹಾಪ್ರಬಂಧದಲ್ಲಿ ಹೊಸದಾಗಿ ಗುರುತಿಸಲಾಗಿದೆ.

ರಾಷ್ಟ್ರಕೂಟರ ಕಾಲದ ಪ್ರಕಟವಾದ ಸುಮಾರು ೩೨ ಶಾಸನೋಕ್ತ ವೀರಗಲ್ಲುಗಳನ್ನು ಮತ್ತು ೩೪ ಅಪ್ರಕಟಿತ ಶಾಸನ ರಹಿತವಾದ ಈ ವೀರಗಲ್ಲುಗಳನ್ನು ಅಧ್ಯಯನದಲ್ಲಿ ಹೊಸದಾಗಿ ವಿಶ್ಲೇಷಿಸಲಾಗಿದೆ.

* ರಾಷ್ಟ್ರಕೂಟರ ಕಾಲದ ಬೇಟೆಗೆರೆಯ ಮಲ್ಲರಾಯನ ಕಟ್ಟೆಯಲ್ಲಿ ದೊರೆತ ೧೬ ವೀರಗಲ್ಲು ಶಿಲ್ಪಗಳು ಅಧ್ಯಯನ ವೈವಿಧ್ಯತೆಗೆ ಸಾಕ್ಷಿಯಾಗಿವೆ. ಈ ವೀರಗಲ್ಲುಗಳಲ್ಲಿನ ಕೆಲವು ಅಂಶಗಳು ವಿಶೇಷ ಗಮನವನ್ನು ಸೆಳೆಯುತ್ತವೆ. ಯುದ್ಧ ದೃಶ್ಯದ ಪಟ್ಟಿಕೆಯಲ್ಲಿ ಮತ್ತು ವೀರ ವೈರಿಯನ್ನು ಮುಖ್ಯವಾಗಿ ಗುರುತಿಸಲು ಅವರ ಚಿತ್ರಗಳನ್ನು ದೊಡ್ಡದಾಗಿ ತೋರಿಸಲಾಗಿದೆ. ವೀರನು ಡೊಂಕು ಕತ್ತಿಯನ್ನು ಆಯತಾಕಾರದ ಗುರಾಣಿಯನ್ನು ಹಿಡಿದು ಕುದುರೆ ಸವಾರಿ ಮಾಡುವ ವೈರಿಯ ವಿರುದ್ಧ ನಿಂತಿದ್ದಾನೆ. ಈರ್ವರ ಬದಿಗಳಲ್ಲಿ ಮೂರು ಸಾಲುಗಳಲ್ಲಿ ಮತ್ತು ಮೇಲ್ಗಡೆ ಅವರಿಬ್ಬರು ಸೈನ್ಯಪಡೆಯವರನ್ನು ತೋರಿಸಲಾಗಿದೆ. ಈ ವೀರ ಸೈನ್ಯ ಪಡೆಯವರು ಕೈಗಳಲ್ಲಿ ಬಾಗಿದ ಕತ್ತಿಗಳನ್ನು ವೈರಿ ಪಡೆಯವರು ಬಿಲ್ಲುಗಳನ್ನು ಹಿಡಿದು ಹೋರಾಟದಲ್ಲಿ ಧುಮುಕುತ್ತಿರುವುದು. ವೀರನ ಗುರಾಣಿಗೆ ಬಾಣಗಳು ನೆಟ್ಟಿವೆ. ವೈರಿಯು ಕುದುರೆಯಿಂದ ಕೆಳಗಡೆಗೆ ವೀರನ ಪಾದಕ್ಕೆ ಬಿದ್ದು ನಮಸ್ಕರಿಸುತ್ತಿರುವನು. ಕುದುರೆಯ ಹಿಂದೆ ಒಬ್ಬ ಸೇವಕ ಛತ್ರಿಯನ್ನು ಎತ್ತಿ ಹಿಡಿದಿದ್ದಾನೆ. ಈರ್ವರ ಪಡೆಗಳ ಕೆಲವು ಹೋರಾಡುವುದನ್ನು ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ಮಡಿದ ವೀರನನ್ನು ಸ್ವರ್ಗಲೋಕಕ್ಕೆ ಅಪ್ಸರೆಯರು ಹಾರುತ್ತಾ ಒಯ್ಯುತ್ತಿರುವರು. ಅವರ ಬದಿಗಳಲ್ಲಿ ಆತನನ್ನು ಸ್ವಾಗತಿಸಲು ಅಪ್ಸರೆಯರು ಹಾರ ಹಿಡಿದಿರುವುದು. ಕೆಲವರು ಬಲಗಡೆ ಮಾತ್ರ ತುತ್ತೂರಿಯನ್ನು ಊದುತ್ತಿರುವರು. ಈ ಎಲ್ಲರ ನಡುವೆಯೂ ಮೋಡಗಳನ್ನು ತೋರಿಸಿರುವುದು ಗಮನೀಯ. ಏಕೆಂದರೆ ಇಲ್ಲಿನ ಈ ಕಾಲದ ವೀರಗಲ್ಲುಗಳಲ್ಲಿ ಇಂತಹ ದೃಶ್ಯಗಳಲ್ಲಿ ಮೋಡಗಳನ್ನು ವೀರ ಮತ್ತು ಅಪ್ಸರೆಯರು ಸುತ್ತ ಸಾಮಾನ್ಯವಾಗಿ ಚಿತ್ರಿಸಿರುತ್ತದೆ. ಮೂರನೆಯ ಹಂತದಲ್ಲೂ ವೀರನು ಸ್ವರ್ಗದಲ್ಲಿ ಕುಳಿತಿದ್ದಾನೆ. ವೀರನು ಸಿಂಹಾಸನದಲ್ಲಿ ಸವ್ಯಲಲಿತಾಸನದಲ್ಲಿ ಕುಳಿತಿದ್ದಾನೆ. ಆತ ಒರಗಿಕೊಂಡ ಆಸನಕ್ಕೆ ಎರಡು ಅರೆಗಂಬಗಳ ಮೇಲೆ ಮಕರ ಪಟ್ಟಿಕೆಗಳಿವೆ. ಕುತೂಹಲವೆಂದರೆ ಆತನ ಬದಿಗಳಲ್ಲಿ ವಾದ್ಯ ಮೇಳದವರಿದ್ದಾರೆ. ತಾಳಹಾಕುವವರು, ಕೊಳಲು ಊದುವವರೂ, ಮೃದಂಗ ಭರಿಸುತ್ತಾ ನೃತ್ಯ ಮಾಡುವವರನ್ನು ಈ ವೀರಗಲ್ಲು ಶಿಲ್ಪದಲ್ಲಿ ಕಾಣಬಹುದು.

* ದೊರೆತ ರಾಷ್ಟ್ರಕೂಟರ ಕಾಲದ ಶಾಸನೋಕ್ತ ವೀರಗಲ್ಲುಗಳಲ್ಲಿ ಹುಬ್ಬಳ್ಳಿ ಗೋಕುಲದ ಶಿವಾನಂದ ಕಲ್ಯಾಣ ಮಂಟಪದಲ್ಲಿರುವ ಈ ವೀರಗಲ್ಲು ಬಹಳ ಮಹತ್ವದಾಗಿದೆ. ವೀರಗಲ್ಲು ಕಪ್ಪುಶಿಲೆಯಿಂದ ರಚಿತವಾಗಿದ್ದು, ಅದರ ಮೇಲಿನ ಅರ್ಧಭಾಗದಲ್ಲಿ ವೀರನ ಚಿತ್ರವಿದೆ. ಕೆಳಗಿನ ಅರ್ಧಭಾಗದಲ್ಲಿ ನಾಲ್ಕು ಸಾಲಿನ ಶಾಸನವಿದೆ. ಅದು ಕನ್ನಡ ಭಾಷೆಯ ಲಿಪಿಯಲ್ಲಿದೆ. ಈ ಶಾಸನದ ಕೆಲವು ಅಕ್ಷರಗಳು ತ್ರುಟಿತವಾಗಿವೆ ಮತ್ತು ಅದರ ಮೇಲ್ಭಾಗ ಒಡೆದು ಹೋಗಿದೆ. ಈ ವೀರಗಲ್ಲಿನ ಮೇಲಿನ ಅರ್ಧಭಾಗದಲ್ಲಿರುವ ವೀರನು ತನ್ನ ಬಲಗೈಯಲ್ಲಿ ಖಡ್ಗ ಎಡಗೈಯಲ್ಲಿ ಅರ್ಧವೃತ್ತಾಕಾರದ ಗುರಾಣಿಯನ್ನು ಮುಂದಕ್ಕೆ ಚಾಚಿ ಹಿಡಿದಿದ್ದು, ಅದಕ್ಕೆ ಅನೇಕ ಬಾಣಗಳು ತಾಗಿದ್ದು, ಅವು ಸಮಾನಾಂತರಲ್ಲಿರುವುದನ್ನು ಚಿತ್ರಿಸಲಾಗಿದೆ. ಕೆಲವು ಬಾಣಗಳು ಅವನ ಎದೆಯಲ್ಲಿ ನೆಟ್ಟಿವೆ. ಹೀಗಾಗಿ ಶಿಲ್ಪದ ದೃಷ್ಟಿಯಿಂದ ಶಾಸನವು ವಿಶಿಷ್ಟವಾಗಿದೆ. ಈ ಶಾಸನದಲ್ಲಿ ಉಣ್ಕಲ್ಲಿನ ವೀರನೊಬ್ಬ ಕಳ್ಳರೊಂದಿಗೆ ಹೋರಾಡುತ್ತಾ ಮರಣವನ್ನಪ್ಪಿದ ನಿಮಿತ್ತ ಅವನ ಸ್ಮರಣಾರ್ಥವಾಗಿ ಅವನ ಸೂಳೆಯೊಬ್ಬಳು ಈ ವೀರಗಲ್ಲು ನೆಡಿಸಿದಳೆಂದು ಹೇಳಲಾಗಿದೆ. ಆದರೆ ಸೂಳೆಯರು ವೀರಗಲ್ಲು ನಿಲ್ಲಿಸಿದ ಉದಾಹರಣೆಗಳಿಲ್ಲ. ಉಣ್ಕಲ್ಲ ಗ್ರಾಮದ ಪ್ರಾಚೀನತೆಯು ಈ ಶಾಸನದಿಂದ ತಿಳಿದುಬರುತ್ತದೆ.

* ಚಿಂಚೋಳಿ ತಾಲೂಕಿನ ಗೊಟ್ಟಂಗೊಟ್ಟಿ ಗ್ರಾಮದ ರಾಷ್ಟ್ರಕೂಟರ ಕಾಲದ ಒಂಭತ್ತು ವೀರಗಲ್ಲುಗಳು ಕಂಡುಬಂದಿದ್ದು, ಅದರಲ್ಲಿ ಒಂದು ವೀರಗಲ್ಲು ಎರಡು ಸ್ತರದಲ್ಲಿದೆ. ಈ ಶಿಲ್ಪದ ವಿಶೇಷತೆ ವೀರ ಮತ್ತು ಶತ್ರು ಇಬ್ಬರನ್ನು ಸಮಾನರಾಗಿ ತೋರಿಸಲ್ಪಟ್ಟಿದೆ. ವೀರ ಖಡ್ಗದಿಂದ ಶತ್ರುವನ್ನು ಇರಿದಂತೆ ಶಿಲ್ಪದಲ್ಲಿ ಮೂಡಿಬಂದಿದೆ. ಶತ್ರುವಿನ ಎಡಗೈಯಲ್ಲಿ ಬಿಲ್ಲನ್ನು ಹಿಡಿದ ಶಿಲ್ಪ ಅಲಂಕಾರಿಕವಾಗಿದೆ. ಕೊರಳಿನಲ್ಲಿ ಕಂಠಹಾರ ಧರಿಸಿರುವಂತೆ ಅವನ ಕೆಳಗೆ ಒಬ್ಬ ಶತ್ರು ನೆಲಕ್ಕೆ ಉರುಳಿದಂತೆ ಚಿತ್ರಿಸಲಾಗಿದೆ. ಎರಡನೆಯ ಸ್ತರದಲ್ಲಿ ಸುರಾಂಗನೆಯರು ಚಾಮರ ಬೀಸುತ್ತಿದ್ದಾರೆ. ವೀರನನ್ನು ವಿಮಾನದಲ್ಲಿ ದೇವಲೋಕಕ್ಕೆ ಕರೆದೊಯ್ಯುತ್ತಿರುವಂತೆ ಬಿಂಬಿಸಲಾಗಿದೆ. ಈ ವೀರಗಲ್ಲು ಶಿಲ್ಪದಲ್ಲಿ ವೀರನು ನಿಂತ ಭಂಗಿಯಲ್ಲಿ ಹೋರಾಡುತ್ತಿರುವ ದೃಶ್ಯವನ್ನು ಕಾಣಬಹುದಾಗಿದೆ.

* ಈ ಪ್ರದೇಶದಲ್ಲಿ ದೊರೆತ ಕಲ್ಯಾಣ ಚಾಲುಕ್ಯರ ಸುಮಾರು ೮೦ ಶಾಸನ ರಹಿತವಾದ ವೀರಗಲ್ಲುಗಳನ್ನು ಹೊಸದಾಗಿ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ.

* ಗುಲ್ಬರ್ಗಾ ತಾಲೂಕಿನ ಹರಸೂರು ಗ್ರಾಮದ ಬೋರಲಿಂಗೇಶ್ವರ ದೇವಾಲಯದ ಅವರಣದಲ್ಲಿನ ಕ್ರಿ.ಶ. ೧೨ನೆಯ ಶತಮಾನದ ವೀರಗಲ್ಲು ಎರಡು ಹಂತದಲ್ಲಿದೆ. ವೀರನು ಶವಗಳ ಮೇಲೆ ನಿಂತು ಹೋರಾಡುತ್ತಿದ್ದಾನೆ. ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ವೈರಿಯ ಬಲಗೈಯಲ್ಲಿ ಬಾಣ, ಎಡಗೈಯಲ್ಲಿ ಧನಸ್ಸು ಇದೆ. ಇಲ್ಲಿ ವೀರನು ಕತ್ತಿಯಿಂದ ವೈರಿಯ ಹೊಟ್ಟೆಗೆ ಇರಿದಿದ್ದಾನೆ. ಮೇಲಿನ ಪಟ್ಟಿಕೆಯಲ್ಲಿ ಅಪ್ಸರೆಯರಿಬ್ಬರು ವೀರನನ್ನು ಸ್ವರ್ಗಲೋಕಕ್ಕೆ

ಕರೆದುಕೊಂಡು ಹೋಗುವ ದೃಶ್ಯವಿದೆ. (ಹರಸೂರಿನ ಅಪ್ರಕಟಿತ ವೀರಗಲ್ಲು) ಹರಸೂರು ಗ್ರಾಮದ ಬೋರಲಿಂಗೇಶ್ವರ ದೇವಾಲಯದ ಅವರಣದಲ್ಲಿನ ಕಲ್ಯಾಣ ಚಾಲುಕ್ಯರ ಕಾಲದ ವೀರಗಲ್ಲು ಮೂರು ಹಂತದಲ್ಲಿದೆ. ಈ ವೀರಗಲ್ಲಿನಲ್ಲಿ ವೀರನು ಯುದ್ಧನಿರತನಾಗಿದ್ದು, ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ವೈರಿಯು ಸಹ ಬಲಗೈಯಲ್ಲಿ ಕತ್ತಿ, ಎಡಗೈಯಲ್ಲಿ ಗುರಾಣಿಯನ್ನು ಹಿಡಿದಿದ್ದಾನೆ. ವೀರನು ಕತ್ತಿಯಿಂದ ವೈರಿಯ ಹೊಟ್ಟೆಗೆ ಇರಿದಿದ್ದಾನೆ. ಇರಿತದ ನೋವು ತಾಳಲಾರದೆ ವೈರಿಯು ತನ್ನ ದೇಹದ ಮೇಲ್ಭಾಗ ಹಾಗೂ ಕೈಗಳನ್ನು ಸಮೇತವಾಗಿ ಎಡಭಾಗಕ್ಕೆ ವಾಲಿಸಿಕೊಂಡಿದ್ದಾನೆ. ತನ್ನ ಮೊಣಕಾಲನ್ನು ನೆಲಕ್ಕೆ ಊರಿದ್ದಾನೆ, ಮೇಲಿನ ಪಟ್ಟಿಕೆಯಲ್ಲಿ ಅಪ್ಸರೆಯರಿಬ್ಬರು ವೀರನನ್ನು ಸ್ವರ್ಗಲೋಕಕ್ಕೆ ಕರೆದುಕೊಡು ಹೋಗುವ ದೃಶ್ಯವಿದೆ. ವೀರನು ಲಿಂಗದ ಮುಂದೆ ಪದ್ಮಾಸನದಲ್ಲಿ ಕುಳಿತು ಧ್ಯಾನಮಗ್ನನಾಗಿದ್ದಾನೆ.

* ಹೊಯ್ಸಳರ ಕಾಲದ ಶಾಸನ ರಹಿತವಾದ ಐದು ವೀರಗಲ್ಲುಗಳನ್ನು ಅಧ್ಯಯನದಲ್ಲಿ ಹೊಸದಾಗಿ ವಿಶ್ಲೇಷಿಸಲಾಗಿದೆ.

* ವಿಜಯನಗರ ಕಾಲದ ಶಾಸನ ರಹಿತವಾದ ಸುಮಾರು ೧೦೫ ವೀರಗಲ್ಲುಗಳನ್ನು ಅಧ್ಯಯನದ ಮೂಲಕ ಹೊಸದಾಗಿ ಬೆಳಕಿಗೆ ತರಲಾಯಿತು.

* ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ ತಾಲೂಕಿನ ಕೋಳೂರ ಗ್ರಾಮದ ಹೊರವಲಯದಲ್ಲಿ ಒಂದು ಅಪರೂಪದ ವೀರಗಲ್ಲು ಪತ್ತೆಯಾಗಿದ್ದು, ವಿಜಯನಗರ ಸಾಮ್ರಾಜ್ಯದ ಅವನತಿಗೆ ಕಾರಣವಾದ (ರಕ್ಕಸ ತಂಗಡಗಿ ಯುದ್ಧ) ಅತ್ಯಂತ ಮಹತ್ವದ ಈ ಯುದ್ಧ ಕೋಳೂರಲ್ಲಿ ನಡೆದಿದೆ ಎಂಬುದಕ್ಕೆ ಈ ವೀರಗಲ್ಲಿನ ಮೇಲೆ ರಾಮರಾಯ ಎಂದು ಲಿಖಿತ ಶಾಸನವಿರುವುದರಿಂದ ಕೋಳೂರಲ್ಲಿ ಯುದ್ಧ ಆಗಿರಬಹುದೆಂದು ತಿಳಿಯಬಹುದಾಗಿದೆ.

* ವಿಜಯನಗರ ಕಾಲದ ಬಂದೂಕಿನ ವೀರಗಲ್ಲುಗಳು ಅಧ್ಯಯನಕ್ಕೆ ವಿಶೇಷವಾಗಿವೆ.

* ಈ ಪ್ರದೇಶದಲ್ಲಿ ದೊರೆತ ಶಾಸನರಹಿತವಾದ ೨೫ ಮಹಾಸತಿಗಲ್ಲು ಮತ್ತು ೩೦ ವೀರ ಮಹಾಸತಿಗಲ್ಲಗಳನ್ನು ಅಧ್ಯಯನ ಮೂಲಕ ಹೊಸದಾಗಿ ಬೆಳಕಿಗೆ ತರಲಾಯಿತು.

* ಈ ವೀರ ಮಹಾಸತಿಗಲ್ಲುಗಳು ಚಿಂಚೋಳಿ, ಕುಡಿತಿನಿ, ಕಲಕೇರಿ, ಕೂಡ್ಲಿಗಿ, ನಾಗರಹಳ್ಳಿ, ಹರಸೂರು, ಪಾಳಾ, ಅಂಕಮ್ಮನಾಳು, ಬೊಮ್ಮಗಟ್ಟದ, ಮೆಟ್ರಿಕಿ, ಚೋರನೂರು ಮುಂತಾದ ಗ್ರಾಮಗಳಲ್ಲಿ ವೀರ ಮಹಾಸತಿಗಲ್ಲುಗಳ ವಿಶೇಷತೆಯನ್ನು ಕಾಣಬಹುದು.

* ಗುಲಬರ್ಗಾ ತಾಲೂಕಿನ ಪಾಳಾ ಗ್ರಾಮದ ಹಜರತ್ ಗಜಮುಲ್ಲಾ ಹುಸೇನಿದರ್ಗಾ ಬಳಿ ಇರುವ ವಿಜಯನಗರ ಕಾಲದ ಈ ಮಾಸ್ತಿಗಲ್ಲು ಅತ್ಯಂತ ವಿಶಿಷ್ಟವಾದ ಮಾಸ್ತಿಗಲ್ಲಾಗಿದೆ. ಈ ಮಾಸ್ತಿಗಲ್ಲಿನ ಕೆಳಭಾಗದಲ್ಲಿ ಚಿತೆಯಲ್ಲಿ ಹಾರುತ್ತಿರುವ ಮಹಿಳೆಯ ದೃಶ್ಯವಿದೆ. ಅದರ ಪಕ್ಕದಲ್ಲಿ ಚಿತ್ರವೂ ಸಹ ಕಂಡುಬರುತ್ತದೆ. ಮಹಾಸತಿಯ ಎರಡು ಕೈಗಳಿಗೆ ತೋಳುಬಂಧಿ ಮತ್ತು ಬಳೆಗಳ

ಧರಿಸಿರುವುದನ್ನು ಸಹ ಕಾಣುತ್ತೇವೆ. ಕೈ ಚಿತ್ರದ ಎದುರುಗಡೆ ಒಂದು ತಂಬಿಗೆಯ ಮೇಲೆ ತೆಂಗಿನಕಾಯಿ ಇದೆ. ಈ ಮಾಸ್ತಿಗಲ್ಲು ಕೊನೆಯಲ್ಲಿ ದಂಪತಿಯರು ಕೈಜೋಡಿಸಿ ಶಿವಲಿಂಗವನ್ನು ಪ್ರಾರ್ಥಿಸುವಂಥ ದೃಶ್ಯವಿದೆ. ತನ್ನ ಪತಿಯ ಮರಣದೊಂದಿಗೆ ಅವನ ಪತ್ನಿಯೂ ಮರಣ ಹೊಂದಿದರೆ ಅವರಿಬ್ಬರರೂ ಸ್ವರ್ಗವನ್ನು ಪಡೆಯುತ್ತಾರೆ ಎಂಬ ನಂಬಿಕೆಯಿಂದ ಸ್ತ್ರೀಯು ತನ್ನ ಗಂಡನ ಚಿತೆಯಲ್ಲಿ ಹಾರಿ ಪ್ರಾಣಾರ್ಪಣೆ ಮಾಡುತ್ತಿದ್ದಾಳೆ. ಈ ವೀರಗಲ್ಲಿನ ಶಿಲ್ಪದಲ್ಲಿ ಕೊನೆಯಲ್ಲಿ ಸೂರ್ಯ-ಚಂದ್ರರ ಕೆತ್ತನೆ ಇದೆ.

* ಸಂಡೂರು ತಾಲೂಕಿನ ಅಂಕಮ್ಮನಾಳು ಗ್ರಾಮದ ಹೊರಗೆ ಪಶ್ಚಿಮ ದಿಕ್ಕಿಗೆ ಇರುವ ವೀರ ಮಾಸ್ತಿಗಲ್ಲಿನ ಮಂಟಪವು ಪೂರ್ವಾಭಿಮುಖವಾಗಿದೆ. ಐದುವರೆ ಅಡಿ ಎತ್ತರದ ಮಂಟಪದಲ್ಲಿ ಈ ವೀರಮಾಸ್ತಿಗಲ್ಲನ್ನು ನಿಲ್ಲಿಸಲಾಗಿದ್ದು, ಮೂರುವರೆ ಅಡಿ ಎತ್ತರವಿದ್ದು, ಮಾಸ್ತಿಗಲ್ಲಿನಲ್ಲಿ ವೀರನು ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಕಿರುಗತ್ತಿಯನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡಿದ್ದಾನೆ. ತಲೆಗೆ ವೀರ ಮುಡಿಯನ್ನು ಕಟ್ಟಿಕೊಂಡಿದ್ದು, ಹಣೆಗೆ ಬಟ್ಟೆಯನ್ನು ಕಟ್ಟಿಕೊಂಡಿದ್ದಾನೆ. ಕಿವಿಯಲ್ಲಿ ಕರ್ಣಾಭರಣ, ಕೊರಳಾಭರಣ, ತೋಳುಬಂಧಿಯನ್ನು ಧರಿಸಿದ್ದಾನೆ. ಇಲ್ಲಿ ಮಹಾಸತಿ, ಕೈಬಳೆ, ಕಡಗ, ಸೊಂಟಕ್ಕೆ ಗೆಜ್ಜೆಯ ಡಾಬು, ಕಾಲುಂಗುರ, ಅಲಂಕಾರಿಕ ಉಡುಪು ಧರಿಸಿದ್ದು ಕೈಮುಗಿದು ನಿಂತಿದ್ದಾಳೆ. ಈ ಶಿಲ್ಪದ ಮೇಲೆ ಸೂರ್ಯ-ಚಂದ್ರರ ಶಿಲ್ಪಗಳಿವೆ. ಈ ವೀರಮಾಸ್ತಿಗಲ್ಲನ್ನು ಸ್ಥಳೀಯರು ಮಂಡಕ್ಕಿ, ಬಾಳೆಹಣ್ಣು, ಉತ್ತತ್ತಿ, ಊದಿನಕಡ್ಡಿ ದೀಪದಿಂದ ಪೂಜೆ ಮಾಡಿದರೆ ಮಕ್ಕಳಿಗೆ ಬಂದ ಕಾಯಿಲೆ ವಾಸಿಯಾಗುತ್ತದೆ ಎಂಬ ನಂಬಿಕೆಯಿದ್ದು, ಇಂದಿಗೂ ವೀರಮಾಸ್ತಿಗಲ್ಲನ್ನು ಪೂಜಿಸುತ್ತಾರೆ.

* ಸಂಡೂರು ತಾಲೂಕಿನ ಚೋರನೂರು ಗ್ರಾಮದ ಒಳಗೆ ಇರುವ ವೀರಮಾಸ್ತಿಗಲ್ಲಿನ ಶಿಲ್ಪದಲ್ಲಿ ವೀರನು ಕುದುರೆಯ ಮೇಲೆ ಕುಳಿತಿರುವನು. ಎಡಗೈಯಿಂದ ಕುದುರೆಯ ಲಗಾಮನ್ನು ಹಿಡಿದಿದ್ದಾನೆ. ಎತ್ತಿದ ಬಲಗೈಯನ್ನು ಖಡ್ಗವನ್ನು ಹಿಡಿದಿದ್ದಾನೆ. ಈತನ ಮುಂದೆ ಇರುವ ಮತ್ತೊಬ್ಬ ವೀರನು ಬಲಗೈಯಲ್ಲಿ ದಂಡವನ್ನು ಹಿಡಿದಿದ್ದಾನೆ. ಈ ಇಬ್ಬರು ವೀರರು ವೀರ ಮುಡಿಯನ್ನು ಕಟ್ಟಿದ್ದಾರೆ. ಕೊರಳಾಭರಣಗಳನ್ನು, ತೋಳುಬಂಧಿ, ಕೈಗಡಗ ಧರಿಸಿದ್ದು, ಅಲಂಕಾರಿಕ ಉಡುಪನ್ನು ಧರಿಸಿಕೊಂಡಿದ್ದಾರೆ. ಕುದುರೆಯು ಚಲಿಸುವ ಶೈಲಿಯಲ್ಲಿದೆ. ಮಾಸ್ತಿ ಶಿಲ್ಪವು ಬಲಗೈಯಲ್ಲಿ ನಿಂಬೆಹಣ್ಣನ್ನು ಎಡಗೈಯಲ್ಲಿ ಕನ್ನಡಿಯನ್ನು ಹಿಡಿದಿದ್ದಾಳೆ. ಕೊರಳಲ್ಲಿ ಹಾರಗಳನ್ನು, ತೋಳುಬಂಧಿಯನ್ನು ಬಳೆಯನ್ನು ಹಾಕಿಕೊಂಡಿದ್ದಾಳೆ. ಅಲಂಕಾರಿಕ ಉಡುಪನ್ನು ಧರಿಸಿದ್ದಾಳೆ. ಆ ಶಿಲ್ಪವನ್ನು ಗಮನಿಸಿದರೆ ಅರಸ ಆತನ ಬಂಟನು ಯುದ್ಧದಲ್ಲಿ ಹೋರಾಡಿ ಮಡಿದಾಗ ಅರಸನ ಪತ್ನಿಯು ಸಹಗಮನ ಮಾಡಿರಬೇಕು. ಆ ಸಂದರ್ಭದಲ್ಲಿ ಅವರ ಸ್ಮರಣಾರ್ಥವಾಗಿ ಈ ವೀರ ಮಾಸ್ತಿಗಲ್ಲನ್ನು ನೆಟ್ಟಿದ್ದಾರೆ.

* ಈ ಪ್ರದೇಶದಲ್ಲಿ ದೊರೆತ ತುರುಗೋಳ್ ವೀರಗಲ್ಲುಗಳು ಸುಮಾರು ೬೦ ಅದರಲ್ಲಿ ಪ್ರಕಟವಾಗಿದ್ದು ೪೦, ಅಪ್ರಕಟಿವಾಗಿರುವ ೨೦ ತುರುಗೋಳ್ ವೀರಗಲ್ಲುಗಳನ್ನು ಅಧ್ಯಯನದಲ್ಲಿ ಹೊಸದಾಗಿ ಗುರುತಿಸಲಾಗಿದೆ. ತುರುಗೋಳ್ ವೀರಗಲ್ಲುಗಳು, ಚಿಂಚೋಳಿ, ದೋಣ ನದೆಗಲ್ಲು, ಕೋಡಿಕೊಪ್ಪ, ಇಟಗಿ, ಮುದೇನೂರು, ಕತ್ತೆಬೆನ್ನೂರು, ಹರವಿ, ಮಸಲವಾಡ, ಹಡಗಲಿ ಮುಂತಾದ ಗ್ರಾಮಗಳಲ್ಲಿ ತುರುಗೋಳ್ ವೀರಗಲ್ಲುಗಳನ್ನು ತಮ್ಮದೇ ಆದ ವಿಶಿಷ್ಟತೆಯನ್ನು ಪಡೆದಿರುವುದನ್ನು ಕಾಣಬಹುದು. ಇವುಗಳಲ್ಲಿ ಮುಖ್ಯವಾಗಿರುವ ಚಿಂಚೋಳಿ ತಾಲೂಕಿನ ಹಲ್‌ಚೇರಾ ಗ್ರಾಮದ ಅಂಬಿಗರ ಚೌಡಯ್ಯ ಈಶ್ವರ ಮಂದಿರದೊಳಗೆಯಿರುವ ಕ್ರಿ.ಶ. ೭ನೆಯ ಶತಮಾನದ ಈ ವೀರಗಲ್ಲು ಎರಡು ಹಂತಗಳಿಂದ ಕೂಡಿದ್ದು ಕೆಳಸ್ತರದಲ್ಲಿ ಎಡಗೈಯಲ್ಲಿ ಗುರಾಣಿ ಹಿಡಿದಂತೆ ಬಲಗೈಯಲ್ಲಿ ಖಡ್ಗದಿಂದ ಶತ್ರುವಿಗೆ ಇರಿಯುತ್ತಿರುವಂತೆ ಉದ್ದನೆಯ ಚಾಕು ಸೊಂಟದಲ್ಲಿಟ್ಟುಕೊಂಡು ಕೂದಲು ಇಳಿಬಿಟ್ಟಂತಿದೆ. ಎರಡನೆಯ ಸ್ತರದ ಮೇಲಿನ ಒಂದು ಸಾಲಿನಲ್ಲಿ ಆಕಳುಗಳನ್ನು ಸಾಲಾಗಿ ತೋರಿಸಿದ ಚಿತ್ರಣವನ್ನು ಈ ತುರುಗೋಳ್ ವೀರಗಲ್ಲಿನಲ್ಲಿ ಕಾಣಬಹುದು.

* ರೋಣ ತಾಲೂಕಿನ ಬೆಳವಣಿಕೆ ಗ್ರಾಮದ ರಾಷ್ಟ್ರಕೂಟರ ಕಾಲದ ತುರುಗೋಳ್ ವೀರಗಲ್ಲೊಂದು ಸುಮಾರು ೬ ಅಡಿ ಎತ್ತರವಿದ್ದು ನಾಲ್ಕು ಹಂತಗಳಿಂದ ಕೂಡಿದೆ. ಈ ವೀರಗಲ್ಲಿನ ತಳಭಾಗದಲ್ಲಿ ನೇಗಿಲಿನ ಚಿಹ್ನೆ ಇದ್ದು ಅದರ ಮೇಲಿನ ಪಟ್ಟಿಕೆಯಲ್ಲಿ ವೀರನು ತುರುಗಾಳದಲ್ಲಿ ಹೋರಾಡತ್ತಿರುವ ದೃಶ್ಯವಿದೆ. ಶತ್ರುವಿನ ಹೆಣದ ಮೇಲೆ ತನ್ನ ಬಲಗಾಲನ್ನು ಮೆಟ್ಟಿ ಇತರರೊಂದಿಗೆ ಹೋರಾಡುತ್ತಿರುವ ವೀರನು ಉದ್ದನೆಯ ಬಿಲ್ಲು ಬಾಣವನ್ನು ಹಿಡಿದಿದ್ದಾನೆ. ಶತ್ರುಗಳು ಸಹ ಬಿಲ್ಲು ಬಾಣಗಳನ್ನು ಪ್ರಯೋಗಿಸುತ್ತಿದ್ದಾರೆ. ವೀರನ ಹಿಂಭಾಗದಲ್ಲಿ ಏಳು ದನಗಳನ್ನು ಚಿತ್ರಿಸಲಾಗಿದೆ. ಎರಡನೆಯ ಹಂತದಲ್ಲಿ ವೀರನು ಅಪ್ಸರೆಯರ ಹೆಗಲ ಮೇಲೆ ಕೈ ಹಾಕಿಕೊಂಡು ಮೋಡಗಳ ನಡುವೆ ಸ್ವರ್ಗ ಪ್ರಯಾಣ ಮಾಡುತ್ತಿರುವ ದೃಶ್ಯವಿದೆ. ಮೂರನೆಯ ಹಂತದಲ್ಲಿ ಮಂಟಪದೊಳಗೆ ವೀರನು  ಕುಳಿತಿದ್ದು ಅವನ ಎಡಬಲ ಚಾಮರಧಾರಿಯರು ಇದ್ದಾರೆ. ನಾಲ್ಕನೆಯ ಹಂತದಲ್ಲಿ ಶಿವಲಿಂಗ ನಂದಿಯ ದೃಶ್ಯವಿದೆ. ಈ ತುರುಗೋಳ್ ವೀರಗಲ್ಲು ಶಿಲ್ಪವು ಹೋರಾಟದಲ್ಲಿ ಮಡಿದ ವೀರನನ್ನು ಪ್ರಧಾನವಾಗಿ ಚಿತ್ರಿಸಿರುವುದು ಅವನ ಬಗೆಗಿನ ಗೌರವವನ್ನು ಸೂಚಿಸುತ್ತದೆ.

* ದೊರೆತ ೪ ಪೆಣ್ಬುಯ್ಯಲ್ ವೀರಗಲ್ಲುಗಳಲ್ಲಿ ಲಕ್ಕುಂಡಿ ವಸ್ತು ಸಂಗ್ರಹಾಲಯದಲ್ಲಿರುವ ೧೧೦ನೆಯ ಶತಮಾನ ಪೆಣ್ಬುಯ್ಯಲ್ ವೀರಗಲ್ಲು ತನ್ನ ಆದ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಈ ವೀರಗಲ್ಲು ನಾಲ್ಕು ಹಂತಗಳಿಂದ ಕೂಡಿದ್ದು ಮೊದಲ ಭಾಗದಲ್ಲಿ ಶಾಸನವಿದೆ. ಎರಡನೆಯ ಭಾಗದಲ್ಲಿ ವೀರನೊಬ್ಬ ಬಿಲ್ಲಿನಿಂದ ಬಾಣವನ್ನು ಬಿಡುತ್ತಿರುವ ದೃಶ್ಯವಿದ್ದು ಅವನ ಕೆಳಗೆ ಸತ್ತ ವ್ಯಕ್ತಿಯ ಶವವಿದೆ. ವೀರನ ದೇಹದಲ್ಲಿ ಬಾಣಗಳು ಚುಚ್ಚಿಕೊಂಡಿವೆ. ಹಿಂಭಾಗದಲ್ಲಿ ತುರುಗಳು

ಮತ್ತು ಹೆಣ್ಣುಮಕ್ಕಳಿದ್ದಾರೆ. ಇವರ ರಕ್ಷಣೆಗಾಗಿ ವೀರನೊಬ್ಬ ಹೋರಾಡಿ ಮರಣ ಹೊಂದಿರುವ ವಿಷಯ ಇಲ್ಲಿ ಸ್ಪಷ್ಟವಾಗಿದೆ. ಮೂರನೇ ಪಟ್ಟಿಯಲ್ಲಿ ಶಾಸನವದ್ದು, ನಾಲ್ಕನೆಯ ಪಟ್ಟಿಯಲ್ಲಿ ವೀರನು ದೇವಕನ್ಯೆಯರೊಂದಿಗೆ ಸ್ವರ್ಗಕ್ಕೆ ಹಾರುತ್ತಿದ್ದಾನೆ. ಈ ಶಿಲ್ಪದ ವಿವರಣೆಯಿಂದ ತುರುಗೋಳ್ ಹಾಗೂ ಪೆಣ್ಬುಯ್ಯಲ್ಲಾಗಿ ಹೋರಾಟ ನಡೆದದ್ದು ಸ್ಪಷ್ಟವಾಗುತ್ತದೆ. ಈ ವೀರಗಲ್ಲು ತುರುಗಳು ಮತ್ತು ಹೆಣ್ಣುಮಕ್ಕಳ ಶಿಲ್ಪದಿಂದ ಕೂಡಿದ್ದು ಬಹಶಃ ಪೆಣ್ಬುಯ್ಯಲ್‌ನಲ್ಲಿ ಹೋರಾಡಿ ಮಡಿದ ವೀರನ ಸ್ಮಾರಕವಾಗಿದೆ. ಈ ರೀತಿಯ ಶಾಸನವಿರುವ ಪೆಣ್ಬುಯ್ಯಲ್ ವೀರಗಲ್ಲನ್ನು ಬಾದಾಮಿ, ಪಟ್ಟದಕಲ್ಲಿನಲ್ಲಿ ನೋಡಬಹುದು.

* ಆತ್ಮಬಲಿಗಲ್ಲುಗಳಿಗೆ ಸಂಬಂಧಿಸಿದಂತೆ ಈ ಪ್ರದೇಶದಲ್ಲಿ ಶಾಸನಸಹಿತ ೩, ಶಾಸನರಹಿತ ೧೦ ಆತ್ಮಬಲಿಗಲ್ಲು ದೊರಕಿವೆ. ಆತ್ಮಬಲಿಗಲ್ಲುಗಳ ಶಿರಹಟ್ಟಿ ಬೆಳದಡಿ ಮತ್ತು ಕಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದಲ್ಲಿ ಈ ಆತ್ಮಬಲಿಗಲ್ಲುಗಳನ್ನು ಗುರುತಿಸಲಾಗಿದೆ. ಕನ್ನಡ ವಿಶ್ವವಿದ್ಯಾಲಯದ ಹೊರ ಆವರಣದ ವಿಜಯನಗರ ಕಾಲದ ಆತ್ಮಬಲಿದಾನ ಶಿಲ್ಪವಿದು; ಈ ಶಿಲ್ಪದಲ್ಲಿ ಮಹಿಳೆಯೊಬ್ಬಳು ತನ್ನ ತಲೆಯನ್ನು ಕತ್ತರಿಸಿಕೊಂಡು ಆತ್ಮಬಲಿಗೈದ ಸುಂದರವಾದ ಉಬ್ಬುಶಿಲ್ಪವಿದೆ. ಅಂಜಲಿ ಮುದ್ರೆಯಲ್ಲಿ ಕುಳಿತ ಭಂಗಿಯ ಮಹಿಳೆಯ ದೇಹ ಮತ್ತು ಕತ್ತರಿಸಿದ ಅವಳ ಶಿರವನ್ನು ಬೇರೆ ಬೇರೆಯಾಗಿ ಅಂದರೆ ಮುಂಡದಿಂದ ಶಿರವನ್ನು ಪ್ರತ್ಯೇಕವಾಗಿ ಮುಂಡದ ಮೇಲ್ಭಾಗ ಬಲಭಾಗದಲ್ಲಿ ಕತ್ತರಿಸಲಾಗಿದೆ. ಈ ಮಹಿಳೆಯ ಕಿವಿಯಲ್ಲಿ ವರ್ತುಲಾಕಾರ ಓಲೆ, ತಲೆಯ ಮೇಲೆ ಕೇಶದ ದೊಡ್ಡ ಮಂಡಿಯಂತಹ ಜುಟ್ಟು ಕಟ್ಟಿದಂತೆ ಕೆತ್ತಲಾಗಿದೆ. ಈ ಶಿಲೆಯ ಮೇಲ್ಭಾಗದ ಬಲಬದಿಯಲ್ಲಿ ಸೂರ್ಯ ಹಾಗೂ ಎಡಬದಿಯಲ್ಲಿ ಚಂದ್ರನನ್ನು ಕೆತ್ತಲಾಗಿದೆ. ಮಹಿಳೆಯ ಸೀರೆಯ ಕೆತ್ತನೆ ತುಂಬಾ ಕಲಾತ್ಮಕವಾಗಿದೆ. ಕಾಲಲ್ಲಿ ಕಡಗ ಧರಿಸಿದ್ದಾಳೆ.

* ಕಮಲಾಪುರದ ಭಾರತೀಯ ಪ್ರಾಚ್ಯ ವಸ್ತುಸಂಗ್ರಹಾಲಯದ ಹಿಂಬದಿಯ ವಿಜಯನಗರದ ಆತ್ಮಬಲಿದಾನಗಲ್ಲು ಶಿಲ್ಪದಲ್ಲಿ ವೀರನ ಶಿರವನ್ನು ಛೇದಿಸಲಾಗಿದ್ದು, ಸ್ಥಾನಿಕ ಭಂಗಿಯಲ್ಲಿದ್ದಾನೆ. ವೀರ ತನ್ನ ರುಂಡವನ್ನು ತಾನೇ ಕತ್ತರಿಸಿಕೊಂಡಿದ್ದಾನೆ. ಕತ್ತರಿಸಿದ ಶಿರವನ್ನು ವೀರ ತಾನೇ ಬಲಗೈಯಲ್ಲಿ ಹಿಡಿದುಕೊಂಡಿರುವುದು ಇಲ್ಲಿ ವೀರನ ಆತ್ಮಸ್ಥೈರ್ಯ ಹಾಗೂ ತ್ಯಾಗದ ಸಂಕೇತವನ್ನು ಪ್ರತಿಬಿಂಬಿಸುತ್ತದೆ.

* ಈ ಪ್ರದೇಶದಲ್ಲಿ ದೊರೆತ ೫ ನಿಸಿಧಿಗಲ್ಲುಗಳನ್ನು ಹೊಸದಾಗಿ ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ.

* ಈ ಅಧ್ಯಯನ ವ್ಯಾಪ್ತಿಯಲ್ಲಿ ಪ್ರಾಣಿ ಬೇಟೆಯ ವೀರಗಲ್ಲು ೮. ಇವುಗಳಲ್ಲಿ ಹುಲಿ ಬೇಟೆಯ ವೀರಗಲ್ಲುಗಳು ೭. ಮತ್ತು ಆನೆಯ ಬೇಟೆಯ ವೀರಗಲ್ಲು ೧ ಇವು ಶಾಸನ ರಹಿತವಾಗಿದ್ದು, ಅಧ್ಯಯನಕ್ಕೆ ಹೊಸದಾಗಿ ಸಾಕ್ಷಿಯಾಗಿವೆ. ಹುಲಿ ಬೇಟೆಯ ವೀರಗಲ್ಲುಗಳು ಕಲಕೇರಿ, ಡೋಣಿ, ಹೊಸೂರು, ಮಾನ್ವರ ಮಸಲವಾಡ, ಹರಸೂರು, ಶ್ರೀನಿವಾಸ ಸರಗಡಿ ಮತ್ತು ಮಹಾಗಾಂವ

ಪ್ರದೇಶದಲ್ಲಿ ಕಾಣಬಹುದು. ಗದಗ ತಾಲೂಕಿನ ಹೊಸೂರಿನ ಪಾಳು ದೇವಾಲಯದ ಮುಂಭಾಗದಲ್ಲಿ ಇರುವ ಹುಲಿಬೇಟೆ ವೀರಗಲ್ಲು ವಿಶೇಷವಾಗಿದೆ. ಕಲ್ಯಾಣ ಚಾಲುಕ್ಯರ ಕಾಲದ ಈ ಹುಲಿ ಬೇಟೆಯಲ್ಲಿ ನಾಯಿಯನ್ನು ಬಳಸಿರುವುದು; ಮೊದಲ ಹಂತದಲ್ಲಿ ವೀರನು ಕೈಯಲ್ಲಿ ಆಯುಧವನ್ನು ಹಿಡಿದು ಹುಲಿಯ ಜೊತೆ ಹೋರಾಡುತ್ತಿದ್ದಾನೆ. ಇವನಿಗೆ ಎರಡು ನಾಯಿಗಳ ಹೋರಾಟದಲ್ಲಿ ಸಹಕರಿಸುತ್ತಿವೆ. ನಾಯಿಗಳಿಗೆ ಹಗ್ಗವನ್ನು ಕಟ್ಟಲಾಗಿದೆ. ಈ ರೀತಿಯ ಹುಲಿಯನ್ನು ನಾಯಿಗಳ ಜೊತೆ ವೀರನು ಬೇಟೆಯಾಡುತ್ತಿರುವುದು ವಿಶೇಷ ಶಿಲ್ಪವಾಗಿದೆ. ಎರಡನೆಯ ಹಂತದಲ್ಲಿ ಚಾಮರವನ್ನು ಹಿಡಿದು ಅಪ್ಸರೆಯರು ವೀರನನ್ನು ಸ್ವರ್ಗಕ್ಕೆ ಪುಷ್ಪಕ ವಿಮಾನದಲ್ಲಿ ಕರೆದೊಯ್ಯುಲಾಗುತ್ತಿದೆ. ಮೂರನೆಯ ಹಂತದಲ್ಲಿ ವೀರನು ಶಿವಲಿಂಗ ಮುಂದೆ ಕುಳಿತು ಧ್ಯಾನಾಸಕ್ತನಾಗಿದ್ದಾನೆ. ಯತಿಯೊಬ್ಬ ಎಡಗೈಯಲ್ಲಿ ಗಂಟೆಯನ್ನು ಹಿಡಿದು ಪೂಜಿಸುತ್ತಿದ್ದಾನೆ. ಶಿವಲಿಂಗಕ್ಕೆ ಹೂವಿನ ಕಿರೀಟವನ್ನು ಇಡಲಾಗಿದೆ. ಎದುರಿಗೆ ನಂಧಿ, ಮೇಲ್ಭಾಗದಲ್ಲಿ ಸೂರ್ಯ-ಚಂದ್ರರನ್ನು ಚಿತ್ರಿಸಲಾಗಿದೆ.

* ಗುಲಬರ್ಗಾ ತಾಲೂಕಿನ ಹರಸೂರು ಗ್ರಾಮದ ರಸ್ತೆಯಲ್ಲಿರುವ ವಿಜಯನಗರ ಕಾಲದ ಹುಲಿ ಬೇಟೆ ವೀರಗಲ್ಲು ಬಹಳ ಸುಂದರ ಮತ್ತು ಕಲಾತ್ಮಕವಾಗಿದೆ. ಈ ವೀರಗಲ್ಲಿನಲ್ಲಿ ಹುಲಿಯೊಂದಿಗೆ ಬೇಟೆಯಾಡುತ್ತಿರುವ ಸನ್ನಿವೇಶವಿದೆ. ವೀರನ ಮೇಲೆ ಹುಲಿಯು ಎರಗಿದಂತೆ ಕಂಡುಬರುತ್ತಿದೆ. ಹುಲಿಯು ತನ್ನ ಪ್ರಾಣ ರಕ್ಷಣೆಗೋಸ್ಕರ ತನ್ನ ಮುಂದಿನ ಎರಡು ಕಾಲುಗಳನ್ನು ವೀರನ ಮೇಲೇರಿ ಅವನನ್ನು ಕೊಲ್ಲುವ ಪ್ರಯತ್ನದ ಸನ್ನಿವೇಶವನ್ನು ಇಲ್ಲಿ ನೋಡಬಹುದು. ವೀರನು ತನ್ನ ಮೇಲೆ ಹುಲಿಯು ಎಗರಿದ ಸಂದರ್ಭದಲ್ಲಿ ತನ್ನ ಕೈಯಲ್ಲಿದ್ದ ಖಡ್ಗದಿಂದ ಅದರ ಹೊಟ್ಟೆಗೆ ಚುಚ್ಚಿ ಅದನ್ನು ಕೊಲ್ಲುತ್ತಿರುವ ದೃಶ್ಯವನ್ನು ನೋಡಬಹುದು. ಇಲ್ಲಿ ಇಬ್ಬರು ವೀರನನ್ನು ಚಿತ್ರಿಸಲಾಗಿದೆ. ಒಬ್ಬನು ಹುಲಿಯೊಂದಿಗೆ ಕಾದಾಡುತ್ತಿದ್ದರೆ, ಮತ್ತೊಬ್ಬನು ಅವನಿಗೆ ಸಹಾಯಕನಾಗಿ ಆತನ ಹಿಂದೆಯೇ ನಿಂತಿದ್ದಾನೆ. ವೀರನ ಕೈಗಳಲ್ಲಿ ಖಡ್ಗಗಳು ಕಂಡುಬರುತ್ತವೆ. ಹುಲಿಗೆ ಮುಖಮಾಡಿ ನಿಂತ ವೀರನು ಒಂದು ಕೈಯಿಂದ ಹುಲಿಯನ್ನು ತನ್ನ ತೆಕ್ಕೆಗೆ ಹಿಡಿದುಕೊಂಡ ದೃಶ್ಯವನ್ನು ಕಾಣಬಹುದು.

* ಆನೆಬೇಟೆ ವೀರಗಲ್ಲು ಈ ಪ್ರದೇಶದಲ್ಲಿ ತನ್ನದೇ ಆದ ವಿಶಿಷ್ಟತೆಯಿಂದ ಕೂಡಿದೆ. ಕುಷ್ಟಗಿ ತಾಲೂಕಿನ ಪುರದ ಸೋಮಶೇಖರಯ್ಯನವರು ಹೊಲದಲ್ಲಿ ಕ್ರಿ.ಶ. ೧೩ನೆಯ ಶತಮಾನದ ಈ ಆನೆಬೇಟೆ ವೀರಗಲ್ಲು ಎರಡು ಹಂತಗಳಿಂದ ಕೂಡಿದ್ದು, ಕೆಳಗಿನ ಭಾಗ ಮಣ್ಣಲ್ಲಿ ಮುಚ್ಚಿದೆ. ಸ್ವಲ್ಪ ಮೇಲ್ಭಾಗದಲ್ಲಿ ಕುದುರೆಯ ಹಾಗೆ ಕಾಣುವ ರೇಖಾಚಿತ್ರವಿದೆ. ಮಧ್ಯದಲ್ಲಿ ವೀರನೊಬ್ಬ ಆನೆಯನ್ನು ಬೇಟೆಯಾಡುತ್ತಿರುವಂತೆ ಬಿಡಿಸಲಾಗಿದೆ. ವೀರನು ತನ್ನ ಬಲಗೈಯಲ್ಲಿ ಆಯುಧವನ್ನು ಹಿಡಿದು ಆನೆಯನ್ನು ತಿವಿಯುತ್ತಿರುವಂತೆ ಕೆತ್ತಲಾಗಿದೆ. ವೀರನ ಹಿಂಭಾಗದಲ್ಲಿ ಅವನ ಪತ್ನಿ ನಿಂತಿದ್ದಾಳೆ. ಇದರಿಂದ ಆನೆ ಬೇಟೆಯ ಸಂದರ್ಭದಲ್ಲಿ ವೀರನು ಮರಣ ಹೊಂದಿದ್ದು ಅವನ ಪತ್ನಿ ಸಹಗಮನ ಅನುಸರಿಸಿರುವಳೆಂದು ಸ್ಪಷ್ಟವಾಗುತ್ತದೆ. ಮೇಲ್ಭಾಗದಲ್ಲಿ ಶಿವಲಿಂಗ, ನಂದಿ ಮತ್ತು ಸೂರ್ಯ-ಚಂದ್ರರ ಶಿಲ್ಪಗಳನ್ನು ಬಿಡಿಸಲಾಗಿದೆ.

ಕೊನೆಯದಾಗಿ ಈ ಪ್ರದೇಶದಲ್ಲಿ ಹಲವಾರು ವೀರಗಲ್ಲುಗಳು ದೊರೆತಿದ್ದರಿಂದ ಉತ್ತರ ಕರ್ನಾಟಕ ಪ್ರದೇಶದ ಶೌರ್ಯ ಸಾಹಸ, ವೀರತ್ವ, ಶೌರ್ಯ ಪ್ರಧಾನ ಸಮಾಜ ವ್ಯವಸ್ಥೆ, ಸಾಮಾಜಿಕ ಕರ್ತವ್ಯ ನಿಷ್ಠೆ, ಅನಿವಾರ್ಯ ಮತ್ತು ಅನಿಶ್ಚಿತತೆಯ ಹೋರಾಟ ಮತ್ತು ಸರ್ವೇಸಾಮಾನ್ಯ ಜನತೆ ಎದುರಿಸಿದ ಅಸುರಕ್ಷತೆಯನ್ನು ಅವು ಸಾರಿ ಹೇಳುವಂತಿವೆ.

# ಪರಾಮರ್ಶನ ಗ್ರಂಥಗಳು

## ಶಾಸನ ಸಂಪುಟಗಳು


* ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ, ಕೆ.ಜಿ. ಭಟ್‌ಸೂರಿ, ಡಿ.ವಿ. ಪರಮಶಿವಮೂರ್ತಿ, (ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೧, ಬಳ್ಳಾರಿ ಜಿಲ್ಲೆ, ೧೯೯೮, (ಸಂ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ, ಕೆ.ಜಿ. ಭಟ್‌ಸೂರಿ, ಡಿ.ವಿ. ಪರಮಶಿವಮೂರ್ತಿ, (ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೨, ಕೊಪ್ಪಳ ಜಿಲ್ಲೆ, ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ, ಕೆ.ಜಿ. ಭಟ್‌ಸೂರಿ, ಡಿ.ವಿ. ಪರಮಶಿವಮೂರ್ತಿ, (ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩, ಹಂಪಿ ಶಾಸನಗಳು, ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ, ಕೆ.ಜಿ. ಭಟ್‌ಸೂರಿ, ಡಿ.ವಿ. ಪರಮಶಿವಮೂರ್ತಿ, (ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೭, ರಾಯಚೂರು ಜಿಲ್ಲೆ, ೨೦೦೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ದೇವರಕೊಂಡಾರೆಡ್ಡಿ, ಹನುಮಾಕ್ಷಿ ಗೋಗಿ, (ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೮, ಬೀದರ್ ಜಿಲ್ಲೆ, ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ದೇವರಕೊಂಡಾರೆಡ್ಡಿ, ಕಲವೀರ ಮನ್ವಾಚಾರ, ಕೆ.ಜಿ. ಭಟ್‌ಸೂರಿ, ಡಿ.ವಿ. ಪರಮಶಿವಮೂರ್ತಿ, (ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೯, ಬಾಗಲಕೋಟೆ ಜಿಲ್ಲೆ, ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ದೇವರಕೊಂಡಾರೆಡ್ಡಿ, ಕೆ.ಜಿ. ಭಟ್‌ಸೂರಿ, ಡಿ.ವಿ. ಪರಮಶಿವಮೂರ್ತಿ, (ಸಂ), ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ-೧೦, ಬಿಜಾಪುರ ಜಿಲ್ಲೆ, ೨೦೧೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ


**ಆಕರ ಗ್ರಂಥಗಳು :**


* ಅಣ್ಣಿಗೇರಿ ಎ.ಎಮ್. (ಸಂ), ಕರ್ನಾಟಕ ಶಾಸನಗಳ ಸ್ವರೂಪ, ೧೯೭೦, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
* ಅಣ್ಣಿಗೇರಿ ಎ.ಎಮ್., ಶೇಷಶಾಸ್ತ್ರಿ ಆರ್ (ಸಂ), ಶಾಸನ ಸಂಗ್ರಹ, ೧೯೭೦, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

* ಅಣ್ಣಿಗೇರಿ ಎ.ಎಮ್. ಮೇವುಂಡ ಮಲ್ಲಾರಿ (ಸಂ), ಶಾಸನ ಸಾಹಿತ್ಯ ಸಂಚಯ, ೧೯೬೧, ಕನ್ನಡ ಕನ್ನಡ ಸಂಶೋಧನಾ ಸಂಸ್ಥೆ, ಧಾರವಾಡ
* ಅನಂತ ರಂಗಾಚಾರ್ ಎನ್. ಭಾರತೀಯ ಶಿಲ್ಪಶಾಸ್ತ್ರದ ಸಂಕ್ಷಿಪ್ತ ಪರಿಚಯ, (ಶ್ರೀ ವಿ. ರಂಗಣ್ಣನವರ ಸ್ಮರಣ ಸಂಚಿಕೆ) ೧೯೫೮, ಮಹಾರಾಜ ಕಾಲೇಜು, ಮೈಸೂರು
* ಅಕ್ಕಿ ಗೋಗಿ ಡಿ.ಎನ್., ಗುಲಬರ್ಗಾ ಜಿಲ್ಲೆಯ ಜೈನ ಪರಂಪರೆ, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಕಲಬುರ್ಗಿ ಎಂ.ಎಂ., ಕವಿರಾಜಮಾರ್ಗ ಪರಿಸರದ ಸಾಹಿತ್ಯ, ೧೯೭೩, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ಕಲಬುರ್ಗಿ ಎಂ.ಎಂ., ಧಾರವಾಡ ಜಿಲ್ಲೆಯ ಶಾಸನ ಸೂಚಿ, ೧೯೭೫, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ಕಲಬುರ್ಗಿ ಎಂ.ಎಂ., ಧಾರವಾಡ ತಾಲೂಕಿನ ಶಾಸನಗಳು, ೧೯೭೬, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ಕಲಬುರ್ಗಿ ಎಂ.ಎಂ., ಬಿಜಾಪುರ ಜಿಲ್ಲೆಯ ಶಾಸನ ಸೂಚಿ, ೧೯೭೬, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ಕಲಬುರ್ಗಿ ಎಂ.ಎಂ., ಸಮಾಧಿ–ಬಲಿದಾನ–ವೀರಮರಣ ಸ್ಮಾರಕಗಳು, ೧೯೮೦, ಐಬಿಎಚ್. ಪ್ರಕಾಶನ, ಬೆಂಗಳೂರು
* ಕಲಬುರ್ಗಿ ಎಂ.ಎಂ., ಮಾರ್ಗ ಸಂಪುಟಗಳು ೨೦೧೦, ಸ್ವಪ್ನ ಬುಕ್‌ಹೌಸ್, ಬೆಂಗಳೂರು
* ಕಲಬುರ್ಗಿ ಎಂ.ಎಂ., ಕನ್ನಡ ಶಾಸನ ಸಾಹಿತ್ಯ, ೨೦೧೧, ಚೇತನ ಬುಕ್‌ಹೌಸ್, ಮೈಸೂರು
* ಕಲಬುರ್ಗಿ ಎಂ.ಎಂ., ಮಹಾರಾಷ್ಟ್ರದ ಕನ್ನಡ ಶಾಸನಗಳು, ೨೦೧೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
* ಕುಮಾರಸ್ವಾಮಿ ಕೆ.ಎಸ್., ಪಾಚೀನ ಕರ್ನಾಟಕದಲ್ಲಿ ಶಿಲ್ಪಾಚಾರಿಯರು, ೧೯೯೬, ಕರ್ನಾಟಕ ಸಾಹಿತ್ಯ ಪರಿಷತ್ತು, ಬೆಂಗಳೂರು
* ಕೃಷ್ಣಮೂರ್ತಿ ಪಿ.ವಿ., ತಮಿಳನಾಡಿನ ಕನ್ನಡ ಶಾಸನಗಳು, ೨೦೦೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
* ಕೈದಾಳ ರಾಮಸ್ವಾಮಿ ಗಣೇಶ, ಶಾಸನ ಸರಸ್ವತಿ, ೨೦೦೭, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ

* ಗುರುವ ಆರ್.ಎನ್. ದಿ ಕದಂಬಾಸ್ ಆಫ್ ಗೋವಾ ಇನ್‌ಸ್ಕ್ರಿಪಶನ್ಸ್, ೧೯೬೯ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನಶಾಸ್ತ್ರ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ಗುರುವ ಆರ್.ಎನ್., ಕಾರವಾರ ಜಿಲ್ಲೆಯ ಶಾಸನಗಳು, ೧೯೭೫, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ಗೋಪಾಲ ಬಾ.ರಾ., ಕನ್ನಡ ಶಾಸನಗಳು, ೨೦೦೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
* ಗೋಪಾಲ ಬಿ.ಆರ್. (ಸಂ), ಧಾರವಾಡ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ೨೦೦೨, ಪ್ರಾಚ್ಯ ವಸ್ತುಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು
* ಗೋಪಾಲ ಬಿ.ಆರ್. (ಸಂ), ಗುಲಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ೨೦೦೭, ಪ್ರಾಚ್ಯ ವಸ್ತುಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು
* ಗೋಪಾಲ ಬಿ.ಆರ್. (ಸಂ), ಗದಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ೨೦೦೬, ಪ್ರಾಚ್ಯ ವಸ್ತುಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು
* ಗೋಪಾಲ ಬಿ.ಆರ್. (ಸಂ), ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ೨೦೦೨, ಪ್ರಾಚ್ಯ ವಸ್ತುಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು
* ಚನ್ನಬಸವ ಹಿರೇಮಠ (ಸಂ), ರಾಯಚೂರು-ಕೊಪ್ಪಳ ಜಿಲ್ಲೆಯ ಶಾಸನಗಳು, ೧೯೯೯, ಚೇತನ ಪ್ರಕಾಶನ, ಮಸ್ಕಿ
* ಚನ್ನಬಸವ ಹಿರೇಮಠ, ಮಾನ್ವಿ ತಾಲೂಕಿನ ಶಾಸನಗಳು, ೨೦೦೦, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
* ಚನ್ನಬಸವ ಹಿರೇಮಠ, ಕುರುಗೋಡು ಸಿಂಧರು : ಒಂದು ಅಧ್ಯಯನ, ೧೯೯೫, ಕೊಪ್ಪಳ ಸಂಗಣ್ಣನವರ ಅಗಡಿ ಸಂಸ್ಕೃತಿ ಪ್ರತಿಷ್ಠಾನ, ಕೊಪ್ಪಳ
* ಚನ್ನಕ್ಕ ಎಲಿಗಾರ, ಮಾಸ್ತಿಕಲ್ಲ, ೧೯೭೧, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ಚನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕ ಸ್ತ್ರೀ ಸಮಾಜ, ೧೯೯೦, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ಚನ್ನಕ್ಕ ಎಲಿಗಾರ, ಶಾಸನ ಸಂಜೀವಿನಿ, ೨೦೦೩, ಚನ್ನಗಂಗಾ ಪ್ರಕಾಶನ, ಧಾರವಾಡ
* ಚಂದ್ರ ಪೂಜಾರಿ ಎಂ., ಸಂಶೋಧಕರು ಮತ್ತು ಕ್ಷೇತ್ರಕಾರ್ಯ, ೨೦೦೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

* ಚಂದ್ರಶೇಖರಯ್ಯ ಬಿ.ಎಂ., ಕರ್ನಾಟಕ ಸಾಂಸ್ಕೃತಿಕ ಪರಂಪರೆ, ೨೦೦೫, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು

* ಚಿತ್ತಯ್ಯ ಪೂಜಾರ್ ಡಿ.ಕೆ., ಕನ್ನಡ ಶಾಸನಾಧ್ಯಯನದ ಬಹುಮುಖಿ ಆಯಾಮಗಳು, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

* ಚಿದಾನಂದಮೂರ್ತಿ ಎಂ. (ಸಂ), ಸಂಶೋಧನಾ ತರಂಗ, ೧೯೬೬, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

* ಚಿದಾನಂದಮೂರ್ತಿ ಎಂ., ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು, ೧೯೮೪, ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

* ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೨೦೦೨, ಸ್ವಪ್ನ ಬುಕ್‌ಹೌಸ್, ಬೆಂಗಳೂರು

* ಚಿದಾನಂದಮೂರ್ತಿ ಎಂ., ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ, ೨೦೧೧, ಸ್ವಪ್ನ ಬುಕ್‌ಹೌಸ್, ಬೆಂಗಳೂರು

* ಜಯದೇವ ಹು.ಕಾ., ಶಾಸನ ಮತ್ತು ಗದ್ಯ, ೨೦೦೦, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

* ಜಯಮ್ಮ ಬಿ., ಧಾರವಾಡ ಜಿಲ್ಲೆಯ ಪುರಾತತ್ವ, ೨೦೦೬, ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನಶಾಸ್ತ್ರ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

* ಜಯಮ್ಮ ಬಿ., ಕೆಲವು ಹೊಸ ದೇವಾಲಯಗಳು, ವೀರಗಲ್ಲು ಶಾಸನಗಳು ಮತ್ತು ಪ್ರಾಚೀನ ಜನ ವಸತಿ ನಿವೇಶನಗಳು (ಹಳೆ ಧಾರವಾಡ ಜಿಲ್ಲೆ), ೨೦೦೪, ಇತಿಹಾದ ದರ್ಶನ, ಸಂ-೧೯, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು

* ಜಾಗೀರದಾರ ಸೀತಾರಾಮ್, ಹೈದ್ರಾಬಾದ್-ಕರ್ನಾಟಕ ಶಾಸನಗಳು, ೧೯೯೬

* ಜೋಶಿ ಆರ್.ಆರ್., ಎ ಕಲ್ಚರಲ್ ಹಿಸ್ಟರಿ ಆಫ್ ಧಾರವಾಡ ರೀಜನ್, ೧೯೯೩, (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನಶಾಸ್ತ್ರ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

* ಜ್ಞಾನಾನಂದ ಜಿ., ಶಿಲ್ಪಾದರ್ಶನ, (ಭಾಗ-೧, ೨), ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

* ತಿಪ್ಪೇರುದ್ರಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ೧೯೬೮, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು

* ದೀಕ್ಷಿತ ಜಿ.ಎಸ್. ಮತ್ತು ಇತರರು, ಶ್ರೀಕೃಷ್ಣದೇವರಾಯ ಜೀವನ ಸಾಧನೆಗಳು, ೧೯೯೭, ಪ್ರಾಚ್ಯ ವಸ್ತುಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು
* ದೇವರಕೊಂಡಾರೆಡ್ಡಿ, ತಲಕಾಡಿನ ಗಂಗರ ದೇವಾಲಯಗಳು : ಒಂದು ಅಧ್ಯಯನ, ೧೯೯೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
* ದೇಸಾಯಿ ಪಿ.ಬಿ., ಕರ್ನಾಟಕ ಪರಂಪರೆ, ೧೯೭೦, (ಸಂ-೧,೨) ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆ, ಮೈಸೂರು
* ದೇಸಾಯಿ ಪಿ.ಬಿ., ಪ್ರಾಚೀನ ಭಾರತೀಯ ಚರಿತ್ರೆ, ೧೯೭೩, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ದೇಸಾಯಿ ಪಿ.ಬಿ., ಕನ್ನಡ ನಾಡಿನ ಶಾಸನಗಳು, ೧೯೮೨, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ನರಸಿಂಹಾಚಾರ್ ಆರ್., ಕರ್ನಾಟಕ ಕವಿಚರಿತೆ, ಸಂಪುಟಗಳು, ೧೯೬೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
* ನರಸಿಂಹಾಚಾರ್ ಆರ್., ದೇಸಾಯಿ ಪಿ.ಬಿ., ಪ್ರಾಚೀನ ಭಾರತೀಯ ಚರಿತ್ರೆ, ೧೯೭೨, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ನರಸಿಂಹಮೂರ್ತಿ ಎ.ವಿ., ಕರ್ನಾಟಕ ಶಾಸನ ಸಂಪತ್ತು, ೧೯೮೩, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು
* ನರೇಗಲ್ಲ ಎಂ.ಎಸ್., ಉತ್ತರ ಗದಗ ಜಿಲ್ಲೆಯ ಶಾಸನಗಳು : ಒಂದು ಅಧ್ಯಯನ, ೨೦೦೯, ರವಿರಶ್ಮಿ ಪ್ರಕಾಶನ, ಗದಗ
* ನಾಗರಾಜು ಡಿ.ಎಂ., ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೨೦೧೨, ಗೌತಮ ಪ್ರಕಾಶನ, ಮೈಸೂರು
* ನಾಗರಾಜು ಎಂ.ಜಿ., ಶಾಸನ ಶಿಲ್ಪಗಳು, ೧೯೯೦, ಶ್ರೀ ಗೌರಿಗಂಗ ಪ್ರಕಾಶನ, ಬೆಂಗಳೂರು
* ನಾಗಭೂಷಣ ಸಿ., ಶಾಸನಗಳು ಮತ್ತು ಕನ್ನಡ ಸಾಹಿತ್ಯ, ೨೦೦೫, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ
* ನಾಗಭೂಷಣ ಸಿ., ಕನ್ನಡ ನಾಡಿನ ಶಾಸನಗಳ ಅಧ್ಯಯನ : ಕೆಲವು ಗ್ರಹಿಕೆಗಳು, ೧೯೯೪, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ನಾಗಭೂಷಣ ಸಿ., ಕನ್ನಡ ಸಾಹಿತ್ಯ ಶೋಧನೆ, ೧೯೯೯, ಅಮೃತವರ್ಷಿಣಿ ಪ್ರಕಾಶನ, ನಂದಿಹಳ್ಳಿ

* ನಾಗಯ್ಯ ಜೆ.ಎಂ., ಆರನೆಯ ವಿಕ್ರಮಾದಿತ್ಯನ ಶಾಸನಗಳು : ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ
* ನಾಗಯ್ಯ ಜೆ.ಎಂ., ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ೨೦೦೨, ಲೋಹಿಯಾ ಪ್ರಕಾಶನ, ಬಳ್ಳಾರಿ
* ನಾಯಕ ಹಾ.ಮಾ. (ಸಂ), ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ೧೯೭೯, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
* ನೇಗಿನಹಾಳ ಎಂ.ಬಿ., ಪ್ರಾಚೀನ ಕನ್ನಡ ಶಾಸನಗಳ ಭಾಷಿಕ ಅಧ್ಯಯನ, ೧೯೮೨, ಪ್ರಾಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ಪರಮಶಿವಮೂರ್ತಿ ಡಿ.ವಿ., ಶಾಸನ ಸಂಶೋಧನೆ (ಸಂಶೋಧನಾ ಲೇಖನಗಳ ಸಂಗ್ರಹ), ೧೯೯೪, ಗುಣನಿಧಿ ಪ್ರಕಾಶನ, ಬೆಂಗಳೂರು
* ಪರಮಶಿವಮೂರ್ತಿ ಡಿ.ವಿ., ಕನ್ನಡ ಶಾಸನ ಶಿಲ್ಪ, ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಪರಮಶಿವಮೂರ್ತಿ ಡಿ.ವಿ., ಪೆಣ್ಬುಯ್ಯಲ್, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಪರಮಶಿವಮೂರ್ತಿ ಡಿ.ವಿ., ತುಱುಗೋಳ್ ಸಂಕಥನ, ೨೦೧೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಪಂಚಮುಖಿ ಆರ್.ಎಸ್., ಕರ್ನಾಟಕ ಅರಸು ಮನೆತನಗಳು, ೧೯೪೮, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ಪಂಚಮುಖಿ ಆರ್.ಎಸ್. ಕರ್ನಾಟಕ ಶಾಸನಗಳು, ೧೯೭೧, ಕೆ.ಆರ್.ಐ., ಧಾರವಾಡ
* ಪಾಟೀಲ ಬಿ.ಸಿ., ಕೊಪ್ಪಳ ಸಾಂಸ್ಕೃತಿಕ ಪರಂಪರೆ, ೧೯೯೮, ಹರಿಹರ ಪ್ರಕಾಶನ, ಕೊಪ್ಪಳ
* ಫ್ಲೀಟ್ ಜೆ.ಎಫ್. ಶಾಸನಶಾಸ್ತ್ರ ಪರಿಚಯ, ೧೯೭೮, ಅನು, ಸಿ.ಪಿ.ಕೆ.
* ಬಸವರಾಜ ಕಲ್ಗುಡಿ, ಮಹಾಸತಿ ಆಚರಣೆ ; ಒಂದು ಅಧ್ಯಯನ, ೧೯೮೫, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು
* ಬಸವರಾಜ ಸಬರದ, ಶಾಸನಗಳು ಪ್ರಭುತ್ವ ಮತ್ತು ಜನತೆ, ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಭಗವತಿ ಎಸ್.ಎಸ್., ಮೇಲಿನಮನಿ ಎಚ್.ಎಸ್., ಕನ್ನಡ ಶಾಸನಗಳ ಅಧ್ಯಯನ, ೨೦೦೪, ವಿದ್ಯಾನಿಧಿ ಪ್ರಕಾಶನ, ಗದಗ

* ಮಂಜುನಾಥ ಸಿ.ಯು., ಕರ್ನಾಟಕ ಸಾಂಸ್ಕೃತಿಕ ಇತಿಹಾಸ, ೨೦೦೯, ಸುಮುಖ ಪ್ರಕಾಶನ, ಬೆಂಗಳೂರು

* ಮಂಜುನಾಥ ಸಿ.ಯು., ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ, ೨೦೧೨, ಚಿತ್ಯಾಲ ಪ್ರಕಾಶನ, ಆಂಧ್ರಪ್ರದೇಶ

* ಮಂಜುನಾಥ ಎಂ.ಜಿ., ಮಾಸ್ತಿಕಲ್ಲು ವೀರಗಲ್ಲು ಮತ್ತು ನಿಸಿಧಿ ಶಾಸನಗಳು, ೨೦೧೧, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು

* ಮರಿಶಾಮಾಚಾರ್ ಎನ್., ಭಾರತೀಯ ಶಿಲ್ಪಕಲೆ, ೨೦೦೦, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು

* ಮುಗಳಿ ರಂ.ಶ್ರೀ., ಕರ್ನಾಟಕ ಸಂಸ್ಕೃತಿ ಪರಂಪರೆ, ೧೯೭೬, ಸಮಾಜ ಪುಸ್ತಕಾಲಯ, ಧಾರವಾಡ

* ಮುತ್ತಾಚಾರ್ಯ ಟಿ.ವಿ., ಭಾರತೀಯ ಶಿಲ್ಪಶಾಸ್ತ್ರ ಸಾರ (ಭಾಗ–೧), ೧೯೮೭, ಶಿಲ್ಪಕಲಾ ಪರಿಷತ್, ಧಾರವಾಡ

* ಮುಡಬಿ ಗುಂಡೇರಾವ್, ಸೇಡಿಂಬ ದುರ್ಗದ ಶಾಸನಗಳು, ೨೦೦೨, ವಿದ್ಯಾನಗರ, ಸೇಡಂ, ಗುಲಬರ್ಗಾ

* ಮೈಲಾರ ಮೇವುಂಡಿ, ಕನ್ನಡ ನಾಡಿನ ಶಾಸನ ಕವಿಗಳು, ೧೯೭೪, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

* ಮೋಹನ್‌ಕೃಷ್ಣ ರೈ, ಪ್ರಭುತ್ವ ಮತ್ತು ಜನತೆ, ೨೦೦೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

* ಮೋಹನ್‌ಕೃಷ್ಣ ರೈ, ಚರಿತ್ರೆ ಕಥನ, ೨೦೦೯, ಪಲ್ಲವ ಪ್ರಕಾಶನ, ಚನ್ನಪಟ್ಟಣ, ಬಳ್ಳಾರಿ

* ರಘುನಾಥಭಟ್ ಎಚ್.ಎಸ್. (ಸಂ), ಕರ್ನಾಟಕ ಶಾಸನ ಕಲೆ, ೧೯೭೭, ಕೆ.ಆರ್.ಐ. ಧಾರವಾಡ

* ರಮೇಶ ಕೆ.ವಿ., ಕರ್ನಾಟಕ ಶಾಸನ ಸಮೀಕ್ಷೆ, ೧೯೭೧, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

* ರವೀಂದ್ರನಾಥ ಕೆ., ಕನ್ನಡ ದಾಖಲು ಸಾಹಿತ್ಯ, ೨೦೦೦, ಮಂಗಳಾ ಪ್ರಕಾಶನ, ಹೊಸಪೇಟೆ

* ರಹಮತ್ ತರೀಕೆರೆ, ಧರ್ಮ (ಕನ್ನಡ ವಿಶ್ವವಿದ್ಯಾಲಯ ಕೋಶ–೨), ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

* ರಾಜಶೇಖರ ಸಿಂದಿಗಿ, ಕರ್ನಾಟಕ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ೧೯೬೬, ಸುಜಾತಾ ಪಬ್ಲಿಕೇಷನ್, ಧಾರವಾಡ

* ರಾಜಶೇಖರಪ್ಪ ಬಿ., ಇತಿಹಾಸ ಕಥನ (ಸಂಶೋಧನಾ ಪ್ರಬಂಧಗಳು), ೨೦೧೦, ಸಿ.ವಿ.ಜಿ. ಪಬ್ಲಿಕೇಷನ್, ಬೆಂಗಳೂರು

* ರಾಜಾರಾಮ ಹೆಗಡೆ, ಲೌಕಿಕ, ಅಲೌಕಿಕ, ೨೦೧೧, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ

* ರಾಮಕೃಷ್ಣ ಕೆ.ಆರ್. (ಸಂ), ಕರ್ನಾಟಕ ಸಂರಕ್ಷಿತ ಸ್ಮಾರಕಗಳು ಹಾಗೂ ಪುರಾತತ್ವ ನೆಲೆಗಳು, ೨೦೦೩, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಹೊಸಪೇಟೆ

* ರಾಮಚಂದ್ರರಾವ್ ಎಸ್.ಕೆ., ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ೧೯೭೬, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

* ಲಕ್ಷ್ಮಿನಾರಾಯಣ ರು.ನೆ., ಕರ್ನಾಟಕ ಅರಸು ಮನೆತನಗಳು (ಸಂ-೧), ೧೯೪೬, ಕರ್ನಾಟಕ ಇತಿಹಾಸ ಮಂಡಲ, ಧಾರವಾಡ

* ವಾಸುದೇವನ್ ಸಿ.ಎಸ್., ಕರ್ನಾಟಕ ದೇವಾಲಯ ಕೋಶ, ರಾಯಚೂರು ಜಿಲ್ಲೆ, ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

* ವಾಸುದೇವ ಬಡಿಗೇರ, ಕರ್ನಾಟಕ ದೇವಾಲಯ ಕೋಶ, ಬಿಜಾಪುರ ಜಿಲ್ಲೆ, ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

* ವೆಂಕೋಬರಾವ್, ಶಿಲ್ಪಕಲಾ ಪ್ರಪಂಚ, ೧೯೨೪, ಕರ್ನಾಟಕ ಸಂಘ, ಬೆಂಗಳೂರು

* ಶರಣಬಸಪ್ಪ ಕೋಲ್ಕಾರ್, ಅಕ್ಷಯ ಸವಿ ಸಂಚಿಕೆ, ೨೦೦೨, ಗಂಗಾವತಿ ತಾಲೂಕು, ಕನ್ನಡ ಸಾಹಿತ್ಯ ಪರಿಷತ್ತು

* ಶಿವರಾಮ ಕಾರಂತ ಕೆ., ಭಾರತೀಯ ಶಿಲ್ಪ, ೧೯೭೫, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

* ಶಿವರಾಮ ಕಾರಂತ ಕೆ., ಕರ್ನಾಟಕದಲ್ಲಿ ಶಿಲ್ಪ, ೧೯೮೩, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

* ಶಿವರಾಮ ಕಾರಂತ ಕೆ., ಶಿಲ್ಪಕಲಾ ಪ್ರಪಂಚ, ೧೯೯೪, ಧಾರವಾಡ

* ಶಿವಾನಂದ ವಿ., ಕಲಬುರ್ಗಿ ಜಿಲ್ಲೆಯ ಶಿಲಾಶಾಸನಗಳು, ೧೯೭೮, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

* ಶಿವಾನಂದ ವಿ., ಹೈದ್ರಾಬಾದ್-ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು, ೧೯೯೨, ಕನ್ನಡ ಅಧ್ಯಯನ ಪೀಠ, ಬನಾರಸ್ ಹಿಂದೂ ವಿಶ್ವವಿದ್ಯಾಲಯ

* ಶ್ರೀನಿವಾಸ ಪಾಡಿಗಾರ, ಭಾರತೀಯ ಭಾರತೀಯ ಇತಿಹಾಸದ ಶಾಸನ ಆಕರಗಳು, ೨೦೦೪, ರಾಮಾಶ್ರಮ ಪಬ್ಲಿಕೇಷನ್, ಧಾರವಾಡ

* ಶ್ರೀಧರ ಬಿ.ಎಚ್., ಭಾರತೀಯ ಮೂರ್ತಿಶಿಲ್ಪ, ೧೯೮೮, ರಂಗಸಂಗ ಮತ್ತು ಕಲಾರಂಗ ಪ್ರಕಾಶನ, ಶಿರಸಿ

* ಶ್ರೀಶೈಲ ಬಿರಾದಾರ್, ಸೇಡಂ : ಒಂದು ಸಾಂಸ್ಕೃತಿಕ ಅಧ್ಯಯನ, ೨೦೦೫, ಸಂಸ್ಕೃತಿ ಪ್ರಕಾಶನ ವಾಹಿನಿ ವಿಹಾರ, ಬಸವನಗರ, ಸೇಡಂ

* ಶೇಷಶಾಸ್ತ್ರಿ ಆರ್., ಕರ್ನಾಟಕ ವೀರಗಲ್ಲು, ೧೯೮೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

* ಶೇಷಶಾಸ್ತ್ರಿ ಆರ್., ಶಾಸನ ಪರಿಚಯ, ೨೦೦೫, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

* ಶೇಠೆ ಬಿ.ಎಸ್., ಕರ್ನಾಟಕ ಸತಿ ಪದ್ಧತಿ, ೧೯೯೧, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ

* ಷಡಕ್ಷರಯ್ಯ ರು.ಮ., ಧಾರವಾಡ ಜಿಲ್ಲೆಯ ಐತಿಹಾಸಿಕ ಸ್ಮಾರಕ ಮತ್ತು ಶಿಲ್ಪಗಳು, ೨೦೦೭, ಧಾರವಾಡ ಜಿಲ್ಲಾ ಆಡಳಿತ, ಧಾರವಾಡ

* ಷೇಕ್‌ಅಲಿ ಬಿ., ದಕ್ಷಿಣ ಭಾರತೀಯ ಇತಿಹಾಸ, ೧೯೭೭, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

* ಸಿದ್ದಲಿಂಗಪ್ಪ ಕೊಟ್ನೆಕಲ್, ಕೊಪ್ಪಳ ಜಿಲ್ಲೆಯ ಶಾಸನಗಳು ಮತ್ತು ಸಾಂಸ್ಕೃತಿಕ ಇತಿಹಾಸ, ೨೦೧೦, ಮೇಘನಾ ಪ್ರಕಾಶನ, ಕೊಪ್ಪಳ

* ಸುರೇಶ ಕೆ.ಎಂ., ವಾಸುದೇವ ಬಡಿಗೇರ, ಮೂಡಲಗೇರಿ ಕೊಟ್ರೇಶ ಮತ್ತು ಸೋಮಶೇಖರ ಎಸ್.ವೈ., ಕರ್ನಾಟಕ ದೇವಾಲಯ ಕೋಶ, ಬಳ್ಳಾರಿ ಜಿಲ್ಲೆ, ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

* ಸುಭಾಷಚಂದ್ರ ನಾಟೀಕಾರ, ಕರ್ನಾಟಕದಲ್ಲಿ ಸಿಡಿ ಸಂಪ್ರದಾಯ, ೨೦೧೧, ಸಾಹಿತ್ಯ ನಂದನ, ರಾಜಾಜಿನಗರ, ಬೆಂಗಳೂರು

* ಹಂಪ ನಾಗರಾಜಯ್ಯ, ಕೊಪ್ಪಳ ಶಾಸನಗಳು, ೧೯೯೮, ರತ್ನತ್ರಯ ಪ್ರಕಾಶನ, ಕುವೆಂಪು ನಗರ, ಮೈಸೂರು

* ಹನುಮಾಕ್ಷಿ ಗೋಗಿ, ಸುರಪುರ ತಾಲೂಕಿನ ಶಾಸನಗಳು, ೧೯೯೫, ಮಹಿಳಾ ಸಾಹಿತ್ಯಿಕಾ ನವನಗರ, ಹುಬ್ಬಳ್ಳಿ

* ಹನುಮಾಕ್ಷಿ ಗೋಗಿ, ಕಲಬುರ್ಗಿ ಜಿಲ್ಲೆಯ ಶಾಸನಗಳು, ೧೯೯೬, ಶಿವಚಂದ್ರ ಪ್ರಕಾಶನ, ಹುಬ್ಬಳ್ಳಿ

* ಹನುಮಾಕ್ಷಿ ಗೋಗಿ, ಅನುಶಾಸನ (ಸಂ-೧), (ಸಂಶೋಧನಾ ಲೇಖನಗಳ ಸಂಗ್ರಹ), ೨೦೦೧, ಮಹಿಳಾ ಸಾಹಿತ್ಯ, ಹುಬ್ಬಳ್ಳಿ

* ಹನುಮಾಕ್ಷಿ ಗೋಗಿ, ಹುಬ್ಬಳ್ಳಿ ತಾಲೂಕಿನ ಶಾಸನಗಳು, ೨೦೦೪, ಮಹಿಳಾ ಸಾಹಿತ್ಯ, ನವನಗರ, ಹುಬ್ಬಳ್ಳಿ
* ಹಂಜೆ ಎನ್. ಅಪ್ಪಣ್ಣ (ಸಂ), ಬೀದರ ಜಿಲ್ಲೆಯ ಜೈನ ಶಾಶನಗಳು, ೨೦೧೧, ವಿದ್ಯಾಶ್ರೀ ಪ್ರಕಾಶನ, ಗದಗ
* ಹಿರೇಮಠ ಎಸ್.ಎಂ., ಶಾಸನ ಪರಿಭಾಷೆ, ೨೦೦೫, ವಿದ್ಯಾನಿದಿ ಪ್ರಕಾಶನ ಗದಗ
* ಹಿರೇಮಠ ಎಸ್.ಎಂ., ಶಾಸನಾಧ್ಯಯನ, ೧೯೯೮, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ
* ಹಿರೇಮಠ ಬಿ.ಆರ್., ಕರ್ನಾಟಕ ಶಾಸನಗಳಲ್ಲಿ ವರ್ತಕರು, ೧೯೮೬, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ಹಿರೇಮಠ ಬಿ.ಆರ್., ವೀರಗಲ್ಲು, ೧೮೭೯, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ಹಿರೇಮಠ ಆರ್.ಸಿ., ಕಲಬುರ್ಗಿ ಎಂ.ಎಂ. (ಸಂ), ಕನ್ನಡ ಶಾಸನ ಸಂಪದ, ೧೯೬೮, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಲೇಖನಗಳು :

* ಕೆಂಪಣ್ಣನವರ ಪಿ., ಅಪ್ಪಣ್ಣ ಎನ್. ಹಂಜೆ, ರಾಯಬಾಗ ನಗರದ ವೀರಗಲ್ಲು ಶಾಸನ, ಭಟ್‌ಸೂರಿ ಕೆ.ಜಿ. (ಸಂ), ಶಾಸನ ಅಧ್ಯಯನ ಸಂಪುಟ-೨, ಸಂಚಿಕೆ-೨, ೨೦೦೫, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಗೋಪಾಲರಾವ್ ಎಚ್.ಎಸ್., ವೀರಗಲ್ಲುಗಳ ಪ್ರತಿಭಟನೆ, ಮಾರ್ಚ್, ೨೦೦೨ ಹೊಸತು ತಿಂಗಳ ಪತ್ರಿಕೆ,
* ಗೋಪಾಲರಾವ್ ಎಚ್.ಎಸ್., ವೀರ ಮಹಿಳೆಯರು, ಜೂನ್, ೨೦೦೨, ಹೊಸತು ತಿಂಗಳ ಪತ್ರಿಕೆ
* ಗೋಪಾಲರಾವ್ ಎಚ್.ಎಸ್., ವೀರಗಲ್ಲುಗಳಲ್ಲಿ ಸ್ನೇಹ ಸಂಬಂಧಗಳು, ಮೇ, ೨೦೦೨, ಹೊಸತು ತಿಂಗಳ ಪತ್ರಿಕೆ,
* ಮಲ್ಲಿಕಾರ್ಜುನ ಕಂಬಾರ್, ರೋಣದ ವೀರಗಲ್ಲು ಶಾಸನ : ರಾಷ್ಟ್ರಕೂಟರ ಮೇಲೆ ಹೊಸ ಬೆಳಕು, ನಾಗರಾಜ್ ಎಂ.ಜಿ. ಮತ್ತು ಕೃಷ್ಣಮೂರ್ತಿ ಪಿ.ವಿ. (ಸಂ), ಇತಿಹಾಸ ದರ್ಶನ, (ಸಂ-೨೪), ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು
* ವಾಸುದೇವನ್ ಸಿ.ಎಸ್., ಕಡೇಬಾಗಿಲು ಗ್ರಾಮದ ಅಪ್ರಕಟಿತ ಶಾಸನ ಸಹಿತ ವೀರಗಲ್ಲು, ಪರಮಶಿವಮೂರ್ತಿ ಡಿ.ವಿ. (ಸಂ), ಶಾಸನ ಅಧ್ಯಯನ, ಸಂಪುಟ-೫, ಸಂಚಿಕೆ-೧,

೨೦೦೮, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

* ವಿದ್ಯಾ ಎಸ್. ಹಡಗಲಿ, ಹುಬ್ಬಳ್ಳಿಯ ಗೋಕುಲದಲ್ಲಿ ಕಂಡುಬಂದ ಶಾಸನವುಳ್ಳ ವೀರಗಲ್ಲು, ೨೦೧೧, ಇತಿಹಾಸ ದರ್ಶನ-೧ (ಸಂ-೧೬), ಕರ್ನಾಟಕ ಇತಿಹಾಸ ಅಕಾಡೆಮಿ (ರಿ), ಬೆಂಗಳೂರು

* ಶೇಠ್ ಬಿ.ಎಸ್., ವೀರಗಲ್ಲು, ಹಿರೇಮಠ ಆರ್.ಸಿ. (ಸಂ), ಕರ್ನಾಟಕ ಭಾರತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

* ಷಡಕ್ಷರಯ್ಯ ರು.ಮ., ಖಾನಾಪುರ ತಾಲೂಕಿನ ವೀರ ಮಾಸ್ತಿಶಿಲ್ಪಗಳು (ವಿಜಯನಗರ ಮತ್ತು ವಿಜಯನಗರೋತ್ತರ), ಗೋಪಾಲ ಆರ್. (ಸಂ), ವಿಜಯನಗರ ಅಧ್ಯಯನ ಸಂಪುಟ-೧೨, ೨೦೦೬, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

* ಷಡಕ್ಷರಯ್ಯ ರು.ಮ., ಕೋಳಿಗುಡ್ಡೆ ಸಿ.ನ್., ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ಮತ್ತು ಗೋಕಾ ತಾಲೂಕುಗಳ ವಿಜಯನಗರ ಕಾಲದ ಮಹಾಸತಿಗಲ್ಲುಗಳು, ರಾಮಕೃಷ್ಣ ಕೆ.ಆರ್. (ಸಂ) ವಿಜಯನಗರ ಅಧ್ಯಯನ ಸಂಪುಟ-೧, ೨೦೦೩, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

* ಷಡಕ್ಷರಯ್ಯ ರು.ಮ., ವಿಜಯನಗರ ಮತ್ತು ವಿಜಯನಗರೋತ್ತರ ಕಾಲದ ಕಮಲಾಪುರ ವಸ್ತುಸಂಗ್ರಹಾಲಯದ ವೀರ ಮತ್ತು ಮಹಾಸತಿಯರ ಶಿಲ್ಪಕಲೆ, ರಾಮಕೃಷ್ಣ ಕೆ.ಆರ್. (ಸಂ), ವಿಜಯನಗರ ಅಧ್ಯಯನ ಸಂಪುಟ-೯, ೨೦೦೩, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

**ಗ್ಯಾಜೆಟಿಯರ್‌ಗಳು :**

* ಅಭಿಶಂಕರ ಕೆ. (ಸಂ), ರಾಯಚೂರು ಜಿಲ್ಲೆಯ ಗ್ಯಾಜೆಟಿಯರ್, ೧೯೭೦, ಮೈಸೂರು ರಾಜ್ಯ ಸರಕಾರ, ಬೆಂಗಳೂರು

* ಇಂಪಿರಿಯಲ್ ಗ್ಯಾಜೆಟಿಯರ್ ಆಫ್ ಇಂಡಿಯಾ, ಪ್ರೊವಿನ್ಸಿಯಲ್ ಸಿರೀಸ್ ಹೈದ್ರಾಬಾದ್ ಸ್ಟೇಟ್, ೧೯೦೯, ಸುಪರ್ ಇನ್‌ಟೆಂಡೆಂಟ್ ಆಫ್ ಗವರ್ಮೆಂಟ್ ಪ್ರಿಂಟಿಂಗ್, ಕಲ್ಕತ್ತಾ

* ಕಾಮತ್ ಸೂರ್ಯನಾಥ (ಸಂ). ಕರ್ನಾಟಕ ರಾಜ್ಯ ಗ್ಯಾಜೆಟಿಯರ್ (ಭಾಗ-೧), ೧೯೮೪, ಕರ್ನಾಟಕ ರಾಜ್ಯ ಸರಕಾರ, ಬೆಂಗಳೂರು

* ಕಾಮತ್ ಸೂರ್ಯನಾಥ (ಸಂ). ಕರ್ನಾಟಕ ರಾಜ್ಯ ಗ್ಯಾಜೆಟಿಯರ್ (ಭಾಗ-೩), ೧೯೮೬, ಕರ್ನಾಟಕ ರಾಜ್ಯ ಸರಕಾರ, ಬೆಂಗಳೂರು

* ಪಾಟೀಲ ಎಂ.ಜಿ. (ಸಂ), ಗುಲಬರ್ಗಾ ಜಿಲ್ಲೆಯ ಗ್ಯಾಜೆಟಿಯರ್, ೧೯೯೭, ಕರ್ನಾಟಕ ಗ್ಯಾಜೆಟಿಯರ್ ಇಲಾಖೆ, ಬೆಂಗಳೂರು

* ಪಾಟೀಲ ಎಂ.ಬಿ., ಕರ್ನಾಟಕ ಕೈಪಿಡಿ, ೧೯೯೭, ಕರ್ನಾಟಕ ಸರಕಾರ, ಬೆಂಗಳೂರು
* ಮುನಿಸ್ವಾಮಿ ಆರ್. (ಸಂ), ಬಿಜಾಪುರ ಜಿಲ್ಲೆಯ ಗ್ಯಾಜೆಟಿಯರ್, ೧೯೯೯, ಕರ್ನಾಟಕ ರಾಜ್ಯ ಸರಕಾರ, ಬೆಂಗಳೂರು
* ವೆಂಕಟರಂಗೋ ಕಟ್ಟಿ (ಸಂ), ಧಾರವಾಡ, ಬೆಳಗಾವಿ, ಬಿಜಾಪುರ, ಕಾನಾಡಾ ಜಿಲ್ಲೆಗಳ ಗ್ಯಾಜೆಟಿಯರ್, ೧೯೮೪, ಏಶಿಯನ್ ಸರ್ವೀಸಸ್, ನವದೆಹಲಿ

**ನಿಯತಕಾಲಿಕೆಗಳು :**

* ಇತಿಹಾಸ ದರ್ಶನ – ಇತಿಹಾಸ ಅಕಾಡೆಮಿ, ಬೆಂಗಳೂರು
* ಕನ್ನಡ ಸಾಹಿತ್ಯ ಪರಿಷತ್ತು ಪತ್ರಿಕೆ – ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
* ಕರ್ನಾಟಕ ಭಾರತಿ – ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
* ಕರ್ನಾಟಕ ಲೋಚನ – ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು
* ಪ್ರಬುದ್ಧ ಕರ್ನಾಟಕ – ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
* ಮಾನವಿಕ ಕರ್ನಾಟಕ – ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
* ವಿಜಯನಗರ ಅಧ್ಯಯನ – ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ
* ಶಾಸನ ಅಧ್ಯಯನ – ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
* ಸಾಧನೆ – ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

**ವಿಶ್ವಕೋಶಗಳು :**

* ಕನ್ನಡ ವಿಷಯ ವಿಶ್ವಕೋಶ, ಇತಿಹಾಸ ಮತ್ತು ಪುರಾತತ್ವ ಮೈಸೂರು
* ಕರ್ನಾಟಕ ವಿಶ್ವಕೋಶ, ಮೈಸೂರು

**ದಿನಪತ್ರಿಕೆಗಳು :**

* ವಿಜಯ ಕರ್ನಾಟಕ –೨೦೦೪
* ಪ್ರಜಾವಾಣಿ ಪತ್ರಿಕೆ –೨೪.೧೦.೨೦೧೦
* ಸಂಯುಕ್ತ ಕರ್ನಾಟಕ – ಸೆಪ್ಟಂಬರ್ ೩೦, ೨೦೧೫

# ರಾಷ್ಟ್ರಕೂಟರ ಕಾಲದ – ವೀರಗಲ್ಲುಗಳು


ಬೆಟಗೇರಿ– ವೀರಗಲ್ಲು


ರೋಣ – ವೀರಗಲ್ಲು


ಕುರ್ತುಕೋಟಿ – ವೀರಗಲ್ಲು


ಮೇವುಂಡಿ – ವೀರಗಲ್ಲು


ಬೆಟಗೇರಿ – ವೀರಗಲ್ಲು


ಬೆಟಗೇರಿ – ವೀರಗಲ್ಲು


ಬೆಟಗೇರಿ – ವೀರಗಲ್ಲು


ಬೆಟಗೇರಿ – ವೀರಗಲ್ಲು


ಬೆಟಗೇರಿ – ವೀರಗಲ್ಲು


ಬೆಟಗೇರಿ – ವೀರಗಲ್ಲು


ಬೆಟಗೇರಿ – ವೀರಗಲ್ಲು


ಬೆಟಗೇರಿ – ವೀರಗಲ್ಲು



ಎಲೆಶಿರೂರು–ವೀರಗಲ್ಲು



ಎಲೆಶಿರೂರು–ವೀರಗಲ್ಲು



ಮಲ್ಲಸಮುದ್ರ–ವೀರಗಲ್ಲು



ಕರಮಡಿ–ವೀರಗಲ್ಲು



ದಿಂಬವಳ್ಳಿ–ವೀರಗಲ್ಲು



ಕಂದವಳಿ–ವೀರಗಲ್ಲು



ದ್ಯಾವನಕೊಂಡ–ವೀರಗಲ್ಲು



ವರೂರಿನ–ವೀರಗಲ್ಲು


ತಂಬೂರಿನ-ವೀರಗಲ್ಲು


ನರೇಂದ್ರದ-ವೀರಗಲ್ಲು


ಹಿರೇಹೊನ್ನಿ ಹಳ್ಳಿ-ವೀರಗಲ್ಲು


ಸಂಗಮೇಶ್ವರ-ವೀರಗಲ್ಲು


ಮಸಳೀ ಕಟ್ಟೆ–ವೀರಗಲ್ಲು


ಬೇಗೂರು–ವೀರಗಲ್ಲು


ಹಿರೇಗುಂಜಾಳ–ವೀರಗಲ್ಲು



ಹೊಸೂರಿನ–ವೀರಗಲ್ಲು



ಲಕ್ಷ್ಮೇಶ್ವರ–ವೀರಗಲ್ಲು



ಲಕ್ಷ್ಮೇಶ್ವರ–ವೀರಗಲ್ಲು



ಲಕ್ಷ್ಮೇಶ್ವರ–ವೀರಗಲ್ಲು



ಕ್ಯಾತನ ಹಟ್ಟಿ–ವೀರಗಲ್ಲು



ಕುಡತಿನಿ–ವೀರಗಲ್ಲು



ಕುಡತಿನಿ–ವೀರಗಲ್ಲು



ಮಾಗಳ–ವೀರಗಲ್ಲು


ತಿಪ್ಪಾಪುರ–ವೀರಗಲ್ಲು


ಕೋಂಬಳಿ–ವೀರಗಲ್ಲು


ಹಲಬೇರಾ–ವೀರಗಲ್ಲು


ಸುಬೇಪೇಟೆ–ವೀರಗಲ್ಲು

# ವಿಜಯ ನಗರ ಕಾಲದ ವೀರಗಲ್ಲುಗಳು


ಈರಲದೊಡ್ಡಿ–ವೀರಗಲ್ಲು


ಈರಲದೊಡ್ಡಿ–ವೀರಗಲ್ಲು


ಜಕ್ಕಲಿ–ವೀರಗಲ್ಲು


ರಾಮಪಡ–ವೀರಗಲ್ಲು



ಮಾನ್ವಿತಾಲೂಕಿನ–ವೀರಗಲ್ಲು



ಮಾನ್ವಿತಾಲೂಕಿನ–ವೀರಗಲ್ಲು



ಮಾನ್ವಿತಾಲೂಕಿನ–ವೀರಗಲ್ಲು


ಬಾಗಲವಡ–ವೀರಗಲ್ಲು


ಬಾಗಲವಡ–ವೀರಗಲ್ಲು


ಕಪ್ಪಗಲ್ಲು–ವೀರಗಲ್ಲು



ದಿದ್ದಗಿ– ವೀರಗಲ್ಲು



ದಿದ್ದಗಿ–ವೀರಗಲ್ಲು



ಬಳಗನೂರು–ವೀರಗಲ್ಲು



ಸೀರವಾಳ-ವೀರಗಲ್ಲು



ಸೀರವಾಳ-ವೀರಗಲ್ಲು



ಸೀರವಾಳ-ವೀರಗಲ್ಲು



ಸೀರವಾಳ-ವೀರಗಲ್ಲು



ಸಣ್ಣೂರಿನ-ವೀರಗಲ್ಲು



ಸಣ್ಣೂರಿನ-ವೀರಗಲ್ಲು



ಸಣ್ಣೂರಿನ-ವೀರಗಲ್ಲು



ಹರಸೂರು-ವೀರಗಲ್ಲು



ಬಂಡ್ರಿ–ವೀರಗಲ್ಲು



ಡೋಣಿ–ಬಂದೂಕಿನ
ವೀರಗಲ್ಲು



ದರೋಜಿ–ವೀರಗಲ್ಲು



ತಾವರಗೆರೆ–ವೀರಗಲ್ಲು



ಜೋರನೂರು–ವೀರಗಲ್ಲು



ತಾಳೂರು–ವೀರಗಲ್ಲು



ಬಂಡ್ರಿ–ವೀರಗಲ್ಲು


ಹೊನ್ನಕಿರಣಗಿ–ವೀರಗಲ್ಲು


ಮಹಾಗಾಂವ–ವೀರಗಲ್ಲು


ಶ್ರೀನಿವಾಸಸರಡಗಿ–ವೀರಗಲ್ಲು


ಹುಲ್ಕಲ್–ವೀರಗಲ್ಲು



ಕ.ವಿ.ವಿ,ಹಂಪಿ–ವೀರಗಲ್ಲು



ಕ.ವಿ.ವಿ,ಹಂಪಿ–ವೀರಗಲ್ಲು



ಕ.ವಿ.ವಿ,ಹಂಪಿ–ವೀರಗಲ್ಲು



ಕ.ವಿ.ವಿ,ಹಂಪಿ–ಕುರಗಳರಕ್ಷಣೆ
ಹೋರಟದ ವೀರಗಲ್ಲು

